# ಯುಗಾವತಾರ ಶ್ರೀರಾಮಕೃಷ್ಣ

ಸಂಪುಟ ೨



# ಯುಗಾವತಾರ ಶ್ರೀರಾಮಕೃಷ್ಣ

ಸಂಪುಟ ೨

ಸ್ವಾಮಿ ಪುರುಷೋತ್ತಮಾನಂದ





ಶ್ರೀರಾಮಕೃಷ್ಣಾಶ್ರಮ
ಬೆಂಗಳೂರು

# ಪರಿವಿಡಿ

# ಚಿತ್ರಗಳ ವಿವರಣೆ

1. ನಾಮಸಂಕೀರ್ತನೆಯಲ್ಲಿ ತೊಡಗಿ ಸಮಾಧಿಸ್ಥರಾಗಿರುವ ಶ್ರೀರಾಮಕೃಷ್ಣರು. ಅವರಿಗೆ ಆಸರೆಯಾಗಿ ನಿಂತವನು ಹೃದಯರಾಮ. ೧೮೭೯ರ ಸೆಪ್ಟೆಂಬರ್ ೨೧, ಭಾನುವಾರದಂದು ಕೇಶವಚಂದ್ರ ಸೇನನ ನಿವಾಸ 'ಕಮಲಕುಟೀರ'ದಲ್ಲಿ ತೆಗೆಯಲಾದ ಅಪೂರ್ವ ಭಾವಚಿತ್ರ. ಇದನ್ನು ಕೇಶವನು ತನ್ನ ಉಪಯೋಗಕ್ಕಾಗಿಯೇ ತೆಗೆಸಿದ್ದು, ಇದರ ಒಂದು ಪ್ರತಿಯನ್ನು ಅವನ ಕೋಣೆಯಲ್ಲಿ ಕಾಣಬಹುದಾಗಿತ್ತು. ಇದು ಶ್ರೀರಾಮಕೃಷ್ಣರ ಮೊತ್ತಮೊದಲ ಭಾವಚಿತ್ರ.
2. ಶ್ರೀಮಾತೆ ಶಾರದಾದೇವಿಯವರು—ತಮ್ಮ ಐವತ್ತೆರಡನೆಯ ವಯಸ್ಸಿನಲ್ಲಿ.
3. ದಕ್ಷಿಣೇಶ್ವರದ 'ಘಾಜೀತಲ'—ಶ್ರೀರಾಮಕೃಷ್ಣರು ಇಸ್ಲಾಂ ಸಾಧನೆ ಮಾಡಿದ ಸ್ಥಳ. ಈ ಸ್ಥಳದ ಬಗ್ಗೆ ಒಂದು ಐತಿಹ್ಯವಿದೆ: ಕಾಳೀ ದೇವಾಲಯದ ನಿರ್ಮಾಣಕಾರ್ಯ ಸಾಗುತ್ತಿದ್ದಾಗ ಒಂದು ರಾತ್ರಿ ರಾಣಿ ರಾಸಮಣಿಗೊಂದು ಕನಸಾಯಿತು. ಅದರಲ್ಲಿ ಬಾಬಾ ಘಾಜೀ ಪೀರ್ ಎಂಬ ಮುಸಲ್ಮಾನ ಸಂತನ ಆತ್ಮವು, "ನಾನು ಘಾಜೀಕೊಳದ ಆಚೆಗಿರುವ ಅರಳೀಮರದ ಕೆಳಗೆ ವಾಸವಾಗಿದ್ದೇನೆ. ಅಲ್ಲಿ ನನಗೊಂದು ಕಟ್ಟೆ ಕಟ್ಟಿಸಿ ನಿತ್ಯದ ಪೂಜೆಗೆ ವ್ಯವಸ್ಥೆ ಮಾಡು" ಎಂದು ನುಡಿದಂತಾಯಿತು. ಅಂತೆಯೇ ರಾಸಮಣಿ ಅಲ್ಲಿ ಕಟ್ಟೆ ಕಟ್ಟಿಸಿ, ಅದರ ಉಸ್ತುವಾರಿಗಾಗಿ ಒಬ್ಬ ಮುಸಲ್ಮಾನನನ್ನು ನೇಮಿಸಿದಳು.

   ಶ್ರೀರಾಮಕೃಷ್ಣರು ತಮ್ಮ ಸಾಧನಾಕಾಲದಲ್ಲಲ್ಲದೆ ಆಮೇಲೂ ಪ್ರತಿದಿನ ಬೆಳಗ್ಗೆ, ಮತ್ತು ಕೆಲವೊಮ್ಮೆ ಮಧ್ಯಾಹ್ನ ಕೂಡ ಅಲ್ಲಿಗೆ ಹೋಗಿ ಇಸ್ಲಾಂ ವಿಧಿಯಂತೆ ಪೂಜೆ-ಪ್ರಣಾಮಗಳನ್ನು ಸಲ್ಲಿಸಿ ಬರುತ್ತಿದ್ದರು. ಕಾಳೀ ದೇವಾಲಯದ ಆಗಿನ ಉಗ್ರಾಣಿಯ ಮಗ ಶಶಿಭೂಷಣ ಸಾಮಂತ ಎಂಬ ಪ್ರತ್ಯಕ್ಷದರ್ಶಿಯಿಂದ ಈ ವಿಷಯ ತಿಳಿದುಬಂದಿದೆ.
4. ಕಲ್ಕತ್ತದ ಆ್ಯಮ್‌ಹರ್ಸ್ಟ್ ರಸ್ತೆಯಲ್ಲಿರುವ ಸಿ. ಎಂ. ಸಿ. ಚರ್ಚ್. ಕ್ರೈಸ್ತ ಭಕ್ತರು ಕ್ರಿಸ್ತನಿಗೆ ಪೂಜೆ ಸಲ್ಲಿಸುವುದನ್ನು ನೋಡಬೇಕೆಂದು ಶ್ರೀರಾಮಕೃಷ್ಣರು ಇಲ್ಲಿಗೆ ಒಮ್ಮೆ ಭೇಟಿ ಕೊಟ್ಟಿದ್ದರು.
5. ರಾಮೇಶ್ವರನ ಮಗ ರಾಮಲಾಲ ಚಟರ್ಜಿ. ಶ್ರೀರಾಮಕೃಷ್ಣರ ಭಕ್ತರು-ಶಿಷ್ಯರು ಕರೆಯುತ್ತಿದ್ದುದು 'ರಾಮಲಾಲ ದಾದಾ' ಎಂದು.
6. ರಾಮೇಶ್ವರನ ಮಗಳು, ಶ್ರೀಶಾರದಾದೇವಿಯವರ 'ಸಖಿ' —ಲಕ್ಷ್ಮೀದೇವಿ (೧೮೬೪-೧೯೨೪).
7. ಶ್ರೀರಾಮಕೃಷ್ಣರ ಎರಡನೆಯ 'ರಸದ್ದಾರ'—ಶಂಭುಚರಣ ಮಲ್ಲಿಕ.
8. ಬ್ರಾಹ್ಮಸಮಾಜದ ಧುರೀಣ, ಸಮಾಜಸುಧಾರಕ ಕೇಶವಚಂದ್ರ ಸೇನ (೧೮೩೮-೧೮೮೪).
9. ಪ್ರಮುಖ ಗೃಹೀ ಭಕ್ತ—ರಾಮಚಂದ್ರ ದತ್ತ (೧೮೫೧-೧೮೯೯).

10. 'ಮೂರನೆಯ ರಸದ್ದಾರ' ಎಂದು ಹೇಳಲಾಗಿರುವ ಸುರೇಂದ್ರನಾಥ ಮಿತ್ರ (೧೮೫೦-೧೮೯೦).

11. ಕೇಶವನು ಸ್ಥಾಪಿಸಿದ 'ನವವಿಧಾನ' ಸಮಾಜದ ಮುಖಂಡರು.
ಮುಂದಿನ ಸಾಲಿನಲ್ಲಿ ಕುಳಿತವರು: ಎಡದಿಂದ ಎರಡನೆಯವನು ಪ್ರತಾಪಚಂದ್ರ ಮಜುಮದಾರ, ಮಧ್ಯದಲ್ಲಿ ಕೇಶವಚಂದ್ರ ಸೇನ, ಬಲದಿಂದ ಎರಡನೆಯವನು ತ್ರೈಲೋಕ್ಯನಾಥ ಸನ್ಯಾಲ.

12. 'ಸಾಧಾರಣ ಬ್ರಾಹ್ಮಸಮಾಜ'ದ ನಾಯಕ ಶಿವನಾಥ ಶಾಸ್ತ್ರಿ (೧೮೪೭-೧೯೧೯).

13. ಸಾಧಾರಣ ಸಮಾಜದ ಮತ್ತೊಬ್ಬ ಪ್ರಮುಖನೂ ಶ್ರೀರಾಮಕೃಷ್ಣರ ಪರಮ ಭಕ್ತನೂ ಆದ ವಿಜಯಕೃಷ್ಣ ಗೋಸ್ವಾಮಿ (೧೮೪೧-೧೮೯೯).

14. 'ಕಲಿಯುಗದ ಜನಕ ಮಹಾರಾಜ', 'ಮಹರ್ಷಿ' ಎಂದು ಜನಸಮ್ಮಾನಿತರಾಗಿದ್ದ ದೇವೇಂದ್ರನಾಥ ಟಾಗೋರ್ (೧೮೧೭-೧೯೦೫).

15. 'ಆರ್ಯಸಮಾಜ'ದ ಸಂಸ್ಥಾಪಕ, ಪ್ರಚಂಡ ವಾಗ್ಮಿ ಸ್ವಾಮಿ ದಯಾನಂದ ಸರಸ್ವತಿಗಳು (೧೮೨೫-೧೮೮೩).

16. ಶ್ರೀರಾಮಕೃಷ್ಣರು ಭಾವವಶರಾಗಿ 'ಚೈತನ್ಯಾಸನ'ವನ್ನೇರಿದ ಸ್ಥಳ—ಕಲ್ಕತ್ತದ ಕುಲೂತೊಲದಲ್ಲಿರುವ 'ಚೈತನ್ಯಸಭೆ'.

17. ಕಾಶೀ ಕ್ಷೇತ್ರದಲ್ಲಿ ವಾಸವಾಗಿದ್ದ ಪ್ರಖ್ಯಾತ ಸಂತ ಶ್ರೀ ತ್ರೈಲಿಂಗಸ್ವಾಮಿಗಳು. "ಇವರದು ನೈಜ ಪರಮಹಂಸಾವಸ್ಥೆ" ಎನ್ನುತ್ತಾರೆ ಶ್ರೀರಾಮಕೃಷ್ಣರು.

18. ವಾರಾಣಸಿಯ ಮಣಿಕರ್ಣಿಕಾ ಘಟ್ಟ—ಮೃತಾತ್ಮರಿಗೆ ಶಿವನು ಮೋಕ್ಷವನ್ನು ಕರುಣಿಸುವ ಅದ್ಭುತ ದೃಶ್ಯವನ್ನು ಶ್ರೀರಾಮಕೃಷ್ಣರು ಕಂಡದ್ದು ಇಲ್ಲಿಯೇ.

19. ನದಿಯಾ ಜಿಲ್ಲೆಯ ನವದ್ವೀಪ ಘಟ್ಟ—ಶ್ರೀಚೈತನ್ಯ ಮಹಾಪ್ರಭುವಿನ ದಿವ್ಯತೆಯನ್ನು ಶ್ರೀರಾಮಕೃಷ್ಣರು ಸಂಪೂರ್ಣವಾಗಿ ಮನಗಂಡ ಸ್ಥಳ ಇದು. ಇಲ್ಲಿ ಅವರಿಗೆ ಶ್ರೀಚೈತನ್ಯನೂ ನಿತ್ಯಾನಂದನೊ ಹೊಂಬಣ್ಣದ ಬಾಲಕರ ರೂಪದಿಂದ ಬಂದು ತಮ್ಮೊಳಗೆ ಲೀನವಾದಂಥ ದಿವ್ಯಾನುಭವವಾಯಿತು.

20. ಶ್ರೀರಾಮಕೃಷ್ಣರು ಕೇಶವಚಂದ್ರ ಸೇನನಿಗೆ ಸರ್ವಧರ್ಮ ಸಮನ್ವಯದ ತತ್ತ್ವವನ್ನು ತಿಳಿಯಪಡಿಸುತ್ತಿರುವ ದೃಶ್ಯವನ್ನು ಕಲಾವಿದನೊಬ್ಬ ತನ್ನ ಕುಂಚದಿಂದ ಚಿತ್ರಿಸಿದ್ದಾನೆ. ಶ್ರೀರಾಮಕೃಷ್ಣ-ಕೇಶವರಿಬ್ಬರಿಗೂ ಸಂತಸವನ್ನಿತ್ತ ಈ ವರ್ಣಚಿತ್ರವನ್ನು ಬರೆಸಿದವನು ಸುರೇಂದ್ರನಾಥ ಮಿತ್ರ.

21. ಶ್ರೀರಾಮಕೃಷ್ಣರು ಸಂಕೀರ್ತನೆಯಲ್ಲಿ ಆನಂದೋನ್ಮತ್ತರಾಗಿ ಭಕ್ತಜನರೊಂದಿಗೆ ಸೇರಿ ನರ್ತಿಸುತ್ತಿರುವ ದೇವದುರ್ಲಭ ದೃಶ್ಯ. ಇದನ್ನು ರಚಿಸಿದವರು ವಂಗದೇಶದ ಇಂದಿನ ಸುಪ್ರಸಿದ್ಧ ಕಲಾವಿದ ನಂದಲಾಲ ಬೋಸ್. ಚಿತ್ರದ ಒಂದೊಂದು ರೇಖೆಯೂ ಅರ್ಥಗರ್ಭಿತ, ಭಾವಪೂರಿತ.

# ಅವತಾರಪುರುಷ ! ೧

ದಕ್ಷಿಣೇಶ್ವರಕ್ಕೆ ಭೈರವಿ ಬ್ರಾಹ್ಮಣಿಯ ಆಗಮನ ಶ್ರೀರಾಮಕೃಷ್ಣರ ಜೀವನದಲ್ಲಿ ಎರಡು ದೃಷ್ಟಿಗಳಿಂದ ಮಹತ್ವಪೂರ್ಣ. ಅಂದಿನಿಂದ ಅವರು ಸಾಧನೆಗಳಲ್ಲಿ ಶಾಸ್ತ್ರೋಕ್ತ ವಿಧಾನಗಳ ಪ್ರಕಾರ ವೇಗವಾಗಿ ಮುನ್ನಡೆಯಲಾರಂಭಿಸಿದರು ಎಂಬುದು ಒಂದಂಶ; ಇದರೊಂದಿಗೇ ಅವರ ಜೀವನೋದ್ದೇಶಕ್ಕೆ ಮಹತ್ವಪೂರ್ಣದ್ದಾದ 'ಗುರುಭಾವ'ವೂ ಅವರಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳತೊಡಗಿದ್ದು ಮತ್ತೊಂದು.

ಭೈರವಿ ಬ್ರಾಹ್ಮಣಿ ಬರುವುದಕ್ಕೆ ಮೊದಲು ಶ್ರೀರಾಮಕೃಷ್ಣರ ಉತ್ಕಟ ದೈವಭಕ್ತಿಯನ್ನೂ ವ್ಯಾಕುಲತೆಯನ್ನೂ ಕಂಡ ಜನ ಅದನ್ನು ಯಾವುದೋ ರೋಗ ಎಂದು ಪರಿಗಣಿಸಿದ್ದು ಮತ್ತು ಅವರ ಶುಶ್ರೂಷೆಗಾಗಿ ಮಥುರಬಾಬು ವೈದ್ಯರನ್ನು ನೇಮಿಸಿದ್ದು —ಇವುಗಳನ್ನು ಈ ಹಿಂದೆಯೇ ನೋಡಿದೆವು. ಏತನ್ಮಧ್ಯೆ ಪೂರ್ವಬಂಗಾಳದ ಒಬ್ಬ ವೈದ್ಯ-ಸಾಧಕನು ಶ್ರೀರಾಮಕೃಷ್ಣರನ್ನು ಪರೀಕ್ಷಿಸಿ, ಅವರ ದೈಹಿಕ ತೊಂದರೆಗಳಿಗೆ ಆಧ್ಯಾತ್ಮಿಕ ಸಾಧನೆಗಳೇ ಕಾರಣವೆಂದು ತಿಳಿಸಿದಾಗ, ಯಾರೂ ಅವನ ಮಾತಿಗೆ ಬೆಲೆ ಕೊಡದಿದ್ದುದನ್ನೂ ನೋಡಿದೆವು. ಆದರೆ ಭಕ್ತಿಶಾಸ್ತ್ರಗಳಲ್ಲಿ ಪಾರಂಗತಳಾದ ಬ್ರಾಹ್ಮಣಿಗೆ ಮಾತ್ರ ವಿಷಯವೇನೆಂದು ಚೆನ್ನಾಗಿ ಅರ್ಥವಾಯಿತು. ಶ್ರೀರಾಮಕೃಷ್ಣರ ದೇಹಸ್ಥಿತಿಯಲ್ಲಿನ ಬದಲಾವಣೆಗಳೆಲ್ಲ ಅವರಲ್ಲುಂಟಾಗಿದ್ದ ಅಪೂರ್ವ ಭಗವತ್ಪ್ರೇಮದ ಪರಿಣಾಮವಲ್ಲದೆ ಬೇರಲ್ಲ ಎಂದು ಅವಳು ಸಾರುತ್ತ ಬಂದಳು. ಅಷ್ಟೇ ಅಲ್ಲ, ಶ್ರೀರಾಮಕೃಷ್ಣರು ಸಾಕ್ಷಾತ್ ಅವತಾರಪುರುಷ ಎಂದು ಘೋಷಿಸಿದಳು. ಆದರೆ ಇದು ಮಥುರನ ಕಿವಿಗೆ ಬಿದ್ದಾಗ ಅವನು, ಇದೆಲ್ಲ ಹಾಸ್ಯಾಸ್ಪದ ಎಂದು ನಕ್ಕುಬಿಟ್ಟ. ಭೈರವಿ ಬ್ರಾಹ್ಮಣಿ ಇದರಿಂದ ನಿರುತ್ಸಾಹಿತಳಾಗಲೂ ಇಲ್ಲ, ತನ್ನ ಮಾತನ್ನು ಹಿಂದೆಗೆದುಕೊಳ್ಳಲೂ ಇಲ್ಲ. ಅಷ್ಟೇ ಅಲ್ಲ, ಶಾಸ್ತ್ರವಾಕ್ಯಗಳ ಸಹಾಯದಿಂದ ತನ್ನ ಮಾತನ್ನು ಸಮರ್ಥಿಸಿಕೊಳ್ಳುವುದಾಗಿ ಸವಾಲೊಡ್ಡಿದಳು. ಅದಕ್ಕಾಗಿ ಪಂಡಿತರ ಸಭೆಯೊಂದನ್ನು ಕರೆಯುವಂತೆಯೂ ಹೇಳಿದಳು. ಇದನ್ನು ಕೇಳಿದಾಗಲಂತೂ ಮಥುರನ ವಿಸ್ಮಯಕ್ಕೆ ಪಾರವೇ ಇಲ್ಲ. 'ಎಲ ಎಲಾ! ಈ ಹೆಂಗಸು ಹಿಡಿದ ಹಟ ಬಿಡುವವಳೇ ಅಲ್ಲವೆಂದು ಕಾಣುತ್ತದೆ! ಈಗ ನೋಡಿದರೆ ಎಲ್ಲಿಯವರೆಗೂ ಸಿದ್ಧ ಇವಳು!' ಎಂದುಕೊಂಡ.

ಆದರೆ ಮಥುರನಿಗೆ ಅವಳ ಮಾತಿನಲ್ಲಿ ನಂಬಿಕೆಯೇನೂ ಬಂದಿರಲಿಲ್ಲ. ತಮ್ಮ ಕಣ್ಣೆದುರಿಗೇ ಬೆಳೆದ ಒಬ್ಬ ವ್ಯಕ್ತಿಯನ್ನು ಅವತಾರನೆಂದರೆ ಯಾರಿಗೆ ತಾನೆ ನಂಬಿಕೆ ಹುಟ್ಟೀತು? ಅಲ್ಲದೆ ಈ ಬ್ರಾಹ್ಮಣಿಯಾದರೂ ಯಾರು? ಯಾರಿಗೂ ಅವಳ ಪೂರ್ವಾಪರ ತಿಳಿಯದು. ಜನರ ಪಾಲಿಗೆ, ಅವಳೊಬ್ಬಳು ಭಿಕ್ಷಾನ್ನದ ಮೇಲೆ ಜೀವಿಸುವ ಅನಾಮಧೇಯ ಹೆಂಗಸು ಅಷ್ಟೆ. ಆದ್ದರಿಂದ ಮಥುರ ಆ ವಿಷಯವನ್ನು ಅಲ್ಲಿಗೇ ಬಿಟ್ಟುಬಿಡುತ್ತಿದ್ದನೋ ಏನೋ. ಆದರೆ ಈ ಮಧ್ಯೆ ಶ್ರೀರಾಮಕೃಷ್ಣರಿಗೆ ಆ ಬಗ್ಗೆ ಕುತೂಹಲ ಹುಟ್ಟಿತ್ತು. ಬ್ರಾಹ್ಮಣಿಯ ಮಾತಿಗೆ ಶಾಸ್ತ್ರವೇತ್ತರು-ಪಂಡಿತರು ಏನು ಹೇಳಿಯಾರು, ಅವರ ನಡುವೆ ಎಂತಹ ವಾದ ನಡೆದೀತು ಎಂದು ನೋಡುವ ಬಾಲಸಹಜ ಕುತೂಹಲ. ಆದ್ದರಿಂದ ಅವರು ಮಥುರನನ್ನು, "ನೋಡು ನೋಡು,

ಬ್ರಾಹ್ಮಣಿ ಹೇಳುವುದನ್ನು ಪರೀಕ್ಷೆ ಮಾಡಲೇಬೇಕು. ಆದ್ದರಿಂದ ನೀನು ಒಳ್ಳೆಯ ಪಂಡಿತರನ್ನೆಲ್ಲ ಕರೆಯಿಸಿ ಸಭೆ ಸೇರಿಸು. ಅವರೇನೆನ್ನುತ್ತಾರೋ ನೋಡೋಣ" ಎಂದು ಒತ್ತಾಯಪಡಿಸಿದರು. ಮಥುರ ಆಲೋಚಿಸಿದ:

'ಪಂಡಿತರನ್ನೆಲ್ಲ ಕರೆಯಿಸಿದರೆ ಸಾಕಷ್ಟು ಖರ್ಚು ತಗಲುತ್ತದೆ, ನಿಜ. ಆದರೆ ಅದರಿಂದ ನಷ್ಟವೇನು ? ಠಾಕೂರರ (ಶ್ರೀರಾಮಕೃಷ್ಣರ) ಔಷಧಿಗೂ ಎಷ್ಟೋ ಖರ್ಚಾಗುತ್ತಿಲ್ಲವೆ ? ಅಲ್ಲದೆ, ಆ ಪಂಡಿತರೆಲ್ಲ ಬಂದು ವಾದ ಮಾಡಿದರೆಂದರೆ, ಅವರು ಶಾಸ್ತ್ರವಾಕ್ಯಗಳ ಪ್ರಮಾಣದ ಮೇಲೆ ಬ್ರಾಹ್ಮಣಿಯ ಮಾತನ್ನು ತಳ್ಳಿಹಾಕುವುದಂತೂ ಖಂಡಿತ. ಆಗ ಅದರಿಂದ ಒಂದಾದರೂ ಲಾಭವಾಗುತ್ತದೆ. ಸರಳ ಹೃದಯದ ಠಾಕೂರರು ಪಂಡಿತರ ಯುಕ್ತಿಯುಕ್ತವಾದ ಮಾತುಗಳನ್ನು ಕೇಳಿ, ತಮಗೊಂದು ರೋಗ ಅಂಟಿಕೊಂಡಿರುವುದೇ ನಿಜ ಎಂದು ಮನಗಾಣುತ್ತಾರೆ. ಅವರಿಗೆ ಅದರ ಅರಿವಾಗಿಬಿಟ್ಟಿತೆಂದರೆ ರೋಗ ವಾಸಿಯಾಗುವುದು ಬಹಳ ಸುಲಭ ! ಬ್ರಾಹ್ಮಣಿಯ ಮಾತನ್ನೇ ನಂಬಿಕೊಂಡಿದ್ದರೆ ಅವರ ಕಾಯಿಲೆ ವಾಸಿಯಾಗುವುದರ ಬದಲು ಇನ್ನಷ್ಟು ಉಲ್ಬಣಿಸುತ್ತ ಹೋಗುತ್ತದೆ. ಆದ್ದರಿಂದ ಪಂಡಿತರ ಸಭೆಯನ್ನು ಏರ್ಪಡಿಸುವುದೇ ಒಳ್ಳೆಯದು.'

ಅಲ್ಲದೆ ಮಥುರನಿಗೂ ಆ ವಾದವನ್ನು ನೋಡಬೇಕೆಂಬ ಕುತೂಹಲ ಹುಟ್ಟಿತ್ತು. ಇದರಿಂದ ಶ್ರೀರಾಮಕೃಷ್ಣರಿಗೂ ಸಂತೋಷವುಂಟಾಗುವುದಲ್ಲ, ಎಂದು ಆಲೋಚಿಸಿ ಅದಕ್ಕೊಪ್ಪಿದ. ತೀರ್ಪಿಗಾಗಿ ವೈಷ್ಣವಚರಣ ಹಾಗೂ ಗೌರೀಕಾಂತ ಎಂಬಿಬ್ಬರು ಹೆಸರಾಂತ ಪಂಡಿತರನ್ನು ಕರೆಯಿಸುವುದೆಂದು ತೀರ್ಮಾನವಾಯಿತು.

ವೈಷ್ಣವಚರಣನು ಕಲ್ಕತ್ತದ ಪಂಡಿತಸಮಾಜದಲ್ಲಿ ಅತ್ಯುನ್ನತ ಗೌರವಾದರಗಳಿಗೆ ಪಾತ್ರನಾಗಿದ್ದವನು; ಮಹಾ ವಿದ್ವಾಂಸ. ಅಲ್ಲದೆ ಶ್ರೀಮದ್ಭಾಗವತವನ್ನು ಅತ್ಯಂತ ಸುಂದರವಾಗಿ ವಾಚನ-ವ್ಯಾಖ್ಯಾನ ಮಾಡುವವನಾಗಿ ಜನಸಾಮಾನ್ಯರಲ್ಲಿಯೂ ಹೆಸರುವಾಸಿಯಾಗಿದ್ದವನು.

ವೈಷ್ಣವಚರಣ ಕೇವಲ ಶುಷ್ಕ ಪಂಡಿತನಲ್ಲ. ಅವನೊಬ್ಬ ನಿಷ್ಠಾವಂತ, ಭಕ್ತಿಶಾಲೀ ಆಧ್ಯಾತ್ಮಿಕ ಸಾಧಕನೆಂಬ ವಿಷಯ ಜನಜನಿತವಾಗಿತ್ತು. ಅವನ ಭಗವತ್ಪ್ರೇಮವೂ ಶಾಸ್ತ್ರಗ್ರಂಥಗಳ ಆಳವಾದ ಜ್ಞಾನವೂ ಅವನನ್ನು ಅಂದಿನ ವೈಷ್ಣವಸಮಾಜದ ಮುಖಂಡನನ್ನಾಗಿ ಮಾಡಿದ್ದುವು. ವೈಷ್ಣವಬಂಧುಗಳಲ್ಲಿ ಯಾವುದೇ ಧಾರ್ಮಿಕ ಸಮಾರಂಭ ನಡೆಯಲಿ, ಅದಕ್ಕೆ ಈತನಿಗೆ ಆಹ್ವಾನವಿದ್ದೇ ಇರುತ್ತಿತ್ತು. ಅಷ್ಟೇ ಅಲ್ಲ, ಆಹ್ವಾನಿತರ ಪೈಕಿ ಅಗ್ರಸ್ಥಾನದ ಗೌರವ ಈತನಿಗೇ. ಧಾರ್ಮಿಕ ಆಚಾರ ವಿಚಾರಗಳಿಗೆ ಸಂಬಂಧಿಸಿದಂತೆ ಯಾವುದೇ ಸಮಸ್ಯೆ, ವಿವಾದ ಉಂಟಾದರೂ ಜನ ಪರಿಹಾರಕ್ಕಾಗಿ ಹೋಗುತ್ತಿದ್ದುದು ಈತನ ಬಳಿಗೇ. ಮತ್ತು ಇವನ ನಿರ್ಣಯವನ್ನೇ ಅಂತಿಮವೆಂದು ಸ್ವೀಕರಿಸುತ್ತಿದ್ದರು. ಅಷ್ಟು ಮಾತ್ರವಲ್ಲ; ಎಷ್ಟೋ ಜನ ಪ್ರಾಮಾಣಿಕ ಸಾಧಕರು ತಮ್ಮ ಸಾಧನಾಮಾರ್ಗದಲ್ಲಿ ಮಾರ್ಗದರ್ಶನಕ್ಕಾಗಿ ಈತನ ಸಹಾಯವನ್ನು ಯಾಚಿಸುತ್ತಿದ್ದರು. ಹೀಗಿರುವಾಗ ಶ್ರೀರಾಮಕೃಷ್ಣರ ಸ್ಥಿತಿಗೆ ನಿಜವಾದ ಕಾರಣವೇನು ?—ಆಧ್ಯಾತ್ಮಿಕ ಯೋಗವೋ ಅಥವಾ ಶಾರೀರಿಕ ರೋಗವೋ—ಎಂಬುದನ್ನು ತೀರ್ಮಾನಿಸಲು ಈತನು ಸಮರ್ಥನಾದವನೆಂದು ಮಥುರ ಭಾವಿಸಿದ್ದು ಸಹಜವೇ.

ವೈಷ್ಣವಚರಣನಂತೆಯೇ ವಿದ್ವತ್ತಿನಿಂದಲೂ ಶಾಸ್ತ್ರಪಾಂಡಿತ್ಯದಿಂದಲೂ ಹೆಸರು

ಗಳಿಸಿದ್ದ ಮತ್ತೊಬ್ಬ ವ್ಯಕ್ತಿ ಗೌರೀಕಾಂತ ಪಂಡಿತ (ಅಥವಾ 'ಗೌರೀ ಪಂಡಿತ'). ವಾದದಲ್ಲಿ ಇವನನ್ನು ಮೀರಿಸುವವರೇ ಇಲ್ಲವೆಂಬ ಪ್ರತೀತಿಯಿತ್ತು. 'ಭೈರವಿಯ ವಾದವನ್ನು ಅಲ್ಲಗಳೆಯಲು ಇವನೇ ಸರಿ' ಎಂದು ಮಥುರನಿಗೆ ಅನ್ನಿಸಿದ್ದರೆ ಆಶ್ಚರ್ಯವೇನೂ ಇಲ್ಲ. ವೈಷ್ಣವಚರಣ ಕಲ್ಕತ್ತದಲ್ಲೇ ವಾಸವಾಗಿದ್ದವನು. ಗೌರೀಕಾಂತ ಪಂಡಿತ ಸುಮಾರು ಅರವತ್ತು ಮೈಲಿ ದೂರದ ಇಂದೇಶ ಗ್ರಾಮದವನು. ಮಥುರನಿಂದ ಇಬ್ಬರಿಗೂ ಕರೆ ಹೋಯಿತು. ಗೌರೀ ಪಂಡಿತನನ್ನು ಕರೆತರಲು ಮಥುರನ ಪತ್ರದೊಂದಿಗೆ ಹೃದಯರಾಮನ ಸೋದರ ರಾಮರತನನೇ ಹೋಗಿದ್ದ.

ಮಥುರನ ವಿನಂತಿಗೆ ಒಪ್ಪಿ ಕೆಲದಿನಗಳಲ್ಲೇ ವೈಷ್ಣವಚರಣ ದಕ್ಷಿಣೇಶ್ವರಕ್ಕೆ ಆಗಮಿಸಿದ. ಜೊತೆಗೆ ಅವನ ಸಹವರ್ತಿಗಳಾದ ಕೆಲವು ಪಂಡಿತೋತ್ತಮರೂ, ಆಧ್ಯಾತ್ಮಿಕ ಸಾಧಕರೂ ಬಂದರು. ಆದರೆ ಕಾರಣಾಂತರಗಳಿಂದ ಗೌರೀ ಪಂಡಿತ ಬರಲಾಗಲಿಲ್ಲ. ಆದ್ದರಿಂದ ಅವನಿಲ್ಲದೆಯೇ ಸಭೆ ನಡೆಸುವ ವ್ಯವಸ್ಥೆಯಾಯಿತು. ಸಭೆಯಲ್ಲಿ ಈ ಪಂಡಿತರಲ್ಲದೆ ಭೈರವಿ ಬ್ರಾಹ್ಮಣಿ, ಶ್ರೀರಾಮಕೃಷ್ಣರು, ಮಥುರಾನಾಥ ಮತ್ತಿತರರಿದ್ದರು.

ಚರ್ಚೆ ಪ್ರಾರಂಭವಾಯಿತು. ಮೊದಲಿಗೆ ಬ್ರಾಹ್ಮಣಿ ತನ್ನ ವಾದವನ್ನು ಮಂಡಿಸಿದಳು. ಶ್ರೀರಾಮಕೃಷ್ಣರ ವಿವಿಧ ಮಾನಸಿಕ-ದೈಹಿಕ ಅವಸ್ಥೆಗಳ ಕುರಿತಾಗಿ ಜನಗಳ ಮೂಲಕವೂ ಸ್ವಯಂ ಶ್ರೀರಾಮಕೃಷ್ಣರಿಂದಲೂ ತಾನು ಕೇಳಿದ್ದನ್ನು ಮತ್ತು ದಕ್ಷಿಣೇಶ್ವರಕ್ಕೆ ಬಂದ ಮೇಲೆ ತಾನೇ ಕಣ್ಣಾರೆ ಕಂಡದ್ದನ್ನು ವಿವರವಾಗಿ ಬಣ್ಣಿಸಿದಳು. ಅವರ ಅನುಭವಗಳನ್ನು ಅವಳು, ಭಕ್ತಿಶಾಸ್ತ್ರಗ್ರಂಥಗಳಲ್ಲಿ ವಿವರಿಸಿರುವ ಪುರಾತನ ಭಕ್ತರ, ಸಾಧಕರ ಅನುಭವಗಳೊಂದಿಗೆ ಒಂದೊಂದಾಗಿ ಹೋಲಿಸಿದಳು. ಬಳಿಕ, ಶ್ರೀರಾಮಕೃಷ್ಣರ ಸ್ಥಿತಿಯು ಆ ಹಿರಿಯ ಆಚಾರ್ಯರ ಸ್ಥಿತಿಗಿಂತ ಭಿನ್ನವಾದುದಲ್ಲ ಎಂಬ ತನ್ನ ಸಿದ್ಧಾಂತವನ್ನು ಮುಂದಿಟ್ಟಳು. ಮಧ್ಯೆಮಧ್ಯೆ ವೈಷ್ಣವಚರಣನ ಹಾಗೂ ಇತರ ಪಂಡಿತರ ಪ್ರಶ್ನೆ-ಉಪಪ್ರಶ್ನೆಗಳಿಗೆ, ಸಂದೇಹಗಳಿಗೆ ಉತ್ತರ ಕೊಟ್ಟಳು. ತನ್ನ ಉತ್ತರಗಳನ್ನು ಸಮರ್ಥಿಸಲು ಹಲವಾರು ಶಾಸ್ತ್ರಗ್ರಂಥಗಳಿಂದ ವಾಕ್ಯಗಳನ್ನೂ ಶ್ಲೋಕಗಳನ್ನೂ ಉದ್ಧರಿಸಿದಳು. ಕಡೆಯಲ್ಲಿ ವೈಷ್ಣವಚರಣನನ್ನುದ್ದೇಶಿಸಿ, "ನಿಮ್ಮ ಅಭಿಪ್ರಾಯವು ನನ್ನದಕ್ಕಿಂತ ಬೇರೆಯಾದುದಾದರೆ, ಕೃಪೆಮಾಡಿ ಅದನ್ನು ಸಕಾರಣವಾಗಿ ವಿವರಿಸಬೇಕು" ಎಂದಳು. ಹೀಗೆ ಬ್ರಾಹ್ಮಣಿ, ಅಭಿಮಾನಿನಿಯಾದ ತಾಯಿ ತನ್ನ ಹೆಮ್ಮೆಯ ಮಗುವಿನ ಸಮರ್ಥನೆಗೆ ನಿಲ್ಲುವ ರೀತಿಯಲ್ಲಿ, ಯಾವುದೋ ದೈವೀಶಕ್ತಿಯಿಂದ ಪ್ರೇರಿತಳಾದವಳಂತೆ, ಶ್ರೀರಾಮಕೃಷ್ಣರ ಸಮರ್ಥನೆಗೆ ನಿಂತಳು.

ಮಹಾ ಪಂಡಿತರೆಲ್ಲ ಸೇರಿದ ಆ ಸಭೆಯಲ್ಲಿ ಇಷ್ಟೆಲ್ಲ ವಿದ್ವತ್ಪೂರ್ಣ ಮಾತುಕತೆ, ವಾದವಿವಾದ ನಡೆಯುತ್ತಿರುವಾಗ, ಯಾರ ಕುರಿತಾಗಿ ಇವೆಲ್ಲ ನಡೆಯುತ್ತಿವೆಯೋ ಆ ಶ್ರೀರಾಮಕೃಷ್ಣರು ಏನು ಮಾಡುತ್ತಿರಬಹುದು ? ಬ್ರಾಹ್ಮಣಿಯ ವಾಕ್ಸಾಮರ್ಥ್ಯವನ್ನು ಮೆಚ್ಚಿಕೊಳ್ಳುತ್ತ, ನಡುನಡುವೆ ಆಕೆಯನ್ನು ಬೆಂಬಲಿಸುತ್ತ—ಕೆಲವೊಮ್ಮೆ ಆತಂಕದಿಂದ, ಮತ್ತೆ ಕೆಲವೊಮ್ಮೆ ಆನಂದದಿಂದ—ವಾದವಿವಾದದ ಧಾಟಿಯನ್ನು ಹಿಡಿದು ಕುಳಿತಿರಬಹುದೆ ? ಇಲ್ಲವೇ ಇಲ್ಲ ! ವಾಗ್ವಾದ ನಡೆಯುತ್ತಿರುವುದು ತಮ್ಮ ಸಂಬಂಧವಾಗಿ ಅಲ್ಲ, ಇನ್ನಾರದೋ ವಿಷಯವಾಗಿ ಎಂಬಂತಿದ್ದಾರೆ; ತಮ್ಮಷ್ಟಕ್ಕೆ ತಾವು ನಿಶ್ಚಿಂತರಾಗಿ ಕುಳಿತು, ಆಗಾಗ ತಮ್ಮ ಕೈಚೀಲದಿಂದ ಸೋಂಪು-ಮಸಾಲೆಯನ್ನು ಬಾಯಿಗೆ

ಹಾಕಿಕೊಳ್ಳುತ್ತ, ಆನಂದದಿಂದ ಜಗಿಯುತ್ತಿದ್ದಾರೆ; ಕೆಲವೊಮ್ಮೆ ಮಾತಿನ ಸ್ವಾರಸ್ಯವನ್ನು ಸವಿಯುತ್ತ ಮುಗುಳ್ನಗುತ್ತಿದ್ದಾರೆ. ಆಗೊಮ್ಮೆ ಈಗೊಮ್ಮೆ ವೈಷ್ಣವಚರಣನ ಪ್ರಶ್ನೆಗಳಿಗುತ್ತರವಾಗಿ, 'ಹೌದು, ಹೌದು; ನನಗೆ ಕೆಲವೊಮ್ಮೆ ಹಾಗಾಗುತ್ತಿತ್ತು; ನನಗೆ ಇಂತಿಂತಹ ಅನುಭವಗಳಾದುವು' ಎಂದು ಸಾಕ್ಷಿಯಂತೆ ಹೇಳುತ್ತಾರೆ!

ವಾದವಿವಾದಗಳೆಲ್ಲ ಮುಗಿದುವು. ಬ್ರಾಹ್ಮಣಿಯು ತಾನು ಹೇಳಬೇಕಾದ್ದನ್ನೆಲ್ಲ ಹೇಳಿಯಾಯಿತು. ಈಗ ವೈಷ್ಣವಚರಣ ತನ್ನ ತೀರ್ಪು ಕೊಡಬೇಕು. ಮಥುರನೇ ಮೊದಲಾದವರೆಲ್ಲ ಕುತೂಹಲದಿಂದ, 'ಈಗ ಇವರು ಏನು ಹೇಳಿಯಾರು, ನೋಡೋಣ' ಎಂದು ನಿರೀಕ್ಷಿಸುತ್ತಿದ್ದಾರೆ. ಆದರೆ ವೈಷ್ಣವಚರಣನಿಗೆ ಮಾತ್ರ ಯಾವ ಸಂದಿಗ್ಧವೂ ಉಳಿದಿಲ್ಲ; ಅವನ ಮನದಲ್ಲಿ ಯಾವ ಸಂದೇಹವೂ ಉಳಿದಿಲ್ಲ. ಸ್ವತಃ ತಾನೂ ದೀರ್ಘಸಾಧನೆಯಿಂದ ಗಳಿಸಿದ ಸೂಕ್ಷ್ಮ ಅಂತರ್ದೃಷ್ಟಿಯಿಂದಾಗಿ ಶ್ರೀರಾಮ ಕೃಷ್ಣರನ್ನು ಕಂಡೊಡನೆಯೇ ಅವರೊಬ್ಬ ಮಹಾತ್ಮರೆಂಬುದು ಅವನಿಗೆ ಖಚಿತವಾಗಿತ್ತು. ಈಗ ಅವನ ಅಭಿಪ್ರಾಯ ಮತ್ತಷ್ಟು ದೃಢವಾಯಿತು. ಅವರ ಕುರಿತಾಗಿ ಬ್ರಾಹ್ಮಣಿ ಹೇಳಿದ್ದೆಲ್ಲವೂ ಸಂಪೂರ್ಣ ಸತ್ಯ ಎಂದು ಅವನೀಗ ನಿಸ್ಸಂದಿಗ್ಧವಾಗಿ ಅನುಮೋದಿಸಿದ. ಅಷ್ಟೇ ಅಲ್ಲ, ಹಿಂದೆ ರಾಧಾರಾಣಿಯಲ್ಲಿ ಮತ್ತು ಶ್ರೀಚೈತನ್ಯದೇವನಲ್ಲಿ ಪೂರ್ಣ ಪ್ರಮಾಣದಲ್ಲಿ ಪ್ರಕಾಶಿತವಾಗಿದ್ದ ಮಹಾಭಾವವೇ ಶ್ರೀರಾಮಕೃಷ್ಣರಲ್ಲಿ ವ್ಯಕ್ತವಾಗಿದೆಯೆಂದೂ ಸಾರಿದ. ಮತ್ತು ತಾನೇ ಪರಮಾಶ್ಚರ್ಯಪಡುತ್ತ ಉದ್ಗರಿಸಿದ:

"ಯಾವುದೋ ಅಪೂರ್ವ ಭಾಗ್ಯವಶದಿಂದ ಮಾತ್ರ ಯಾವನಾದರೊಬ್ಬ ಸಾಧಕನಲ್ಲಿ ಈ ಮಹಾಭಾವವು ಕಿಂಚಿತ್ ಪ್ರಮಾಣದಲ್ಲಿ ವ್ಯಕ್ತವಾಗಬಹುದು. ಎಂದರೆ ಅದರ ಹತ್ತೊಂಬತ್ತು ಲಕ್ಷಣಗಳಲ್ಲಿ ಹೆಚ್ಚೆಂದರೆ ಎರಡೋ ಮೂರೋ ಮಾತ್ರವೇ ವ್ಯಕ್ತವಾದೀತು. ಶಾಸ್ತ್ರಗಳ ಪ್ರಕಾರ, ಜೀವಾತ್ಮನ ಶರೀರವು ಅವುಗಳೆಲ್ಲದರ ಅಪಾರ ವೇಗವನ್ನು ಭರಿಸಲು ಹಿಂದೆಂದೂ ಸಮರ್ಥವಾಗಿಲ್ಲ, ಮುಂದೆಯೂ ಸಮರ್ಥವಾಗದು. ಆದರೆ ಶ್ರೀರಾಮಕೃಷ್ಣರಲ್ಲಿ ಮಹಾಭಾವದ ಹತ್ತೊಂಬತ್ತು ಲಕ್ಷಣಗಳೂ ಪೂರ್ಣಪ್ರಮಾಣದಲ್ಲಿ ವ್ಯಕ್ತವಾಗಿವೆ. ಇವರು ಅವತಾರಪುರುಷರೇ ಸರಿ!"

ವೈಷ್ಣವಚರಣನ ಮಾತುಗಳನ್ನು ಕೇಳಿ ಮಥುರನೂ ಇನ್ನಿತರರೂ ದಂಗುಬಡಿದಂತಾದರು. ತನ್ನ ಮಾತಿಗೆ ಯೋಗ್ಯವ್ಯಕ್ತಿಯಿಂದ ಸಮರ್ಥನೆ ದೊರೆತದ್ದರಿಂದ ಭೈರವಿ ಬ್ರಾಹ್ಮಣಿಗೆ ಸಹಜವಾಗಿಯೇ ಬಹಳ ಸಂತೋಷವಾಗಿಬಿಟ್ಟಿತು. ಸ್ವತಃ ಶ್ರೀರಾಮಕೃಷ್ಣರಿಗೂ ಆಶ್ಚರ್ಯ, ಸಂತೋಷ—ಆದರೆ ತಮಗೆ ಅವತಾರಪುರುಷನ ಪಟ್ಟ ಗಿಟ್ಟಿತಲ್ಲ ಎಂಬ ಹೆಮ್ಮೆಯಿಂದಲ್ಲ. ಮಥುರನ ಬಳಿಗೆ ಹೋಗಿ ಬಾಲಕನಂತೆ ಹಿಗ್ಗಿನಿಂದ ನುಡಿದರು, "ಆಹ್, ಏನೆಲ್ಲ ಹೇಳಿಬಿಟ್ಟರು ಅವರು?! ಸದ್ಯ, ಏನಾದರಾಗಲಿ, ಹುಚ್ಚಂತೂ ಅಲ್ಲ ಎಂದಾಯಿತಲ್ಲ, ಅಷ್ಟೇ ಸಾಕು!"

ವೈಷ್ಣವಚರಣನು ಶ್ರೀರಾಮಕೃಷ್ಣರನ್ನು ಅವತಾರಪುರುಷರೆಂದು ಸಾರಿದ್ದು ಕೇವಲ ಉಪಚಾರಕ್ಕಲ್ಲ ಅಥವಾ ಯಾವ ಮುಲಾಜಿಗೂ ಒಳಗಾಗಿಯೂ ಅಲ್ಲ. ಅದು ಅವನ ಅತ್ಯಂತ ಪ್ರಾಮಾಣಿಕ ಭಾವನೆ. ಅವನಂತಹ ಪ್ರಕಾಂಡ ಪಂಡಿತ, ಪ್ರಭಾವಶಾಲೀ ವ್ಯಕ್ತಿ ಯಾರಿಗೆ ತಾನೆ ಅಂಜಿ ನಡೆಯಬೇಕಾಗಿದೆ? ಅವನು ತನ್ನ ಅಪಾರ ಪಾಂಡಿತ್ಯ-ಜ್ಞಾನದೊಂದಿಗೆ ಆಧ್ಯಾತ್ಮಿಕ ಸಾಧನಾಬಲದಿಂದ ಶ್ರೀರಾಮಕೃಷ್ಣರ ದಿವ್ಯತೆಯನ್ನು ಕಂಡುಕೊಳ್ಳಲು ಸಮರ್ಥನಾದ. ತತ್ಪರಿಣಾಮವಾಗಿ ಅವರನ್ನು ಪರಮಭಕ್ತಿ

ಯಿಂದ ಕಾಣತೊಡಗಿದ. ಅವರ ದಿವ್ಯ ಸಾನ್ನಿಧ್ಯದ ಆನಂದವನ್ನನುಭವಿಸಲು ಮತ್ತು ತನ್ನ ರಹಸ್ಯ ಸಾಧನೆಗಳ ವಿಷಯದಲ್ಲಿ ಅವರ ಸಲಹೆ ಪಡೆದುಕೊಳ್ಳಲು ಆಗಾಗ ದಕ್ಷಿಣೇಶ್ವರಕ್ಕೆ ಬರತೊಡಗಿದ. ಅಷ್ಟೇ ಅಲ್ಲ, ತನಗೆ ಪರಿಚಿತರಾದ ಇನ್ನೂ ಅನೇಕ ಸ್ತ್ರೀ-ಪುರುಷ ಸಾಧಕರನ್ನೂ ಅವರ ಬಳಿಗೆ ಕರೆತಂದ. ಅವರ ಸಹವಾಸದಿಂದ ಈ ಸಾಧಕರೂ ಕೃತಾರ್ಥರಾಗಲೆಂಬ ಉದ್ದೇಶ ಅವನದು. ಶ್ರೀರಾಮಕೃಷ್ಣರ ದಿವ್ಯ ಭಗವತ್ಪ್ರೇಮದೊಂದಿಗೆ ಅವರ ಪವಿತ್ರ ಚಾರಿತ್ರ್ಯವನ್ನು ಕಂಡ ವೈಷ್ಣವಚರಣ ಅವರ ಮೇಲೆ ಅದೆಷ್ಟು ಭಕ್ತಿಗೌರವ ತಾಳಿದನೆಂದರೆ, ಅವರು ಸಾಕ್ಷಾತ್ ಅವತಾರಪುರುಷರೆಂದು ಸರ್ವರ ಸಮ್ಮುಖದಲ್ಲೂ ಸಾರತೊಡಗಿದ.

## ಪಂಡಿತನ ಪರಾಜಯ ೨

ಪಂಡಿತರ ಸಭೆ ನಡೆದ ಕೆಲದಿನಗಳ ಬಳಿಕ ದಕ್ಷಿಣೇಶ್ವರಕ್ಕೆ ಇನ್ನೊಬ್ಬ ಪಂಡಿತ ಬಂದ. ಅವನೇ ಗೌರೀಕಾಂತ ಪಂಡಿತ. ಅಂದಿನ ಆ ಸಭೆಗೆ ಆಮಂತ್ರಿತನಾಗಿದ್ದ ಅವನು ಆಗ ಬರಲಾಗದೆ ಈಗ ಕಾಣಿಸಿಕೊಂಡಿದ್ದಾನೆ. ಇವನೊಬ್ಬ ಮಹಾ ತಂತ್ರಸಾಧಕ, ಬಹಳ ವಿಶಿಷ್ಟ ವ್ಯಕ್ತಿ. ತನ್ನ ತಪಸ್ಸಿನ ಫಲವಾಗಿ ಅನೇಕ ಅದ್ಭುತ ಶಕ್ತಿಗಳನ್ನು ಗಳಿಸಿದ್ದ. ಅವನು ಯಾವುದಾದರೂ ಶಾಸ್ತ್ರಸಂಬಂಧವಾದ ಚರ್ಚೆಯಲ್ಲಿ ಭಾಗವಹಿಸಲು ಹೋದನೆಂದರೆ ಅವನ ವರ್ತನೆ ತುಂಬ ವಿಚಿತ್ರವಾಗಿರುತ್ತಿತ್ತು. ಚರ್ಚಾಸ್ಥಳವನ್ನು ಪ್ರವೇಶಿಸುತ್ತಿದ್ದಂತೆಯೇ ದೇವಿಯ ಕುರಿತಾದ ಯಾವುದಾದರೊಂದು ಶ್ಲೋಕವನ್ನು ಮತ್ತು ಅದರೊಂದಿಗೆ ಕೆಲವು ಬೀಜಾಕ್ಷರಗಳನ್ನು ಮಹಾ ರಭಸದಿಂದ, ಕೇಳಿದವರ ಎದೆ ನಡುಗುವಂತೆ ಉಚ್ಚರಿಸುತ್ತಿದ್ದ. ಇದರಿಂದ ಅವನೊಳಗೆ ಯಾವುದೋ ಒಂದು ಶಕ್ತಿ ಜಾಗೃತವಾಗುತ್ತಿತ್ತು. ಅಲ್ಲದೆ, ಅವನ ಪ್ರತಿವಾದಿಗಳು ಏಕೋ ಅವ್ಯಕ್ತ ಭಯ-ವಿಭ್ರಮೆಗಳಿಂದ ಸ್ಥೈರ್ಯವನ್ನೇ ಕಳೆದುಕೊಳ್ಳುತ್ತಿದ್ದರು. ಹೀಗೆ ಗೌರೀ ಪಂಡಿತ ಗಟ್ಟಿಯಾಗಿ ಆರ್ಭಟಿಸುತ್ತ ಜಟ್ಟಿಗಳಂತೆ ಬಲಗೈಯಿಂದ ಎಡಭುಜವನ್ನು ಜೋರಾಗಿ ತಟ್ಟಿಕೊಳ್ಳುತ್ತ ಬಂದು, ವಜ್ರಾಸನದಲ್ಲಿ ಕುಳಿತು ತರ್ಕಯುದ್ಧವನ್ನು ಆರಂಭಿಸಿದನೆಂದರೆ ಅವನನ್ನು ಸೋಲಿಸಲು ಯಾರಿಂದಲೂ ಸಾಧ್ಯವಿರಲಿಲ್ಲ!

ಗೌರೀ ಪಂಡಿತ ದಕ್ಷಿಣೇಶ್ವರಕ್ಕೆ ಬಂದಾಗ ಒಂದು ವಿನೋದದ ಪ್ರಸಂಗ ನಡೆಯಿತು. ತನ್ನ ಅಭ್ಯಾಸದಂತೆ ಅವನು ಶ್ರೀಶಂಕರಾಚಾರ್ಯವಿರಚಿತ ಶ್ಲೋಕವೊಂದನ್ನು ಮತ್ತು ಬೀಜಾಕ್ಷರಗಳನ್ನು ಗಟ್ಟಿಯಾಗಿ ಉಚ್ಚರಿಸುತ್ತಲೇ ದೇವಾಲಯದ ಆವರಣವನ್ನು ಪ್ರವೇಶಿಸಿದ: "ಹಾರೇರೇರೇ! ನಿರಾಲಂಬೋ ಲಂಬೋದರಜನನಿ ಕಂ ಯಾಮಿ ಶರಣಂ!" (ಎಂದರೆ, 'ಓ ಲಂಬೋದರನ ಜನನಿ! ನಿಸ್ಸಹಾಯಕನಾದ ನಾನು, ನೀನಲ್ಲದೆ ಮತ್ತಾರಲ್ಲಿ ಶರಣು ಹೋಗಲಿ?' ಎಂದು.)

ಗೌರೀ ಪಂಡಿತನ ಈ 'ಹಾರೇರೇರೇ' ಎಂಬ ಕೂಗು ಕಾಳೀ ದೇವಾಲಯವನ್ನೆಲ್ಲ ನಡುಗಿಸಿತು. ತಮ್ಮ ಕೋಣೆಯಲ್ಲಿ ಕುಳಿತಿದ್ದ ಶ್ರೀರಾಮಕೃಷ್ಣರ ಕಿವಿಯನ್ನೂ ಇದು ತಲುಪಿತು. ಇದು ಗೌರೀ ಪಂಡಿತನ ಸಿದ್ಧಿಯೆಂದಾಗಲೀ ಅವನು ಇಲ್ಲಿಗೆ ಬಂದಿದ್ದಾನೆಂದಾಗಲೀ ಅವರಿಗೆ ತಿಳಿಯದು. ಆದರೂ ಆ ಕೂಗನ್ನು ಕೇಳಿದೊಡನೆ, ಅವರೊಳಗಿನ ಯಾವುದೋ ಶಕ್ತಿ ಅವರನ್ನು ಅದಕ್ಕಿಂತ ಜೋರಾಗಿ ಕೂಗುವಂತೆ ಪ್ರೇರೇಪಿಸಿತು. ತಕ್ಷಣ ಅವರು ಸ್ಫೂರ್ತಿಗೊಂಡು ಅದಕ್ಕಿಂತ ಗಟ್ಟಿಯಾಗಿ, "ಹಾರೇರೇರೇ!" ಎಂದು ಆರ್ಭಟಿಸಿದರು!

ಇದಾರು ತನಗಿಂತ ಜೋರಾಗಿ ಕೂಗುವವರು! ಪಂಡಿತನಿಗೆ ಆಶ್ಚರ್ಯ, ಜೊತೆಗೆ ಅಸಮಾಧಾನ. ಆದ್ದರಿಂದ ಅವನು ಮತ್ತೊಮ್ಮೆ ಇನ್ನೂ ಗಟ್ಟಿಯಾಗಿ ಕೂಗು ಹಾಕಿದ. ತಕ್ಷಣ ಶ್ರೀರಾಮಕೃಷ್ಣರು ಅವನ ಕೂಗನ್ನು ಮುಳುಗಿಸುವಂತೆ ತಮ್ಮ ಎಂದಿನ ಕಂಠಕ್ಕಿಂತ ನೂರು ಪಟ್ಟು ಹೆಚ್ಚು ಗಟ್ಟಿಯಾಗಿ ಕೂಗಿ ಗರ್ಜಿಸಿಬಿಟ್ಟರು! ಅವರೊಳಗೆ ಆ ಶಕ್ತಿ ಅದೆಲ್ಲಿ ಅಡಗಿತ್ತೊ! ಹೀಗೇ ಹಲವಾರು ಬಾರಿ ನಡೆಯಿತು ಆರ್ಭಟ. ಪ್ರತಿ

ಸಲವೂ ಶ್ರೀರಾಮಕೃಷ್ಣರ ಗರ್ಜನೆ ಅವನದನ್ನು ಮೀರಿಸುತ್ತಿತ್ತು. ಕೊನೆಗೆ ಪಂಡಿತನ ಉಸಿರಡಗಿಹೋಯಿತು. ಅವರಷ್ಟು ಗಟ್ಟಿಯಾಗಿ ಕೂಗಲು ತನಗೆ ಸಾಧ್ಯವಿಲ್ಲವೆಂದರಿತು ತೆಪ್ಪಗಾದ. ಆದರೆ ಈ ಮಧ್ಯೆ, ಈ ಭಯಂಕರ ಕೂಗುಗಳನ್ನು ಕೇಳಿ, ದೇವಸ್ಥಾನ ದಲ್ಲಿದ್ದವರೆಲ್ಲ, 'ಇದೇನು ಬಂತೋ ಆಪತ್ತು!' ಎಂದು ತಲ್ಲಣಿಸಿದರು. ಡಕಾಯಿತರು ನುಗ್ಗಿರಬೇಕೆಂದು ಊಹಿಸಿದ ದ್ವಾರಪಾಲಕರು ದೊಣ್ಣೆ ಬಡಿಗೆಗಳನ್ನು ಹಿಡಿದು, 'ಹೇ ಹೇ! ಏನದು, ಯಾರದು?' ಎಂದು ಕೂಗುತ್ತ ಪ್ರಾಂಗಣಕ್ಕೆ ಧಾವಿಸಿದರು. ಬಂದು ನೋಡುತ್ತಾರೆ—ಕಳ್ಳರೂ ಇಲ್ಲ, ಕಾಕರೂ ಇಲ್ಲ! ಹೊಸದಾಗಿ ಬಂದ ಪಂಡಿತನ ಹಾಗೂ ತಮ್ಮ ಚಿಕ್ಕ ಪೂಜಾರಿಗಳ ನಡುವಿನ 'ಕಂಠಸ್ಪರ್ಧೆ' ಇದೆಂದು ಗೊತ್ತಾದಾಗ ಎಲ್ಲರೂ ನಗುತ್ತ ಹಿಂದಿರುಗಿದರು. ಗೌರೀ ಪಂಡಿತ ತಾನು ಸೋತೆನೆಂಬುದನ್ನು ಮನ ಗಂಡು ಖಿನ್ನಮನಸ್ಕನಾದ. ಆದರೆ ತನ್ನ ಸೋಲಿನಿಂದುಂಟಾದ ಅಪಮಾನವನ್ನು ಮರೆ ಮಾಚಲು ಗಟ್ಟಿಯಾಗಿ ನಗುತ್ತ ಒಳನಡೆದ.

ಶ್ರೀರಾಮಕೃಷ್ಣರು ಕೆಲವೊಮ್ಮೆ ಈ ವೃತ್ತಾಂತವನ್ನು ತಮ್ಮ ಶಿಷ್ಯರ ಮುಂದೆ ನಗುತ್ತ ಬಣ್ಣಿಸುತ್ತಿದ್ದರು. ಆಗ ಅವರು ಇನ್ನೊಂದು ವಿಷಯವನ್ನು ತಿಳಿಸಿದರು: "ಯಾವ ಸಿದ್ಧಿಯಿಂದ ಗೌರೀ ಪಂಡಿತ ಪ್ರತಿಸ್ಪರ್ಧಿಗಳ ಶಕ್ತಿಯನ್ನು ಸೆಳೆದುಕೊಂಡು ಅಜೇಯನಾಗುತ್ತಿದ್ದನೋ ಆ ಸಿದ್ಧಿಗೆ ಇಲ್ಲಿ ಸೋಲುಂಟಾದ್ದರಿಂದ ಅದು ಅವನಿಂದ ಹೊರಟುಹೋಯಿತು. ಇದನ್ನು ಜಗನ್ಮಾತೆ ನನಗೆ ಅನಂತರ ತಿಳಿಸಿದಳು. ಆತನ ಶ್ರೇಯಸ್ಸಿಗಾಗಿಯೇ ಅವಳು ಆ ಶಕ್ತಿಯನ್ನು (ತಮ್ಮ ದೇಹವನ್ನು ತೋರಿಸಿ) ಇದ ರೊಳಗೆ ಸೆಳೆದುಕೊಂಡಳು."

ಗೌರೀ ಪಂಡಿತನ ವಿಷಯದಲ್ಲಿ ಇನ್ನೂ ಅನೇಕ ವೈಶಿಷ್ಟ್ಯಗಳಿದ್ದುವು. ಬಹಳ ದೊಡ್ಡ ತಂತ್ರಸಾಧಕನಾದ ಆತ ಪ್ರತಿ ವರ್ಷವೂ ದುರ್ಗಾಪೂಜೆಯನ್ನು ನಿಷ್ಠೆಯಿಂದ ಆಚರಿಸುತ್ತಿದ್ದ. ಆದರೆ ಅವನು ಪೂಜೆಗೆ ಇರಿಸುತ್ತಿದ್ದುದು ಪ್ರತಿಮೆಯನ್ನಲ್ಲ, ತನ್ನ ಪತ್ನಿಯನ್ನೇ! ಆಕೆಯನ್ನು ಸಕಲ ವಸ್ತ್ರಾಭರಣಗಳಿಂದ ಸಿಂಗರಿಸಿ, ರಂಗವಲ್ಲಿಯಿಂದ ಅಲಂಕರಿಸಿದ ಮಣೆಯ ಮೇಲೆ ಕುಳ್ಳಿರಿಸಿ, ಮೂರು ದಿನಗಳ ಕಾಲ ಸಾಕ್ಷಾತ್ ದೇವಿ ಯೆಂಬಂತೆ ಪೂಜಿಸುತ್ತಿದ್ದ.

ಕೆಲವು ಸಂಪ್ರದಾಯಸ್ಥ ತಂತ್ರಸಾಧಕರು ಪ್ರತಿದಿನವೂ ಪೂಜೆಯ ಬಳಿಕ ಹೋಮ ಮಾಡುವುದುಂಟು. ಅಂತೆಯೇ ಗೌರೀ ಪಂಡಿತನೂ, ಪ್ರತಿದಿನವಲ್ಲದಿದ್ದರೂ ಆಗಾಗ, ಹೋಮ ಮಾಡುತ್ತಿದ್ದ. ಅವನು ಹೋಮ ಮಾಡುತ್ತಿದ್ದ ವಿಧಾನ ಮಾತ್ರ ತುಂಬ ವಿಚಿತ್ರ. ಎಲ್ಲರೂ ನೆಲದ ಮೇಲೆ ಇಟ್ಟಿಗೆಗಳನ್ನಿಟ್ಟು ಮರಳು ಹಾಕಿ, ಅದರ ಮೇಲೆ ಸಮಿತ್ತುಗಳನ್ನು ಹೊತ್ತಿಸಿ ಆಹುತಿ ಕೊಟ್ಟರೆ, ಗೌರೀ ಪಂಡಿತ ತನ್ನ ಚಾಚಿದ ಎಡಗೈ ಮೇಲೆ ಸುಮಾರು ಒಂದು ಮಣದಷ್ಟು ಸಮಿತ್ತುಗಳನ್ನು ಜೋಡಿಸಿಕೊಂಡು ಅಗ್ನಿಯನ್ನು ಪ್ರಜ್ವಲಿಸುತ್ತಿದ್ದ; ಮತ್ತು ಬಲಗೈಯಿಂದ ಆಹುತಿ ಕೊಡುತ್ತ ಹೋಮ ಮಾಡುತ್ತಿದ್ದ. ಇದು ಅವನ ಪರಿಪಾಠ! ಮುಂದೆ ಶ್ರೀರಾಮಕೃಷ್ಣರು ಇದನ್ನು ತಮ್ಮ ಶಿಷ್ಯರಿಗೆ ತಿಳಿಸಿದಾಗ, ಅವರಿಗೆ ನಂಬುವುದಕ್ಕೇ ಸಾಧ್ಯವಾಗಲಿಲ್ಲ. ಅಷ್ಟೊಂದು ಭಾರ ವನ್ನು ಒಂದೇ ರೀತಿಯಾಗಿ, ಅಷ್ಟು ಹೊತ್ತೂ ಕದಲಿಸದೆ ಹಿಡಿದುಕೊಂಡು, ಆ ತಾಪ ಗಳನ್ನೆಲ್ಲ ಸಹಿಸಿಕೊಂಡು ಶಾಂತಚಿತ್ತದಿಂದ ಹೋಮ ಮಾಡಲು ಯಾರಿಂದಾದರೂ ಸಾಧ್ಯವೆ?—ಎಂದು ಆ ಶಿಷ್ಯರು ಭಾವಿಸಿ, ಇದೊಂದು ಕಟ್ಟುಕತೆಯಿರಬೇಕು ಇಲ್ಲವೆ

ಅತಿಶಯೋಕ್ತಿಯಿರಬೇಕು ಎಂದು ತಿಳಿದರು. ತಮ್ಮ ಶಿಷ್ಯರ ಮನಸ್ಸನ್ನರಿತ ಶ್ರೀರಾಮ ಕೃಷ್ಣರು ಆಗ ಹೇಳಿದರು: "ಆಹ್ ! ಅವನು ಹಾಗೆ ಮಾಡುವುದನ್ನು ನಾನೇ ಕಣ್ಣಾರೆ ನೋಡಿದ್ದೇನೆ ! ಅದು ಅವನ ಅನೇಕ ಪವಾಡಶಕ್ತಿಗಳಲ್ಲೊಂದು, ಅಷ್ಟೆ."

ಇಂತಹ ಪ್ರಚಂಡ ಸಾಧಕ ಈ ಗೌರೀ ಪಂಡಿತ. ಸಹಜವಾಗಿಯೇ ಎಲ್ಲರಿಗೂ ಅವನನ್ನು ಕಂಡರೆ ಭಯಮಿಶ್ರಿತ ಗೌರವ. ಅವನು ದಕ್ಷಿಣೇಶ್ವರಕ್ಕೆ ಬಂದ ಕೆಲದಿನ ಗಳಲ್ಲೇ ಮಥುರಬಾಬು ಮತ್ತೊಮ್ಮೆ ಪಂಡಿತರ ಸಭೆಯನ್ನು ಏರ್ಪಡಿಸಿದ. ವೈಷ್ಣವ ಚರಣನಲ್ಲದೆ ಇತರ ಕೆಲವು ಪಂಡಿತರೂ ಆಹ್ವಾನಿತರಾಗಿದ್ದರು. ಸಭೆಯ ಉದ್ದೇಶ— 'ಶ್ರೀರಾಮಕೃಷ್ಣರ ದೈಹಿಕ-ಆಧ್ಯಾತ್ಮಿಕ ಸ್ಥಿತಿಗಳ ಬಗ್ಗೆ ಶಾಸ್ತ್ರಗ್ರಂಥಗಳಲ್ಲಿ ಏನಾದರೂ ಮಾಹಿತಿ ಸಿಕ್ಕೀತೆ? ಏನಾದರೂ ವಿವರಣೆಯಿರಬಹುದೆ? ಇದ್ದರೆ ಅವುಗಳ ಅಭಿ ಪ್ರಾಯವೇನು ?'—ಎಂಬೀ ವಿಷಯಗಳನ್ನು ಗೌರೀ ಪಂಡಿತನು ಇತರರೊಂದಿಗೆ ಚರ್ಚಿಸಬೇಕೆಂಬುದು. ಪಂಡಿತ ದಿಗ್ಗಜಗಳೆರಡು ಸೇರಲಿದ್ದ ಈ ಚರ್ಚೆ ತುಂಬ ಕುತೂಹಲಕರವಾಗುವ ಎಲ್ಲ ಲಕ್ಷಣಗಳಿದ್ದುವು. ಹಿಂದಿನಂತೆಯೇ ಭೈರವಿ ಬ್ರಾಹ್ಮಣಿ, ಮಥುರಬಾಬು ಹಾಗೂ ಶ್ರೀರಾಮಕೃಷ್ಣರು ಈ ಸಭೆಯಲ್ಲಿ ಪಾಲ್ಗೊಳ್ಳಲಿದ್ದರು.

ಕಾಳೀಮಂದಿರದ ಮುಂದಿನ ಸಭಾಮಂಟಪದಲ್ಲಿ ಒಂದು ದಿನ ಬೆಳಗ್ಗೆ ಸಭೆ ನಡೆಯುವ ಏರ್ಪಾಡಾಯಿತು. ಅಂದು ವೈಷ್ಣವಚರಣ ಕಲ್ಕತ್ತದಿಂದ ಬರುವವನಿದ್ದ. ಶ್ರೀರಾಮಕೃಷ್ಣರು ಗೌರೀ ಪಂಡಿತನೊಂದಿಗೆ ಅವನಿಗಾಗಿ ಕಾಯುತ್ತ ಹೊರಗೆ ನಿಂತಿ ದ್ದರು. ಆದರೆ ಅವನು ಬರುವುದು ಏಕೋ ತಡವಾದ್ದರಿಂದ ಇಬ್ಬರೂ ಒಳಹೊರಟರು. ಸಭಾಮಂಟಪಕ್ಕೆ ಬರುವ ಮುನ್ನ ಜಗನ್ಮಾತೆಯ ದರ್ಶನ ಮಾಡಲು ಶ್ರೀರಾಮಕೃಷ್ಣರು ಮಂದಿರದೊಳಗೆ ಪ್ರವೇಶಿಸಿದರು. ಮಾತೆಗೆ ಪ್ರಣಾಮ ಮಾಡುತ್ತಲೇ ಭಾವಾವಿಷ್ಟ ರಾದರು. ಬಳಿಕ ಆ ಭಾವದಲ್ಲೇ ಮೇಲೆದ್ದು ಅರ್ಧ ಪ್ರಜ್ಞಾವಸ್ಥೆಯಲ್ಲಿ ತೂರಾಡುತ್ತ ಮೆಲ್ಲನೆ ಹೊರಬಂದರು. ಆ ವೇಳೆಗೆ ಸರಿಯಾಗಿ ಅಲ್ಲಿಗೆ ಬಂದ ವೈಷ್ಣವಚರಣ ಭಕ್ತಿ ಯಿಂದ ಅವರ ಚರಣಗಳಿಗೆರಗಿದ. ಶ್ರೀರಾಮಕೃಷ್ಣರು ಭಾವಾವೇಶದಿಂದ ಸಮಾಧಿಸ್ಥ ರಾಗಿ ಅವನ ಹೆಗಲ ಮೇಲೆ ಕುಳಿತುಬಿಟ್ಟರು !

ವೈಷ್ಣವಚರಣನಿಗೆ ಶರೀರದಲ್ಲಿ ಮಿಂಚು ಹರಿದ ಅನುಭವವಾಯಿತು. ಶ್ರೀರಾಮ ಕೃಷ್ಣರ ಸ್ಪರ್ಶದಿಂದ ತಾನು ಧನ್ಯನಾದೆನೆಂದು ತಿಳಿದು ಅತ್ಯಾನಂದಗೊಂಡ. ಮತ್ತು ಆ ಕ್ಷಣದಲ್ಲೇ ಅವನು ಶ್ರೀರಾಮಕೃಷ್ಣರ ಮೇಲೆ ಸಂಸ್ಕೃತದಲ್ಲೊಂದು ಶ್ಲೋಕವನ್ನು ರಚಿಸಿ ಅವರನ್ನು ಸ್ತುತಿಸಲಾರಂಭಿಸಿದ. ಶ್ರೀರಾಮಕೃಷ್ಣರು ಇನ್ನೂ ಸಮಾಧಿಸ್ಥರಾಗಿಯೇ ಇದ್ದಾರೆ; ಅವರ ಮುಖಕಮಲ ಪ್ರಸನ್ನೋಜ್ವಲವಾಗಿ, ಮಂದಹಾಸದಿಂದ ಪ್ರಕಾಶಿಸು ತ್ತಿದೆ; ವೈಷ್ಣವಚರಣ ಹಿಡಿಸಲಾರದ ಆನಂದದಿಂದ ಸ್ತುತಿಸುತ್ತಿದ್ದಾನೆ ! ಮಥುರ, ಗೌರೀ ಪಂಡಿತನೇ ಮೊದಲಾದವರೆಲ್ಲ ವಿಸ್ಮಯಮೂಕರಾಗಿ ಈ ಅದ್ಭುತ ದೃಶ್ಯವನ್ನು ಎವೆ ಯಿಕ್ಕದೆ ದಿಟ್ಟಿಸುತ್ತ ನಿಂತುಬಿಟ್ಟರು. ಸ್ವಲ್ಪಹೊತ್ತಿನಲ್ಲಿ ಶ್ರೀರಾಮಕೃಷ್ಣರು ಬಾಹ್ಯಪ್ರಜ್ಞೆಗೆ ಮರಳಿದರು. ಬಳಿಕ ಎಲ್ಲರೂ ಅವರೊಂದಿಗೆ ಸಭಾಮಂಟಪದೊಳಕ್ಕೆ ನಡೆದರು.

ಈಗ ಶ್ರೀರಾಮಕೃಷ್ಣರ ದೈಹಿಕ-ಮಾನಸಿಕ ಅವಸ್ಥೆಗಳ ಕುರಿತಾಗಿ ವೈಷ್ಣವಚರಣ ನಿಗೂ ಗೌರೀ ಪಂಡಿತನಿಗೂ ಚರ್ಚೆ ನಡೆಯಬೇಕು; ಆ ಅವಸ್ಥೆಗಳಿಗೆ ಕಾರಣ ಅವರ ಉನ್ನತ ಆಧ್ಯಾತ್ಮಿಕ ಸಾಧನೆಗಳೋ ಅಥವಾ ದೈಹಿಕ ರೋಗಗಳೋ ಎಂದು ನಿಶ್ಚಯಿಸ ಬೇಕು. ಇವರಿಬ್ಬರೂ ಭೈರವಿ ಬ್ರಾಹ್ಮಣಿಯ ವಾದವನ್ನು ಆಲಿಸಿ, ಅನಂತರ ತಮ್ಮ

ತೀರ್ಪನ್ನು ನೀಡಬೇಕೆಂಬುದು ಮೊದಲಿನ ಯೋಜನೆಯಾಗಿತ್ತು. ಆದರೆ ವೈಷ್ಣವಚರಣ ಅದಾಗಲೇ ಭೈರವಿಯ ವಾದವನ್ನು ಸಂಪೂರ್ಣವಾಗಿ ಅನುಮೋದಿಸಿಬಿಟ್ಟಿದ್ದನಲ್ಲ? ಆದ್ದರಿಂದ ಈಗ ಈ ಇಬ್ಬರು ಪಂಡಿತರ ನಡುವೆಯೇ ಚರ್ಚೆಯಾಗಬೇಕು.

ಕಾರ್ಯಕ್ರಮ ಕ್ರಮಪ್ರಕಾರವಾಗಿ ಪ್ರಾರಂಭವೇನೋ ಆಯಿತು. ಆದರೆ ಗೌರೀ ಪಂಡಿತ ವಾದ ಮಾಡುವ ಮನಸ್ಥಿತಿಯಲ್ಲಿರಲಿಲ್ಲ. ಅವನ ವಾದಪ್ರಿಯತೆ, ಅಬ್ಬರ, ಅಟ್ಟಹಾಸ—ಎಲ್ಲವೂ ಎಲ್ಲಿಯೋ ಮಾಯವಾಗಿದ್ದುವು! ಪಳಗಿಸಿದ ಸಲಗನಂತಿತ್ತು ಅವನ ವರ್ತನೆ. ಅವನು ಎದ್ದುನಿಂತು ಶ್ರೀರಾಮಕೃಷ್ಣರನ್ನು ತೋರಿಸಿ ನುಡಿದ: "ಇವರು ಇಂದು ವೈಷ್ಣವಚರಣರ ಮೇಲೆ ವಿಶೇಷ ಕೃಪೆ ತೋರಿದ್ದನ್ನು ನಾವೆಲ್ಲ ನೋಡಿದ್ದೇವೆ. ಆದ್ದರಿಂದ, ನಾನಿನ್ನು ವಾದ ಮಾಡಲು ಬಯಸುವುದಿಲ್ಲ. ವೈಷ್ಣವ ಚರಣರಿಂದು ದೈವಬಲದಿಂದ ಕೂಡಿದ್ದಾರೆ. ನಾನು ವಾದ ಮಾಡಿದರೂ ಸೋತು ಹೋಗುವುದು ಖಂಡಿತ. ಆದ್ದರಿಂದ ತರ್ಕ ಮಾಡುವುದು ನಿರರ್ಥಕ. ಅಲ್ಲದೆ, ಶ್ರೀರಾಮಕೃಷ್ಣರ ಬಗ್ಗೆ ಅವರ ಅಭಿಪ್ರಾಯವೇ ನನ್ನ ಅಭಿಪ್ರಾಯವೂ ಸಹ! ಅವರು ಹೇಳುವುದನ್ನು ನಾನು ಸಂಪೂರ್ಣವಾಗಿ ಅನುಮೋದಿಸುತ್ತೇನೆ. ಈ ದೃಷ್ಟಿಯಿಂದಲೂ ಈಗ ನಾನು ತರ್ಕ ನಡೆಸುವುದು ವ್ಯರ್ಥ."

ಮತ್ತಿನ್ನೇನಿದೆ? ವಾದಿ-ಪ್ರತಿವಾದಿಗಳಿರ್ವರೂ ಒಂದೇ ಕಡೆಯಾಗಿಬಿಟ್ಟರೆ ಅಲ್ಲಿನ್ನು ತರ್ಕವೆಲ್ಲಿ? ಸರಿ, ಇತರ ಶಾಸ್ತ್ರವಿಚಾರಗಳ ಕಡೆಗೆ ಮಾತು ತಿರುಗಿತು. ಸ್ವಲ್ಪ ಹೊತ್ತಿನಲ್ಲೇ ಸಭೆ ಮುಕ್ತಾಯಗೊಂಡಿತು.

ಗೌರೀ ಪಂಡಿತ ಹೀಗೆ ವಾದ ಮಾಡದೆ ಸುಮ್ಮನಾದುದನ್ನು ಕಂಡು ಪ್ರತಿಯೊಬ್ಬ ನಿಗೂ ಆಶ್ಚರ್ಯ. ಅವನಂತಹ ಅಬ್ಬರದ ವ್ಯಕ್ತಿ ಸೋಲೊಪ್ಪಿಕೊಳ್ಳುವುದೆಂದರೆ? ಆದರೆ, ಅವನು ಸೋತನೆಂದೂ ಹೇಳಲಾಗುವುದಿಲ್ಲ. ಏಕೆಂದರೆ, ವಾದಕ್ಕೆ ಮೊದಲೇ ಅವನು, ಪ್ರತಿವಾದಿಯ ಅಭಿಪ್ರಾಯವೇ ತನ್ನದೂ ಸಹ ಎಂದು ಸಾರಿದ್ದಾನೆ. ಹಾಗಾದರೆ ಅವನು ವೈಷ್ಣವಚರಣನ ಪಾಂಡಿತ್ಯಕ್ಕೆ ಅಂಜಿ, ವಾದ ಮಾಡದೆಯಿದ್ದಿರಬಹುದೆ? ಖಂಡಿತ ಅಲ್ಲ! ದಕ್ಷಿಣೇಶ್ವರಕ್ಕೆ ಬಂದ ಮೊದಲ ದಿನವೇ ಅವನಿಗೆ ಅರ್ಥವಾಗಿತ್ತು, ಶ್ರೀರಾಮಕೃಷ್ಣರೊಬ್ಬ ಸಾಮಾನ್ಯ ವ್ಯಕ್ತಿಯಲ್ಲ ಎಂದು. ನಂತರದ ದಿನಗಳಲ್ಲಿ ಅವರನ್ನು ಸನಿಹದಿಂದ ಕಂಡು ಅವರ ಮಹಿಮೆಯನ್ನರಿತಂತೆ ಅವನ ಈ ನಂಬಿಕೆ ಮತ್ತಷ್ಟು ದೃಢವಾಯಿತು. ಬರಬರುತ್ತ ಆತನ ಮನಸ್ಸು ತಿಳಿಯಾಯಿತು. ಬಳಿಕ ಕೆಲವೇ ದಿನ ಗಳಲ್ಲಿ ತಪೋಜನ್ಯವಾದ ಆತನ ತೀಕ್ಷ್ಣ ಅಂತರ್ದೃಷ್ಟಿಗೆ ಶ್ರೀರಾಮಕೃಷ್ಣರೊಬ್ಬ ಮಹಾತ್ಮರೇ ನಿಜ ಎಂಬುದು ಗೋಚರವಾಯಿತು.

ಅವನನ್ನು ಪರೀಕ್ಷಿಸುವ ಉದ್ದೇಶದಿಂದ ಶ್ರೀರಾಮಕೃಷ್ಣರು ಒಮ್ಮೆ ಅವನನ್ನು ಕೇಳಿದರು: "ನೋಡಿಲ್ಲಿ, ವೈಷ್ಣವಚರಣ ಇದನ್ನು (ತಮ್ಮನ್ನು) ಭಗವಂತನ ಅವತಾರ ಎಂದು ಹೇಳುತ್ತಾನೆ. ಅದೆಲ್ಲಾದರೂ ಸಾಧ್ಯವೆ? ಈ ಬಗ್ಗೆ ನಿನಗೇನೆನಿಸುತ್ತದೆ ಎಂದು ದಯಮಾಡಿ ಹೇಳುವೆಯಾ?"

ಗೌರೀ ಪಂಡಿತ (ಗಂಭೀರವಾಗಿ): "ವೈಷ್ಣವಚರಣ ನಿಮ್ಮನ್ನು ಅವತಾರ ಎಂದಷ್ಟೇ ಕರೆದನೆ? ಹಾಗಾದರೆ ಅವನು ಹೇಳಿದುದು ಬಹಳ ಕಡಿಮೆಯೆಂದೇ ಅನ್ನಬೇಕಾಗು ತ್ತದೆ. ನನ್ನ ದೃಢನಂಬಿಕೆಯೇನೆಂದರೆ, ಯಾರ ಅಂಶಮಾತ್ರದಿಂದ ಯುಗಯುಗಗಳಲ್ಲಿ ಮನುಕುಲದ ಒಳಿತಿಗಾಗಿ ಅವತಾರಪುರುಷರು ಉದ್ಭವಿಸುತ್ತಾರೋ ಮತ್ತು ಯಾರ

ಶಕ್ತಿಯಿಂದ ತಮ್ಮ ಕಾರ್ಯವನ್ನು ಸಾಧಿಸುತ್ತಾರೋ ಅವರೇ ನೀವು."

ಶ್ರೀರಾಮಕೃಷ್ಣರು (ಮುಗುಳ್ನಕ್ಕು): "ಆಹ್, ನೀನು ಅವನಿಗಿಂತಲೂ ಮುಂದೆ ಹೋಗಿಬಿಟ್ಟೆಯಲ್ಲ! ಆದರೆ ಏನಗೆ ಹಾಗೆನ್ನಿಸಿದ್ದೇಕೆ ಎಂದು ಹೇಳಬಲ್ಲೆಯಾ?"

ಗೌರೀ ಪಂಡಿತ: "ಶಾಸ್ತ್ರವಾಕ್ಯಗಳು ಮತ್ತು ನನ್ನ ಸ್ವಂತ ಅನುಭವ—ಇವೆರಡನ್ನೂ ಆಧರಿಸಿ ನಾನೀ ಮಾತನ್ನು ಹೇಳುತ್ತಿದ್ದೇನೆ. ಯಾರಾದರೂ ಅದು ತಪ್ಪೆಂದು ಹೇಳಿ ಅದರ ವಿರುದ್ಧವಾಗಿ ವಾದಿಸುವುದಾದರೆ ನಾನು ನನ್ನ ಅಭಿಪ್ರಾಯವನ್ನು ರುಜುವಾತು ಪಡಿಸಲು ಸಿದ್ಧ."

ಶ್ರೀರಾಮಕೃಷ್ಣರು ಮುಗ್ಧ ಬಾಲಕನಂತೆ ನುಡಿದರು: "ಏನೋಪ್ಪ, ನೀನು ಏನೇನೋ ಹೇಳುತ್ತಿ. ಯಾರಿಗೆ ಅರ್ಥವಾಗುತ್ತದೆ ಅವೆಲ್ಲ? ನನಗಂತೂ ಅದೊಂದೂ ತಿಳಿಯದು."

ಗೌರೀ ಪಂಡಿತ: "ಹೌದು ಹೌದು; ಅದು ಸರಿಯೆ! 'ಯಸ್ಯಾಮತಂ ತಸ್ಯ ಮತಂ, ಮತಂ ಯಸ್ಯ ನ ವೇದ ಸಃ'—'ಯಾರು ತಾನು ಅರಿತಿಲ್ಲ ಎನ್ನುವನೋ ಅವನು ಅರಿತಿದ್ದಾನೆ, ಯಾರು ತಾನು ಅರಿತಿದ್ದೇನೆ ಎನ್ನುವನೋ ಅವನು ಅರಿತಿಲ್ಲ' ಎನ್ನುತ್ತದೆ ಉಪನಿಷತ್ತು. ನೀವೂ ಹೇಳುತ್ತಿದ್ದೀರಿ, 'ನನಗೊಂದೂ ತಿಳಿಯದು' ಎಂದು! ಇತರರು ನಿಮ್ಮನ್ನು ಹೇಗೆ ಅರಿಯಬಹುದೆಂಬುದನ್ನು ನೀವೇ ಕೃಪೆಮಾಡಿ ತಿಳಿಸಿಕೊಡಬೇಕು. ನೀವು ಯಾರ ಮೇಲಾದರೂ ಕರುಣೆ ತೋರಿ ನಿಜವನ್ನು ಅರಿಯಲು ಅವಕಾಶ ಮಾಡಿಕೊಟ್ಟರೆ, ಅಂಥವರು ಮಾತ್ರ ಅದನ್ನು ಅರಿಯಬಲ್ಲರು."

ಪಂಡಿತನ ದೃಢವಿಶ್ವಾಸದ ಮಾತುಗಳನ್ನು ಕೇಳಿ ಶ್ರೀರಾಮಕೃಷ್ಣರು ಸುಮ್ಮನೆ ಮುಗುಳ್ನಕ್ಕರು.

ದಿನ ಕಳೆದಂತೆ, ಗೌರೀ ಪಂಡಿತನಿಗೆ ಶ್ರೀರಾಮಕೃಷ್ಣರ ಮೇಲಿನ ಆಕರ್ಷಣೆ ಹೆಚ್ಚುತ್ತ ಬಂದಿತು. ಅವರ ದಿವ್ಯ ಸತ್ಸಂಗದಲ್ಲಿ ಆತನ ಶಾಸ್ತ್ರಜ್ಞಾನ ಮತ್ತು ಸಾಧನೆಗಳ ಫಲವು ಗಳಿತವಾಗಿ ತೀವ್ರ ವೈರಾಗ್ಯದ ರೂಪದಲ್ಲಿ ವ್ಯಕ್ತವಾಯಿತು. ಪಾಂಡಿತ್ಯ, ಲೋಕಮಾನ್ಯತೆ, ಮಂತ್ರಶಕ್ತಿಗಳ ಮೇಲಿನ ಮೋಹ ಇದ್ದಕ್ಕಿದ್ದಂತೆ ಇಳಿದುಹೋಯಿತು. ಹಿಂದಿನ ಆ ಪಾಂಡಿತ್ಯದ ಅಹಂಕಾರ, ದರ್ಪಗಳೆಲ್ಲ ಮಾಯವಾದುವು. ಅವನು ಹೆಚ್ಚೆಚ್ಚು ಅಂತರ್ಮುಖಿಯಾಗುತ್ತ, ವಿನೀತನಾಗುತ್ತ ಬಂದ.

ಅವನ ಮನಸ್ಸು ಭಗವಂತನ ಪಾದಪದ್ಮಗಳೆಡೆಗೆ ಧಾವಿಸತೊಡಗಿತು. ಇಷ್ಟು ಕಾಲವೂ ತಾನು ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಯತ್ನವನ್ನೇ ಮಾಡದೆ ಕೇವಲ ಒಣ ಪಾಂಡಿತ್ಯದಲ್ಲಿ, ನಿರರ್ಥಕ ವಾದವಿವಾದಗಳಲ್ಲಿ ತೊಡಗಿ ತನ್ನ ಜೀವನದ ಅನರ್ಘ್ಯ ವೇಳೆಯನ್ನು ನಷ್ಟ ಪಡಿಸಿಕೊಂಡೆನೆಂದು ಮನಗಂಡ ಗೌರೀ ಪಂಡಿತ ಪರಿತಪಿಸಿದ. ಇನ್ನಾದರೂ ಆ ತಪ್ಪನ್ನು ತಿದ್ದಿಕೊಳ್ಳಬೇಕು; ನಿಸ್ಸಾರವಾದ ಸಂಸಾರವನ್ನು ತ್ಯಜಿಸಿ, ಭಗವಂತನನ್ನೇ ಸಂಪೂರ್ಣವಾಗಿ ಆಧರಿಸಿ, ಆತನನ್ನೇ ವ್ಯಾಕುಲತೆಯಿಂದ ಕರೆಯುತ್ತ ತನ್ನ ಉಳಿದ ಜೀವನವನ್ನೆಲ್ಲ ಕಳೆಯಬೇಕು; ಮತ್ತು ಆತನ ದರ್ಶನಭಾಗ್ಯವನ್ನು ಹೊಂದಲೇಬೇಕು ಎಂಬ ತೀವ್ರ ಹಂಬಲ ಅವನೆದೆಯಲ್ಲಿ ಉದಿಸಿತು.

ಹೀಗೆ ಆತ ಸಂಸಾರದಿಂದ ವಿಮುಖನಾಗಿ ದಕ್ಷಿಣೇಶ್ವರದಲ್ಲೇ ನೆಲೆನಿಂತುಬಿಟ್ಟ. ಶ್ರೀರಾಮಕೃಷ್ಣರ ದಿವ್ಯಸಂಗದಲ್ಲಿ ಧ್ಯಾನ ಜಪ ತಪಗಳಲ್ಲಿ ದಿನಗಳು ಕಳೆದುವು. ಸಮಯದ ಪರಿವೆಯೇ ಇಲ್ಲದೆ ಪಂಡಿತ ಆನಂದದಿಂದಿದ್ದುಬಿಟ್ಟ. ಆದರೆ ಬಂಧನಗಳು

ಅಷ್ಟು ಸುಲಭವಾಗಿ ಕಳಚಿಕೊಳ್ಳಲುಂಟೆ ? ಅವನು ಎಷ್ಟು ದಿನಗಳಾದರೂ ಮನೆಗೆ ಹಿಂದಿರುಗದಿದ್ದುದರಿಂದ ಅವನ ಕುಟುಂಬದವರು ಪತ್ರಗಳನ್ನು ಬರೆದರು. ಅದಕ್ಕೂ ಅವನು ಓಗೊಡಲಿಲ್ಲ. ಅವನ ಹೆಂಡತಿ ಮಗ ಬಳಗದವರಿಗೆಲ್ಲ ಆತಂಕ ಶುರು ವಾಯಿತು. ಅವನು ದಕ್ಷಿಣೇಶ್ವರದಲ್ಲಿ ಯಾರೋ ಒಬ್ಬ ಸಾಧುವಿನ ಸಹವಾಸಕ್ಕೆ ಬಿದ್ದಿದ್ದಾನೆ; ಪರಿಣಾಮವಾಗಿ ಅವನಿಗೂ ವಿರಕ್ತಿಯುಂಟಾಗುವಂತಿದೆ ಎಂಬ ಸುದ್ದಿ ಅದಾಗಲೆ ಅವರ ಕಿವಿಗೆ ಬಿದ್ದಿತ್ತು. ಆದ್ದರಿಂದ ಅವರು, ಕೂಡಲೇ ಹೊರಟುಬರುವಂತೆ ಒತ್ತಾಯಿಸಿ ಅವನಿಗೆ ಮತ್ತೆ ಪತ್ರ ಬರೆದರು. ಇನ್ನು ತಾನು ಇಲ್ಲಿಯೇ ಇದ್ದರೆ ಮನೆ ಯವರು ಬಂದು ಬಲವಂತದಿಂದ ತನ್ನನ್ನು ಮತ್ತೆ ಸಂಸಾರಕ್ಕೆ ಎಳೆದುಕೊಳ್ಳುತ್ತಾ ರೆಂಬುದು ಪಂಡಿತನಿಗೆ ಖಚಿತವಾಯಿತು. ಆದರೆ ಈಗೇನು ಮಾಡುವುದೋ ಅವನಿಗೆ ತಿಳಿಯಲಿಲ್ಲ. ಅತ್ಯಂತ ಆನಂದಕರವೂ ಪಾವನಕರವೂ ಆದ ಶ್ರೀರಾಮಕೃಷ್ಣರ ಸಾನ್ನಿಧ್ಯ ವನ್ನು ಬಿಟ್ಟು ಬೇರೆಲ್ಲಿಗೆ ಹೋಗುವುದು ? ಬಹಳವಾಗಿ ಚಿಂತಿಸಿ ಕೊನೆಗೆ ಅವನೊಂದು ತೀರ್ಮಾನಕ್ಕೆ ಬಂದ. ತನ್ನ ಜೀವನದ ಪ್ರಶಸ್ತವಾದ ಘಳಿಗೆ ಸನ್ನಿಹಿತವಾಗಿದೆಯೆಂದು ತೋರಿತು. ಸೀದಾ ಶ್ರೀರಾಮಕೃಷ್ಣರ ಬಳಿಗೆ ಬಂದ; ಸಾಷ್ಟಾಂಗ ಪ್ರಣಾಮ ಮಾಡಿ ಎದ್ದುನಿಂತು ಹೇಳಿದ:

"ಹೋಗಿಬರುತ್ತೇನೆ. ಅನುಮತಿಯಾಗಬೇಕು."

ಅಷ್ಟರಲ್ಲೇ ಪಂಡಿತನ ಕಣ್ಣುಗಳು ಹನಿಗೂಡಿದ್ದುವು, ಕಂಠ ಬಿಗಿದುಬಂದಿತ್ತು. ಶ್ರೀರಾಮಕೃಷ್ಣರು ಅಚ್ಚರಿಯಿಂದ ನೋಡಿದರು.

"ಏಕೆ ಗೌರಿ ? ಇದ್ದಕ್ಕಿದ್ದಂತೆ ಹೊರಟುಬಿಟ್ಟೆಯಲ್ಲ ! ಎಲ್ಲಿಗೆ ಹೊರಟೆ ?"

ಪಂಡಿತ ಕೈಜೋಡಿಸಿ ನುಡಿದ: "ದಯವಿಟ್ಟು ತಾವು ನನ್ನ ಹೃದಯದ ಹಂಬಲ ಈಡೇರುವಂತೆ ಹರಸಿ ! ನಾನು ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಹೊರಟಿದ್ದೇನೆ. ಆ ಗುರಿ ಮುಟ್ಟುವವರೆಗೂ ನಾನು ಹಿಂದಿರುಗುವುದಿಲ್ಲ."

ಹೀಗೆಂದ ಗೌರೀ ಪಂಡಿತ ಅಲ್ಲಿಂದ ಹೊರಟುಬಿಟ್ಟ. ಅವನು ಜನರ ಕಣ್ಣಿಗೆ ಬಿದ್ದದ್ದು ಅದೇ ಕಡೆಯ ಸಲ. ಅನಂತರ ಯಾರೆಷ್ಟು ಹುಡುಕಿದರೂ ಅವನ ಸುಳಿವೇ ಸಿಕ್ಕಲಿಲ್ಲ.

## ‘ಸಿದ್ಧಿ ವಿನಾಶಕ’ ೩

ಶ್ರೀರಾಮಕೃಷ್ಣರು ವಿವಿಧ ಆಧ್ಯಾತ್ಮಿಕಭಾವಗಳನ್ನು ಸಾಕ್ಷಾತ್ಕರಿಸಿಕೊಳ್ಳುತ್ತ ತಮ್ಮ ಸಾಧನಾಪಥದಲ್ಲಿ ಮುಂಬರಿಯುತ್ತಿದ್ದಂತೆ ಅವರಿಗೆ ಅನೇಕ ಬಗೆಯ ಭಕ್ತರ, ಸಾಧಕರ, ಪಂಡಿತರ ಸಂಪರ್ಕ ಉಂಟಾಯಿತು. ಈ ಎಲ್ಲ ವ್ಯಕ್ತಿಗಳ ಪರಿಚಯ ಅವರ ಮೇಲೆ ವಿವಿಧ ಪ್ರಭಾವಗಳನ್ನುಂಟುಮಾಡಿತು. ಮತ್ತು ಆ ವಿವಿಧ ವ್ಯಕ್ತಿಗಳ ಮೇಲೆ ಶ್ರೀರಾಮ ಕೃಷ್ಣರ ಪ್ರಭಾವವಂತೂ ತುಂಬ ಗಾಢವಾದುದು. ಇನ್ನೂ ಸಾಧಕರಾಗಿದ್ದ ಹಾಗೂ ಲೋಕಗುರುವೆಂದು ಕರೆಸಿಕೊಳ್ಳದಿದ್ದ ಆ ಕಾಲದಲ್ಲೇ ಶ್ರೀರಾಮಕೃಷ್ಣರು ಆ ಪಂಡಿತ-ಭಕ್ತರೊಂದಿಗೆ ಹೇಗೆ ಒಡನಾಡಿದರು, ಅವರ ಮೇಲೆ ಎಂತಹ ಪ್ರಭಾವವನ್ನು ಬೀರಿದರು ಎಂಬುದು ಅತ್ಯಂತ ಸ್ವಾರಸ್ಯಕರವಾದ ಕಥೆ.

ಭೈರವಿ ಬ್ರಾಹ್ಮಣಿ ಶ್ರೀರಾಮಕೃಷ್ಣರನ್ನು ಕಂಡ ಮೊದಲ ದಿನವೇ, ‘ನಾನು ಮೂವ ರನ್ನು ಸಂಧಿಸಿ ಅವರಿಗೆ ಸಂದೇಶ ನೀಡಬೇಕೆಂದು ದೈವಪ್ರೇರಣೆಯಾಗಿದೆ. ಅವರಲ್ಲಿ ಇಬ್ಬರನ್ನು ಅದಾಗಲೇ ಸಂಧಿಸಿಯಾಗಿದೆ; ಮೂರನೆಯವನೇ ನೀನು’ ಎಂದು ಹೇಳಿದ್ದ ಳಲ್ಲವೆ ? ಆ ಮೊದಲ ಇಬ್ಬರೂ ಪೂರ್ವ ಬಂಗಾಳದವರು; ಚಂದ್ರ ಹಾಗೂ ಗಿರಿಜ ಎಂಬ ಹೆಸರುಗಳಿಂದ ಹೆಚ್ಚು ಪರಿಚಿತರಾದವರು. ಅವರ ಪೂರ್ತಿ ಹೆಸರು ಚಂದ್ರನಾಥ, ಗಿರಿಜಾಪತಿ ಎಂದೇನೋ ಇದ್ದಿರಬಹುದು. ಇಬ್ಬರೂ ನುರಿತ ಸಾಧಕರೇ. ಅವರಿಬ್ಬ ರನ್ನೂ ಶ್ರೀರಾಮಕೃಷ್ಣರಿಗೆ ಪರಿಚಯಿಸಬೇಕೆಂದು ಬ್ರಾಹ್ಮಣಿ ಉದ್ದೇಶಿಸಿದ್ದಳು. “ನೀನು ಒಪ್ಪುವುದಾದರೆ ನಾನವರಿಗೆ ಇಲ್ಲಿಗೆ ಬರುವಂತೆ ಪತ್ರ ಬರೆಯುತ್ತೇನೆ” ಎಂದು ಆಕೆ ಹೇಳಿದಾಗ, ಶ್ರೀರಾಮಕೃಷ್ಣರು ಸಮ್ಮತಿಸಿದರು. ಅದಾದ ಕೆಲದಿನಗಳಲ್ಲೇ ಚಂದ್ರ ದಕ್ಷಿಣೇಶ್ವರಕ್ಕೆ ಬಂದ.

ಅಂದು ಬ್ರಾಹ್ಮಣಿ ಶ್ರೀರಾಮಕೃಷ್ಣರನ್ನು ತನ್ನ ಕುಟೀರಕ್ಕೆ ಆಹ್ವಾನಿಸಿದ್ದಳು. ಆದರೆ ಚಂದ್ರ ಬಂದಿರುವ ವಿಷಯವನ್ನು ಅವರಿಗೆ ತಿಳಿಸಿರಲಿಲ್ಲ. ಹೃದಯನನ್ನು ಜೊತೆ ಮಾಡಿಕೊಂಡು ಶ್ರೀರಾಮಕೃಷ್ಣರು ಅಲ್ಲಿಗೆ ಹೋದರು. ಚಂದ್ರನೊಂದಿಗೆ ಮಾತ ನಾಡುತ್ತ ಕುಳಿತಿದ್ದ ಬ್ರಾಹ್ಮಣಿ ಮೇಲೆದ್ದು ಅವರನ್ನು ಸ್ವಾಗತಿಸಿದಳು. ಆಗ ಶ್ರೀರಾಮ ಕೃಷ್ಣರು ಅದೇಕೋ ಇದ್ದಕ್ಕಿದ್ದಂತೆ ಭಾವಸ್ಥರಾಗಿ, ಬಳಿಕ “ಆಹ್ ! ಚಂದ್ರ ಬಂದಿದ್ದಾನೆ ! ಇವನು ಚಂದ್ರನಲ್ಲವೆ ?” ಎಂದು ಉದ್ಗರಿಸಿದರು. ತಕ್ಷಣ ಚಂದ್ರ ಮುಂದೆ ಬಂದು ಅವರ ಕೈಗಳನ್ನು ಹಿಡಿದುಕೊಂಡು, ಮೂರ್ನಾಲ್ಕು ಬಾರಿ ಗಟ್ಟಿಯಾಗಿ ಅವರ ಹೆಸರು ಹಿಡಿದು ಕರೆದ. ಕೂಡಲೇ ಅವರು ಬಾಹ್ಯಪ್ರಜ್ಞೆಗೆ ಮರಳಿದರು. ಶ್ರೀರಾಮಕೃಷ್ಣರು ಚಂದ್ರನನ್ನು ಗುರುತು ಹಿಡಿದದ್ದೊಂದು ಅಚ್ಚರಿಯಾದರೆ, ಅವರು ಅಷ್ಟು ಬೇಗನೆ ಸಮಾಧಿಯಿಂದ ಇಳಿದುದು ಇನ್ನೊಂದು ಅಚ್ಚರಿ. ಚಂದ್ರ ಕೇಳಿದ:

“ನಿಮಗೆ ನನ್ನ ಪರಿಚಯವಿರುವಂತೆ ತೋರುತ್ತದೆ ! ಆದರೂ ನೀವೇಕೆ ಇಷ್ಟು ದಿನ ನನ್ನನ್ನು ಮರೆತಿದ್ದಿರಿ ?”

ಶ್ರೀರಾಮಕೃಷ್ಣರು: “ಅದು ಭಗವದಿಚ್ಛೆ.”

ಈಗ ಅವರು ಚಂದ್ರನೊಂದಿಗೆ ಸ್ವಲ್ಪ ಹೊತ್ತು ಮಾತನಾಡುತ್ತ ಕುಳಿತರು.

ಅವನೊಬ್ಬ ದೊಡ್ಡ ಭಕ್ತ. ಅವನೊಡನೆ ಮಾತನಾಡುತ್ತಿದ್ದಂತೆ ಶ್ರೀರಾಮಕೃಷ್ಣರಿಗೆ ಅವನ ಮೇಲೆ ವಾತ್ಸಲ್ಯವುಂಟಾಯಿತು. ಆಮೇಲೆ ಅವರು ಅವನ ಕುರಿತಾಗಿ ಹೃದಯನಿಗೆ ಹೇಳುತ್ತಾರೆ:

"ಅವನಲ್ಲಿ ವಿಷ್ಣುವಿನ ಒಂದು ವಿಶೇಷ ಶಕ್ತಿ ಆವಿರ್ಭಾವವಾಗಿದೆ. ಆದ್ದರಿಂದಲೇ ಅವನು ನನ್ನನ್ನು ಸಮಾಧಿಯಿಂದ ಅಷ್ಟು ಬೇಗ ಕೆಳಗಿಳಿಸಲು ಸಮರ್ಥನಾದುದು."

ಆದರೆ ಹೃದಯನಿಗೇಕೋ ಚಂದ್ರನ ಬಗ್ಗೆ ಅಂತಹ ಒಳ್ಳೆಯ ಅಭಿಪ್ರಾಯ ಉಂಟಾಗಿರಲಿಲ್ಲ. ಆದ್ದರಿಂದ ಅವನೆಂದ:

"ನನಗಂತೂ ಅವನನ್ನು ನೋಡಿದರೆ ಹಾಗೆನ್ನಿಸುತ್ತಿಲ್ಲ."

ಆಗ ಶ್ರೀರಾಮಕೃಷ್ಣರು, "ನಿನಗದೆಲ್ಲ ಗೊತ್ತಾಗುವುದಿಲ್ಲ, ಸುಮ್ಮನಿರು" ಎನ್ನ ಬೇಕಾಯಿತು. ಆದರೆ ಮತ್ತೊಂದು ದಿನ ಚಂದ್ರ ತಮ್ಮನ್ನು ನೋಡಲು ಬಂದಾಗ ಅವರು ಹೃದಯನಿಗೆ ಮೆಲ್ಲಗೆ ಹೇಳಿದರು:

"ಸುಮ್ಮನೆ ಒಂದು ಕಾವಿಬಟ್ಟೆಯನ್ನು ಅವನ ಮೇಲೆ ಹಾಕಿಬಿಡು. ಆಮೇಲೇನಾ ಗುವುದೋ ನೋಡು."

ಹೃದಯ ಹಾಗೆಯೇ ಮಾಡಿದ. ತಕ್ಷಣ ಚಂದ್ರನಲ್ಲಿ ಯಾವುದೋ ವಿಚಿತ್ರ ಭಾವ ಉಕ್ಕಿಬಂದು ಉದ್ವಿಗ್ನನಾದ. ಶ್ರೀರಾಮಕೃಷ್ಣರು ಮುಗುಳ್ನಗುತ್ತ ಈ ಮಾರ್ಪಾಡನ್ನು ಹೃದಯನಿಗೆ ತೋರಿಸಿದರು.

ಚಂದ್ರನು ಬಂದ ಕೆಲದಿನಗಳಲ್ಲಿಯೇ ಗಿರಿಜನೂ ದಕ್ಷಿಣೇಶ್ವರಕ್ಕೆ ಬಂದ. ಇವ ರಿಬ್ಬರೂ ಆಧ್ಯಾತ್ಮಿಕ ಸಾಧನೆಯಲ್ಲಿ ಸಾಕಷ್ಟು ಮುಂದುವರಿದವರೇ. ಆದರೆ ಮಾರ್ಗ ಮಧ್ಯದಲ್ಲಿ ಕೆಲವು ಮಂತ್ರಶಕ್ತಿಗಳನ್ನು ಸಿದ್ಧಿಸಿಕೊಂಡು ಅದರಿಂದಾಗಿ ದಾರಿತಪ್ಪಿದ್ದರು. ಶ್ರೀರಾಮಕೃಷ್ಣರನ್ನು ಭೇಟಿ ಮಾಡುವ ವೇಳೆಗಾಗಲೇ ಇಬ್ಬರೂ ತಮ್ಮ ಆಧ್ಯಾತ್ಮಿಕ ಆದರ್ಶಗಳಿಂದ ವಿಮುಖರಾಗಿದ್ದರು.

ಚಂದ್ರ ಸ್ವಭಾವತಃ ಧ್ಯಾನಶೀಲ ಹಾಗೂ ಭಗವತ್ಪ್ರೇಮಿ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಆದರೆ ಅವನು 'ಗುಟಿಕಾ ಸಿದ್ಧಿ' ಎಂಬ ಅಲೌಕಿಕ ಶಕ್ತಿಯನ್ನು ಗಳಿಸಿ ಕೊಳ್ಳಲು ಸಮರ್ಥನಾಗಿದ್ದ. ಗುಟಿಕೆ ಎಂದರೆ ಒಂದು ಪುಟ್ಟ ಉಂಡೆ, ಗುಳಿಗೆ. ಇದನ್ನು ಧರಿಸಿದರೆ ಅವನು ಸಾಧಾರಣ ಜನರ ದೃಷ್ಟಿಯಿಂದ ಮಾಯವಾಗುತ್ತಿದ್ದ. ಈ ಸ್ಥಿತಿಯಲ್ಲಿ, ಎಚ್ಚರದಿಂದ ರಕ್ಷಿಸಲ್ಪಟ್ಟ ದುರ್ಗಮಸ್ಥಳಗಳಿಗೂ ನಿರಾಯಾಸವಾಗಿ ಹೋಗಿ ಬರಬಲ್ಲ ಶಕ್ತಿಯನ್ನು ಅವನು ಗಳಿಸಿಕೊಂಡಿದ್ದ.

ಸಾಕ್ಷಾತ್ಕಾರವಾಗುವ ಮೊದಲು ಮನುಷ್ಯ ಇಂತಹ ಶಕ್ತಿಗಳ ಕಡೆಗೆ ಗಮನ ಕೊಟ್ಟರೆ ಅವನ ಅಧಃಪತನ ಖಂಡಿತ. ಚಂದ್ರನ ವಿಷಯದಲ್ಲಿಯೂ ಹಾಗೆಯೇ ಆಯಿತು. ಆ ಅದ್ಭುತ ಶಕ್ತಿ ದೊರೆತೊಡನೆಯೇ ಅವನಲ್ಲಿ ಅಹಂಕಾರ ಉದಿಸಿತು. ತನಗೆ ಯಾರೂ ಎದುರಿಲ್ಲವೆಂದು ಬೀಗಿದ. ಜೊತೆಗೇ ಕಾಮಕಾಂಚನಾಸಕ್ತಿಯೂ ಬೆಳೆ ಯಿತು. ತನ್ನ ಸಿದ್ಧಿಯನ್ನು ಸ್ವೇಚ್ಛೆಯಿಂದ ಬಳಸಲಾರಂಭಿಸಿದ. ಒಬ್ಬ ಶ್ರೀಮಂತನ ಮಗಳಲ್ಲಿ ಅವನಿಗೆ ಅನುರಕ್ತಿ ಬೆಳೆಯಿತು. ತನ್ನ 'ಗುಟಿಕಾ ಸಿದ್ಧಿ'ಯ ಪ್ರಭಾವದಿಂದ ಯಾರಿಗೂ ತಿಳಿಯದಂತೆ ಆತನ ಮನೆಗೆ ಹೋಗಿಬರತೊಡಗಿದ. ಆದರೆ ಆ ಶಕ್ತಿಯನ್ನು ಹೀಗೆ ಉಪಯೋಗಿಸಿಕೊಳ್ಳತೊಡಗಿದಾಗ ಅದು ನಶಿಸಿಹೋಯಿತು. ಆಗ ಅವನು ನಾನಾ ಬಗೆಯ ಅಪಮಾನಕ್ಕೀಡಾಗಬೇಕಾಯಿತು.

ಚಂದ್ರನಂತೆ ಗಿರಿಜನೂ ಸಾಧನೆ ಮಾಡಿ ಅನೇಕ ಮಂತ್ರಶಕ್ತಿಗಳನ್ನು ಗಳಿಸಿದ್ದ. ಶ್ರೀರಾಮಕೃಷ್ಣರು ಅವುಗಳನ್ನು ಕಣ್ಣಾರೆ ಕಂಡಿದ್ದರು. ಕೆಲವೊಮ್ಮೆ ಅವರು ಆ ಕುರಿತಾಗಿ ತಮ್ಮ ಶಿಷ್ಯರ ಮುಂದೆ ಹೇಳುವುದಿತ್ತು.

ಗಿರಿಜ ತನ್ನ ಮಂತ್ರಶಕ್ತಿಗಳನ್ನು ಬಳಸಿಕೊಳ್ಳುತ್ತ ಆಧ್ಯಾತ್ಮಿಕ ಆದರ್ಶದಿಂದ ವಿಮುಖನಾಗಿದ್ದನಾದರೂ, ಅವನಲ್ಲಿ ಹಿಂದಿನ ದೈವಭಕ್ತಿ, ಸಾತ್ತ್ವಿಕತೆ ಇನ್ನೂ ಸ್ವಲ್ಪ ಉಳಿದುಕೊಂಡಿತ್ತು. ಆದ್ದರಿಂದ ಸಹಜವಾಗಿಯೇ ಅವನ-ಶ್ರೀರಾಮಕೃಷ್ಣರ ನಡುವೆ ಪರಸ್ಪರ ಆಕರ್ಷಣೆ, ಬಾಂಧವ್ಯಗಳು ಉಂಟಾಗಿದ್ದುವು.

ಒಂದು ದಿನ ಶ್ರೀರಾಮಕೃಷ್ಣರು ಗಿರಿಜನೊಂದಿಗೆ ಕಾಳೀಮಂದಿರದ ಪಕ್ಕದಲ್ಲೇ ಇದ್ದ ಶಂಭು ಮಲ್ಲಿಕ ಎಂಬಾತನ ತೋಟದಲ್ಲಿ ಅಡ್ಡಾಡುತ್ತಿದ್ದರು. ಶಂಭು ಮಲ್ಲಿಕನೂ ಜೊತೆಯಲ್ಲಿದ್ದ. ಇವನು ಶ್ರೀರಾಮಕೃಷ್ಣರ ಪರಮಭಕ್ತ. ಸಾಕಷ್ಟು ಶ್ರೀಮಂತ ಕೂಡ. ಶ್ರೀರಾಮಕೃಷ್ಣರಿಗಾಗಿ ಸಣ್ಣ ಸೇವೆ ಮಾಡಲು ಅವಕಾಶ ಸಿಕ್ಕಿದರೂ ಅದು ತನ್ನ ಭಾಗ್ಯ ವೆಂದು ಭಾವಿಸುತ್ತಿದ್ದ. ಮಥುರಾನಾಥ ತೀರಿಹೋದ ಮೇಲೆ, ಅವರ ಆವಶ್ಯಕತೆಗಳನ್ನು ಪೂರೈಸಿಕೊಡುವವರಲ್ಲಿ ಇವನು ಮೊದಲಿಗನಾದ. ಎಷ್ಟೋ ದಿನ ಅವರು ಇವ ನೊಂದಿಗೆ ತೋಟದಲ್ಲಿ ಅಡ್ಡಾಡುತ್ತ ಭಗವತ್ಸಂಬಂಧವಾದ ಮಾತುಕತೆಯನ್ನಾಡಿ ಹಿಂದಿರುಗುವುದಿತ್ತು. ಹೀಗೆ ಆನಂದದಿಂದ ಸಂಭಾಷಿಸುತ್ತಿದ್ದರೆ ಸಮಯ ಉರುಳಿದ್ದೇ ತಿಳಿಯುತ್ತಿರಲಿಲ್ಲ.

ಆ ದಿನ ಇವರು ಮೂವರೂ ಸೇರಿ ಮಾತನಾಡುವಾಗಲೂ ಹೀಗೆಯೇ ಆಯಿತು. ಸಂಜೆಯಾಯಿತು, ನಸುಗತ್ತಲು ಆವರಿಸಿತು; ಸ್ವಲ್ಪಹೊತ್ತಿನಲ್ಲೇ ಸಂಪೂರ್ಣ ಕತ್ತಲಾಗಿಹೋಯಿತು. ಆಗಲೇ ಅವರಿಗೆ ಸಮಯದ ಪರಿವೆಯುಂಟಾದುದು! ಶಂಭು ಮಲ್ಲಿಕ ತನ್ನ ತೋಟದ ಮನೆಗೆ ತೆರಳಿದ. ಅವನಿಗೆ ವಿದಾಯ ಹೇಳಿ ಗಿರಿಜನೂ ಶ್ರೀರಾಮಕೃಷ್ಣರೂ ಕಾಲುದಾರಿಗೆ ಬಂದು ಕಾಳೀದೇವಾಲಯದತ್ತ ಮೆಲ್ಲನೆ ಹೆಜ್ಜೆ ಹಾಕ ತೊಡಗಿದರು. ಆದರೆ ಅಂದು ಎಲ್ಲೆಲ್ಲೂ ಕಾಳಕತ್ತಲು; ಒಂದು ಮಾರು ದೂರದಲ್ಲಿ ಏನಿದೆಯೆಂಬುದೂ ಕಾಣುತ್ತಿರಲಿಲ್ಲ. ಅಲ್ಲಿಂದ ಹೊರಡುವಾಗಲೇ ಶಂಭುವಿನ ಕೈಯಿಂದ ಒಂದು ಲಾಟೀನನ್ನು ತೆಗೆದುಕೊಳ್ಳಬಹುದಾಗಿತ್ತು. ಆದರೆ ಭಗವದ್ವಿಚಾರ ದಲ್ಲಿ ಮುಳುಗಿದ್ದವರಿಗೆ ಅದು ನೆನಪಿಗೇ ಬರಲಿಲ್ಲ. ಸರಿ, ಈಗೇನು ಮಾಡುವುದು? ಶ್ರೀರಾಮಕೃಷ್ಣರು ಗಿರಿಜನ ಕೈಹಿಡಿದು, ಹೇಗೋ ಮಾಡಿ ಹೆಜ್ಜೆ ಹಾಕತೊಡಗಿದರು. ಆದರೂ ಮುಗ್ಗರಿಸುವುದೇನೂ ತಪ್ಪಲಿಲ್ಲ. ಅವರ ಕಷ್ಟವನ್ನು ಕಂಡ ಗಿರಿಜ ಒಂದು ಉಪಾಯ ಮಾಡಿದ. "ಅಣ್ಣ, ಸ್ವಲ್ಪ ತಾಳು. ನಾನು ನಿನಗೆ ದಾರಿ ತೋರುತ್ತೇನೆ" ಎಂದು ಹೇಳಿ ಹಿಂದಿರುಗಿ ನಿಂತುಕೊಂಡ. ಏನದ್ಭುತ! ಅವನ ಬೆನ್ನಿನಿಂದ ಬೆಳಕಿನ ಪ್ರಖರ ಕಿರಣಗಳು ಹೊಮ್ಮಿದುವು! ಆ ಬೆಳಕಿನ ಹೊನಲು ಬಹು ದೂರದವರೆಗೂ ಹರಿದಿತ್ತು! ಮುಂದೆ ಶ್ರೀರಾಮಕೃಷ್ಣರು ಹೇಳುತ್ತಿದ್ದರು, "ಅಲ್ಲಿಂದ ಕಾಳೀದೇವಾಲ ಯದ ಗೇಟಿನವರೆಗೆ ಇಡೀ ರಸ್ತೆಯೇ ಆ ಜ್ಯೋತಿಯಿಂದ ಬೆಳಗುತ್ತಿತ್ತು. ಅದರಿಂದಾಗಿ ನಾನು, ಯಾವ ತೊಂದರೆಯೂ ಇಲ್ಲದೆ ನಡೆದು ಸುಖವಾಗಿ ದೇಗುಲವನ್ನು ಸೇರಿದೆ" ಎಂದು.

ಹೀಗೆಂದ ಶ್ರೀರಾಮಕೃಷ್ಣರು ಮುಗುಳ್ನಕ್ಕು ಮರುಕ್ಷಣವೇ ಹೇಳುತ್ತಾರೆ, "ಆದರೆ ಅವರಿಬ್ಬರ ಆ ಶಕ್ತಿಗಳು ಬಹು ಕಾಲ ಉಳಿದುಕೊಳ್ಳಲಿಲ್ಲ... ಅವರು ಕೆಲಕಾಲ

ಇದರ [ತಮ್ಮ] ಸಹವಾಸದಲ್ಲಿ ಉಳಿದುಕೊಂಡಾಗ, ಅವೆಲ್ಲ ತಾವಾಗಿಯೇ ಮಾಯವಾದುವು." ಇದನ್ನು ಕೇಳಿದ ಶಿಷ್ಯರಿಗೆ ಮತ್ತೂ ಆಶ್ಚರ್ಯ, ಕುತೂಹಲ. ಅವರ ಸಹವಾಸಮಾತ್ರದಿಂದ ಆ ಶಕ್ತಿಗಳು ಮಾಯವಾಗಲು ಕಾರಣವೇನಿದ್ದಿರಬಹುದು! ಶಿಷ್ಯರು ಇದನ್ನು ತಿಳಿಯಬಯಸಿದಾಗ ಶ್ರೀರಾಮಕೃಷ್ಣರು ಹೇಳುತ್ತಾರೆ, "ಅವರ ಒಳಿತಿಗೋಸ್ಕರವೇ ತಾಯಿ ಅವುಗಳನ್ನು ಇದರೊಳಕ್ಕೆ [ತಮ್ಮ ಶರೀರದೊಳಕ್ಕೆ] ಎಳೆದುಕೊಂಡುಬಿಟ್ಟಳು. ಹಾಗಾದ ಬಳಿಕ ಅವರು ಆ ತುಚ್ಛ ವಿಚಾರಗಳ ಮೋಹವನ್ನು ತ್ಯಜಿಸಿ ಭಗವಂತನೆಡೆಗೆ ಮನಸ್ಸು ಹರಿಯಿಸಿದರು."

ಹೀಗೆ ಶ್ರೀರಾಮಕೃಷ್ಣರ ಪಾವನಕರ ಸಂಗಕ್ಕೆ ಬಂದೊಡನೆ ಚಂದ್ರ-ಗಿರಿಜರಿಬ್ಬರೂ ತಮ್ಮ ಮಂತ್ರಶಕ್ತಿಗಳನ್ನು ಹಾಗೂ ಅವುಗಳೊಂದಿಗೆ ತಮ್ಮ ಅಹಂಕಾರವನ್ನು ಕಳೆದುಕೊಂಡರು. ಅಹಂಕಾರ-ಮಮಕಾರಗಳಿಂದಾಗಿ ಪಥಭ್ರಷ್ಟರಾಗಿದ್ದ ಅವರು ತಮ್ಮ ದೋಷವನ್ನು ಮನಗಂಡು ಪಶ್ಚಾತ್ತಾಪಪಟ್ಟರು. ಭಗವತ್ಸಾಕ್ಷಾತ್ಕಾರದ ಹಂಬಲ ಅವರಲ್ಲಿ ಮತ್ತೊಮ್ಮೆ ಭುಗಿಲೆದ್ದಿತು. ಇಮ್ಮಡಿ ಉತ್ಸಾಹದಿಂದ ಮತ್ತೊಮ್ಮೆ ಸಾಧನಾನಿರತರಾದರು.

ಶ್ರೀರಾಮಕೃಷ್ಣರು ಸಾಧನೆ ಮಾಡುತ್ತಿದ್ದ ಕಾಲದಲ್ಲಿ ದಕ್ಷಿಣೇಶ್ವರಕ್ಕೆ ಬರುತ್ತಿದ್ದ ಸಾಧಕರು ಸಂನ್ಯಾಸಿಗಳು ಜಂಗಮರು ಬೈರಾಗಿಗಳು ಅಸಂಖ್ಯಾತ. ಇವರೆಲ್ಲ ಬರುತ್ತಿದ್ದುದು ಗಂಗಾ-ಸಾಗರ ಸಂಗಮದ ಪವಿತ್ರತೀರ್ಥದಲ್ಲಿ ಸ್ನಾನ ಮಾಡಲು. ಪುರೀ ಕ್ಷೇತ್ರದ ಜಗನ್ನಾಥನ ದರ್ಶನ ಈ ಸಾಧುಗಳ ಇನ್ನೊಂದು ಆಕರ್ಷಣೆ. ಅವರು ನಡೆಯುವ ದಾರಿಯಲ್ಲಿ ದಕ್ಷಿಣೇಶ್ವರವೂ ಸಿಗುತ್ತದೆ. ಆದರೆ ಅವರು ಇಲ್ಲಿ ಕೆಲವು ದಿನ ಉಳಿದೇ ಮುಂದೆ ಹೋಗುತ್ತಿದ್ದುದಕ್ಕೆ ಕಾರಣ, ಶ್ರೀರಾಮಕೃಷ್ಣರೇ ಹೇಳುತ್ತಿದ್ದಂತೆ, ಅಲ್ಲಿ ವಸತಿಗೆ ಹಾಗೂ ಶೌಚಾದಿಗಳಿಗೆ ತಕ್ಕ ವ್ಯವಸ್ಥೆಯಿದ್ದುದು. ಸಾಧುಸಂನ್ಯಾಸಿಗಳ ಮುಖ್ಯ ಆವಶ್ಯಕತೆಯೆಂದರೆ ಧ್ಯಾನಜಪತಪಗಳನ್ನು ನಿಶ್ಚಿಂತೆಯಿಂದ ಮಾಡಿಕೊಂಡು ಹೋಗುವುದಕ್ಕೊಂದು ನೆಲೆ ಮತ್ತು ಹಸಿವಾದಾಗ ಒಂದಿಷ್ಟು ಭಿಕ್ಷಾನ್ನ. ಈ ಭಿಕ್ಷೆ ಪಡೆಯುವುದೇ ಒಂದು ದೊಡ್ಡ ಪ್ರಯಾಸದ ಕೆಲಸ. ಕೇಳಿದಲ್ಲೆಲ್ಲ ಭಿಕ್ಷೆ ಹುಟ್ಟೀತೆಂಬ ಖಾತ್ರಿ ಇಲ್ಲ. ಭಿಕ್ಷೆಗಾಗಿ ಅಲೆಯುವುದರಲ್ಲೇ ಹೊತ್ತೆಲ್ಲ ಹೋಗಿಬಿಟ್ಟರೆ ಇನ್ನು ಧ್ಯಾನ ಜಪತಪಕ್ಕೆಲ್ಲಿದೆ ಸಮಯ ? ದಕ್ಷಿಣೇಶ್ವರದಲ್ಲಿ ಹಿಂದೆ ರಾಣಿ ರಾಸಮಣಿಯ, ಹಾಗೂ ಮಥುರನ ಉದಾರ ನೆರವು ಇದ್ದದ್ದರಿಂದಲೇ ಇಲ್ಲಿಗೆ ಬರುತ್ತಿದ್ದ ಸಾಧುಸಂನ್ಯಾಸಿಗಳು ಕೆಲಕಾಲ ಇಲ್ಲಿ ವಾಸವಾಗಿದ್ದು, ಬಳಿಕ ಮುಂದುವರಿಯುತ್ತಿದ್ದುದು. ಅಲ್ಲದೆ ಶ್ರೀರಾಮಕೃಷ್ಣರು ಇನ್ನೊಂದು ಮಾತು ಹೇಳುತ್ತಾರೆ: "ಯೋಗ್ಯರಾದ ಸಾಧುಗಳು ಜನರ ದೃಷ್ಟಿಗೆ ಬೀಳುವ ಸ್ಥಳಗಳಲ್ಲಿ ಶೌಚಾದಿಗಳನ್ನು ಮಾಡುವುದಿಲ್ಲ; ಆದ್ದರಿಂದ ಶೌಚಾದಿಗಳಿಗಾಗಿ ನಿರ್ಜನ ಸ್ಥಳ, ಹಾಗೂ ಸ್ನಾನಕ್ಕೆ-ಪಾನಕ್ಕೆ ತಿಳಿನೀರಿನ ವ್ಯವಸ್ಥೆ—ಇವುಗಳು ಇರುವ ಜಾಗವನ್ನೇ ಅವರು ವಾಸಕ್ಕೆ ಆರಿಸಿಕೊಳ್ಳುತ್ತಾರೆ" ಎಂದು. ದಕ್ಷಿಣೇಶ್ವರದಲ್ಲಿ ಈ ಎಲ್ಲ ಸೌಲಭ್ಯಗಳೂ ಇದ್ದುವು. ಇವೆಲ್ಲದರೊಂದಿಗೆ ಶ್ರೀರಾಮಕೃಷ್ಣರ ಪ್ರಬಲ ಆಧ್ಯಾತ್ಮಿಕಭಾವದ ಆಕರ್ಷಣೆಯೂ ಒಂದು ಬಹು ಮುಖ್ಯ ಕಾರಣವೆಂಬುದನ್ನು ಮರೆಯುವಂತಿಲ್ಲ.

ಆಶ್ಚರ್ಯವೆಂದರೆ, ಶ್ರೀರಾಮಕೃಷ್ಣರು ಯಾವುದಾದರೊಂದು ಭಾವದ ಸಾಧನೆಯನ್ನು ಮಾಡಿ ಮುಗಿಸಿದೊಡನೆಯೇ, ಅದೇ ಭಾವಕ್ಕೆ ಸೇರಿದ ಸಾಧಕರು, ಸಾಧುಗಳು ಅವರ ಬಳಿಗೆ ತಂಡತಂಡವಾಗಿ ಬರುತ್ತಿದ್ದರು. ಶ್ರೀರಾಮಕೃಷ್ಣರು ಅವರೊಡನೆ ಆ ಭಾವದ ಕುರಿತಾದ ಮಾತುಕತೆಯಲ್ಲೇ ತನ್ಮಯರಾಗುತ್ತಿದ್ದರು. ಉದಾಹರಣೆಗೆ, ರಾಮಮಂತ್ರದ ಉಪಾಸನೆಯಿಂದ ಸಿದ್ಧರಾದೊಡನೆಯೇ 'ರಾಮಾಯತ' ಪಂಥದ ಸಾಧುಗಳು ಬರಲಾರಂಭಿಸಿದರು. ವೈಷ್ಣವ ತಂತ್ರೋಕ್ತವಾದ ಶಾಂತ, ಸಖ್ಯ ಮೊದಲಾದ ಒಂದೊಂದು ಭಾವದ ಸಾಧನೆಯ ಅಂತ್ಯದಲ್ಲಿ ಆಯಾ ಭಾವದ ಸಾಧಕರು ಬರತೊಡಗಿದರು. ಭೈರವಿಯ ನಿರ್ದೇಶನದಲ್ಲಿ, ಶಕ್ತಿಸಾಧನೆಯಲ್ಲಿ ಕೃತಕೃತ್ಯರಾದೊಡನೆಯೇ, ಅನೇಕ ಪ್ರಸಿದ್ಧ ತಾಂತ್ರಿಕ ಸಾಧಕರು ಬಂದರು. ಅಂತೆಯೇ ಅವರು ಅದ್ವೈತಸಿದ್ಧಿಯನ್ನು ಗಳಿಸಿ, ನಿರ್ವಿಕಲ್ಪಸ್ಥಿತಿಯಲ್ಲಿ ನೆಲೆನಿಂತ ತರುವಾಯ, ಪರಮಹಂಸ ಸಂಪ್ರದಾಯದ ಸಂನ್ಯಾಸಿಗಳು ಒಟ್ಟೊಟ್ಟಾಗಿ ಬರಲಾರಂಭಿಸಿದರು. ಈ ದಿನಗಳ ಕುರಿತಾಗಿ ಮುಂದೆ ಅವರಾಡುವ ಮಾತುಗಳು ತುಂಬ ಸ್ವಾರಸ್ಯಕರವಾಗಿವೆ:

"ತೋತಾಪುರಿ ನಿರ್ಗಮಿಸಿದ ಮೇಲೆ ಇಲ್ಲಿಗೆ ಪರಮಹಂಸಸಂನ್ಯಾಸಿಗಳು ಅದ್ವೈತ ವೇದಾಂತಿಗಳು ಮಾತ್ರವೇ ಬರತೊಡಗಿದರು. ಹೊಟ್ಟೆಪಾಡಿನ ಬೈರಾಗಿಗಳಲ್ಲ, ಎಲ್ಲರೂ ಯೋಗ್ಯರೇ! ಅವರು ಈ ನನ್ನ ಕೋಣೆಯಲ್ಲಿ ಹಗಲಿರುಳೂ ಕಿಕ್ಕಿರಿದಿರುತ್ತಿದ್ದರು. ಮತ್ತು ಯಾವಾಗ ನೋಡಿದರೂ ಬ್ರಹ್ಮ, ಮಾಯೆ—ಇವೇ ಮೊದಲಾದ ವೇದಾಂತವಿಷಯಗಳ ಮೇಲೆ ಚರ್ಚೆ ನಡೆಯುತ್ತಲೇ ಇರುತ್ತಿತ್ತು. ಆ ದಿನಗಳಲ್ಲಿ ನನಗೆ ತೀವ್ರವಾದ ರಕ್ತಾತಿಸಾರ ಅಂಟಿಕೊಂಡಿತ್ತು; ಪದೇಪದೇ ಶೌಚಕ್ಕೆ ಹೋಗಬೇಕಾಗುತ್ತಿತ್ತು, ಕೈಯ ನೀರು ಒಣಗುವುದಕ್ಕೂ ಅವಕಾಶವಿರಲಿಲ್ಲ. ಹೃದಯರಾಮ ಕೋಣೆಯ ಮೂಲೆಯಲ್ಲಿ ಸದಾ ಒಂದು ತಂಬಿಗೆ ನೀರು ತುಂಬಿಟ್ಟಿರುತ್ತಿದ್ದ. ನಾನು ಈ ಹಾಳು ಹೊಟ್ಟೆನೋವಿನಿಂದ ನರಳುತ್ತಲೂ ಇರುತ್ತಿದ್ದೆ, ಆ ಸಾಧುಗಳ ತರ್ಕ-ವಿತರ್ಕಗಳನ್ನು ಕೇಳುತ್ತಲೂ ಇರುತ್ತಿದ್ದೆ! ಕೆಲವೊಮ್ಮೆ ಅವರು ತಮ್ಮ ವಾದದಲ್ಲಿ ಯಾವುದೇ ತೀರ್ಮಾನಕ್ಕೆ ಬರಲು ಸಾಧ್ಯವಾಗದಿದ್ದಾಗ [ತಮ್ಮ ಶರೀರವನ್ನು ತೋರಿಸಿ] ಇದರೊಳಗಿಂದ ತಾಯಿ ಅವರ ಜಟಿಲ ಸಮಸ್ಯೆಗೆ ಒಂದು ಸುಲಭವಾದ ಸಮಾಧಾನವನ್ನು ಸೂಚಿಸಿಬಿಡುತ್ತಿದ್ದಳು."

ಒಮ್ಮೆ ಅಲ್ಲಿಗೊಬ್ಬ ಸಾಧು ಬಂದಿದ್ದ. ಅವನ ಮುಖದಲ್ಲೊಂದು ದೈವಿಕ ಕಳೆ ಮಿನುಗುತ್ತಿತ್ತು. ಅವನು ಒಂದು ಕಡೆ ಕುಳಿತುಕೊಂಡು ಸುಮ್ಮನೆ ತನ್ನೊಳಗೆ ತಾನು ನಗುತ್ತಿರುತ್ತಿದ್ದ. ಬೆಳಗ್ಗೊಮ್ಮೆ ಸಂಜೆಗೊಮ್ಮೆ ಅವನು ಕೋಣೆಯಿಂದ ಹೊರಗೆ ಬಂದು ಸುತ್ತಲೂ ರಾರಾಜಿಸುವ ವನರಾಜಿಯನ್ನು, ಅನಂತವಾಗಿ ಹರಡಿಕೊಂಡಿರುವ ನೀಲಾಕಾಶವನ್ನು, ಗಂಭೀರವಾಗಿ ಹರಿಯುತ್ತಿರುವ ಗಂಗಾವಾರಿಯನ್ನು ದಿಟ್ಟಿಸುತ್ತ ಆನಂದಭರಿತನಾಗಿ ತನ್ನೆರಡೂ ಕೈಗಳನ್ನು ಮೇಲಕ್ಕೆತ್ತಿ ಕುಣಿದಾಡುತ್ತಿದ್ದ. ಕೆಲವೊಮ್ಮೆ ಬಿದ್ದು ಬಿದ್ದು ನಗುತ್ತಿದ್ದ. ಮತ್ತು ಉದ್ಗರಿಸುತ್ತಿದ್ದ, "ವಾಹ್, ವಾಹ್, ಕ್ಯಾ ಮಾಯಾ, ಕೈಸಾ ಪ್ರಪಂಚ್ ಬನಾಯಾ!"— 'ಭಗವಂತ ಎಷ್ಟು ಅದ್ಭುತವಾದ ಮಾಯಾ ಪ್ರಪಂಚವನ್ನು ಸೃಷ್ಟಿಸಿಬಿಟ್ಟಿದ್ದಾನೆ!' ಈ ರೀತಿಯಲ್ಲಿ ನಗುವುದು, ಈ ರೀತಿಯಲ್ಲಿ ಭಗವಂತನ ವೈಭವವನ್ನು ಕೊಂಡಾಡುವುದು—ಇದೇ ಅವನ ಉಪಾಸನೆಯಾಗಿತ್ತು, ಪೂಜೆಯಾಗಿತ್ತು! ಈ ವಿಧಾನದಿಂದಲೇ ಅವನಿಗೆ ಆನಂದದ ಸಾಕ್ಷಾತ್ಕಾರವಾಗಿತ್ತು.

ಅವನು ದಕ್ಷಿಣೇಶ್ವರಕ್ಕೆ ಬಂದ ಓರ್ವ ಆನಂದೋನ್ಮತ್ತ ಸಾಧುವಾದರೆ, ಮತ್ತೊಮ್ಮೆ ಒಬ್ಬ ಸಾಧು ಬಂದಿದ್ದ–ಆತ ಜ್ಞಾನೋನ್ಮತ್ತ. ಅವನು ಪಿಶಾಚಿಯಂತೆ ಕಂಡುಬರುತ್ತಿದ್ದ. ಬತ್ತಲೆ; ಕೆದರಿದ ತಲೆ; ಮೈ ತುಂಬ ಧೂಳು; ಉದ್ದುದ್ದದ ಉಗುರುಗಳು. ಹೆಗಲ ಮೇಲೆ ಒಂದು ಕಂತೆ. ಆ ಕಂತೆಯೋ, ಸ್ಮಶಾನದಿಂದ ಎತ್ತಿಕೊಂಡು ಬಂದಂತಿತ್ತು. ಅವನು ಸೀದಾ ಕಾಳೀಮಂದಿರಕ್ಕೆ ಬಂದ. ದೇವಿಯ ಎದುರು ನಿಂತು ಉಚ್ಚಸ್ವರದಲ್ಲಿ ಅವಳ ಸ್ತುತಿ ಮಾಡಲಾರಂಭಿಸಿದ. ಅವನ ಭಕ್ತಿಯ ಜೋರು ಎಂಥದಾಗಿತ್ತೆಂದರೆ, ಮಂದಿರಕ್ಕೆ ಮಂದಿರವೇ ಕಂಪಿಸತೊಡಗಿತು. ಆ ಸತ್ತ್ವಪೂರ್ಣ ಭಕ್ತಿಗೆ ಮೆಚ್ಚಿದ ದೇವಿಯು ಪ್ರಸನ್ನವದನಳಾಗಿ ಮುಗುಳ್ನಕ್ಕಂತೆ ಭಾಸವಾಯಿತೆನ್ನುತ್ತಾರೆ ಶ್ರೀರಾಮಕೃಷ್ಣರು. ಊಟದ ಹೊತ್ತಾಯಿತು. ಆದರೆ ಅವನನ್ನು ಊಟಕ್ಕೆ ಕರೆಯುವವರಿಲ್ಲ. ಕೊಳಕು ಮನುಷ್ಯನನ್ನು ಯಾರು ಕರೆಯುತ್ತಾರೆ? ಕೊನೆಗೆ ಬಡಬಗ್ಗರೆಲ್ಲ ಪ್ರಸಾದ ಸ್ವೀಕರಿಸುತ್ತಿರುವಲ್ಲಿಗೆ ಹೋಗಿ ಅವರ ನಡುವೆ ತಾನೇ ಒಂದು ಜಾಗ ಮಾಡಿಕೊಂಡು ಕುಳಿತ. ಆದರೆ ಅವನ ಕೊಳಕುತನ ಆ ಬಡಬಗ್ಗರಿಗೂ ಸಹ್ಯವಾಗಲಿಲ್ಲ;

ಅವನನ್ನು ಅಲ್ಲಿಂದ ಓಡಿಸಿಬಿಟ್ಟರು. ಆದರೆ ಅವನೇನೂ ಕೋಪಿಸಿಕೊಳ್ಳಲಿಲ್ಲ, ಪ್ರತಿಯಾಗಿ ಕೈಯೆತ್ತಲೂ ಹೋಗಲಿಲ್ಲ. ಹೊರಗೆ ಬಂದು ಸುಮ್ಮನೆ ಕುಳಿತ. ಒಳಗೆ ಪ್ರಸಾದ ಸ್ವೀಕಾರ ಮುಗಿಯಿತು. ಎಂಜಲೆಲೆಗಳು ಹೊರಬಂದು ಬಿದ್ದುವು. ನಾಯಿಗಳೆಲ್ಲ ಅದಾಗಲೇ ಸಿದ್ಧ. ಈಗ ಆ ಜ್ಞಾನಿಯೂ ನಾಯಿಗಳೊಂದಿಗೆ ಸೇರಿಕೊಂಡು 'ಪ್ರಸಾದ' ತಿನ್ನತೊಡಗಿದ. ಆದರೆ ಅವನೆಷ್ಟೇ ಕೊಳಕನಾಗಿದ್ದರೂ ಪುಣ್ಯಕ್ಕೆ ನಾಯಿಗಳು ಅವನನ್ನು ಓಡಿಸುವ ಪ್ರಯತ್ನ ಮಾಡಲಿಲ್ಲ. ಎಂಜಲು ತಿನ್ನಲು ಅವನಿಗೆ ಅಸಹ್ಯವಾಗಿರಲಾರದೆ? ಸ್ವಾರಸ್ಯವೆಂದರೆ, ಅವನು ಒಂದು ನಾಯಿಯ ಕೊರಳನ್ನು ಬಳಸಿ ಹಿಡಿದುಕೊಂಡು ಅದು ತಿನ್ನುತ್ತಿರುವ ಎಲೆಯಿಂದಲೇ ತಾನೂ ತಿನ್ನುತ್ತಿದ್ದಾನೆ! ಆ ನಾಯಿಯೂ, 'ಇವನು ನನ್ನ ಕತ್ತು ಹಿಸುಕಿಯಾನು' ಎಂದು ಶಂಕಿಸಲೂ ಇಲ್ಲ, ಓಡಿಹೋಗಲೂ ಇಲ್ಲ. ಅವನು ನಾಯಿಯೊಂದಿಗೆ ತಿನ್ನುವ ಈ ದೃಶ್ಯವನ್ನು ಶ್ರೀರಾಮಕೃಷ್ಣರು ಬೆರಗುಗಣ್ಣಿಂದ ನೋಡಿದರು. ಶಾಸ್ತ್ರದಲ್ಲಿ ಹೇಳಲಾಗಿದೆ—ಪರಮಹಂಸಾವಸ್ಥೆಗೆ ಏರಿದವರು, 'ಬಾಲವತ್, ಉನ್ಮತ್ತವತ್, ಜಡವತ್, ಪಿಶಾಚವತ್'—ಎಂದರೆ ಬಾಲಕನಂತೆ, ಉನ್ಮತ್ತನಂತೆ, ಜಡವಸ್ತುವಿನಂತೆ, ಪಿಶಾಚಿಯಂತೆ ಇರುತ್ತಾರೆ ಎಂದು. ಆದ್ದರಿಂದ ತಮಗೂ ಎಲ್ಲಿ ಈ ಬಗೆಯ ಅವಸ್ಥೆ ಬಂದು ತಾವೂ ಅವನಂತೆಯೇ ಅಲೆದಾಡುವಂತಾಗುವುದೋ ಎಂದು ಅವರು ಬೆದರಿದರು; ಬಾಲಸಹಜ ಹೆದರಿಕೆ ಅವರದು.

ಅವನನ್ನು ನೋಡಿದ ಶ್ರೀರಾಮಕೃಷ್ಣರು ಓಡಿ ಬಂದು ಹೃದಯುನನ್ನು ಕರೆದು ಹೇಳಿದರು: "ಓ ಹೃದೂ, ನೋಡಿದೆಯಾ ಅವನನ್ನು! ಅವನು ಹುಚ್ಚನಲ್ಲ, ಭಗವದ್ಜ್ಞಾನದಿಂದ ಉನ್ಮತ್ತನಾದವನು! ಬ್ರಹ್ಮಜ್ಞಾನಿ!" ಅವರ ಮಾತನ್ನು ಕೇಳಿದ ಹೃದಯುರಾಮ ಆತನನ್ನು ನೋಡಲು ಓಡಿದ. ಆಗ ಆ ಜ್ಞಾನಿ ತೋಟದಿಂದ ಹೊರಗೆ ಹೋಗುತ್ತಿದ್ದ. ಹೃದಯು ಅವನನ್ನೇ ಹಿಂಬಾಲಿಸುತ್ತ ಬಹು ದೂರ ಹೋದ. ಹಾಗೆ ಹೋಗುತ್ತಲೇ ಅವನನ್ನು ಕೇಳಿದ: "ಸ್ವಾಮೀ, ಸ್ವಲ್ಪ ನಿಲ್ಲಿ! ಭಗವಂತನ ದರ್ಶನ ಮಾಡುವುದು ಹೇಗೆಂಬುದನ್ನು ತಿಳಿಸಿಕೊಡುವಿರಾ?"

ಮೊದಲಿಗೆ ಆತ ಇವನ ಮಾತು ಕೇಳಿಸದಿದ್ದವನಂತೆ ಉತ್ತರವನ್ನೇ ಕೊಡಲಿಲ್ಲ. ಆದರೆ ಹೃದಯು ಮತ್ತೂ ಒತ್ತಾಯಿಸಿದಾಗ ಆತ ತಟಕ್ಕನೆ ನಿಂತ; ಬದಿಯ ಮೋರಿಯನ್ನು ತೋರಿಸುತ್ತ ನುಡಿದ:

"ನೋಡು, ಈ ಮೋರಿಯ ನೀರೂ ಆ ಗಂಗೆಯ ನೀರೂ ಬೇರೆಬೇರಲ್ಲ, ಒಂದೇ ಎಂಬ ಅರಿವು ನಿನಗುಂಟಾದಾಗ, ಈ ಎರಡೂ ಏಕಪ್ರಕಾರವಾಗಿ ಪವಿತ್ರ ಎಂಬುದು ನಿನಗೆ ತಿಳಿದಾಗ ನೀನು ಭಗವತ್ಸಾಕ್ಷಾತ್ಕಾರ ಮಾಡಿಕೊಳ್ಳುವೆ."

ಹೀಗೆಂದವನೇ ಸರಸರನೆ ನಡೆದ. ಆದರೆ ಹೃದಯುನಿಗೆ ಅಷ್ಟಕ್ಕೇ ಸಮಾಧಾನವಾಗಲಿಲ್ಲ. ಆ ಮಹಾತ್ಮನಿಂದ ಇನ್ನೂ ಏನಾದರೂ ಕೇಳಬೇಕೆಂಬಾಸೆಯಾಯಿತು. ಅವನನ್ನೇ ಹಿಂಬಾಲಿಸುತ್ತ ಹೋಗಿ, "ಸ್ವಾಮೀ, ನನ್ನನ್ನು ನಿಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ಜೊತೆಗೇ ಕರೆದುಕೊಂಡು ಹೋಗಿ" ಎಂದು ವಿನಂತಿಸಿಕೊಂಡ. ಆದರೆ ಸಾಧು ಉತ್ತರ ಕೊಡಲೇ ಇಲ್ಲ, ವೇಗವಾಗಿ ಮುನ್ನಡೆದ. ಸ್ವಲ್ಪ ದೂರ ಹೋದ ಬಳಿಕ ಹಿಂದಿರುಗಿ ನೋಡಿದ. ಹೃದಯು ಇನ್ನೂ ಹಿಂಬಾಲಿಸುತ್ತಿರುವುದು ಕಾಣಿಸಿತು. ಸಾಧು ಮಾತನಾಡದೆ ಒಂದು ಕಲ್ಲೆತ್ತಿಕೊಂಡು ಹೃದಯುನತ್ತ ಬೀಸಲು ಹೊರಟ. ಹೃದಯು ನೋಡಿದ; ಅವನೆದೆ ತಲ್ಲಣಿಸಿತು. ಕೂಡಲೇ ಕಾಲಿಗೆ ಬುದ್ಧಿ ಹೇಳಿದ. ಸಾಧು ಕಲ್ಲನ್ನು

ಅಲ್ಲೇ ಎಸೆದು, ಬೇರೆ ದಾರಿಯಾಗಿ ನಡೆದು ಮಾಯವಾದ. ಹೃದಯ ಅವನನ್ನು ಹುಡುಕಲು ಮತ್ತೂ ಯತ್ನಿಸಿದ. ಆದರೆ ಸುಳಿವು ಸಿಗಲಿಲ್ಲ.

ಶ್ರೀರಾಮಕೃಷ್ಣರು ಮುಂದೆ ತಮ್ಮ ಶಿಷ್ಯರೊಡನೆ ಹೇಳುತ್ತಾರೆ:

"ಈ ಬಗೆಯ ಸಾಧುಗಳೆಲ್ಲ ಜನರ ರಗಳೆಯಿಂದ ತಪ್ಪಿಸಿಕೊಳ್ಳಲು ಹೀಗೆ ವೇಷ ಮರೆಸಿಕೊಂಡು ತಿರುಗುತ್ತಾರೆ. ಆ ಸಾಧು ಪರಮಹಂಸಾವಸ್ಥೆಗೆ ಏರಿದವನು. ಶಾಸ್ತ್ರಗಳು ಹೇಳುತ್ತವೆ, 'ಇವರೆಲ್ಲ ಬಾಲಕರಂತೆ, ಜಡವಸ್ತುಗಳಂತೆ, ಉನ್ಮತ್ತರಂತೆ ಅಥವಾ ಪಿಶಾಚಿಗಳಂತೆ ಇರುತ್ತಾರೆ' ಎಂದು. ಪರಮಹಂಸರು ತಮ್ಮ ಸುತ್ತ ಚಿಕ್ಕ ಮಕ್ಕಳನ್ನು ಆಡಿಕೊಂಡಿರಲು ಬಿಟ್ಟು ತಾವೂ ಅವುಗಳಂತೆಯೇ ಮುಗ್ಧರಾಗಿರಲು ಯತ್ನಿಸುತ್ತಾರೆ. ಹೇಗೆ ಮಕ್ಕಳಲ್ಲಿ ಸಂಸಾರಾಸಕ್ತಿಯಿರುವುದಿಲ್ಲವೊ ಹಾಗೆಯೇ ಈ ಪರಮಹಂಸರಲ್ಲೂ ಸಹ. ನೋಡಿಲ್ಲವೆ ನೀವು—ಪುಟ್ಟ ಮಗನಿಗೆ ಹೊಸ ಅಂಗಿ ತೊಡಿಸುತ್ತಾಳೆ ತಾಯಿ. ಆಗ ಆ ಹುಡುಗನ ಸಂತೋಷವನ್ನು ನೋಡಬೇಕು ! 'ಮಗು, ಆ ಅಂಗಿಯನ್ನು ನನಗೆ ಕೊಡುತ್ತೀಯಾ ?' ಎಂದು ಕೇಳಿನೋಡಿ. ಅವನು ಬಿಂಕದಿಂದ ಹೇಳುತ್ತಾನೆ, 'ಊಹೂಂ, ಕೊಡಲಾರೆ. ನನಗೆ ಇದನ್ನು ಅಮ್ಮ ಕೊಟ್ಟದ್ದು.' ಹೀಗೆನ್ನುತ್ತ, ಎಲ್ಲಿ ನೀವು ಆ ಅಂಗಿಯನ್ನು ಕಿತ್ತುಕೊಂಡುಬಿಡುವಿರೋ ಎಂದು ಅದನ್ನು ಬಿಗಿಯಾಗಿ ಹಿಡಿದುಕೊಂಡು ನಿಮ್ಮ ಕಡೆಗೇ ನೋಡುತ್ತಿರುತ್ತಾನೆ. ಆತನ ಪ್ರಾಣವೆಲ್ಲ ಆ ಅಂಗಿಯಲ್ಲಿಯೇ ಇದೆಯೋ ಎಂಬಂತೆ ಕಾಣುತ್ತದೆ. ಆದರೆ ನೀವು ನಾಲ್ಕಾಣೆ ಬೆಲೆಬಾಳುವ ಆಟದ ಬೊಂಬೆಯನ್ನು ಹಿಡಿದುಕೊಂಡು ಅವನ ಮುಂದೆ ನಿಲ್ಲಿ. ಆಗ ಅವನದನ್ನು ನೋಡಿ ಹೇಳುತ್ತಾನೆ: 'ನೀನು ಅದನ್ನು ನನಗೆ ಕೊಟ್ಟರೆ, ನಾನು ನಿನಗೆ ಈ ಅಂಗಿಯನ್ನು ಕೊಡುತ್ತೇನೆ.' ಆದರೆ ಆ ಬೊಂಬೆಯನ್ನಾದರೂ ಅವನು ಶಾಶ್ವತವಾಗಿ ಇಟ್ಟುಕೊಳ್ಳುತ್ತಾನೇನು ? ಒಂದೆರಡು ನಿಮಿಷ ಆಡಿದ, ಅತ್ತಕಡೆ ಬಿಸಾಡಿದ, ಬಳಿಕ ಒಂದು ಹೂ ಕೀಳಲು ಓಡಿದ ! ಅವನಿಗೆ ಆ ಅಂಗಿಯ ಮೇಲೆಷ್ಟು ಮಮತೆಯೋ ಈ ಬೊಂಬೆಯ ಮೇಲೂ ಅಷ್ಟೇ ಮಮತೆ ! ಜ್ಞಾನಿಗಳ ಮಮತೆಯೂ ಹಾಗೆಯೇ."

ಇದೇ ರೀತಿ ಎಷ್ಟೋ ದಿನಗಳು ಕಳೆದುವು. ಕ್ರಮೇಣ ದಕ್ಷಿಣೇಶ್ವರಕ್ಕೆ ಪರಮಹಂಸಸಂನ್ಯಾಸಿಗಳು ಬರುವುದು ಕಡಿಮೆಯಾಯಿತು. ಈಗ ತ್ಯಾಗಿಗಳೂ ಪರಮವಿರಾಗಿಗಳೂ ಆದ 'ರಾಮಾಯತ' ಪಂಥದ ಸಾಧುಗಳು ಬರಲಾರಂಭಿಸಿದರು. ಶ್ರೀರಾಮಕೃಷ್ಣರು ಹೇಳುತ್ತಾರೆ: "ಆಹ್ ! ಏನವರ ಭಕ್ತಿ ! ಏನವರ ವಿಶ್ವಾಸ ! ಏನವರ ಸೇವಾನಿಷ್ಠೆ !" ಈ ಸಾಧುಗಳ ಪೈಕಿ ಒಬ್ಬನಾದ ಜಟಾಧಾರಿಯ ಅದ್ಭುತ ಭಕ್ತಿಯನ್ನೂ ರಾಮಲಾಲನ ದಿವ್ಯ ಸಾನ್ನಿಧ್ಯವನ್ನೂ ನಾವು ಆದಾಗಲೇ ಅನುಭವಿಸಿದ್ದೇವೆ.

ಇನ್ನೊಂದು ಸಂದರ್ಭದಲ್ಲಿ ದಕ್ಷಿಣೇಶ್ವರಕ್ಕೆ ಒಬ್ಬ ಸಾಧು ಬಂದಿದ್ದ. ಈತನಿಗೆ ಭಗವನ್ನಾಮದಲ್ಲಿ ನೂರಕ್ಕೆ ನೂರು ನಂಬಿಕೆ. ಇವನೂ ರಾಮಾಯತ ಪಂಥಕ್ಕೆ ಸೇರಿದವನು. ಈತನ ಬಳಿಯಲ್ಲಿರುತ್ತಿದ್ದುದು ಎರಡೇ ಎರಡು ವಸ್ತುಗಳು—ಒಂದು ಲೋಟ, ಒಂದು ಪುಸ್ತಕ. ಆ ಪುಸ್ತಕವೆಂದರೆ ಅವನಿಗೆ ಪರಮ ಪ್ರೇಮ. ಪ್ರತಿದಿನ ಇವನು ಆ ಪುಸ್ತಕವನ್ನು ಹೂವಿನಿಂದ ಅಲಂಕರಿಸಿ ಪೂಜಿಸುತ್ತಿದ್ದ. ಶ್ರೀರಾಮಕೃಷ್ಣರಿಗೂ ಈತನಿಗೂ ಪರಿಚಯ ಬೆಳೆಯಿತು. ಇವನು ಆ ಪುಸ್ತಕವನ್ನು ಅಷ್ಟೊಂದು ಭಕ್ತಿಯಿಂದ ಪೂಜಿಸಬೇಕಾದರೆ ಅದರಲ್ಲಿ ಏನಿರಬಹುದು—ಎಂಬ ಕುತೂಹಲ ಅವರಿಗೆ ಸಹಜವಾಗಿಯೇ ಉಂಟಾಯಿತು. ಅದನ್ನೊಮ್ಮೆ ನೋಡಲು ಇಷ್ಟಪಟ್ಟರು. ಆದರೆ ತಾನು

ಪೂಜೆ ಸಲ್ಲಿಸುತ್ತಿರುವ ಪುಸ್ತಕವನ್ನು ಆತ ಅಷ್ಟು ಸುಲಭವಾಗಿ ಇತರರ ಕೈಗೆ ಕೊಟ್ಟಾನೆಯೆ? ಕೊನೆಗೆ ಆ ಸಾಧು ಅವರ ಒತ್ತಾಯಕ್ಕೆ ಮಣಿದು ಪುಸ್ತಕವನ್ನವರ ಕೈಗಿತ್ತ. ಶ್ರೀರಾಮಕೃಷ್ಣರು ಅದನ್ನು ತೆರೆದು ನೋಡಿದರು; ಅದರಲ್ಲಿ ಬರೆದಿರುವುದೆಲ್ಲ ಇಷ್ಟೆ: "ಓಂ ರಾಮಃ" ಎಂದು! ಪುಟಪುಟದಲ್ಲೂ ಅದನ್ನೇ ದಪ್ಪಕ್ಷರಗಳಲ್ಲಿ ಕೆಂಪು ಶಾಯಿಯಿಂದ ಬರೆದಿದೆ! ಇದನ್ನು ಕಂಡು ಶ್ರೀರಾಮಕೃಷ್ಣರ ಮನದಲ್ಲಿ ಪ್ರಶ್ನೆಯೆದ್ದಿರ ಬಹುದು—'ಏನಿದು?' ಎಂದು. ಹೀಗೆಂದು ಊಹಿಸಿದ ಆ ಸಾಧು ಹೇಳಿದ: "ಬಹಳ ಪುಸ್ತಕಗಳನ್ನೋದಿ ಪ್ರಯೋಜನವಾದರೂ ಏನು? ಈ ವೇದ-ಪುರಾಣಗಳೆಲ್ಲ ಹೊರ ಬಂದಿರುವುದು ಆ ಒಬ್ಬ ಭಗವಂತನಿಂದಲೇ ಅಲ್ಲವೆ? ಅವನಿಗೂ ಅವನ ಹೆಸರಿಗೂ ಯಾವ ಭೇದವೂ ಇಲ್ಲ. ಅಲ್ಲದೆ ಈ ವೇದ-ಪುರಾಣಗಳಲ್ಲಿ ಇರುವುದೆಲ್ಲವೂ ಅವನ ಒಂದು ಹೆಸರಿನಲ್ಲೇ ಇದೆ. ಆದ್ದರಿಂದ ನಾನು ಅವನ ಆ ಹೆಸರನ್ನೇ ತೆಗೆದುಕೊಂಡಿ ದ್ದೇನೆ." ರಾಮನಾಮ ಆ ಸಾಧುವಿನ ಜೀವಾಳವೇ ಆಗಿತ್ತು.

ದಕ್ಷಿಣೇಶ್ವರಕ್ಕೆ ಬರುತ್ತಿದ್ದ ಆ ಸಾಧುಗಳಲ್ಲಿ ಹಲವರು ದೇವರನಾಮಗಳನ್ನು ಹಾಡುವವರಿದ್ದರು. ಸೂರದಾಸ, ತುಲಸೀದಾಸರೇ ಮೊದಲಾದ ಸಂತರ ಹಾಡುಗಳನ್ನು ಹೇಳಿಕೊಂಡು ಭಜನೆ ಮಾಡುತ್ತಿದ್ದರು. ಶ್ರೀರಾಮಕೃಷ್ಣರು ಅವರಿಂದ ಹಲವು ಹಾಡು ಗಳನ್ನು ಕಲಿತರು. ಮುಂದೆ ಅವರು ಆ ಹಾಡುಗಳನ್ನು ತಮ್ಮ ಶಿಷ್ಯರ ಮುಂದೆ ಹಾಡುವುದಿತ್ತು.

"ಸಾಧುಗಳು ಕಳ್ಳತನ, ಸ್ತ್ರೀಸಂಗ, ಅನೃತವಚನ ಮೊದಲಾದವುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಬೇಕು ಎಂದು ಈ ಹಾಡುಗಳು ತಿಳಿಸಿಕೊಡುತ್ತವೆ" ಎನ್ನುತ್ತ ಶ್ರೀರಾಮಕೃಷ್ಣರು ತಮ್ಮ ಶಿಷ್ಯರ ಮುಂದೆ ಈ ದ್ವಿಪದಿಯನ್ನು ಹಾಡಿ ಭಾವಾರ್ಥವನ್ನು ಹೇಳುತ್ತಾರೆ:

*ಸತ್ಯವಚನ್ ಅಧೀನತಾ ಪರಧನ ಉದಾಸ್ ।*
*ಇಸ ಸೇ ನಾ ಹರಿ ಮಿಲೇ ತೊ ಜಾಮೀನ್ ತುಲಸೀದಾಸ್ ॥*
*ಸತ್ಯವಚನ್ ಅಧೀನತಾ ಪರಸ್ತ್ರೀಮಾತೃಸಮಾನ್ ।*
*ಇಸ ಸೇ ನಾ ಹರಿ ಮಿಲೇ ತುಲಸೀ ಝೂಟ್ ಜಬಾನ್ ॥*

"ಅಧೀನತಾ ಅಂದರೇನು ಗೊತ್ತೆ? ನಮ್ರತೆ. ನಿಜವಾದ ನಮ್ರತೆಯೊಂದು ಬಂದುಬಿಟ್ಟರೆ ಅಹಂಕಾರ ನಿರ್ನಾಮವಾಗಿಬಿಡುತ್ತದೆ, ಭಗವತ್ಸಾಕ್ಷಾತ್ಕಾರವಾಗುತ್ತದೆ."

ಒಮ್ಮೆ ಶ್ರೀರಾಮಕೃಷ್ಣರ ಮನದಲ್ಲೆದ್ದ ಭಾವನೆಯೊಂದು ತುಂಬ ಸ್ವಾರಸ್ಯಕರ ವಾಗಿದೆ. ಅದನ್ನು ಅವರ ಬಾಯಿಂದ ಕೇಳಿದರೇ ಚಂದ:

"ಒಂದು ದಿನ ನನ್ನ ಮನದಲ್ಲೊಂದು ಇಚ್ಛೆ ಎದ್ದಿತು—ಇಲ್ಲಿಗೆ ಬರುತ್ತಿರುವ ಎಲ್ಲ ಸಂಪ್ರದಾಯದ ಸಾಧಕರಿಗೂ ಅವರವರ ಸಾಧನೆಗೆ ಆವಶ್ಯಕವಾದ ಸಾಮಗ್ರಿಗಳ ನ್ನೆಲ್ಲ ಒದಗಿಸಿಕೊಡಬೇಕು ಎಂದು: ಅವರೆಲ್ಲರೂ ಯಾವ ಅಡೆತಡೆಯೂ ಇಲ್ಲದೆ ನಿಶ್ಚಿಂತೆಯಿಂದ ಭಗವದ್ಧ್ಯಾನದಲ್ಲಿ ತಲ್ಲೀನರಾಗಿ ಕುಳಿತಿರಬೇಕು, ನಾನು ಆ ಅದ್ಭುತ ದೃಶ್ಯವನ್ನು ನೋಡುತ್ತ ಆನಂದಿಸಬೇಕು ಎಂಬ ಇಚ್ಛೆಯುದಿಸಿತು ನನ್ನಲ್ಲಿ. ಸರಿ, ಮಥುರನಿಗೆ ಈ ವಿಷಯ ಹೇಳಿದೆ. ಅದಕ್ಕೆ ಅವನೆಂದ, 'ಅಪ್ಪ, ಅದೇನು ದೊಡ್ಡ ವಿಷಯ! ಏನೇನು ಬೇಕೋ ಎಲ್ಲವನ್ನೂ ಒದಗಿಸಿಕೊಡುತ್ತೇನೆ. ನೀವು ಯಾರ್ಯಾರಿಗೆ

ಏನೇನು ಬೇಕೋ ಅದನ್ನವರಿಗೆ ಕೊಡಿ.' ದೇವಸ್ಥಾನದ ಉಗ್ರಾಣದಿಂದ ಪ್ರತಿಯೊಬ್ಬ ಸಾಧುವಿಗೂ ಅಕ್ಕಿ, ಬೇಳೆ, ಹಿಟ್ಟು ಮೊದಲಾದುವನ್ನು ಎಷ್ಟು ದಿನ ಬೇಕೋ ಅಷ್ಟು ದಿನಗಳವರೆಗೆ ಪಡಿಕೊಡುವ ವ್ಯವಸ್ಥೆ ಈ ಹಿಂದೆಯೇ ಇತ್ತು. ಈಗ ಸಾಧುಗಳಿಗೆ ಕೊಡುವುದಕ್ಕಾಗಿ ಲೋಟ, ಕಮಂಡಲು, ಕಂಬಳಿ, ಆಸನ, ಬಂಗಿ ಸೇದುವವರಿಗೆ ಬಂಗಿ, ತಂತ್ರಸಾಧಕರಿಗೆ ಮದ್ಯ—ಇವೇ ಮೊದಲಾದ ಎಲ್ಲ ವಸ್ತುಗಳನ್ನೂ ಅವನು ಒದಗಿಸಿಕೊಟ್ಟ.

"ಆ ದಿನಗಳಲ್ಲಿ ಅನೇಕ ತಾಂತ್ರಿಕ ಸಾಧಕರೂ ಬರುತ್ತಿದ್ದರು. ಅವರು ಶ್ರೀಚಕ್ರದ ಉಪಾಸಕರು. ಹಸಿ ಶುಂಠಿ, ಈರುಳ್ಳಿ, ಪುರಿ, ಹುರಿದ ಬಟಾಣಿ ಇವೆಲ್ಲ ಅವರ ಅನುಷ್ಠಾನಗಳಿಗೆ ಬೇಕಾದ ಸಾಮಗ್ರಿಗಳು. ನಾನು ಇವನ್ನೆಲ್ಲ ಅವರಿಗಾಗಿ ಅಣಿಮಾಡಿ ಕೊಡುತ್ತಿದ್ದೆ. ಅವರು ಅವುಗಳಿಂದ ಜಗನ್ಮಾತೆಯನ್ನು ಆರಾಧಿಸಿ ಧ್ಯಾನಜಪಗಳಲ್ಲಿ ನಿರತ ರಾಗುವುದನ್ನು ನೋಡಿ ಆನಂದಿಸುತ್ತಿದ್ದೆ. ಎಷ್ಟೋ ಸಲ ಅವರು ನನ್ನನ್ನು ಆ ಶ್ರೀಚಕ್ರದಲ್ಲಿ ಕುಳ್ಳಿರಿಸಿ ಚಕ್ರೇಶ್ವರನನ್ನಾಗಿ ಮಾಡುತ್ತಿದ್ದರು. ತಂತ್ರಶಾಸ್ತ್ರದ ಪದ್ಧತಿಯಂತೆ, ಕುಡಿಯಲು ನನಗೆ ನೈವೇದ್ಯ ಮಾಡಿದ ಮದ್ಯ ಕೊಡುತ್ತಿದ್ದರು. ಅದನ್ನು ಕುಡಿಯಲು ನನ್ನಿಂದ ಎಂದೂ ಸಾಧ್ಯವಾಗಲಿಲ್ಲ. ಏಕೆಂದರೆ, 'ಕಾರಣ'* ಎಂಬ ಅದರ ಹೆಸರು ಕೇಳಿದ ಮಾತ್ರದಿಂದಲೇ ನನಗೆ ಭಗವದಾನಂದದ ಅಮಲೇರುತ್ತಿತ್ತು! ಆದ್ದರಿಂದ ನಾನದನ್ನು ಕುಡಿಯುವಂತೆ ಅವರು ಬಲವಂತ ಮಾಡುತ್ತಿರಲಿಲ್ಲ. ಆದರೆ ಅವರೊಂದಿಗಿದ್ದ ಮೇಲೆ, ಶಿಷ್ಟಾಚಾರಕ್ಕಾದರೂ ಆ ಪ್ರಸಾದರೂಪದ ಮದ್ಯವನ್ನು ತೆಗೆದುಕೊಳ್ಳ ಬೇಕಾಗಿತ್ತು. ಅದಕ್ಕಾಗಿ ನಾನು ಒಂದು ಹನಿ ಮದ್ಯವನ್ನು ಹಣೆಗೆ ಮುಟ್ಟಿಸಿಕೊಳ್ಳುತ್ತಿದ್ದೆ ಅಥವಾ ಮೂಸುತ್ತಿದ್ದೆ; ಇನ್ನೂ ಹೆಚ್ಚೆಂದರೆ ಒಂದು ತೊಟ್ಟನ್ನು ಬಾಯಿಗೆ ಚಿಮುಕಿಸಿ ಕೊಳ್ಳುತ್ತಿದ್ದೆ. ಉಳಿದುದನ್ನು ಅವರ ಪಾತ್ರೆಗಳಿಗೆ ತುಂಬುತ್ತಿದ್ದೆ. ಅವರಲ್ಲಿ ಕೆಲವರು ಅದನ್ನು ಕುಡಿದು ಕೂಡಲೇ ಭಗವನ್ನಾಮಜಪಕ್ಕೆ ತೊಡಗುತ್ತಿದ್ದರು ಅಥವಾ ಧ್ಯಾನ ಲೀನರಾಗುತ್ತಿದ್ದರು. ಆದರೆ ಇನ್ನು ಕೆಲವರು ಮಾತ್ರ ಭಗವನ್ನಾಮಜಪ ಮಾಡುವ ಮಾತಂತಿರಲಿ, ಲೋಟದ ಮೇಲೆ ಲೋಟ ಏರಿಸಿ, ಅಮಲು ತಲೆಗೇರಿ ಕುಡುಕ ರಂತೆಯೇ ವರ್ತಿಸಲಾರಂಭಿಸುತ್ತಿದ್ದರು! ಒಂದು ದಿನವಂತೂ ಅವರು ಅತಿಯಾಗಿ ಕುಡಿದು ಮತಿಗೆಟ್ಟು ವರ್ತಿಸಿದ್ದನ್ನು ಕಂಡು ಅವರಿಗೆ ಮದ್ಯ ಒದಗಿಸುವುದನ್ನೇ ಬಿಟ್ಟು ಬಿಟ್ಟೆ. ಆದರೆ ಅವರಲ್ಲಿ ರಾಜಕುಮಾರ ಎಂಬವನು ಮಾತ್ರ ಪ್ರಸಾದದ ಮದ್ಯವನ್ನು ಕುಡಿದೂ ತೂರಾಡದೆ ತನ್ಮಯತೆಯಿಂದ ಜಪ ಮಾಡುತ್ತಿದ್ದ. ಆದರೆ ಕೊನೆಕೊನೆಗೆ ಅವನಲ್ಲಿ ಹೆಸರು-ಕೀರ್ತಿಯ ಆಸೆ ಹುಟ್ಟಿಕೊಂಡಿತು. ಆದರೆ ಅವನು ಮದ್ಯವನ್ನು ಸೇವಿಸುತ್ತಿದ್ದುದು ಮಾತ್ರ ತನ್ನ ಸಾಧನೆಗೆ ಸಹಾಯವಾಗುವುದೆಂಬ ವಿಶ್ವಾಸದಿಂದಲೇ."

ಶ್ರೀರಾಮಕೃಷ್ಣರಿಗೆ ತಮ್ಮ ಸಾಧನಾಕಾಲದಲ್ಲಷ್ಟೇ ಅಲ್ಲ, ಇಡಿಯ ಜೀವಿತಾವಧಿಯಲ್ಲಿ ಎಂದೂ ಮದ್ಯವನ್ನು ಬಾಯಿಗೆ ಹಾಕಿಕೊಳ್ಳಲು ಸಾಧ್ಯವಾಗಲಿಲ್ಲ. ಆದರೆ ಈ ಮಾತಿನಲ್ಲಿ ಅಂತಹ ವಿಶೇಷವೇನಿದೆ ಎನ್ನಬಹುದು. ಏಕೆಂದರೆ, ಆಚಾರವಂತರಾದ ಕೋಟ್ಯಂತರ ಹಿಂದುಗಳು ಮದ್ಯವನ್ನು ಮೂಸಿಯೂ ನೋಡುವುದಿಲ್ಲ. ನಿಜವೇ.

---

* ಹಿಂದೆಯೇ ಹೇಳಿರುವಂತೆ, 'ಕಾರಣ' ಎಂಬುದಕ್ಕೆ ಬಂಗಾಳಿಯಲ್ಲಿ 'ಮದ್ಯ' ಎಂಬರ್ಥವೂ ಇದೆ. ಆದರೆ ಶ್ರೀರಾಮಕೃಷ್ಣರಿಗೆ ಅದು ಜಗತ್ಕಾರಣನಾದ ಭಗವಂತನನ್ನು ನೆನಪಿಸಿಕೊಡುತ್ತಿತ್ತು.

ಆದರೆ ಶ್ರೀರಾಮಕೃಷ್ಣರಿಗೆ ಹಾಗೆ ಮಾಡಲು ಸಾಧ್ಯವಾಗದಿದ್ದುದು ಮದ್ಯಪಾನವು ದೂಷಣೀಯ ಅಥವಾ ಅಸಹ್ಯವೆಂಬ ಭಾವನೆಯಿಂದಾಗಿ ಅಲ್ಲ; ಬದಲಾಗಿ ತದ್ವಿರುದ್ಧ ಎನ್ನಬಹುದಾದ ಕಾರಣಕ್ಕಾಗಿ. ಮದ್ಯವೇ ಮೊದಲಾದ ಯಾವುದೇ ಮಾದಕ ವಸ್ತುವಿನ ಹೆಸರನ್ನು ಕೇಳಿದೊಡನೆಯೇ ಅವರಲ್ಲಿ ತಾನೇತಾನಾಗಿ ಅತ್ಯುನ್ನತ ಭಗವದಾನಂದದ ಅಮಲು ಮೇಲೇರುತ್ತಿತ್ತು. ಆಗ ಅವರ ವರ್ತನೆ ಮದ್ಯಪಾನ ಮಾಡಿದವರಂತೆಯೇ ಆಗುತ್ತಿತ್ತು. ಆ ಅವಸ್ಥೆಯಲ್ಲಿ ಮತ್ತೆ ಮದ್ಯವನ್ನು ಸೋಕಲೂ ಅವರಿಂದಾಗುತ್ತಿರಲಿಲ್ಲ.

ಅಷ್ಟು ಮಾತ್ರವಲ್ಲ; ಸುಸಂಸ್ಕೃತ ಸಾಮಾಜಿಕರು ಯಾವಯಾವ ವಸ್ತು-ವಿಷಯಗಳ ಮಾತುಕತೆಯನ್ನು ಅಸಭ್ಯವೆಂದು ಪರಿಗಣಿಸಿ ಅದನ್ನು ಮದ್ಯಪಾನದಂತೆಯೇ ವರ್ಜಿಸುತ್ತಾರೆಯೋ ಅಂಥ ಶಬ್ದಗಳು-ವಿಷಯಗಳು ಶ್ರೀರಾಮಕೃಷ್ಣರಲ್ಲಿ ಪ್ರಚೋದಿಸುತ್ತಿದ್ದ ಭಾವನೆಗಳೇ ಬೇರೆ. ಇದಕ್ಕೆ ಉದಾಹರಣೆಯಾಗಿ ನಾವು ಅವರ ಜೀವನದಲ್ಲಿ ಅಸಂಖ್ಯಾತ ಘಟನೆಗಳನ್ನು ಕಾಣಬಹುದು.

ಸ್ವಾಮಿ ಶಾರದಾನಂದರು 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ವೆಂಬ ಉದ್ಗ್ರಂಥದಲ್ಲಿ ಈ ಕುರಿತಾಗಿ ಹೇಳುತ್ತಾರೆ:

"....ಈ ಸಂದರ್ಭದಲ್ಲಿ ಎಷ್ಟೋ ವಿಷಯಗಳು ನಮ್ಮ ಸ್ಮರಣೆಗೆ ಬರುತ್ತಿವೆ. ಮಾತುಕತೆಯ ನಡುವೆ 'ಮದ್ಯ', 'ಬಂಗಿ' ಮುಂತಾದ ವಸ್ತುಗಳ ಹೆಸರನ್ನು ಉಚ್ಚರಿಸಿದೊಡನೆಯೇ ಶ್ರೀರಾಮಕೃಷ್ಣರು ನಮ್ಮ ಕಣ್ಣೆದುರಿನಲ್ಲಿಯೇ ದಿವ್ಯ ಭಾವೋನ್ಮತ್ತರಾಗಿ ಸಮಾಧಿಸ್ಥಿತಿಗೂ ಏರಿದ ಪ್ರಸಂಗಗಳು ಅದೆಷ್ಟೊ ! ಸ್ತ್ರೀಶರೀರದ ಯಾವ ಗುಪ್ತಾಂಗದ ಹೆಸರನ್ನು ಕೇಳಿದೊಡನೆಯೇ ಸಭ್ಯಕಳ್ಳರಾದ ನಮ್ಮ ದುಷ್ಟಮನಸ್ಸಿನಲ್ಲಿ ಕುತ್ಸಿತವಾದ ಭೋಗಲಾಲಸೆಯೇ ಜಾಗೃತವಾಗುವುದೋ, ಅಥವಾ ಹಾಗಾಗುವುದು ಖಂಡಿತವೆಂದು ಹೆದರಿ ಸಮಾಜದ ಶಿಷ್ಟರು-ಕುಲೀನರು ಎನ್ನಿಸಿಕೊಂಡವರೂ ಕೂಡ ತಮ್ಮ ದೌರ್ಬಲ್ಯವನ್ನು ಒಪ್ಪಿಕೊಳ್ಳದೆ ಅಂತಹ ಸನ್ನಿವೇಶವನ್ನೇ ಅಶ್ಲೀಲವೆಂದು ಜರೆದು, ಕಿವಿಗೆ ಬೆರಳು ಹಾಕಿಕೊಂಡು ಪಲಾಯನ ಮಾಡುವರೋ, ಅಂತಹ ಗುಪ್ತಾಂಗದ ಹೆಸರು ಕೇಳಿದೊಡನೆಯೇ ಈ ಅದ್ಭುತ ಪರಮಹಂಸರು ಸಮಾಧಿಸ್ಥರಾದುದನ್ನು ನಾವು ಎಷ್ಟೋ ಬಾರಿ ಕಂಡಿದ್ದೇವೆ ! ಮತ್ತು ಸಮಾಧಿಸ್ಥಿತಿಯಿಂದ ಸ್ವಲ್ಪ ಕೆಳಗಿಳಿದು ಒಂದಿಷ್ಟು ಬಾಹ್ಯಪ್ರಜ್ಞೆಯುಂಟಾದರೆ, ಅವರು 'ಅಮ್ಮ, ಐವತ್ತು ಅಕ್ಷರರೂಪಿಣಿ* ನೀನೇ ಆಗಿದ್ದೀಯೆ. ಆದ್ದರಿಂದ ವೇದವೇದಾಂತಗಳಲ್ಲಿನ (ಕ, ಖ ಮುಂತಾದ) ಅಕ್ಷರಗಳೂ ಅಶ್ಲೀಲ ಪದಗಳ-ಹಾಡುಗಳ ಅಕ್ಷರಗಳೂ ನಿನ್ನವೇ ಅಲ್ಲವೆ ? ವೇದವೇದಾಂತಗಳೂ ನೀನೇ, ಅಶ್ಲೀಲ ಸಾಹಿತ್ಯವೂ ನೀನೇ !' ಎಂದುದ್ಗರಿಸಿ ಮತ್ತೊಮ್ಮೆ ಭಾವಸಮಾಧಿಗೇರಿದುದನ್ನು ನಾವು ಕಂಡಿದ್ದೇವೆ."

ಇಂತಹ ಅದ್ಭುತ-ವಿಚಿತ್ರ ವಿಚಾರವನ್ನು ಅರುಹಿದ ಬಳಿಕ ಸ್ವಾಮಿ ಶಾರದಾನಂದರು ಸಖೇದಾಶ್ಚರ್ಯದಿಂದ ಉದ್ಗರಿಸುತ್ತಾರೆ:

"ಆಹಾ ! ಈ ಅಲೌಕಿಕ ಮಾನವನ ದೃಷ್ಟಿಗೆ, ನಮ್ಮ-ನಿಮ್ಮೆಲ್ಲರ ಮನೋಬುದ್ಧಿಗಳಿಗೆ ನಿಲುಕದಂತಹ ಆ ದಿವ್ಯದೃಷ್ಟಿಗೆ, ಈ ಜಗತ್ತಿನ ಸಕಲ ಸುಶೀಲ-ಅಶ್ಲೀಲ ವಸ್ತುಗಳೂ ಕೂಡ ಎಂತಹ ಅದ್ಭುತ, ಅಪೂರ್ವ ಬೆಳಕಿನಿಂದೊಡಗೂಡಿ ಗೋಚರ

---

* ಸಂಸ್ಕೃತ ವರ್ಣಮಾಲೆಯಲ್ಲಿನ ಐವತ್ತು ಅಕ್ಷರಗಳು.

ವಾಗುತ್ತಿದ್ದಿರಬಹುದು ! ಅವರಂತೆ ಈ ಜಗತ್ತನ್ನು ನೋಡಬಲ್ಲ ಕಣ್ಣುಗಳು ಮತ್ತಾರಿಗೆ ಲಭಿಸಿಯಾವು ! ಹೇ ವಾಚಕರೇ, ಇತ್ತ ಆಲಿಸಿ; ಪರಮಹಂಸರ ಈ ಮಾತುಗಳನ್ನು ಎಚ್ಚರಿಕೆಯಿಂದಲೂ ಪೂಜ್ಯಬುದ್ಧಿಯಿಂದಲೂ ನಿಮ್ಮ ಹೃದಯದಲ್ಲಿ ರಕ್ಷಿಸಿಟ್ಟುಕೊಳ್ಳಿ. ಈ ಅದ್ಭುತ ಗುರುವಿನ ಪವಿತ್ರತೆಯು ಎಷ್ಟು ಗಹನವೂ ಗೋಪ್ಯವೂ ಆಗಿತ್ತೆಂಬುದನ್ನು ಭಾವಿಸಿನೋಡಿ !"

ಮುಂದೆ ಶ್ರೀರಾಮಕೃಷ್ಣರು ಆಗಾಗ ಭಗವದ್ಭಕ್ತರ ಮನೆಗೆ ಹೋಗಿ ಭಗವನ್ನಾಮ ಸಂಕೀರ್ತನೆ, ಭಗವದ್ವಿಚಾರವಾದ ಸಲ್ಲಾಪಗಳನ್ನು ನಡೆಸಿ ಪರಮಾನಂದ ಪಡುತ್ತಿದ್ದರು. ಆದರೆ ಪರಮಾನಂದವೆಂದರೆ ಅದು ಹೇಗಿದ್ದಿರಬಹುದು ಎಂಬ ಕಲ್ಪನೆ ಯಾರಿಗೂ ಇರಲಾರದು. ಆ ಸ್ಥಿತಿಯಲ್ಲಿ ಅವರು ಸಮಾಧಿಗೇ ಏರಿಬಿಡುತ್ತಿದ್ದರು. ಮತ್ತು, ಸಮಾಧಿಯಿಂದ ಇಳಿದಾಗಲೂ ಮೈಮೇಲೆ ಪೂರ್ಣಪ್ರಜ್ಞೆ ಇರುತ್ತಿರಲಿಲ್ಲ. ಆದ್ದರಿಂದ ಅವರು ಸ್ಥಿರವಾಗಿ ನಿಲ್ಲಲಾರದೆ ಅತ್ತಿತ್ತ ತೂರಾಡುತ್ತಿದ್ದರು; ಮಾತನಾಡಲು ಹೊರಟರೆ ನಾಲಿಗೆ ತೊದಲುತ್ತಿತ್ತು. ಇದನ್ನು ಕಂಡ ಅಪರಿಚಿತರು, 'ಎಲ್ಲೋ ಕಂಠಮಟ್ಟ ಕುಡಿದಿದ್ದಾನೆ ಈತ !' ಎಂದುಕೊಳ್ಳಬೇಕು.

ಇಂಥದೊಂದು ಘಟನೆಯನ್ನು ಇಲ್ಲಿ ನೋಡಬಹುದು. ಮುಂದೊಮ್ಮೆ ಅವರು ಕಲ್ಕತ್ತದ ಸಿಮ್ಲಾದಲ್ಲಿದ್ದ ತಮ್ಮ ಭಕ್ತ ರಾಮಚಂದ್ರ ದತ್ತನ ಮನೆಗೆ ಬಂದಿದ್ದರು. ಸಂಕೀರ್ತನೆ, ಸತ್ಕಥಾಲಾಪಗಳು ನಡೆದುವು. ಎಲ್ಲರೂ ಆನಂದಿತರಾದರು. ಈಗ ಅವರು ದಕ್ಷಿಣೇಶ್ವರಕ್ಕೆ ಹೊರಟುನಿಂತರು. ರಾಮಚಂದ್ರನ ಮನೆ ಇದ್ದುದು 'ಮಧು ರಾಯನ ಗಲ್ಲಿ' ಎಂಬಲ್ಲಿ. ಅದೊಂದು ಇಕ್ಕಟ್ಟಾದ ಗಲ್ಲಿ. ಆದ್ದರಿಂದ ಮನೆಯಿಂದ ಸ್ವಲ್ಪ ದೂರದಲ್ಲಿರುವ ದೊಡ್ಡ ರಸ್ತೆಯಲ್ಲೇ ಗಾಡಿ ನಿಲ್ಲಬೇಕಿತ್ತು. ಶ್ರೀರಾಮಕೃಷ್ಣರು ರಾಮಚಂದ್ರನ ಮನೆಯಿಂದ ಅಲ್ಲಿಯವರೆಗೆ ನಡೆದೇಬಂದರು. ಆದರೆ ಅಂದಿನ ಭಗವನ್ನಾಮ ಸಂಕೀರ್ತನೆಯಿಂದುಂಟಾದ ಭಗವದಾನಂದದಿಂದ ಉನ್ಮತ್ತರಾಗಿಬಿಟ್ಟಿದ್ದರು. ಹೀಗಾದಾಗ ಮೈಮೇಲೆ ಪ್ರಜ್ಞೆಯೆಲ್ಲಿರುತ್ತದೆ ? ನಡೆಯುವಾಗ ಇತ್ತ ಕಾಲಿಡಲು ಹೋಗಿ ಅತ್ತ ಕಾಲಿಡುತ್ತಿದ್ದರು. ಆದ್ದರಿಂದ ಇತರರ ಸಹಾಯವಿಲ್ಲದೆ ಸಾಗುವುದು ಸಾಧ್ಯವೇ ಇರಲಿಲ್ಲ. ಇಬ್ಬರು ಭಕ್ತರು ಇಬ್ಬದಿಯಲ್ಲಿ ನಿಂತು ಅವರ ಕೈಹಿಡಿದು ಮೆಲ್ಲನೆ ನಡೆಸಿಕೊಂಡು ಹೋದರು. ಹೀಗೆ ಒಂದು ತಿರುವಿನ ದಾರಿಯಾಗಿ ಬರುತ್ತಿದ್ದಾಗ ಅಲ್ಲಿ ನಿಂತಿದ್ದ ಕೆಲವು ಜನ ಈ ದೃಶ್ಯವನ್ನು ನೋಡಿದರು. ಇದು ಶ್ರೀರಾಮಕೃಷ್ಣರ ಭಾವೋನ್ಮತ್ತ ಸ್ಥಿತಿ ಎಂದು ಆ ಜನರಿಗೆ ತಿಳಿಯುವುದಾದರೂ ಹೇಗೆ ? ಅವರು ಪರಸ್ಪರ ಮಾತನಾಡಿಕೊಂಡರು: 'ಅರೆ, ಅಲ್ಲಿ ನೋಡ್ರೀ ! ಆ ಮನುಷ್ಯನಿಗೆ ಹೇಗೆ ಅಮಲೇರಿದೆ !' ಅವರು ಆ ಮಾತನ್ನು ಮೆಲುದನಿಯಲ್ಲಿ ಹೇಳಿದರೂ ಶ್ರೀರಾಮಕೃಷ್ಣರೊಂದಿಗಿದ್ದ ಭಕ್ತರ ಕಿವಿಗೆ ಇದು ಕೇಳಿಸದಿರಲಿಲ್ಲ; ಕೇಳಿ, ಅವರು ಒಬ್ಬರ ಮುಖವನ್ನೊಬ್ಬರು ನೋಡಿ, "ಹೌದು, ಹೌದು, ಅಮಲೇರಿರುವುದೇನೋ ನಿಜವೇ !" ಎಂದುಕೊಂಡು ನಕ್ಕರು.

ದಕ್ಷಿಣೇಶ್ವರಕ್ಕೆ ಆಗಮಿಸಿದ ಮಹಾ ಸಾಧಕ-ಪಂಡಿತರಲ್ಲಿ ನಾರಾಯಣ ಶಾಸ್ತ್ರಿ ಎಂಬವನೊಬ್ಬ. ಇವನು ರಾಜಾಸ್ಥಾನದವನು. ಪೂರ್ವಕಾಲದ ನೈಷ್ಠಿಕ ಬ್ರಹ್ಮಚಾರಿಗಳಂತೆ ಗುರುಕುಲದಲ್ಲಿ ವಾಸಮಾಡುತ್ತ, ಇಪ್ಪತ್ತೈದು ವರ್ಷಗಳ ಸುದೀರ್ಘಕಾಲ ನಾನಾ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಾರಂಗತನಾಗಿದ್ದ. ಆರು ದರ್ಶನಶಾಸ್ತ್ರಗಳನ್ನೂ ಆಮೂಲಾಗ್ರವಾಗಿ ಅರಿತುಕೊಳ್ಳಬೇಕೆಂಬ ಹಂಬಲ ಅವನದಾಗಿತ್ತು. ಅದಕ್ಕಾಗಿ, ಕಾಶಿಯೇ ಮೊದಲಾದ ಸ್ಥಳಗಳಲ್ಲಿ ಹಲವಾರು ಗುರುಗಳ ಆಶ್ರಯದಲ್ಲಿದ್ದು ನ್ಯಾಯಶಾಸ್ತ್ರವೊಂದನ್ನು ಬಿಟ್ಟು ತರ್ಕ, ಮೀಮಾಂಸೆ ಮೊದಲಾದ ಐದು ದರ್ಶನಗಳಲ್ಲಿ ಪ್ರವೀಣನಾದ. ಬಂಗಾಳದ ನವದ್ವೀಪವು ನ್ಯಾಯಶಾಸ್ತ್ರದ ಅಧ್ಯಯನಕ್ಕೆ ಹಿಂದಿನಿಂದಲೂ ಪ್ರಸಿದ್ಧವಾದುದು. ಅಲ್ಲಿನ ನೈಯಾಯಿಕರಿಂದ ಕ್ರಮಬದ್ಧವಾಗಿ ಕಲಿತ ಹೊರತು ತಾನೊಬ್ಬ ಪರಿಣತನೆಂದು ಪರಿಗಣಿಸಲ್ಪಡಲು ಸಾಧ್ಯವಿಲ್ಲ ಎಂದರಿತ ನಾರಾಯಣ ಶಾಸ್ತ್ರಿ ಅದಕ್ಕಾಗಿಯೇ ಬಂಗಾಳಕ್ಕೆ ಬಂದ. ಅಲ್ಲಿ ಏಳು ವರ್ಷಗಳವರೆಗೆ ಓದಿ, ನ್ಯಾಯಶಾಸ್ತ್ರದಲ್ಲಿ ಪ್ರಾವೀಣ್ಯವನ್ನು ಗಳಿಸಿ, ಸ್ವಸ್ಥಳಕ್ಕೆ ಹಿಂದಿರುಗಲು ಅನುವಾದ.

ನಾರಾಯಣ ಶಾಸ್ತ್ರಿ ಅಷ್ಟೊಂದು ಶ್ರದ್ಧೆಯಿಂದ ಶಾಸ್ತ್ರಗಳನ್ನು ಓದಿದ್ದು ಕೇವಲ ಹೆಸರು ಕೀರ್ತಿಗೋಸ್ಕರವಾಗಲಿ, ಅದು ತಂದುಕೊಡಬಹುದಾದ ಐಶ್ವರ್ಯಕ್ಕೋಸ್ಕರವಾಗಲಿ ಅಲ್ಲ. ಅವನು ಷಡ್ದರ್ಶನಗಳ ಅಧ್ಯಯನವನ್ನು ಮುಗಿಸುವ ಮೊದಲೇ ಅವನಿಗೆ ಜೈಪುರದ ಮಹಾರಾಜನಿಂದ ರಾಜಾಶ್ರಯದ ಆಹ್ವಾನ ಬಂದಿತ್ತು. ಅದಾಗಲೇ ಆತನ ಪಾಂಡಿತ್ಯ ಅಷ್ಟು ಮನ್ನಣೆ ಗಳಿಸಿತ್ತು. ಆದರೆ ಶಾಸ್ತ್ರಿ ತನ್ನ ಅಧ್ಯಯನವಿನ್ನೂ ಮುಗಿದಿಲ್ಲವೆಂಬ ಕಾರಣದಿಂದ ಆ ಆಹ್ವಾನವನ್ನು ನಿರಾಕರಿಸಿಬಿಟ್ಟ. 'ವೇದಾಂತವೇ ಮೊದಲಾದ ಶಾಸ್ತ್ರಗಳನ್ನೆಲ್ಲ ಓದಿ ಕರತಲಾಮಲಕ ಮಾಡಿಕೊಳ್ಳುವುದೇನೂ ಅಷ್ಟು ಕಷ್ಟದ ಕೆಲಸವಲ್ಲ; ಆದರೆ ಅವುಗಳ ತತ್ತ್ವಗಳನ್ನು, ರಹಸ್ಯಗಳನ್ನು ಅನುಷ್ಠಾನದ ಮೂಲಕ ಅನುಭವಕ್ಕೆ ತಂದುಕೊಳ್ಳುವುದೇ ಜೀವನದ ಧ್ಯೇಯ' ಎಂಬ ಭಾವನೆ ಅವನಲ್ಲಿ ಬೆಳೆಯುತ್ತಿತ್ತು. ಶಾಸ್ತ್ರಾಧ್ಯಯನ ಮಾಡುವಾಗಲೇ ಆಗಾಗ ಅವನು ಆಲೋಚಿಸುತ್ತಿದ್ದ: 'ನಾನು ಈ ರೀತಿ ಶಾಸ್ತ್ರಾಭ್ಯಾಸ ಮಾಡುವುದರಲ್ಲೇ ಮುಳುಗಿದ್ದರೆ, ಇನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಸಂಭವವುಂಟೆ? ಈ ಅಧ್ಯಯನ ಫಲಪ್ರದವಾಗುವುದು ಯಾವಾಗ?' ಎಂದು. ಆದರೆ ಅಧ್ಯಯನವನ್ನು ಅರ್ಧಕ್ಕೇ ನಿಲ್ಲಿಸುವುದೂ ಒಳ್ಳೆಯದಲ್ಲ. ಏಕೆಂದರೆ, ಒಂದು ಪಕ್ಷ ಸಾಧನೆಗಿಳಿದರೂ ಅದು ಸಿದ್ಧಿಸದೆಹೋದರೆ? ಇತ್ತ ಶಾಸ್ತ್ರಜ್ಞಾನವೂ ಇಲ್ಲ, ಅತ್ತ ಆತ್ಮಜ್ಞಾನವೂ ಇಲ್ಲ ಎಂಬಂತಾದರೆ?—ಹೀಗೆ ಆಲೋಚಿಸಿದ ಶಾಸ್ತ್ರಿ, ಸಾಧನೆಯ ಬಯಕೆಯನ್ನು ಒತ್ತಿಟ್ಟು ಶಾಸ್ತ್ರಾಧ್ಯಯನಕ್ಕೆ ಸಂಪೂರ್ಣ ಮನಕೊಟ್ಟ.

ಇದೀಗ ಆತ ಷಡ್ದರ್ಶನಗಳಲ್ಲೂ ಪಾರಂಗತನಾಗಿ ತನ್ನ ಬಹುಕಾಲದ ಇಚ್ಛೆಯನ್ನು ಈಡೇರಿಸಿಕೊಂಡಿದ್ದಾನೆ. ಸ್ವಸ್ಥಳಕ್ಕೆ ಹಿಂದಿರುಗಿ ಮುಂದಿನ ಜೀವನವನ್ನು ಪ್ರಾರಂಭಿಸುವ ಆಲೋಚನೆಯಲ್ಲಿದ್ದಾನೆ. ಆ ಹೊತ್ತಿಗೆ, 'ದಕ್ಷಿಣೇಶ್ವರದ ಪರಮ

ಹಂಸ'ರ ಹೆಸರು ಅವನ ಕಿವಿಗೆ ಮುಟ್ಟಿತು. ತನ್ನ ಊರಿಗೆ ಹೋದರೆ ಮತ್ತೆ ಇಲ್ಲಿಯ ವರೆಗೆ ಬರುವುದು ದುಸ್ಸಾಧ್ಯವೆಂದರಿತ ಶಾಸ್ತ್ರಿ, ಅವರನ್ನು ನೋಡಿಕೊಂಡೇ ಹೋಗೋಣ ವೆಂದು ನೇರವಾಗಿ ದಕ್ಷಿಣೇಶ್ವರಕ್ಕೆ ನಡೆದ. ಶ್ರೀರಾಮಕೃಷ್ಣರನ್ನು ಕಂಡೊಡನೆ ಅವರ ಆಕರ್ಷಣೆಯ ಜಾಲದಲ್ಲಿ ಸಿಲುಕಿಕೊಂಡುಬಿಟ್ಟ! ಅವನೆದೆಯಲ್ಲಿ ಅವರ್ಣನೀಯ ಆನಂದದ ಬುಗ್ಗೆ ತಾನೇತಾನಾಗಿ ಉಕ್ಕಿ ಹರಿಯಲಾರಂಭಿಸಿತು.

ದಕ್ಷಿಣೇಶ್ವರಕ್ಕೆ ಆಗಮಿಸಿದ ಸಾಧುಗಳಿಗೆ, ಫಕೀರರಿಗೆ, ಪಂಡಿತರಿಗೆ ಅಶನಕ್ಕೂ ವಸತಿಗೂ ವ್ಯವಸ್ಥೆಯಿತ್ತೆಂಬುದು ನಮಗೆ ತಿಳಿದೇ ಇದೆ. ನಾರಾಯಣ ಶಾಸ್ತ್ರಿಯಂತಹ ಶ್ರೇಷ್ಠ ಪಂಡಿತನಿಗೆ ಅಲ್ಲಿ ಸಮ್ಮಾನಪೂರ್ವಕ ಸ್ವಾಗತದೊಂದಿಗೆ, ಬೇಕೆಂಬಷ್ಟು ದಿನಗಳ ವರೆಗೆ ಉಳಿದುಕೊಳ್ಳಲು ಅನುಮತಿಯೂ ಸಿಕ್ಕಿದ್ದರಲ್ಲಿ ಆಶ್ಚರ್ಯವೇನಿದೆ? ದಕ್ಷಿಣೇ ಶ್ವರದ ಆ ಸ್ಥಳವೋ ದಿವ್ಯ ಮನೋಹರ! ಜೊತೆಗೆ ದೇವಮಾನವನ ಸತ್ಸಹವಾಸ! ಇನ್ನೇನು ಬೇಕು ಅವನಿಗೆ? ಕೆಲವು ದಿನಗಳವರೆಗಾದರೂ ಅಲ್ಲಿ ತಂಗಿದ್ದು ಮುಂಧು ವರಿಯುವುದೆಂದು ನಿರ್ಧರಿಸಿದ ಶಾಸ್ತ್ರಿ. ಹಾಗಲ್ಲದೆ ಇನ್ನೇನು ತಾನೆ ಮಾಡಿಯಾನು! ಏಕೆಂದರೆ, ಶ್ರೀರಾಮಕೃಷ್ಣರೊಂದಿಗೆ ಒಡನಾಡಿದಂತೆಲ್ಲ ಪ್ರೀತಿಯ ಸೆಳೆತ ಅಧಿಕವಾಗು ತ್ತಲೇ ಹೋಗುತ್ತಿತ್ತು! ಆ ಅದ್ಭುತ ವ್ಯಕ್ತಿಯ ಅಂತರ್ಯವನ್ನು ಇನ್ನಷ್ಟು ಆಳವಾಗಿ ತಿಳಿಯುವ ಆಕಾಂಕ್ಷೆ ಬಲಿಯುತ್ತಿತ್ತು! ಅಂತೆಯೇ ಅವರಿಗೂ ಈ ಪಂಡಿತನ ಸ್ನೇಹ ಬಹಳ ಇಷ್ಟವಾಯಿತು. ಏಕೆಂದರೆ ಆತ ಸರಳ ಹೃದಯಿ, ಉದಾತ್ತಚರಿತ. ಇಂತಹ ಗುಣಶಾಲಿಯನ್ನು ಅವರು ಬಹಳವಾಗಿ ಮೆಚ್ಚಿಕೊಂಡರು. ಅವನೊಂದಿಗಿರುವುದೇ ಒಂದು ಆನಂದ ಎಂದರು. ಅಷ್ಟೇ ಅಲ್ಲ, ದಿನವೂ ಬಹಳ ಹೊತ್ತು ಅವನೊಂದಿಗೆ ಭಗವದ್ವಿಷಯವಾಗಿ ಸಲ್ಲಾಪ ನಡೆಸುತ್ತ ಇರತೊಡಗಿದರು.

ಮಹಾ ಪಂಡಿತನಾದ ಶಾಸ್ತ್ರಿ ಯೋಗದ ಸಪ್ತಭೂಮಿಕೆಗಳ ವಿಷಯವಾಗಿ ವೇದಾಂತಶಾಸ್ತ್ರದಿಂದ ತಿಳಿದಿದ್ದ—ಮನಸ್ಸು ಅತ್ಯಂತ ಕೆಳಗಿರುವ ಮೂಲಾಧಾರ ಭೂಮಿಕೆಯಿಂದ ಸ್ವಾಧಿಷ್ಠಾನ, ಮಣಿಪೂರ, ಅನಾಹತವೇ ಮೊದಲಾದ ಭೂಮಿಕೆಗಳ ಮಾರ್ಗವಾಗಿ ಮೇಲೆಮೇಲೇರುತ್ತಬಂದಂತೆಲ್ಲ ಚಿತ್ರವಿಚಿತ್ರ ಅನುಭವಗಳೂ ದರ್ಶನ ಗಳೂ ಆಗುತ್ತವೆ; ಕೊನೆಗೆ ಮನಸ್ಸು ನಿರ್ವಿಕಲ್ಪಸಮಾಧಿಯಲ್ಲಿ ಲೀನವಾಗುತ್ತದೆ; ಈ ದಿವ್ಯಸ್ಥಿತಿಯಲ್ಲಿ ಮನುಷ್ಯ ಅಖಂಡ ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮವಸ್ತುವಿ ನಲ್ಲಿ ಐಕ್ಯ ಹೊಂದುತ್ತಾನೆ; ಇದರ ಮಹಾಪರಿಣಾಮವಾಗಿ ಜನ್ಮಜನ್ಮಾಂತರಗಳ ಸಂಸ್ಕಾರಗ್ರಂಥಿಗಳನ್ನು ಭೇದಿಸಿ ಮಾಯೆಯಿಂದ ಪಾರಾಗುತ್ತಾನೆ ಎಂದು. ಈ ವಿಷಯ ಗಳೆಲ್ಲ ಶಾಸ್ತ್ರಗಳ ಮೂಲಕ ಅವನಿಗೆ ಚೆನ್ನಾಗಿ ತಿಳಿದಿತ್ತು. ಹಲವಾರು ವರ್ಷಗಳವರೆಗೆ ಈ ವಿಷಯಗಳನ್ನೆಲ್ಲ ಓದಿಓದಿ ಕಂಠಪಾಠ ಮಾಡಿದ್ದ. ಆದರೆ ಇಲ್ಲಿ ಶ್ರೀರಾಮಕೃಷ್ಣರನ್ನು ನೋಡಿದಾಗ ಆ ಶಾಸ್ತ್ರವಾಕ್ಯಗಳನ್ನೆಲ್ಲ ನಿಜಕ್ಕೂ ಅನುಭವಕ್ಕೆ ತಂದುಕೊಳ್ಳಬಹುದು ಎಂಬ ಸತ್ಯವನ್ನು ಕಣ್ಣಾರೆ ಕಂಡ! 'ನಿರ್ವಿಕಲ್ಪಸಮಾಧಿ', 'ಅಪರೋಕ್ಷಾನುಭೂತಿ' ಎಂಬ ದೊಡ್ಡದೊಡ್ಡ ಪದಗಳನ್ನು ಅದೆಷ್ಟು ಬಾರಿ ಉಚ್ಚರಿಸಿದ್ದನೋ ಅವನು! ಆದರೆ ಇಲ್ಲಿ ಶ್ರೀರಾಮಕೃಷ್ಣರು ಭಗವನ್ನಾಮವನ್ನು ಒಮ್ಮೆ ಉಚ್ಚರಿಸಿದ ಮಾತ್ರದಿಂದಲೇ ಸಮಾಧಿಸ್ಥಿತಿಗೇರುವ ದೃಶ್ಯವನ್ನು ಕಂಡು ಮೂಕನಾದ. ಹಗಲೆಂದಿಲ್ಲ ರಾತ್ರಿಯೆಂದಿಲ್ಲ ; ಆ ಕಾಲವೆಂದಿಲ್ಲ ಈ ಕಾಲವೆಂದಿಲ್ಲ, ಅಕಾಲವೆಂಬುದೇ ಇಲ್ಲ! ಯಾವಾಗ ಬೇಕೆಂದರೆ ಆವಾಗ ನೇರವಾಗಿ ನಿರ್ವಿಕಲ್ಪಸಮಾಧಿಗೇರಬಲ್ಲ ಶ್ರೀರಾಮಕೃಷ್ಣರ ಅಪೂರ್ವ

ಸಾಮರ್ಥ್ಯವನ್ನು ಮನಗಂಡ. 'ನಿಜಕ್ಕೂ ನಾನು ಭಾಗ್ಯವಂತನೇ ಸರಿ. ಇಲ್ಲದಿದ್ದರೆ, ಗಡುತರವಾದ ಶಾಸ್ತ್ರಗಳ ಗೂಢಾರ್ಥಗಳನ್ನು ತಮ್ಮ ಜೀವನದಿಂದಲೇ ತೋರಿಸಿಕೊಡ ಬಲ್ಲ ಇಂತಹ ಮಹಾತ್ಮನ ಸಾನ್ನಿಧ್ಯವನ್ನು ಇಷ್ಟು ಸುಲಭವಾಗಿ ಎಲ್ಲರೂ ಪಡೆಯ ಬಲ್ಲರೆ? ನನಗೆ ದೊರಕಿದ ಈ ಸುಯೋಗವನ್ನು ನಾನು ಸಾರ್ಥಕಪಡಿಸಿಕೊಳ್ಳಲೇ ಬೇಕು. ಹೇಗಾದರೂ ಮಾಡಿ ಇವರಿಂದ ಬ್ರಹ್ಮಜ್ಞಾನದ ಕೀಲಿಕೈಯನ್ನು ಪಡೆದುಕೊಳ್ಳಲೇ ಬೇಕು. ಯಾವಾಗ ಯಮನ ಆಗಮನವಾಗುವುದೋ ಬಲ್ಲವರಾರು? ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳದೆ ಸತ್ತರೆ ಸಾರ್ಥಕ್ಯವಿಲ್ಲ. ಊರಿಗೆ ಹಿಂದಿರುಗುವ ವಿಷಯ ಒತ್ತಟ್ಟಿ ಗಿರಲಿ. ಈಗ ಇವರ ಸಹಾಯದಿಂದ ಬ್ರಹ್ಮಜ್ಞಾನವನ್ನು ಹೊಂದುವ ಪ್ರಯತ್ನದಲ್ಲಿ ನಿರತನಾಗುವುದೇ ನಿಶ್ಚಯ' ಎಂಬ ನಿರ್ಧಾರಕ್ಕೆ ಬಂದ ನಾರಾಯಣ ಶಾಸ್ತ್ರಿ.

ಶ್ರೀರಾಮಕೃಷ್ಣರ ದಿವ್ಯ ಸಹವಾಸದಲ್ಲಿ ದಿನಕಳೆದಂತೆಲ್ಲ ಶಾಸ್ತ್ರಿಯ ವೈರಾಗ್ಯ ಕಾಳ್ಗಿಚ್ಚಿನಂತೆ ಹೆಚ್ಚುತ್ತಹೋಯಿತು. 'ನನ್ನ ಪ್ರಖರ ಪಾಂಡಿತ್ಯದಿಂದ ಜನರನ್ನು ಬೆರಗು ಗೊಳಿಸಿಬಿಡುತ್ತೇನೆ', 'ಮಹಾಮಹೋಪಾಧ್ಯಾಯನಾಗಿ ಪಂಡಿತಶ್ರೇಣಿಯ ಶಿರೋ ಮಣಿ ಎನ್ನಿಸಿಕೊಳ್ಳುತ್ತೇನೆ' ಎಂಬಂಥ ಮಹತ್ವಾಕಾಂಕ್ಷೆಗಳೂ ಕೂಡ ಈಗ ತುಚ್ಛವಾಗಿ ಕಾಣಿಸಿದುವು. ಈ ಬಗೆಯ ಆಸೆಗಳೆಲ್ಲ ಬಹಳ ವೇಗವಾಗಿ ಅವನ ಮನದಿಂದ ಮಾಯ ವಾದುವು. ಅವನೀಗ ಅತ್ಯಂತ ವಿನಮ್ರ, ವಿಧೇಯ ಶಿಷ್ಯನಂತೆ ಸದಾ ಶ್ರೀರಾಮಕೃಷ್ಣರ ಸತ್ಸಹವಾಸದಲ್ಲಿ ಇರತೊಡಗಿದ. ಅವರು ಭಾವಪೂರ್ಣರಾಗಿ ನುಡಿಯುತ್ತಿದ್ದ ಅಲೌಕಿಕ ವಾಣಿಯನ್ನು ಎಚ್ಚರಿಕೆಯಿಂದ ಆಲಿಸತೊಡಗಿದ. ಮತ್ತು ಆಲೋಚಿಸಿದ:

ಆಹಾ, ಇವರಾದರೋ ಮಾನವಜನ್ಮವನ್ನು ಪಡೆದು ಏನನ್ನು ಅರಿಯಬೇಕೋ ಅದನ್ನು ಅರಿತು ನಿಶ್ಚಿಂತರಾಗಿದ್ದಾರೆ! ಮೃತ್ಯುವನ್ನೇ ಜಯಿಸಿ ನಿಂತಿದ್ದಾರೆ. ಮಹಾ ಮಾಯೆಯು ತನ್ನ ಕಾಳರಾತ್ರಿಯ ಕರಾಳ ಛಾಯೆಯನ್ನು ಇವರ ಮೇಲಿನ್ನು ಹರಡ ಲಾರಳು. ಇಂತಹ ಮಹಾಪುರುಷರು ಸಿದ್ಧಸಂಕಲ್ಪರೆಂದು ಸಾರಿದ್ದಾರೆ ಉಪನಿಷತ್ತಿನ ಋಷಿಗಳು. ಇವರ ಕೃಪೆಯನ್ನು ಪಡೆದರೆ ಮಾನವನ ಸಂಸಾರಾಸಕ್ತಿಯು ಸರಿದು ಬ್ರಹ್ಮ ಜ್ಞಾನವು ದೊರಕುವುದರಲ್ಲಿ ಸಂದೇಹವಿಲ್ಲ. ಹೀಗಿರುವಾಗ ಇವರಲ್ಲೇ ಏಕೆ ಶರಣು ಹೋಗಬಾರದು? 'ಅನ್ಯಾ ವಾಚೋ ವಿಮುಂಚಥ' ಎಂದಿದೆ ಉಪನಿಷತ್ತು. ಅಂತೆಯೇ ನಾನು ಕೂಡ ಇತರ ವಿಚಾರಗಳನ್ನೆಲ್ಲ ಬದಿಗೊತ್ತಬೇಕು. ಈ ಮಣ್ಣಿನ ದೇಹ ಯಾವಾಗ ಮತ್ತೆ ಮಣ್ಣುಪಾಲಾಗುವುದೋ ಹೇಳುವವರಾರು? ಉಪನಿಷತ್ತು ಘೋಷಿಸು ತ್ತದೆ—'ಇಹ ಚೇದವೇದೀತ್ ಅಥ ಸತ್ಯಮಸ್ತಿ, ನ ಚೇದಿಹಾವೇದೀತ್ ಮಹತೀ ವಿನಷ್ಟಿಃ' ಎಂದು. ನಾನು ಕೂಡ ಈ ಮಹಾಮಹಿಮರ ನೆರವಿನಿಂದ ಈ ಜನ್ಮದಲ್ಲೇ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಳ್ಳಬೇಕು.'

ಇದೀಗ ನಾರಾಯಣ ಶಾಸ್ತ್ರಿ ಸಾಧನಾಪರನಾಗತೊಡಗಿದ್ದಾನೆ. ಇದು ಶ್ರೀರಾಮ ಕೃಷ್ಣರ ಸತ್ಸಂಗದ ಮಹತ್ವವೋ ಅಥವಾ ಆತನ ಅಂತರಂಗದ ಸತ್ವವೋ ಎಂದು ಕೇಳಿದರೆ, ಎರಡೂ ಸೇರಿವೆ ಎಂಬುದೇ ಉತ್ತರ. ಶಾಸ್ತ್ರಿಯು ಶ್ರೀರಾಮಕೃಷ್ಣರ ಸ್ನೇಹ ಮಯ ಸಹವಾಸದಲ್ಲಿದ್ದರೂ ಕೂಡ ಅವರಿಗೆ ತನ್ನ ಮನದ ಇಂಗಿತವನ್ನಿನ್ನೂ ತಿಳಿಸಿರ ಲಿಲ್ಲ. ಏಕೆಂದರೆ, ಅವರು ತನ್ನನ್ನು ಆಧ್ಯಾತ್ಮಿಕ ಸಾಧನೆಗೆ ಅಯೋಗ್ಯನೆಂದು ಭಾವಿಸಿ ಆಶ್ರಯವನ್ನು ನಿರಾಕರಿಸಿದರೆ? ಎಂಬ ದಿಗಿಲು. ಹೀಗೇ ಉರುಳಿತು ಕಾಲ.

## "ಹೊಟ್ಟೆಗಾಗಿ ಸ್ವಧರ್ಮ ತ್ಯಾಗವೆ !" ೬

ಈ ನಡುವೆ, ಶಾಸ್ತ್ರಿಯ ಸ್ವಧರ್ಮನಿಷ್ಠೆಯನ್ನೂ ನಿಷ್ಠುರ ಸ್ವಭಾವವನ್ನೂ ಎತ್ತಿ ತೋರಿಸುವಂಥ ಘಟನೆಯೊಂದು ನಡೆಯಿತು. ದಕ್ಷಿಣೇಶ್ವರದ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲು ಬ್ರಿಟಿಷ್ ಸರಕಾರ ಪ್ರಯತ್ನಿಸುತ್ತಿದ್ದ ಸಮಯ ಅದು. ಆ ಜಾಗದಲ್ಲಿ ಮದ್ದುಗುಂಡುಗಳ ದೊಡ್ಡ ಕೋಠಿಯೊಂದನ್ನು ಕಟ್ಟುವುದು ಅದರ ಉದ್ದೇಶ. ಆದರೆ ಭೂಮಿಯನ್ನು ಬಿಟ್ಟುಕೊಡಲು ಮಥುರ ಒಪ್ಪದೆ, ಮೊಕದ್ದಮೆ ಹೂಡಿದ. ವಾದಕ್ಕೆ ಸಂಬಂಧಿಸಿದಂತೆ ಮಾತುಕತೆಗಾಗಿ ಕಲ್ಕತ್ತದಿಂದ ವಕೀಲನೊಬ್ಬನನ್ನು ಕರೆಸಲಾಯಿತು.

ಹೀಗೆ ಬಂದ ಆ ವಕೀಲನ ಹೆಸರು ಮೈಕೇಲ್ ಮಧುಸೂದನ ದತ್ತ. ವೃತ್ತಿಯಿಂದ ಈತ ವಕೀಲ; ಆದರೆ ಅದಕ್ಕಿಂತ ಹೆಚ್ಚಾಗಿ ಆ ಕಾಲದ ಅಗ್ರಗಣ್ಯ ಬಂಗಾಳೀ ಕವಿ. ಹುಟ್ಟಿನಿಂದ ಬೆಸ್ತರವನು. ಆದರೆ ಕ್ರೈಸ್ತನಾಗಿ ಮತಾಂತರಗೊಂಡಿದ್ದ. ದಕ್ಷಿಣೇಶ್ವರಕ್ಕೆ ಆಗಮಿಸಿದ ಮೈಕೇಲನಿಗೆ 'ಪರಮಹಂಸ ರಾಮಕೃಷ್ಣ'ರ ವಿಚಾರ ತಿಳಿದಾಗ ಅವರನ್ನು ಕಾಣುವ ಇಚ್ಛೆಯುದಿಸಿತು. ಅದನ್ನು ತಿಳಿದ ಮಥುರನ ಮಗ ದ್ವಾರಕಾನಾಥ ಶ್ರೀರಾಮ ಕೃಷ್ಣರಿಗೆ ಕರೆ ಕಳುಹಿಸಿದ.

ಯಾವುದೇ ಕ್ಷೇತ್ರದಲ್ಲಿ ಪ್ರಖ್ಯಾತರಾದ ವ್ಯಕ್ತಿಗಳನ್ನು ಭೇಟಿ ಮಾಡುವುದೆಂದರೆ ಶ್ರೀರಾಮಕೃಷ್ಣರಿಗೆ ಬಲು ಹಿಗ್ಗು. ಆದರೆ ಆದೇಕೋ ಏನೋ, ಅಂದು ಮಾತ್ರ, ಸುಪ್ರಸಿದ್ಧ ಬಂಗಾಳೀ ಕವಿ ಬಂದಿರುವ ವಿಷಯ ತಿಳಿದರೂ ಅವರಿಗೆ ಅವನನ್ನು ಕಾಣುವ ಉತ್ಸಾಹವುಂಟಾಗಲಿಲ್ಲ. ಆದ್ದರಿಂದ ಹೃದಯುನನ್ನು, 'ನೀ ಹೋಗಿ ನೋಡಿ ಬಾ' ಎಂದು ಕಳಿಸಿದರು. ಒಳ್ಳೇ ಗಟ್ಟಿಮುಟ್ಟಾದ ಈತನನ್ನು ಕಂಡು ಮೈಕೇಲ್, 'ಇವರೇ ಇರಬೇಕು ಪರಮಹಂಸರು' ಎಂದು ಭಾವಿಸಿ ನಮಸ್ಕರಿಸಿದ. ಆಗ ದ್ವಾರಕಾನಾಥ, "ಇವರಲ್ಲ ಪರಮಹಂಸರು" ಎಂದು ಹೇಳಿ ಶ್ರೀರಾಮಕೃಷ್ಣರನ್ನು ಕರೆತರುವಂತೆ ಹೃದಯುನನ್ನೇ ಕೇಳಿಕೊಂಡ.

ಈಗ ಶ್ರೀರಾಮಕೃಷ್ಣರು ತಾವೇ ಹೊರಟರು. ತಮ್ಮೊಂದಿಗೆ ಬರುವಂತೆ ನಾರಾಯಣ ಶಾಸ್ತ್ರಿಗೆ ಹೇಳಿಕಳಿಸಿದರು. ಚಾತುರ್ಮಾಸ್ಯದ ಅಂಗವಾಗಿ ದೇವಾಲಯದಲ್ಲಿ ಚಂಡೀ (ದೇವೀಭಾಗವತ) ಪಾರಾಯಣ ಮಾಡುತ್ತ ಕುಳಿತಿದ್ದ ಶಾಸ್ತ್ರಿ ಕೂಡಲೇ ಎದ್ದುಬಂದ. ಜೊತೆಗೆ ಹೃದಯುನಿದ್ದೇ ಇದ್ದಾನೆ. ಮೂವರೂ ಒಟ್ಟಾಗಿ ಹೋಗಿ ಮಥುರನ ಮನೆಯಲ್ಲಿ ಮೈಕೇಲನನ್ನು ಕಂಡರು.

ಮೈಕೇಲ್ ಮಧುಸೂದನ ದತ್ತನಿಗಾಗ ವಯಸ್ಸು ಸುಮಾರು ನಲವತ್ತ ನಾಲ್ಕು—ಶ್ರೀರಾಮಕೃಷ್ಣರಿಗಿಂತ ಹನ್ನೆರಡು ವರ್ಷ ಹಿರಿಯ. ಕೃಷ್ಣವರ್ಣ, ಸುಂದರ ಮೈಕಟ್ಟು, ಹೊಳೆಯುವ ಕಂಗಳು, ಅಚ್ಚುಕಟ್ಟಾದ ಗಡ್ಡಮೀಸೆ. ಮಾತಿನಲ್ಲಿ ಹಾಸ್ಯದ ಹೊಳಪು, ಮಾತಿಗೆ ತಕ್ಕ ಪ್ರತ್ಯುತ್ತರ ಕೊಡಬಲ್ಲ ಚುರುಕುತನ, ವಿನಯಪೂರ್ಣ ನಡವಳಿಕೆ—ಇವುಗಳಿಂದ ಎಲ್ಲರ ಮನ ಗೆಲ್ಲಬಲ್ಲ ವ್ಯಕ್ತಿತ್ವ ಅವನದು.

ಕೋಣೆಯೊಳಗೆ ಪ್ರವೇಶಿಸಿದ ಶ್ರೀರಾಮಕೃಷ್ಣರು ಮೈಕೇಲನಿಗೆ ತಾವೇ ಮೊದಲು ನಮಸ್ಕರಿಸಿದರು. ಮೈಕೇಲ ಮೇಲೆದ್ದು ಗೌರವಾದರದಿಂದ ಪ್ರತಿ ನಮಸ್ಕಾರ ಸಲ್ಲಿಸಿದ.

ದ್ವಾರಕಾ ಬಾಬು ಶ್ರೀರಾಮಕೃಷ್ಣರಿಗೆ ಸಾಷ್ಟಾಂಗ ಪ್ರಣಾಮ ಮಾಡಿದ.

ಶ್ರೀರಾಮಕೃಷ್ಣರು ಕುಳಿತರು. ಪರಸ್ಪರ ಪರಿಚಯವಾಯಿತು. ಬಳಿಕ ಮಧು ಸೂದನ ದತ್ತ ತನಗೇನಾದರೂ ಹಿತವಚನ ಹೇಳುವಂತೆ ಕೇಳಿಕೊಂಡ. ಶ್ರೀರಾಮ ಕೃಷ್ಣರು ಮಾತನಾಡಲು ಬಾಯ್ದೆರೆದರು; ಆದರದು ಸಾಧ್ಯವೇ ಆಗುತ್ತಿಲ್ಲ!

ಶ್ರೀರಾಮಕೃಷ್ಣರು; "ಏಕೆ ಎಂದು ಗೊತ್ತಿಲ್ಲ—ಆದರೆ ನನಗೆ ಏನು ಹೇಳಲೂ ಆಗುತ್ತಲೇ ಇಲ್ಲ. ಯಾರೋ ನನ್ನ ನಾಲಿಗೆಯನ್ನು ಒತ್ತಿಹಿಡಿದಂತಾಗುತ್ತಿದೆ!"

ಮೈಕೇಲ್ (ವಿಸ್ಮಯದಿಂದ): "ಏಕೆ? ನಾನು ಅನ್ಯಮತ ಸ್ವೀಕಾರ ಮಾಡಿದವ ನೆಂದೆ ನಿಮಗೆ ಹಾಗಾಗುತ್ತಿರುವುದು?"

ಶ್ರೀರಾಮಕೃಷ್ಣರು: "ಛೆ ಛೆ ಹಾಗಲ್ಲ. ನಂಬು ನನ್ನನ್ನು. ನನಗೇನೋ ಮಾತ ನಾಡಲು ಇಷ್ಟವೇ. ಆದರೆ ಯಾರೋ ನನ್ನ ಎದೆಯನ್ನು ಒತ್ತುತ್ತ ಮಾತನಾಡಲು ಬಿಡದಿರುವಂತಿದೆ!"

ಮೈಕೇಲನಿಗೆ ಅತೀವ ನಿರಾಶೆಯಾಯಿತು. ಅಲ್ಲದೆ ಮುಖಭಂಗವಾದಂ ತಾಯಿತು. "ನೀವೇಕೆ ನನ್ನೊಡನೆ ಮಾತನಾಡಲೊಲ್ಲಿರಿ ಎಂದು ಊಹಿಸಬಲ್ಲೆ" ಎಂದು ಅಸಮಾಧಾನದಿಂದ ನುಡಿದ.

ಶ್ರೀರಾಮಕೃಷ್ಣರು ಪ್ರತಿಮಾತನಾಡದೆ ಸುಮ್ಮನೆ ಮುಗುಳ್ನಕ್ಕರು. ಬದಲಾಗಿ, ನಾರಾಯಣ ಶಾಸ್ತ್ರಿಗೆ ಮೈಕೇಲನೊಂದಿಗೆ ಸಂಭಾಷಿಸುವಂತೆ ಹೇಳಿದರು. ಪಂಡಿತರ ಭಾಷೆ ಸಂಸ್ಕೃತವಲ್ಲವೆ? ಅಲ್ಲದೆ ಶಾಸ್ತ್ರಿ ಜನ್ಮತಃ ಬಂಗಾಳಿಯಲ್ಲವಲ್ಲ. ಆದ್ದರಿಂದ ಶಾಸ್ತ್ರಿ ಸಂಸ್ಕೃತದಲ್ಲಿ ಸಂಭಾಷಣೆ ಪ್ರಾರಂಭಿಸಿದ. ಆದರೆ ಮೈಕೇಲನಿಗೆ ಸಂಸ್ಕೃತದಲ್ಲಿ ಸಂಭಾಷಿಸಿ ಹೆಚ್ಚು ಅಭ್ಯಾಸವಿಲ್ಲದ್ದರಿಂದ ಬಂಗಾಳಿಯಲ್ಲೇ ಮಾತುಕತೆ ಮುಂದುವರಿ ಯಿತು. ಮಾತಿನ ಮಧ್ಯೆ ನಾರಾಯಣ ಶಾಸ್ತ್ರಿ ಮೈಕೇಲನನ್ನು ಪ್ರಶ್ನಿಸಿದ:

"ನಿಮಗೆ ಹಿಂದೂಧರ್ಮದಲ್ಲಿ ಶ್ರದ್ಧೆ ಇಲ್ಲವೆ?"

"ಹಾಗೇನಿಲ್ಲ; ಹಿಂದೂಧರ್ಮದಲ್ಲಿ ನನಗೆ ವಿಶ್ವಾಸವಿದ್ದೇ ಇದೆ."

"ಹಾಗಾದರೆ ನೀವು ಹಿಂದೂಧರ್ಮವನ್ನು ತ್ಯಜಿಸಿದ್ದೇಕೆ ಎಂದು ದಯವಿಟ್ಟು ವಿವರಿಸುವಿರಾ?"

ಮೈಕೇಲ್ ಇದಕ್ಕೆ ಒಂದೇ ಮಾತಿನಲ್ಲಿ ಉತ್ತರಿಸಿದ—ತನ್ನ ಹೊಟ್ಟೆಯತ್ತ ಕೈಮಾಡಿ, "ಇದಕ್ಕಾಗಿ!" ಎಂದು. ತನ್ನ ವೈಯಕ್ತಿಕ ವಿಚಾರವನ್ನೆಲ್ಲ ಅಪರಿಚಿತರ ಮುಂದೇಕೆ ವಿವರಿಸುವುದು ಎಂದೋ ಏನೋ, ಮೈಕೇಲ್ ಹಾಗೆ ಉತ್ತರಿಸಿದ. ಆದರೆ ಅಲ್ಲಿದ್ದವರಿಗೆ ಅದು ವಿನೋದಕ್ಕಾಗಿ ಆಡಿದ ಮಾತಿನಂತೆ ಕಾಣದೆ, ವಾಸ್ತವ ವೆಂಬಂತೆಯೇ ತೋರಿತು. ಶ್ರೀರಾಮಕೃಷ್ಣರಿಗೆ ಇದನ್ನು ಕೇಳಿ ಏನೆನ್ನಿಸಿತೋ ಏನೋ; ಆದರೆ ಕಟ್ಟಾ ವೈದಿಕನಾದ ನಾರಾಯಣ ಶಾಸ್ತ್ರಿಗೆ ಉಂಟಾದ ಜುಗುಪ್ಸೆ ಅಷ್ಟಿಷ್ಟಲ್ಲ.

"ಈ ಹೊಟ್ಟೆಗಾಗಿ ತನ್ನ ಸ್ವಧರ್ಮವನ್ನೇ ತ್ಯಜಿಸುವಂಥವರಿಗೆ ನಾನಿನ್ನೇನು ಹೇಳಲಿ?" ಎಂದು ತನ್ನೊಳಗಿನ ಖಾರವನ್ನೆಲ್ಲ ತೋಡಿಕೊಂಡ. ಹೀಗೆಂದ ಶಾಸ್ತ್ರಿ ಅಲ್ಲಿಂದ ಹೊರಡುವವರೆಗೂ ಮತ್ತೆ ಒಂದು ಮಾತನ್ನೂ ಆಡಲೇ ಇಲ್ಲ!

ಆದರೆ ವಾತಾವರಣ ಕಹಿಯಾದದ್ದನ್ನು ಕಂಡ ಶ್ರೀರಾಮಕೃಷ್ಣರು ಮೈಕೇಲನ ಬಗ್ಗೆ ಸಹಾನುಭೂತಿ ತಾಳಿದರು. ಇಷ್ಟು ಹೊತ್ತೂ ಅವರನ್ನು ಮಾತನಾಡದಂತೆ ತಡೆಯುತ್ತಿದ್ದ ಒತ್ತಡ ದೂರವಾದಂತೆ ತೋರಿತು. ತಮ್ಮ ಮಧುಮಯ ಕಂಠದಿಂದ

ರಾಮಪ್ರಸಾದ, ಕಮಲಾಕಾಂತರ ಹಾಡುಗಳನ್ನು ಹಾಡತೊಡಗಿದರು.

'ಈ ನಾಲ್ಕು ದಿನದ ಸಂಸಾರದಲ್ಲಿ ಸಾರವಾದ ವಸ್ತುವೊಂದಿದ್ದರೆ ಅದು ಭಗವದ್ಭಕ್ತಿ ಮಾತ್ರವೇ' ಎಂಬುದು ಆ ಹಾಡುಗಳ ಸಾರಾಂಶವಾಗಿತ್ತು. ಮತ್ತು ಅದುವೇ, ಅವರು ಮಧುಸೂದನನಿಗೆ ನೀಡಿದ ಬೋಧನೆಯೂ ಆಗಿತ್ತು. ಕಾರಣಾಂತರಗಳಿಂದ ಮತಾಂತರ ಹೊಂದಿದ್ದರೂ ಅಂತರಂಗದಲ್ಲಿ ಹಿಂದುವೇ ಆಗಿದ್ದ ಮಧುಸೂದನನ ಹೃನ್ಮನಗಳಿಗೆ ಇದರಿಂದ ಮಹದಾನಂದ ದೊರೆಯಿತು. ಶ್ರೀರಾಮಕೃಷ್ಣರ ಸಹಾನುಭೂತಿಪರ ವ್ಯವಹಾರವನ್ನು ನೋಡಿ, ಅವರಿಗೆ ತನ್ನ ಬಗ್ಗೆಯೇನೂ ಅಸಮಾಧಾನವಿಲ್ಲ ಎಂದು ತಿಳಿದ.

ಈಗ ಒಂದು ರೀತಿಯ ವಿಷಾದದ ದನಿಯಲ್ಲಿ ಅವನು ನುಡಿದ:

"ದೇವರು ನನ್ನನ್ನು ಈ ರೀತಿ ಇರಿಸಿದ್ದಾನೆ. ನಾನೇನು ಮಾಡಲಿ?"

ಇದಕ್ಕೆ ಯಾರೂ ಬದಲು ಹೇಳಲಿಲ್ಲ.

ಈಗ ಆತ ನಾರಾಯಣ ಶಾಸ್ತ್ರಿಯನ್ನುದ್ದೇಶಿಸಿ ಕೇಳಿದ:

"ದಯವಿಟ್ಟು ಒಮ್ಮೆ ನನ್ನ ಮನೆಗೆ ಬರಲು ಸಾಧ್ಯವೆ?"

ಶಾಸ್ತ್ರಿ ಕಡ್ಡಿ ಮುರಿದಂತೆ ಹೇಳಿದ:

"ನಾನೆಂದೂ ಯಾರ ಮನೆಗೂ ಹೋದವನಲ್ಲ. ನನಗೆ ಯಾರಿಂದಲೂ ಏನೂ ಆಗಬೇಕಾದ್ದಿಲ್ಲ. ಆದ್ದರಿಂದ ನಾನು ಬರುವುದಿಲ್ಲ."

ಶ್ರೀರಾಮಕೃಷ್ಣರು ಈಗ ಅಲ್ಲಿಂದ ಹೊರಟರು. ಸಮಾಧಾನದ ಹೃದಯದಿಂದ ಮೈಕೇಲ್ ಅವರನ್ನು ಬೀಳ್ಕೊಂಡ. ಶ್ರೀರಾಮಕೃಷ್ಣರ ಭೇಟಿ ಅವನಿಗೊಂದು ಮರೆಯಲಾಗದ ಅನುಭವ.

ಆದರೆ ಸ್ವಧರ್ಮನಿಷ್ಠನಾದ ನಾರಾಯಣ ಶಾಸ್ತ್ರಿಯ ಮನದಲ್ಲೆದ್ದ ಜುಗುಪ್ಸೆ ಇನ್ನೂ ಮಾಯವಾಗಿರಲಿಲ್ಲ. ಶ್ರೀರಾಮಕೃಷ್ಣರ ಕೋಣೆಯ ಪೂರ್ವದಿಕ್ಕಿನಲ್ಲಿರುವ ಕೈಸಾಲೆಯ ಗೋಡೆಯ ಮೇಲೆ ಇದ್ದಿಲಿನಿಂದ ದೊಡ್ಡದೊಡ್ಡ ಬಂಗಾಳೀ ಅಕ್ಷರಗಳಲ್ಲಿ ಬರೆದ:

"ಹೊಟ್ಟೆಪಾಡಿಗಾಗಿ ಸ್ವಧರ್ಮವನ್ನು ತೊರೆದು ಪರಧರ್ಮವನ್ನು ಅವಲಂಬಿಸುವುದು ಹೀನಬುದ್ಧಿಯೇ ಸರಿ."

ಬಹಳ ವರ್ಷಗಳವರೆಗೆ ಈ ಬರಹ ಹಾಗೆಯೇ ಇತ್ತು. ಶ್ರೀರಾಮಕೃಷ್ಣರ ಬಳಿಗೆ ಬರುವವರೆಲ್ಲ ಈ ವಾಕ್ಯವನ್ನು ಓದಿದರು. ಹೀಗೆ ಬರೆದಿರುವುದಕ್ಕೆ ಕಾರಣವೇನಿರಬಹುದು ಎಂಬ ಹೊಸಬರ ಕುತೂಹಲಕ್ಕೆ, ಆ ಘಟನೆಯನ್ನು ಬಣ್ಣಿಸುವುದು ಅಲ್ಲಿರುವವರ ಕೆಲಸವಾಯಿತು.

* * *

ಬಹಳ ದಿನಗಳಿಂದ ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಸಹವಾಸದಲ್ಲಿದ್ದ ಶಾಸ್ತ್ರಿಯು ಅವರ ಬಳಿ ತನ್ನ ಮನದ ಇಂಗಿತವನ್ನು ಅರುಹಲು ಇನ್ನೂ ಅವಕಾಶ ಹುಡುಕುವುದರಲ್ಲೇ ಇದ್ದ. ಕೊನೆಗೊಂದು ದಿನ ಶ್ರೀರಾಮಕೃಷ್ಣರು ಏಕಾಂಗಿಯಾಗಿರುವುದನ್ನು ಕಂಡ. ಈ ಸುಯೋಗವನ್ನು ಕಳೆದುಕೊಳ್ಳಬಾರದೆಂದು ನೇರವಾಗಿ ಅವರ ಬಳಿಗೆ ಧಾವಿಸಿದ. ಕೈಮುಗಿದುಕೊಂಡು ಅತ್ಯಂತ ವಿನಯದಿಂದ ಪ್ರಾರ್ಥಿಸಿಕೊಂಡ:

"ಸ್ವಾಮಿ, ನಿಮ್ಮಿಂದ ಸಂನ್ಯಾಸದೀಕ್ಷೆ ಪಡೆದು ಜನ್ಮ ಸಾರ್ಥಕಪಡಿಸಿಕೊಳ್ಳ

ಬೇಕೆಂದು ಬಹು ಹಿಂದೆಯೇ ನಿಶ್ಚಯಿಸಿಬಿಟ್ಟೆ. ಆದರೆ ಹೃದಯಬಿಚ್ಚಿ ಹೇಳಲು ಸರಿಯಾದ ಅವಕಾಶಕ್ಕಾಗಿ ಕಾಯುತ್ತಿದ್ದೆ. ಇಷ್ಟು ದಿನಗಳ ಮೇಲೆ ದೊರಕಿದೆ ಆ ಸುಯೋಗ. ಸ್ವಾಮಿ, ಕೃಪೆಮಾಡಿ ನೀವು ನನಗೆ ಸಂನ್ಯಾಸದೀಕ್ಷೆಯನ್ನು ಅನುಗ್ರಹಿಸಲೇ ಬೇಕು."

ಶಾಸ್ತ್ರಿಯ ವಿನಯ ಹಾಗೂ ಉತ್ಕಟೇಚ್ಛೆಯನ್ನು ಕಂಡ ಶ್ರೀರಾಮಕೃಷ್ಣರು ಸಂತೋಷದಿಂದ ಸಮ್ಮತಿಸಿ, ಒಂದು ಶುಭದಿನದಂದು ಅವನಿಗೆ ಸಂನ್ಯಾಸದೀಕ್ಷೆಯನ್ನು ನೀಡಿದರು. ಶಾಸ್ತ್ರಿಗೀಗ ಸಾಕ್ಷಾತ್ಕಾರವೇ ದೊರಕಿದಷ್ಟು ಆನಂದ. ಈಗ ಆತ ಹಿಮಾಲಯದತ್ತ ತೆರಳಿ, ಅಲ್ಲಿ ಬ್ರಹ್ಮಾನುಸಂಧಾನದಲ್ಲಿ ನಿರತನಾಗಿರಲು ತವಕಿಸಿದ. ಹೃಷೀಕೇಶದಲ್ಲಿರುವ ವಸಿಷ್ಠಾಶ್ರಮದಲ್ಲಿ ನೆಲಸಿ ಬ್ರಹ್ಮಸಾಕ್ಷಾತ್ಕಾರದ ಸಾಧನೆಯಲ್ಲಿ ಮುಳುಗುವೆನೆಂದು ಸಂಕಲ್ಪಿಸಿದ. ಶ್ರೀರಾಮಕೃಷ್ಣರ ಬಳಿಗೆ ಬಂದು ಸಾಷ್ಟಾಂಗ ಪ್ರಣಾಮ ಸಲ್ಲಿಸಿ. ತನ್ನ ಅಂತರಂಗದ ಅಭೀಪ್ಸೆಯನ್ನು ತಿಳಿಸಿ, ಅಶ್ರುಪೂರ್ಣನಯನನಾಗಿ ಆಶೀರ್ವಾದ ಬೇಡಿದ.

ಶ್ರೀರಾಮಕೃಷ್ಣರ ಶುಭಾಶೀರ್ವಾದವನ್ನು ಪಡೆದುಕೊಂಡು ಶಾಸ್ತ್ರಿ ದಕ್ಷಿಣೇಶ್ವರದಿಂದ ಹೊರಟುಹೋದ. ಆಮೇಲೆ ಅವನ ಸುದ್ದಿಯೇ ಇಲ್ಲ. ಕೆಲವರು ಹೇಳುತ್ತಾರೆ, ಅವನು ವಸಿಷ್ಠಾಶ್ರಮದಲ್ಲಿದ್ದುಕೊಂಡು ಕಠೋರ ತಪಸ್ಸನ್ನಾಚರಿಸುತ್ತಿರಲಾಗಿ ದೇಹಾರೋಗ್ಯ ಕೆಟ್ಟು ಕೊನೆಯುಸಿರೆಳೆದ ಎಂದು.

## ಪಂಡಿತೋತ್ತಮ ಪದ್ಮಲೋಚನ ೭

ವಿವಿಧ ಸಂಪ್ರದಾಯದ ಸಾಧುಗಳು-ಸಾಧಕರು ದಕ್ಷಿಣೇಶ್ವರಕ್ಕೆ ಬಂದಾಗ ಅವರೊಡನೆ ಆಧ್ಯಾತ್ಮಿಕ ತತ್ತ್ವ ಹಾಗೂ ಸಾಧನೆಗಳಿಗೆ ಸಂಬಂಧಿಸಿದಂತೆ ಸಂಭಾಷಿಸುವುದು, ಅವರ ಅನುಭವಗಳೊಡನೆ ತಮ್ಮ ಅನುಭವಗಳನ್ನು ಹಂಚಿಕೊಳ್ಳುವುದು, ಬೇಕೆನಿಸಿದರೆ, ಆ ಸಾಧಕರಿಗೆ ಆಧ್ಯಾತ್ಮಿಕ ನೆರವು ನೀಡುವುದು—ಇವು ಶ್ರೀರಾಮಕೃಷ್ಣರ ಅಚ್ಚುಮೆಚ್ಚಿನ ಹವ್ಯಾಸ. ಮಾತ್ರವಲ್ಲ, ಕಲ್ಕತ್ತದ ಸನಿಹದಲ್ಲಿರುವ ಸಾಧುಗಳನ್ನು-ಸಾಧಕರನ್ನು ನೋಡಿಕೊಂಡು ಬರುವುದೆಂದರೆ ಅವರಿಗೆ ಕಲ್ಲುಸಕ್ಕರೆ ಸವಿದಂತೆ. ಇಂತಹ ಒಂದು ಸ್ಥಳದಲ್ಲಿ ಇಂತಹ ಒಬ್ಬ ಶ್ರೇಷ್ಠ ಸಾಧಕನಿದ್ದಾನೆ ಎಂಬ ಸುದ್ದಿ ಅವರ ಕಿವಿಗೆ ಬಿದ್ದರಾಯಿತು, ಅವನು ಯಾವ ಸಂಪ್ರದಾಯದವನೇ ಆಗಿರಲಿ—ಅವನನ್ನು ಕಾಣಲು ಇವರು ಎದ್ದಾಯಿತು! ಆ ಸಾಧಕ ತಮ್ಮನ್ನು ಆಹ್ವಾನಿಸಬೇಕೆಂಬ ನಿಯಮವೇನೂ ಇಲ್ಲ! ಅಥವಾ, ತಾವು ಅವನಲ್ಲಿಗೆ ಬರುತ್ತಿರುವ ವಿಷಯವನ್ನು ಮೊದಲಾಗಿಯೇ ತಿಳಿಸಬೇಕೆಂಬ ಯೋಚನೆಯೂ ಇಲ್ಲ! ಅವನನ್ನು ನೋಡಬೇಕೆಂಬ ವಿಚಾರ ಮನಸ್ಸಿಗೆ ಬಂದೊಡನೆ, ಗಾಡಿ ಮಾಡಿಕೊಂಡು ಹೊರಟೇಬಿಟ್ಟರು! 'ಆಯಸ್ಸು ಅಲ್ಪ, ಮಾಡಬೇಕೆನಿಸಿದ್ದನ್ನು ಕೂಡಲೇ ಮಾಡಿಮುಗಿಸುವುದು ಒಳ್ಳೆಯದು' ಎಂಬುದು ಅವರ ಮನೋಭಾವ. ತಾವು ಆ ರೀತಿ ಏಕಾಏಕಿ ಹೋದರೆ, 'ಏನಪ್ಪಾ, ಇವರು ಯಾರೆಂದರೆ ಅವರಲ್ಲಿಗೆ ನಡೆದುಬಿಡುತ್ತಾರಲ್ಲ!' ಎಂದು ಜನ ಆಡಿಕೊಳ್ಳಲಿಕ್ಕಿಲ್ಲವೆ? ಅಥವಾ ಆ ಸಾಧಕರಾದರೂ ತಮ್ಮ ಆಕಸ್ಮಿಕ ಆಗಮನದಿಂದ ಬೇಸರಿಸಿಕೊಳ್ಳದಿರರೆ? ಅವರು ತಮ್ಮನ್ನು ಸ್ವಾಗತಿಸಿ ಸತ್ಕರಿಸಿದರಂತೂ ಸರಿಯೇ ಸರಿ; ಆದರೆ ಒಂದು ವೇಳೆ ತಿರಸ್ಕರಿಸಿಬಿಟ್ಟರೆ? ಎಂಬ ಈ ಆಲೋಚನೆಗಳೆಲ್ಲ ಶ್ರೀರಾಮಕೃಷ್ಣರ ಮನದಲ್ಲಿ ಏಳುವಂತೆಯೇ ಇಲ್ಲ. ಅಷ್ಟೇ ಅಲ್ಲ; ಇತರರಲ್ಲಿ ಉತ್ತಮ ಗುಣಗಳು ಕಂಡುಬಂದರೆ ಅವುಗಳನ್ನು ಮನಸಾರೆ ಮೆಚ್ಚಿ ಅವರಿಗೆ ಸಲ್ಲಬೇಕಾದ ಗೌರವವನ್ನು ತೋರಿಸುವುದು ಶ್ರೀರಾಮಕೃಷ್ಣರ ಸ್ವಭಾವ. ಅವರು ಹೇಳುತ್ತಿದ್ದರು:

"ಸಮಾಜದ ಸಂಭಾವಿತ ವ್ಯಕ್ತಿಗಳಿಗೆ ಸೂಕ್ತ ಗೌರವ ಸಲ್ಲಿಸದಿದ್ದರೆ ಭಗವಂತ ಮುನಿಸಿಕೊಳ್ಳುತ್ತಾನೆ. ಅವರು ಗೌರವಾನ್ವಿತ ಸ್ಥಾನಮಾನಕ್ಕೇರಿದ್ದು ಆತನ ಕೃಪೆಯಿಂದಲೇ. ಆದ್ದರಿಂದ ಅವರನ್ನು ಕಡೆಗಣಿಸಿದರೆ ಭಗವಂತನನ್ನೇ ಅವಮಾನಿಸಿದಂತೆ."

ಆದಕ್ಕಾಗಿಯೇ ಶ್ರೀರಾಮಕೃಷ್ಣರು ಉತ್ತಮ ಸಾಧುಗಳ, ಸಾಧಕರ ಬಳಿಗೆ ತಾವಾಗಿಯೇ ಹೋಗುತ್ತಿದ್ದರು, ಕೈಮುಗಿಯುತ್ತಿದ್ದರು. ಅವರೆಲ್ಲ ಆಧ್ಯಾತ್ಮಿಕ ಪಥದಲ್ಲಿ ಎಷ್ಟು ದೂರ ಮುಂದುವರಿದಿದ್ದಾರೆ ಎಂಬುದನ್ನು ಕಂಡು, ಸ್ವಲ್ಪ ಹೊತ್ತು ಭಗವತ್ಕಥಾಲಾಪ ನಡೆಸಿ ಹಿಂದಿರುಗುತ್ತಿದ್ದರು. ಆಗಲೇ ಅವರ ಮನಸ್ಸಿಗೆ ಸಮಾಧಾನ.

ಸಹಜವಾಗಿಯೇ, ಪ್ರಕಾಂಡ ಪಂಡಿತನಾದ ಪದ್ಮಲೋಚನನ ವಿಷಯವೂ ಅವರ ಕಿವಿಗೆ ಬಿತ್ತು. ಕಲ್ಕತ್ತದ ಉತ್ತರ ದಿಸೆಯಲ್ಲಿರುವ ಬರ್ದ್ವಾನ್ (ವರ್ಧಮಾನ) ಪ್ರದೇಶದವನು ಈ ಪಂಡಿತ. ಬಂಗಾಳವು ತಂತ್ರಶಾಸ್ತ್ರಕ್ಕೂ ನ್ಯಾಯಶಾಸ್ತ್ರಕ್ಕೂ ಪ್ರಸಿದ್ಧ; ಆದರೆ ವೇದಾಂತಶಾಸ್ತ್ರ ಅಲ್ಲಿ ವಿರಳ. ಪದ್ಮಲೋಚನನಿಗೆ ಬಂಗಾಳದಲ್ಲಿ ನ್ಯಾಯಶಾಸ್ತ್ರ

ದಲ್ಲೇನೋ ಯೋಗ್ಯ ಶಿಕ್ಷಣ ದೊರಕಿತು. ಆದರೆ ಅವನಿಗೆ ವೇದಾಂತದಲ್ಲಿ ವಿಶೇಷ ಆಸಕ್ತಿ. ಅದನ್ನು ಅಭ್ಯಸಿಸಲು ಅವನು ಕಾಶಿಗೇ ಹೋಗಬೇಕಾಯಿತು. ಅಲ್ಲಿ ಬಹುಕಾಲ ಗುರುಕುಲವಾಸ ಮಾಡಿ ವೇದಾಂತಶಾಸ್ತ್ರದಲ್ಲಿ ಪ್ರವೀಣನಾಗಿ ತನ್ನ ನಾಡಿಗೆ ಹಿಂದಿರುಗಿದ. ಅಂದಿನ ಕಾಲದಲ್ಲಿ ನಿಪುಣರಿಗೆ ರಾಜಾಶ್ರಯ ಸ್ವತಸ್ಸಿದ್ಧ. ವರ್ಧಮಾನದ ಮಹಾರಾಜ ಪದ್ಮಲೋಚನನನ್ನು ಆಸ್ಥಾನವಿದ್ವಾಂಸರ ಶ್ರೇಣಿಗೆ ಸೇರಿಸಿಕೊಂಡ. ನಿಜವಾದ ಪ್ರತಿಭೆ ಎಲ್ಲಿದ್ದರೆ ಅಲ್ಲೇ ಪ್ರಕಾಶಿಸುತ್ತಿರುತ್ತದೆ. ಇನ್ನು ರಾಜಾಶ್ರಯದಂಥ ಅವಕಾಶ ದೊರೆತರೆ ಕೇಳಬೇಕೆ ? ಪದ್ಮಲೋಚನನ ಪ್ರತಿಭೆಯನ್ನು ಮನಗಂಡ ಮಹಾರಾಜ ಅವನನ್ನು ಪ್ರಧಾನ ಆಸ್ಥಾನವಿದ್ವಾಂಸನನ್ನಾಗಿ ನೇಮಿಸಿದ. ಹೀಗೆ ಅವನ ಕೀರ್ತಿ ಬಂಗಾಳದಲ್ಲೆಲ್ಲ ವ್ಯಾಪಿಸತೊಡಗಿತು. ಅವನು 'ಪಂಡಿತ ಪದ್ಮಲೋಚನ ತರ್ಕಾಲಂಕಾರ ಭಟ್ಟಾಚಾರ್ಯ'ನೆಂದು ಖ್ಯಾತನಾದ. ಆದರೆ ಪದ್ಮಲೋಚನನ ಖ್ಯಾತಿಗೆ ಕಾರಣ ಕೇವಲ ಅವನ ಪಾಂಡಿತ್ಯವಾಗಿರಲಿಲ್ಲ. ಅವನ ಜೀವನ ಸದಾಚಾರಸಂಪನ್ನವಾಗಿತ್ತು; ಇಷ್ಟದೇವತೆಯಲ್ಲಿ ಆತನಿಗೆ ನಿಷ್ಠಾಯುತ ಭಕ್ತಿಯಿತ್ತು. ತಪೋಮಯ ಜೀವನ ಅವನದಾಗಿತ್ತು. ಔದಾರ್ಯ, ಅನಾಸಕ್ತಿ ಅವನ ಸ್ವಭಾವವೇ ಆಗಿತ್ತು. ಈ ಜಗತ್ತಿನಲ್ಲಿ ಅಪಾರ ಪಾಂಡಿತ್ಯವುಳ್ಳವರೂ ಇದ್ದಾರೆ; ಅಗಾಧ ಭಕ್ತಿಯುಳ್ಳವರೂ ಇದ್ದಾರೆ. ಆದರೆ ಒಬ್ಬನೇ ವ್ಯಕ್ತಿಯಲ್ಲಿ ಎರಡೂ ಸೇರಿದಾಗ ಅಂಥವನ ವ್ಯಕ್ತಿತ್ವ ಸುಗಂಧಪೂರ್ಣ ಸುವರ್ಣಪುಷ್ಪವಲ್ಲವೆ ? ಆದ್ದರಿಂದ ಅಂತಹ ವ್ಯಕ್ತಿಯ ಕಡೆಗೇ ಜನರ ಒಲವು ಅಧಿಕ. ಪಾಂಡಿತ್ಯದೊಂದಿಗೆ ಪರಮಾರ್ಥವನ್ನು ಸೇರಿಸಿಕೊಂಡ ಪದ್ಮಲೋಚನನ ಕೀರ್ತಿ ಕರ್ಣಾಕರ್ಣಿಯಾಗಿ ಸಂಚರಿಸುತ್ತ ಶ್ರೀರಾಮಕೃಷ್ಣರಿಗೂ ತಲುಪಿತು. ಸರಿ; ಅವನನ್ನು ನೋಡಿ ಅವನೊಡನೆ ಮಾತನಾಡಿಕೊಂಡು ಬರುವ ಇಚ್ಛೆಯಾಯಿತು ಅವರಿಗೆ. ಮಥುರ ಬಾಬುವಿನ ಬಳಿ ತಮ್ಮ ಇಚ್ಛೆಯನ್ನು ತಿಳಿಸಿದರು. ಅವನೂ ಕೂಡಲೇ ಒಪ್ಪಿದ, ಪ್ರಯಾಣಕ್ಕೆ ಒಂದು ದಿನವನ್ನು ಗೊತ್ತುಮಾಡಿದ. ಆದರೆ ಅಷ್ಟರಲ್ಲಿ ಅವನೇ ಒಂದು ದಿನ ಬಂದು ಶ್ರೀರಾಮಕೃಷ್ಣರಿಗೆ ಸುದ್ದಿ ಕೊಟ್ಟ:

"ಅಪ್ಪಾ, ಪಂಡಿತ ಪದ್ಮಲೋಚನರು ಕಲ್ಕತ್ತಕ್ಕೆ ಬಂದಿದ್ದಾರಂತೆ. ಅವರಿಗೆ ಕಾಯಿಲೆಯಾದ್ದರಿಂದ ಹವಾ ಬದಲಾವಣೆಗಾಗಿ ಅವರನ್ನು ಇಲ್ಲಿಗೆ ಕರೆತಂದು ವಿಮಲ ಚರಣ ವಿಶ್ವಾಸರ ಉದ್ಯಾನಗೃಹದಲ್ಲಿ ಇರಿಸಲಾಗಿದೆ. ಅಲ್ಲಿ ಅವರಿಗೆ ಗಂಗಾಚರಣ ಸೇನರಿಂದ ಚಿಕಿತ್ಸೆ ನಡೆಯುತ್ತಿದೆ."

ಶ್ರೀರಾಮಕೃಷ್ಣರು ಕೂಡಲೆ ಹೃದಯರಾಮನನ್ನು ಕರೆದು ಪದ್ಮಲೋಚನ ಎಂಥವನೆಂಬುದನ್ನು ತಿಳಿದುಬರುವಂತೆ ಕಲ್ಕತ್ತಕ್ಕೆ ಕಳುಹಿಸಿದರು. ಹೃದಯರಾಮ ಪಂಡಿತನನ್ನು ನೋಡಿಬಂದು ವರದಿ ಕೊಟ್ಟ:

"ಮಾವ, ಪಂಡಿತರನ್ನು ನೋಡಿದೆ. ಅವರು ಅಹಂಕಾರಿಗಳಲ್ಲ; ಬದಲಾಗಿ ಬಹಳ ಸೌಜನ್ಯವುಳ್ಳವರು. 'ದಕ್ಷಿಣೇಶ್ವರದ ಪರಮಹಂಸರನ್ನು ದರ್ಶಿಸಲು ನನಗೂ ಬಹಳ ಇಚ್ಛೆಯಾಗುತ್ತದೆ' ಎಂದರು., ನಾನು ನಿನ್ನ ಕಡೆಯವನೆಂದು ತಿಳಿದು ನನ್ನನ್ನು ತುಂಬ ಸನ್ಮಾನಿಸಿದರು."

ಮರುದಿನವೇ ಶ್ರೀರಾಮಕೃಷ್ಣರು ಹೃದಯನನ್ನೊಡಗೂಡಿಕೊಂಡು ಪಂಡಿತನನ್ನು ನೋಡಲು ಹೊರಟೇಬಿಟ್ಟರು. ದೋಣಿಯಲ್ಲಿ ಪ್ರಯಾಣ. ದಕ್ಷಿಣೇಶ್ವರದಿಂದ ಉತ್ತರಕ್ಕೆ ಕೆಲವು ಮೈಲಿ ದೂರದಲ್ಲಿರುವ ಆರಿಯದಾಹ ಎಂಬಲ್ಲಿ ಆತ ಇದ್ದುದು.

ಅವನೊಂದಿಗೆ ಹಲವು ಶಿಷ್ಯರೂ ಇದ್ದರು. ಶ್ರೀರಾಮಕೃಷ್ಣರು ಉದ್ಯಾನಗೃಹದ ಬಳಿಗೆ ಬಂದರು. ಒಳಗಿರುವವರಿಗೆ ತಾವು ಆಗಮಿಸಿರುವ ವಿಷಯವನ್ನು ಔಪಚಾರಿಕವಾಗಿ ಯಾರಾದರೂ ತಿಳಿಸಬೇಕು ಎನ್ನುವುದು ಅವರಿಗೆ ಹೊಳೆಯದೆ, ನೇರವಾಗಿ ಒಳನಡೆದರು. ಪದ್ಮಲೋಚನ ಹಾಸಿಗೆಯ ಮೇಲೆ ಒರಗಿಕೊಂಡಿದ್ದ. ಕಣ್ತೆರೆದು ನೋಡಿದರೆ ಎದುರಿಗೆ ಪರಮಹಂಸರು ! ವಿಸ್ಮಯಮೂಕನಾಗಿ ಎದ್ದು ನಿಂತ. ಶ್ರೀರಾಮಕೃಷ್ಣರ ದಿವ್ಯ ದರ್ಶನ ದಿಂದ ಅವನಿಗಾದ ಆನಂದವನ್ನು ಅಳೆಯಬಲ್ಲವರಾರು ? ಆ ಆನಂದ ಅವನ ಮುಖ ದಲ್ಲಿ ಉಕ್ಕಿ ಹರಿಯುತ್ತಿತ್ತು! ಅವನು ಅವರಲ್ಲಿ ಅದೇನನ್ನು ಕಂಡನೋ! ಅಥವಾ ಅವರು ಅವನಿಗೆ ಅದೇನನ್ನು ತೋರಿಸಿದರೊ! ಅಚ್ಚರಿಯಿಂದ ಉದ್ಗರಿಸಿದ:

"ಆಹ್, ಇದೇನು ಅಪೂರ್ವ ದೃಶ್ಯ !—ಹೊರನೋಟಕ್ಕೆ ಮಾನವಾಕಾರ, ಒಳಗೆ ಸಾಕ್ಷಾತ್ ತ್ರಿಭುವನಸುಂದರಿ ಕಾಳೀಮಾತೆ !"

ಪದ್ಮಲೋಚನ ಭಕ್ತಿಯಿಂದ ಅಂಜಲಿಬದ್ಧನಾಗಿ ಶ್ರೀರಾಮಕೃಷ್ಣರನ್ನು ಸ್ವಾಗತಿಸಿ, ಆಸೀನರಾಗುವಂತೆ ವಿನಂತಿಸಿಕೊಂಡ.

ಶ್ರೀರಾಮಕೃಷ್ಣರು ಆಸೀನರಾದರು; ಪದ್ಮಲೋಚನನನ್ನೇ ದಿಟ್ಟಿಸಿದರು. ತಮ್ಮ ಅಪೂರ್ವ ಆಧ್ಯಾತ್ಮಿಕ ಶಕ್ತಿಯ ನೆರವಿನಿಂದ ಅವನ ಅಂತರಂಗದಾಳವನ್ನು ಅಳೆದರು; ತಿಳಿದರು ! ಆ ಅಪರಿಚಿತ ವ್ಯಕ್ತಿಯ ಆಧ್ಯಾತ್ಮಿಕ ಶಕ್ತಿಯ ಮಟ್ಟವನ್ನು ಅಳೆದುನೋಡಿ ದರು. ಪದ್ಮಲೋಚನನನ್ನು ಒಮ್ಮೆ ನೋಡಿದ ಮಾತ್ರಕ್ಕೇ, ಅವನಿಗೆ ಚಂಡಿಕಾದೇವಿಯ ಅನುಗ್ರಹದಿಂದ ಸಿದ್ಧಿಗಳು ಲಭಿಸಿವೆ ಎಂಬುದು ಅವರಿಗೆ ಸ್ಪಷ್ಟವಾಗಿ ಗೋಚರಿಸಿತು.

ಪಂಡಿತನೆದುರು ಆಸೀನರಾಗುವ ವೇಳೆಗಾಗಲೇ ಶ್ರೀರಾಮಕೃಷ್ಣರು ಭಾವಸಮಾ ಧಿಯ ಸ್ಥಿತಿಯಲ್ಲಿದ್ದರು. ಈಗ ಆ ಸ್ಥಿತಿಯಲ್ಲೇ ಕೇಳಿದರು:

"ಪದ್ಮಲೋಚನನೆಂದರೆ ನೀನೇಯೋ ?"

ಪಂಡಿತ (ವಿನಯದಿಂದ): "ಹೌದು; ನನ್ನನ್ನೇ ಪದ್ಮಲೋಚನನೆಂದು ಕರೆಯು ತ್ತಾರೆ."

ಈಗ ಶ್ರೀರಾಮಕೃಷ್ಣರು ಅದೇ ದಿವ್ಯಭಾವದಲ್ಲಿ ತಮ್ಮ ಮಧುಮಯ ಕಂಠದಿಂದ ಒಂದು ಹಾಡು ಹೇಳಿದರು:

*ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು।*
*ಆರು ದರುಶನ ವೇದಶಾಸ್ತ್ರ ಪುರಾಣವರಿಯದು ಅವಳನು॥*
*ಯೋಗಿಹೃದಯದ ದಿವ್ಯನಿತ್ಯಾನಂದರೂಪಿಣಿ ಆಕೆಯು।*
*ತನ್ನ ಆನಂದದಲಿ ತಾನೇ ಜೀವರೆದೆಯೊಳಗಿರುವಳು॥*
*ಸಕಲ ಬ್ರಹ್ಮಾಂಡವನು ಬಸಿರಲಿ ಧರಿಸಿ ನಿತ್ಯವು ಪೊರೆವಳು।*
*ಮೂಲಾಧಾರ ಸಹಸ್ರಾರದಿ ಮುನಿಗಳವಳನು ನೆನೆವರು॥*
*ಶಿವನ ಹೊರತಿನ್ನಾರು ಅರಿಯರು ಅವಳ ದಿವ್ಯಸ್ವರೂಪವ।*
*ಪದ್ಮವನದಲಿ ಹಂಸರೂಪನ ಜೊತೆಗೆ ನಲಿಯುವ ಮಾಟವ॥*
*ಕಡಲನೀಜುವೆನೆಂಬ ಮರುಳನ ಕಲ್ಪನೆಗೆ ನಗುವಂದದಿ।*
*ಇಂಥ ತಾಯಿಯ ತಿಳಿದೆನೆಂದರೆ ಶ್ರೀಪ್ರಸಾದನು ನಗುವನು॥*
*ಕುಬ್ಜನಾದವ ಮುಗಿಲ ಚಂದ್ರನ ಹಿಡಿವ ಯತ್ನದ ತೆರದಲಿ ।*
*ಬುದ್ಧಿಯರಿತರು ಹೃದಯವರಿಯದು ತಾಯಿ ದುರ್ಗೆಯ ನಿಜವನು॥*

ಶ್ರೀರಾಮಕೃಷ್ಣರ ಭಾವವಿನ್ನೂ ಇಳಿಯಲಿಲ್ಲ. ಆ ಸ್ಥಿತಿಯಲ್ಲೇ ಇನ್ನೂ ಕೆಲವು ಭಕ್ತಿಗೀತೆಗಳನ್ನು ಹಾಡಿದರು. ಅವುಗಳಾದರೂ ಎಂಥ ಹಾಡುಗಳು ? ಅರ್ಥಗರ್ಭಿತ ! ಹಾಡಿದ ರೀತಿ, ಭಾವಪೂರಿತ ! ಹಾಡುತ್ತ ಹಾಡುತ್ತ ಗಾಢಸಮಾಧಿಯಲ್ಲಿ ಮುಳುಗಿ ಹೋದರು. ಶರೀರವೆಲ್ಲ ಸ್ಥಿರಗಂಭೀರ ! ಮುಖಕಮಲ ಉಜ್ವಲ ! ಪದ್ಮಲೋಚನ ಪರಮಾಶ್ಚರ್ಯಭರಿತನಾಗಿ, ಅವರ ಮುಖಕಾಂತಿಯನ್ನೇ ದಿಟ್ಟಿಸುತ್ತ ನಿಂತ. ಅವನು ತಕ್ಷಣವೇ ಅರಿತುಕೊಂಡ—ಶ್ರೀರಾಮಕೃಷ್ಣರಲ್ಲುಂಟಾದ ಈ ಪರಿವರ್ತನೆ ಕೇವಲ ಭಾವಾವೇಶವಲ್ಲ, ಇದು ನಿಜವಾಗಿಯೂ ಅಪೂರ್ವ ಆಧ್ಯಾತ್ಮಿಕತೆಯ ಅಭಿವ್ಯಕ್ತಿ ಎಂದು. ಅವನ ಎರಡೂ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಪ್ರವಹಿಸತೊಡಗಿತು. ತಾನು ತನ್ನ ಜೀವನವಿಡೀ ಯಾವ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದನೋ ಆ ಶಾಸ್ತ್ರಗಳ ಸಾರವೇ ಮೂರ್ತಿಮತ್ತಾಗಿ ಕಣ್ಣೆದುರಿಗೆ ನಿಂತಿರುವುದನ್ನು ಅವನು ಕಾಣುತ್ತಿದ್ದ !

ಈಗ ಅವನು ತನ್ನ ಭಾವಾವೇಶವನ್ನು ಸ್ವಲ್ಪ ಸಂಭಾಳಿಸಿಕೊಂಡು, ಕಣ್ಣೀರನ್ನು ಒರಸಿಕೊಳ್ಳುತ್ತ ಹೃದಯನೊಂದಿಗೆ ಹೇಳಿದ:

"ಏನಾಶ್ಚರ್ಯ ! ನಾನೆಂದೂ ಕಣ್ಣೀರು ಹಾಕಿದವನೇ ಅಲ್ಲ. ಇಂದು ಇವರ ಹಾಡುಗಳು ನನ್ನ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರಿಳಿಸಿಬಿಟ್ಟುವಲ್ಲ !"

ಅವನಿಗೆ ಇದೊಂದು ಅಪೂರ್ವ ಅನುಭವ. ಏಕೆಂದರೆ, ಆಧ್ಯಾತ್ಮಿಕತೆ ಎಂಬುದು ಇಷ್ಟೊಂದು ಘನೀಭೂತವಾಗಿ, ಇಷ್ಟೊಂದು ಅನುಭವಗಮ್ಯವಾಗಿ ಅಭಿವ್ಯಕ್ತಗೊಂಡದ್ದನ್ನು ಅವನು ಕಂಡದ್ದು ಅಂದೇ.

ಸ್ವಲ್ಪ ಹೊತ್ತಿನ ಬಳಿಕ ಭಾವಭಕ್ತಿಯಿಂದ ಗದ್ಗದಿತನಾಗಿ ನುಡಿದ:

"ಇಂಥ ಅನುಪಮ ದೃಶ್ಯದ ದರ್ಶನದಿಂದ ನನ್ನ ಬಾಳು ಸಾರ್ಥಕವಾಯಿತು !"

ಇಷ್ಟು ವರ್ಷಗಳವರೆಗೆ ತಾನು ಯಾವ ಶಾಸ್ತ್ರವಾಕ್ಯಗಳ ಮರ್ಮವನ್ನು ತನ್ನ ಶಿಷ್ಯರಿಗೆ ಮನಗಾಣಿಸಲು ಶತಪ್ರಯತ್ನ ಮಾಡುತ್ತಿದ್ದನೋ ಅದನ್ನು ಅವರಿಗೆ ಇಂದು ಉದಾಹರಣಪೂರ್ವಕವಾಗಿ ತೋರಿಸಿ ತಿಳಿಸಲು ಸಾಧ್ಯವಾದುದಕ್ಕಾಗಿ ಪದ್ಮಲೋಚನನಿಗೆ ಸಂತೋಷವಾಗಿಬಿಟ್ಟಿತ್ತು. ಸುತ್ತ ನಿಂತಿದ್ದ ಶಿಷ್ಯರನ್ನುದ್ದೇಶಿಸಿ ಅವನೆಂದ:

"ನೋಡಿದಿರಾ ? ನಾನು ಮಣಗಟ್ಟಲೆ ಶಾಸ್ತ್ರಗ್ರಂಥಗಳಿಂದ ಏನನ್ನು ಸಂಪಾದಿಸಲೆತ್ನಿಸಿದೆನೊ ಅದಕ್ಕಿಂತಲೂ ಕೋಟಿ ಪಾಲು ಹೆಚ್ಚಿನದನ್ನು ಏನನ್ನೂ ಓದದೆಯೇ ಸಿದ್ಧಿಸಿಕೊಂಡಿದ್ದಾರೆ ಇವರು !"

ಸ್ವಲ್ಪಹೊತ್ತು ಹೀಗೇ ಕಳೆಯಿತು. ಶ್ರೀರಾಮಕೃಷ್ಣರು ಮೆಲ್ಲನೆ ಸಹಜಸ್ಥಿತಿಗೆ ಮರಳಿದರು. ತಮ್ಮ ಶಿಶುಸಹಜ ಸರಳತೆಯಿಂದ ಪಂಡಿತನನ್ನು ಕೇಳಿದರು:

"ಅಂದಹಾಗೆ, ನಾನು ಇಷ್ಟು ಹೊತ್ತೂ ಅದೇನೋ ಒಂದು ವಿಚಿತ್ರ ಸ್ಥಿತಿಯಲ್ಲಿದ್ದೆನಲ್ಲ, ಅದೇನೆಂದು ಹೇಳಬಲ್ಲೆಯಾ ?"

ಪಂಡಿತ: "ಸ್ವಾಮಿ ! ಅದು ಅಂತಿಂಥ ಸ್ಥಿತಿಯಲ್ಲ, ಯೋಗಾಭ್ಯಾಸದ ಮಹಾಫಲವಾದ ಸಮಾಧಿಸ್ಥಿತಿ ! ದೇವತೆಗಳಿಗೂ ದುರ್ಲಭವಾದ ಸ್ಥಿತಿ ಅದು !"

ಶ್ರೀರಾಮಕೃಷ್ಣರು ಮುಗುಳ್ನಗುತ್ತ ಕೇಳಿದರು:

"ಏನಪ್ಪ, ನೀನು ಬರ್ದ್ವಾನ್ ರಾಜ್ಯದ ಆಸ್ಥಾನಪಂಡಿತ. ಅಂಥವರಲ್ಲಿ ನೀನು ನನ್ನನ್ನು ಇಷ್ಟು ಭಕ್ತಿ-ಗೌರವಗಳಿಂದ ಕಾಣುತ್ತೀಯಲ್ಲ, ನೀನು ನನ್ನಲ್ಲೇನು ಕಂಡೆ ?"

ಪಂಡಿತ ವಿನಯದಿಂದ, ಆದರೆ ದೃಢ ಸ್ವರದಲ್ಲಿ ನುಡಿದ:

"ಸ್ವಾಮಿ, ನಾನೆಂಥ ಪಂಡಿತ ! ಕೇವಲ ನಿಮ್ಮ ಪವಿತ್ರ ಪಾದಧೂಳಿಯೇ ಎಂಥಾ ಮೂರ್ಖರನ್ನೂ ಶ್ರೇಷ್ಠ ಪಂಡಿತರನ್ನಾಗಿ ಮಾಡೀತು."

ಹೀಗೆ ಮೊದಲ ಭೇಟಿಯಲ್ಲೇ ಇಬ್ಬರ ನಡುವೆ ಅಪೂರ್ವ ಬಾಂಧವ್ಯವೊಂದು ಒಡಮೂಡಿತು. ಪಂಡಿತ ಪದ್ಮಲೋಚನನಲ್ಲಿ ಅಪಾರ ಶಾಸ್ತ್ರಜ್ಞಾನದೊಂದಿಗೆ ನಿಷ್ಕಾಪಟ್ಯ ಔದಾರ್ಯಗಳೂ ಆಧ್ಯಾತ್ಮಿಕ ಸತ್ವವೂ ಹಾಸುಹೊಕ್ಕಾಗಿದ್ದುದನ್ನು ಕಂಡು ಶ್ರೀರಾಮಕೃಷ್ಣರು ಸಂತೋಷಪಟ್ಟರು. ಪಂಡಿತನಂತೂ ಶ್ರೀರಾಮಕೃಷ್ಣರನ್ನು ದರ್ಶಿಸಿ ತಾನು ಕೃತಾರ್ಥನಾದೆನೆಂದು ಹಿಗ್ಗಿದ. ಅಂದಿನ ತಮ್ಮ ಮಾತುಕತೆಯ ಬಗ್ಗೆ ಶ್ರೀರಾಮಕೃಷ್ಣರು ಮುಂದೆ ಹೇಳುತ್ತಿದ್ದರು:

"ನಾನು ಎಷ್ಟೋ ಜನ ಪಂಡಿತರೊಂದಿಗೆಲ್ಲ ಮಾತನಾಡಿದ್ದೆ. ಆದರೆ ಪದ್ಮಲೋಚನನೊಂದಿಗೆ ಸಂಭಾಷಿಸಿದಾಗ ಉಂಟಾದ ತೃಪ್ತಿ ಹಿಂದೆಂದೂ ಸಿಕ್ಕಿರಲಿಲ್ಲ."

ಆದರೆ ಪಂಡಿತ ಈ ನಡುವೆ ಶ್ರೀರಾಮಕೃಷ್ಣರಿಗೆ ಒಂದು ಸಲಹೆ ಮಾಡಿದ್ದು ಸ್ವಾರಸ್ಯಕರವಾಗಿದೆ:

"ನೋಡಿ, ನೀವು ನಾನಾ ಬಗೆಯ ಭಕ್ತರ ಸಹವಾಸ ಮಾಡುವುದು ಅಷ್ಟು ಒಳ್ಳೆಯದಲ್ಲ. ಏಕೆಂದರೆ ನಾನಾ ಸಂಸ್ಕಾರದ ಜನ ಬಂದು ನಿಮ್ಮ ಆಧ್ಯಾತ್ಮಿಕಜೀವನದ ದಾರಿಯನ್ನೇ ತಪ್ಪಿಸಿಬಿಟ್ಟಾರು."

ಶ್ರೀರಾಮಕೃಷ್ಣರ ಸ್ಫಟಿಕಸದೃಶ ಪರಿಶುದ್ಧತೆ, ಆಗಸದೆತ್ತರದ ಆಧ್ಯಾತ್ಮಿಕತೆ—ಇವುಗಳ ಪರಿಚಯ ಆತನಿಗಿನ್ನೂ ಆಗಿಲ್ಲ. ಆದ್ದರಿಂದಲೇ ಆತ ಹೀಗೆ ಹೇಳುತ್ತಿದ್ದಾನೆ. ಆದರೆ ಶ್ರೀರಾಮಕೃಷ್ಣರು ಆತನ ಸಲಹೆಯಂತೆ ನಡೆದುಕೊಳ್ಳಲು ಸಾಧ್ಯವೆ ? ಅವರಿಗೆ ಅದರ ಅಗತ್ಯವಾದರೂ ಇದೆಯೆ ! ಅವರೊಂದು ಭಾವಸಾಗರ; ಸಕಲ ಆಧ್ಯಾತ್ಮಿಕತೆಯ ಆಗರ. ಇಂಥವರು, ತಮಗೆ 'ಒಗ್ಗದ' ಮನೋಭಾವದ ಸಾಧಕರ ಸಂಪರ್ಕಕ್ಕೆ ಬಂದು ದಾರಿ ತಪ್ಪುವುದು ಎಂದರೇನರ್ಥ ! ಶ್ರೀರಾಮಕೃಷ್ಣರು ಇತರ ಸಾಧು-ಭಕ್ತರನ್ನು ಹುಡುಕಿಕೊಂಡು ಹೋಗುತ್ತಿದ್ದುದು ನಿಜಕ್ಕೂ ಏಕೆಂದರೆ ಆ ಸಾಧು-ಭಕ್ತರಿಗೆ ಬೇಕಾದ ನೆರವನ್ನೂ ಮಾರ್ಗದರ್ಶನವನ್ನೂ ನೀಡಲೆಂದು; ತಮ್ಮ ಅನುಭವಸಾಗರದಿಂದ, ಇತರರಿಗೆ ಬೇಕೆನಿಸಿದ ಆಧ್ಯಾತ್ಮಿಕ ರತ್ನಗಳನ್ನು ಧಾರೆಯೆರೆಯಲು. ಮತ್ತು, ಅವರು ಜಗತ್ತಿಗೆ ಬಂದುದೇ ಜನತೆಯ ಉದ್ಧಾರಕ್ಕಾಗಿ. ತಮ್ಮ ಬಳಿಗೆ ತಂಡೋಪತಂಡವಾಗಿ ಬಂದ ಜನರನ್ನು ಅವರು ಆದರಿಸಿ, ತಿದ್ದಿ, ಪರಿಷ್ಕರಿಸಿದ ವಿವರಗಳನ್ನು ಮುಂದೆ ನೋಡಲಿದ್ದೇವೆ.

# “ವೇದವನ್ನೂ ಮೀರಿನಿಂದವರು ನೀವು” ೮

ಶ್ರೀರಾಮಕೃಷ್ಣರು ಪದ್ಮಲೋಚನನಿಂದ ಬೀಳ್ಕೊಂಡು ದಕ್ಷಿಣೇಶ್ವರಕ್ಕೆ ಹಿಂದಿರುಗಿದರು. ಆದರೆ ಪಂಡಿತನ ಮನಸ್ಸು ಮಾತ್ರ ಆ ಮಹಾತ್ಮರ ಮಹಿಮೆಯನ್ನೇ ಮೆಲುಕುವುದರಲ್ಲಿ ಮಗ್ನವಾಯಿತು. ಶ್ರೀರಾಮಕೃಷ್ಣರಿಂದ ಅವನಿಗೆ ಸಿಕ್ಕಿದ ಬೆಳಕು, ದೊರೆತ ಸಮಾಧಾನ ಅಸಾಮಾನ್ಯವಾದುದು. ಹವಾಬದಲಾವಣೆ ಹಾಗೂ ಚಿಕಿತ್ಸೆಗಾಗಿ ಆರಿಯದಾಹಕ್ಕೆ ಬಂದಿದ್ದ ಅವನಿಗೀಗ ಶ್ರೀರಾಮಕೃಷ್ಣರ ಸತ್ಸಂಗವೆಂಬ ಚಿಕಿತ್ಸೆಯೇ ಹೆಚ್ಚು ಹಿತಕರವಾಯಿತು. ಅವನಿಗೆ ಆ ಸವಿಯನ್ನುಣ್ಣುವುದಕ್ಕಾಗಿ ಮತ್ತೆಮತ್ತೆ ದಕ್ಷಿಣೇಶ್ವರಕ್ಕೆ ಹೋಗಲು ಇಚ್ಛೆಯಿದ್ದರೂ ಅದು ಸಾಧ್ಯವಾಗಲಿಲ್ಲ. ಕಾರಣ, ಅವನ ಕಾಯಿಲೆ ದಿನೇದಿನೇ ಹೆಚ್ಚುತ್ತಲೇ ಬಂತು. ಆದ್ದರಿಂದ ಅವನು ಶ್ರೀರಾಮಕೃಷ್ಣರನ್ನೇ ತನ್ನಲ್ಲಿಗೆ ಕರೆತರಲು ತನ್ನ ಮಗನನ್ನು ಆಗಾಗ ದಕ್ಷಿಣೇಶ್ವರಕ್ಕೆ ಕಳಿಸುತ್ತಿದ್ದ. ಅವರೂ ಸಂತೋಷದಿಂದ ಒಪ್ಪಿ ಅವನಲ್ಲಿಗೆ ಹೊರಟೇಬಿಡುತ್ತಿದ್ದರು. ಪಂಡಿತನ ವಿನಯ-ವಿಶ್ವಾಸಗಳಿಗೆ, ವಿವೇಕಪೂರ್ಣ ತಿಳಿವಳಿಕೆಗೆ ಅವರು ಮಾರುಹೋಗಿದ್ದರು. ಇಬ್ಬರೂ ಗಂಟೆಗಟ್ಟಲೆ ಕುಳಿತು ಭಗವತ್ಸಂಬಂಧವಾಗಿ ಸಲ್ಲಾಪ ನಡೆಸುತ್ತಿದ್ದರು.

ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಅನುಭವಗಳ, ವಿವಿಧ ದರ್ಶನಗಳ ವಿವರಗಳನ್ನು ಕೇಳಿದಂತೆ ಪಂಡಿತ ಪದ್ಮಲೋಚನ ಸ್ತಂಭೀಭೂತನಾದ. ಶಾಸ್ತ್ರ-ದರ್ಶನಗಳಲ್ಲಿ ಆ ವಿಷಯವಾಗಿ ದೊರೆಯುವ ಉಲ್ಲೇಖಗಳನ್ನೆಲ್ಲ ಸ್ಮರಿಸಿಕೊಂಡು ಅವುಗಳೊಂದಿಗೆ ಅವರ ಅನುಭವಗಳನ್ನು ತಾಳೆಹಾಕುವ ಪ್ರಯತ್ನಮಾಡಿದ. ಕಡೆಗವನು ನಿರ್ಧಾರಾತ್ಮಕವಾಗಿ ನುಡಿದ:

“ನಿಮ್ಮ ಅನುಭವಗಳು ವೇದವೇದಾಂತಗಳನ್ನೆಲ್ಲ ಮೀರಿ ಬಹುದೂರ ಸಾಗಿವೆ! ಆ ಕುರಿತಾಗಿ ಬೇರೇನು ಹೇಳಲೂ ನಾನು ಶಕ್ತನಲ್ಲ.”

ಮುಂದೆ ಶ್ರೀರಾಮಕೃಷ್ಣರು, ಪದ್ಮಲೋಚನನ ವಿದ್ವತ್ತು, ವಿಶಾಲದೃಷ್ಟಿ ಹಾಗೂ ಸರಳತೆಗಳಿಗೆ ಉದಾಹರಣೆಯಾಗಿ ಒಂದು ಘಟನೆಯನ್ನು ಬಣ್ಣಿಸುತ್ತಿದ್ದರು:

ಒಮ್ಮೆ ಬರ್ದ್ವಾನ್ ಮಹಾರಾಜನ ಆಸ್ಥಾನದಲ್ಲಿ ಪಂಡಿತರ ನಡುವೆ ಒಂದು ಜಿಜ್ಞಾಸೆ ಎದ್ದಿತು—‘ಶಿವ ಶ್ರೇಷ್ಠನೋ, ವಿಷ್ಣು ಶ್ರೇಷ್ಠನೋ?’ ಎಂದು. ಪ್ರಧಾನ ಆಸ್ಥಾನಪಂಡಿತನಾದ ಪದ್ಮಲೋಚನ ಅಂದು ಸಭೆಯಲ್ಲಿರಲಿಲ್ಲ. ನೆರೆದಿದ್ದ ಪಂಡಿತರೆಲ್ಲ ತಂತಮ್ಮ ನಂಬಿಕೆಗೆ ಅನುಗುಣವಾಗಿ, ‘ಶಿವನು ಶ್ರೇಷ್ಠ!’ ಎಂದು ಕೆಲವರು, ‘ಅಲ್ಲ, ವಿಷ್ಣುವೇ ಶ್ರೇಷ್ಠ!’ ಎಂದು ಮತ್ತೆ ಕೆಲವರು, ವಾದ ಮಾಡಿದರು. ತಮ್ಮ ಮಾತುಗಳಿಗೆ ಆಧಾರವಾಗಿ ಶಾಸ್ತ್ರವಾಕ್ಯ, ಪುರಾಣಕಥೆಗಳನ್ನೆಲ್ಲ ಉದ್ಧರಿಸಿದರು. ವಾಗ್ವಾದ ಒಳ್ಳೇ ಬಿರುಸಿನಿಂದ ನಡೆಯಿತು. ವಾದಕ್ಕೆ ಪ್ರತಿವಾದ, ತರ್ಕಕ್ಕೆ ವಿತರ್ಕ ಬೆಳೆಯಿತು. ಯಾರೂ ಗೆಲ್ಲಲಿಲ್ಲ, ಯಾರೂ ಸೋಲಲಿಲ್ಲ. ಒಟ್ಟಿನಲ್ಲಿ ಪಂಡಿತರಿಗೆ ಯಾವೊಂದು ತೀರ್ಮಾನಕ್ಕೂ ಬರಲಾಗಲಿಲ್ಲ. ಈಗ ಈ ವಿಷಯವನ್ನು ನಿಷ್ಕರ್ಷಿಸಿ ತೀರ್ಮಾನ ಹೇಳಲು ಪ್ರಧಾನ ಪಂಡಿತರೇ ಸರಿ ಎಂದು ನಿರ್ಧರಿಸಿ ಅವರಿಗೆ ಹೇಳಿಕಳಿಸಿದರು.

ಪದ್ಮಲೋಚನ ರಾಜಸಭೆಗೆ ಆಗಮಿಸಿದ. ವಾಗ್ವಿವಾದದ ವಿಷಯವೇನೆಂದು

ತಿಳಿಯಿತು. 'ಶಿವ ಶ್ರೇಷ್ಠನೋ, ವಿಷ್ಣು ಶ್ರೇಷ್ಠನೋ ?'—ಇಂಥ ಜಟಿಲವಾದ ಪ್ರಶ್ನೆಗೆ ಉತ್ತರ ಕೊಡುವುದು ಅಷ್ಟು ಸುಲಭವೆ? ಏಕೆಂದರೆ ಶಾಸ್ತ್ರದಲ್ಲೆಲ್ಲೂ ಇದಕ್ಕೆ ನಿಖರವಾದ ಉತ್ತರವಿಲ್ಲ. ಅಲ್ಲದೆ ಇದು ಇಂದ್ರಿಯಗೋಚರವಲ್ಲದ ವಿಷಯ. ಆದರೆ ಪದ್ಮಲೋಚನ ತನಗೆ ಸಹಜವಾದ ವಿನಯದಿಂದ ತನ್ನ ಅಭಿಪ್ರಾಯವನ್ನು ಮುಂದಿಟ್ಟ:

"ನನಗೆ ಈ ಗಹನವಾದ ವಿಷಯ ಏನು ಗೊತ್ತು? ನಾನಂತೂ ಶಿವನನ್ನೂ ನೋಡಿದವನಲ್ಲ, ವಿಷ್ಣುವನ್ನೂ ನೋಡಿದವನಲ್ಲ. ಅಥವಾ ನನ್ನ ತಂದೆ-ತಾತಂದಿರೂ ನೋಡಿದವರಲ್ಲ. ಅಷ್ಟೇ ಅಲ್ಲ, ನನ್ನ ಹಿಂದಿನ ಹದಿನಾಲ್ಕು ತಲೆಮಾರುಗಳಲ್ಲಿ ಒಬ್ಬ ರಾದರೂ ಶಿವನನ್ನಾಗಲಿ ವಿಷ್ಣುವನ್ನಾಗಲಿ ಕಂಡ ವರ್ತಮಾನವಿಲ್ಲ. ಹೀಗಿರುವಾಗ ಆ ಇಬ್ಬರಲ್ಲಿ ಯಾರು ಶ್ರೇಷ್ಠರೆಂದು ನಾನು ಹೇಗೆ ಹೇಳಲಿ?

"ಆದರೂ, ಶಾಸ್ತ್ರಗಳು-ಪುರಾಣಗಳು ಆ ಸಂಬಂಧವಾಗಿ ಏನು ಹೇಳುತ್ತವೆ ಎಂಬುದನ್ನು ನಿಮ್ಮ ಮುಂದಿಡುತ್ತೇನೆ. ಎಲ್ಲ ಶೈವಗ್ರಂಥಗಳಲ್ಲೂ ಶಿವನ ಮಹಿಮೆ ಯನ್ನೇ ಅತಿಶಯವಾಗಿ ಕೊಂಡಾಡಲಾಗಿದೆ. ಅವುಗಳ ಪ್ರಕಾರ ನೋಡಿದರೆ, ಶಿವನೇ ಸರ್ವಶ್ರೇಷ್ಠ ಎಂಬುದರಲ್ಲಿ ಸಂಶಯವೇ ಇಲ್ಲ. ಅಂತೆಯೇ ವಿಷ್ಣುವಿಗೆ ಸಂಬಂಧಿಸಿದ ಯಾವುದೇ ಪುರಾಣ-ಆಗಮಗಳನ್ನೇ ತೆಗೆದುಕೊಳ್ಳಿ, ಅಲ್ಲಿ ಹರಿಯೇ ಸರ್ವೋತ್ತಮ ನೆಂದು ಸಾರಲಾಗಿದೆ. ಒಟ್ಟಿನಲ್ಲಿ, ಇದರಿಂದ ತಿಳಿದುಬರುವುದೇನೆಂದರೆ, *ಯಾರಿಗೆ ಯಾವ ದೇವತೆ ಇಷ್ಟವೋ ಅವರ ಪಾಲಿಗೆ ಆ ದೇವತೆಯೇ ಸರ್ವಶ್ರೇಷ್ಠ.*"

ಹೀಗೆಂದ ಪದ್ಮಲೋಚನ ತನ್ನ ಈ ಮಾತನ್ನು ಸಮರ್ಥಿಸುವಂತಹ ಹಲವಾರು ಶಾಸ್ತ್ರವಾಕ್ಯಗಳನ್ನು ಉದಾಹರಿಸಿದ. ಬಳಿಕ ನುಡಿದ:

"ಆದ್ದರಿಂದ ಈ ವಿಷಯದಲ್ಲಿ ನನ್ನ ವಿನಮ್ರ ಅಭಿಮತವಿಷ್ಟೆ: ಶಿವ-ವಿಷ್ಣು ಇವರಲ್ಲಿ ಯಾರಿಗೆ ಯಾರೂ ಹೆಚ್ಚಲ್ಲ, ಯಾರಿಗೆ ಯಾರೂ ಕಡಿಮೆಯಲ್ಲ. ಇಬ್ಬರೂ ಸಮವಾಗಿ ಶ್ರೇಷ್ಠರು."

ಇದನ್ನು ಕೇಳಿದ ಪಂಡಿತರೆಲ್ಲ ಏಕಕಂಠದಿಂದ ಮೆಚ್ಚಿಗೆ ಸೂಚಿಸಿ ಅಭಿನಂದಿ ಸಿದರು. ಪದ್ಮಲೋಚನನ ಈ ಉತ್ತರ ಎಲ್ಲರಿಗೂ ಸಂಪೂರ್ಣ ಸಮ್ಮತವಾಯಿತು. ಉತ್ತರವೇನೋ ತೀರಾ ಸರಳವೇ. ಆದರೆ ಅದರ ಹಿಂದೆ ಅಡಕವಾಗಿರುವ ಆತನ ತಿಳಿವಳಿಕೆಯೆಷ್ಟು! ದೃಷ್ಟಿವೈಶಾಲ್ಯವೆಂಥದು! ಈ ವೃತ್ತಾಂತವನ್ನು ಮೊದಲ ಬಾರಿ ಪದ್ಮಲೋಚನನ ಬಾಯಿಂದಲೇ ಕೇಳಿದಾಗ ಶ್ರೀರಾಮಕೃಷ್ಣರಿಗಂತೂ ಅದೆಷ್ಟು ಆನಂದ ವಾಯಿತೆಂದರೆ ಅವರು ಸಮಾಧಿಗೇರಿಬಿಟ್ಟರು! ಬಾಹ್ಯಪ್ರಜ್ಞೆ ಮರಳಿದ ಮೇಲೆ ಅವರು ಅದೇ ಭಾವದಲ್ಲಿ ಉದ್ಗರಿಸಿದರು:

"ನಿನ್ನಲ್ಲಿ ನಿಜವಾದ ತಿಳಿವಳಿಕೆ ಇದೆ!"

ಒಂದು ಸ್ವಾರಸ್ಯಕರ ವಿಷಯವೇನೆಂದರೆ, ಪದ್ಮಲೋಚನನು ಅಂಥ ದೊಡ್ಡ ವೇದಾಂತಿಯಾಗಿದ್ದರೂ ಶ್ರೀರಾಮಕೃಷ್ಣರ ಕಾಮಕಾಂಚನತ್ಯಾಗದ ವಿಚಾರ ಮಾತ್ರ ಅವನಿಗೆ ಅರ್ಥವಾಗಲಿಲ್ಲ. ಒಂದು ದಿನ ಅವನು ಕೇಳಿಯೇಬಿಟ್ಟ:

"ನೀವು ಹೆಣ್ಣು-ಹೊನ್ನುಗಳನ್ನು ತ್ಯಾಗ ಮಾಡಿರುವುದೇಕೆ? 'ಇದು ಹೊನ್ನು, ಇದು ಮಣ್ಣು' ಎಂಬ ಈ ಭೇದಬುದ್ಧಿ ಅಜ್ಞಾನದಿಂದ ಹುಟ್ಟುವಂಥದಲ್ಲವೇ?"

ಮಹಾ ತಿಳಿವಳಿಕಸ್ಥನಾದ ಪಂಡಿತನೇ ಹೀಗೆ ಕೇಳಿದಾಗ ಶ್ರೀರಾಮಕೃಷ್ಣರು ಇದಕ್ಕೆ ಏನನ್ನಬೇಕು! ಆದರೂ ಉತ್ತರಿಸಿದರು:

"ನನಗದೊಂದೂ ತಿಳಿಯದಪ್ಪ! ಆದರೆ ಇಷ್ಟನ್ನು ಮಾತ್ರ ಹೇಳಬಲ್ಲೆ—ಈ ಕಾಮಕಾಂಚನಾದಿಗಳೆಲ್ಲ ನನ್ನ ಮನಸ್ಸಿಗೆ ಒಗ್ಗದ ವಿಷಯಗಳು."

ಪದ್ಮಲೋಚನ ಹಾಗೆ ಹೇಳಿದುದು, ಬಹುಶಃ ಸಹಜವೇ ಆಗಿತ್ತು. ಏಕೆಂದರೆ ಅವನಲ್ಲಿ ಆಧ್ಯಾತ್ಮಿಕತೆಯೊಂದಿಗೆ ಪ್ರಾಪಂಚಿಕತೆಯೂ ಸಮಪ್ರಮಾಣದಲ್ಲಿ ಸೇರಿತ್ತು!

ಪದ್ಮಲೋಚನನು ಜ್ಞಾನಮಾರ್ಗಸಾಧನೆಯೊಂದಿಗೆ, ಬಹುಕಾಲದಿಂದ ತಂತ್ರ ಸಾಧನೆಯನ್ನೂ ಮಾಡಿಕೊಂಡು ಬಂದಿದ್ದ. ತತ್ಫಲವಾಗಿ ಕೆಲವು ಅಲೌಕಿಕ ಸಿದ್ಧಿಗಳನ್ನು ಪಡೆದುಕೊಂಡಿದ್ದ. ಇದರಿಂದಾಗಿ ಅವನಿಗೆ ವಾದದಲ್ಲಿ ಸೋಲೆಂಬುದೇ ಇರಲಿಲ್ಲ. ತನ್ನ ಇಷ್ಟದೇವತೆಯಾದ ಅಂಬಿಕಾದೇವಿಯ ಕೃಪೆಯಿಂದಾಗಿಯೇ ಅವನು ಇಷ್ಟು ದಿನ ಎಲ್ಲ ವಾದಗಳಲ್ಲೂ ವಿಜೇತನಾಗಿ ಪ್ರಸಿದ್ಧಿಗಳಿಸಿದ್ದ.

ಅವನು ಒಂದು ನೀರು ತುಂಬಿದ ಗಿಂಡಿಯನ್ನೂ ಒಂದು ಕರವಸ್ತ್ರವನ್ನೂ ಬಳಿಯಲ್ಲಿ ಇಟ್ಟುಕೊಂಡಿರುತ್ತಿದ್ದ. ಯಾವುದಾದರೂ ಒಂದು ವಿಷಯದ ಕುರಿತಾಗಿ ಚರ್ಚೆಯುಂಟಾಯಿತೆನ್ನಿ; ಆಗ ಅವನು ಅವುಗಳನ್ನು ಕೈಯಲ್ಲಿ ಹಿಡಿದು ಆಲೋಚನಾಪರನಾಗಿ ಅತ್ತಿಂದಿತ್ತ ನಾಲ್ಕಾರು ಹೆಜ್ಜೆ ಅಡ್ಡಾಡುತ್ತಿದ್ದ. ಬಳಿಕ ನೀರಿನಿಂದ ಬಾಯಿ ಮುಕ್ಕಳಿಸಿ, ಸ್ವಲ್ಪ ನೀರನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳುತ್ತಿದ್ದ. ಆಮೇಲೆ ಚರ್ಚೆಯಲ್ಲಿ ತೊಡಗುತ್ತಿದ್ದ. ಹೀಗೆ ಮಾಡಿದಾಗ, ಅಂದಿನ ಜಯ ಅವನ ಪಾಲಿಗೇ ಕಟ್ಟಿಟ್ಟದ್ದು!

ಎಷ್ಟೋ ಜನ ಅವನ ಈ ನಡೆವಳಿಕೆಯನ್ನು ಕಂಡಿದ್ದರು. ಆದರೆ ಯಾರಿಗೂ ಅದರಲ್ಲಿ ಅಂತಹ ಮಹತ್ವವೇನೂ ಗೋಚರವಾಗಿರಲಿಲ್ಲ. ಅದರ ಹಿಂದೆ ಏನಾದರೂ ರಹಸ್ಯವಿರಬಹುದು ಎಂದು ಒಬ್ಬನಿಗೂ ಅನ್ನಿಸಿರಲಿಲ್ಲ. ಆದರೆ ಪದ್ಮಲೋಚನ ಹಾಗೆ ಮಾಡುತ್ತಿದ್ದುದು ತನ್ನ ಇಷ್ಟದೇವತೆಯ ಆಜ್ಞಾನುಸಾರವೇ. ಅದರಿಂದಾಗಿ ಎಂಥ ಪರಿಸ್ಥಿತಿಯಲ್ಲೂ ಅವನು ಚಿತ್ತಸ್ಥೈರ್ಯವನ್ನು ಕಳೆದುಕೊಳ್ಳದಿರಲು ಸಾಧ್ಯವಾಗಿತ್ತು. ಮತ್ತು ಈ ವಿಷಯವನ್ನು ರಹಸ್ಯವಾಗಿಡಬೇಕೆಂದು ಅವನ ಇಷ್ಟದೇವತೆ ಎಚ್ಚರಿಸಿದ್ದಳು. ಆದ್ದರಿಂದಲೇ ಅವನು ಅಲ್ಲಿಯವರೆಗೂ ಆ ನಿಯಮವನ್ನು ಜಾಗ್ರತೆಯಿಂದ ಪಾಲಿಸಿಕೊಂಡು ಬಂದಿದ್ದ; ಅಜೇಯನಾಗಿ ಉಳಿದಿದ್ದ. ಈ ರಹಸ್ಯ ಅವರಿವರಿಗಿರಲಿ, ಅವನ ಹೆಂಡತಿಗೂ ತಿಳಿದಿರಲಿಲ್ಲ. ಅವನು ಅದನ್ನು ಅಷ್ಟೊಂದು ಗುಪ್ತವಾಗಿಟ್ಟಿದ್ದ. ಆದರೆ ಶ್ರೀರಾಮಕೃಷ್ಣರಿಗೆ ಮಾತ್ರ ಅವನನ್ನು ಕಂಡೊಡನೆಯೇ ಈ ವಿಷಯವೆಲ್ಲ ತಿಳಿದುಹೋಯಿತು!

ಒಂದು ದಿನ ಯಾವುದೋ ವಿಷಯವಾಗಿ ಚರ್ಚೆ ನಡೆಯಬೇಕಿತ್ತು. ಶ್ರೀರಾಮಕೃಷ್ಣರು ಅಲ್ಲಿಯೇ ಇದ್ದರು. ಆದರೆ ಚರ್ಚೆ ಪ್ರಾರಂಭವಾಗುವ ಮುನ್ನ ಪದ್ಮಲೋಚನ ನೋಡುತ್ತಾನೆ—ಅವನ ಗಿಂಡಿ, ಚೌಕ ಎರಡೂ ನಾಪತ್ತೆ! ಪಂಡಿತ ಗಾಬರಿಗೊಂಡು ಹುಡುಕಿನೋಡಿದ; ಎಲ್ಲಿ ಹುಡುಕಿದರೂ ಕಾಣಲೊಲ್ಲದು! ಅಂತೂ, ಅಂದಿನ ಪ್ರಶ್ನೆಗೆ ಉತ್ತರಿಸಲು ಅವನಿಂದ ಆಗಲೇ ಇಲ್ಲ. ಕಡೆಗೆ ಅವನಿಗೆ ನಿಜಸಂಗತಿ ತಿಳಿಯಿತು—ಅದನ್ನು ಶ್ರೀರಾಮಕೃಷ್ಣರೇ ಮುಚ್ಚಿಟ್ಟಿದ್ದರು ಎಂದು.

ಇದನ್ನು ತಿಳಿದಾಗ ಪದ್ಮಲೋಚನನಿಗಾದ ಆಶ್ಚರ್ಯಕ್ಕೆ ಮಿತಿಯೇ ಇಲ್ಲ. ಅವರು ಅದನ್ನು ಬೇಕೆಂದೇ ಮುಚ್ಚಿಟ್ಟಿದ್ದಾರೆಂದರೆ . . . ? ಅವರಿಗೆ ತನ್ನ ರಹಸ್ಯವೆಲ್ಲ ತಿಳಿದಿದೆಯೆಂದೇ ಅರ್ಥ! ಹಾಗಾದರೆ ಅವರ ಮಹಿಮೆಯೆಂಥದು! . . . ಅವರು ನಿಜಕ್ಕೂ ಯಾರು? ಪದ್ಮಲೋಚನ ರೋಮಾಂಚಿತನಾದ. ತಾನೇನು ಮಾಡುತ್ತಿರುವೆನೆಂಬ

ಪರಿವೆಯೇ ಇಲ್ಲದವನಂತೆ ಓಡಿಬಂದ; ಕಣ್ಣೀರ ಧಾರೆ ಹರಿಯಿಸುತ್ತ ಶ್ರೀರಾಮಕೃಷ್ಣರ ಶ್ರೀಚರಣಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದ. ಅವರು ತನ್ನ ಇಷ್ಟದೇವತೆಯೇ ಎಂದು ತಿಳಿದು ನಾನಾ ಪರಿಯಿಂದ ಸ್ತುತಿಸಿದ. ಅವರ ಮಹಿಮೆಯ ಬಗ್ಗೆ ಅವನಿಗೆ ಇನ್ನಾವ ಸಂಶಯವೂ ಉಳಿಯಲಿಲ್ಲ. ಅಂದಿನಿಂದ ಅವನು ಅವರನ್ನು ಭಗವಂತನ ಅವತಾರವೆಂದು ಕಾಣತೊಡಗಿದ.

ತಾನು ಕಂಡುಕೊಂಡ ಈ ವಿಷಯವನ್ನು ಜಗಜ್ಜಾಹೀರು ಮಾಡಬೇಕೆಂಬ ಇಚ್ಛೆ ಪದ್ಮಲೋಚನನಿಗುಂಟಾಯಿತು. ಈ ಬಗ್ಗೆ ಚರ್ಚೆ ನಡೆಸುವ ಸಲುವಾಗಿ ಪಂಡಿತರ ಸಭೆಯೊಂದನ್ನು ಸೇರಿಸಲು ಅವನು ಉತ್ಸುಕನಾಗಿದ್ದ. ಇಂಥ ಮಹಾಪುರುಷರನ್ನು ಸದಾ ದರ್ಶಿಸುತ್ತಿರುವ, ಅವರ ಸೇವೆ ಮಾಡುವ ಸೌಭಾಗ್ಯ ತನ್ನದಾಗಲಿಲ್ಲವಲ್ಲ ಎಂಬ ಕೊರಗಿನಿಂದ ಅವನೊಮ್ಮೆ ಶ್ರೀರಾಮಕೃಷ್ಣರಿಗೆ ಹೇಳುತ್ತಾನೆ:

"ರಾಣಿ ರಾಸಮಣಿ, ಮಥುರಬಾಬು ಇಬ್ಬರೂ ಪರಮ ಭಾಗ್ಯವಂತರು. ಸಾಕ್ಷಾತ್ ಜಗನ್ಮಾತೆಯ ಪ್ರತಿರೂಪರಾದ ನಿಮ್ಮ ಸೇವೆ ಮಾಡುವ ಅಪೂರ್ವ ಸುಯೋಗ ಅವರದಾಗಿದೆ. ಇರಲಿ; ಈ ನನ್ನ ಕಾಯಿಲೆಯೊಂದು ಗುಣವಾಗಲಿ. ನಾನು ಪಂಡಿತರ ಸಭೆ ಸೇರಿಸಿ ನಿಮ್ಮ ಅದ್ಭುತ ಆಧ್ಯಾತ್ಮಿಕ ಅನುಭವಗಳನ್ನು ಎಲ್ಲರ ಮುಂದೆ ಸಾರಿ ಹೇಳುತ್ತೇನೆ. ನೀವು ಅವತಾರಪುರುಷರೆಂದು ಘೋಷಿಸುತ್ತೇನೆ!"

ಈ ಮಧ್ಯೆ ಮಥುರಾನಾಥ ಯಾವುದೋ ಕಾರಣಕ್ಕಾಗಿ ದಕ್ಷಿಣೇಶ್ವರದಲ್ಲಿ ಒಮ್ಮೆ ಎಲ್ಲ ಪಂಡಿತರನ್ನೂ ಆಹ್ವಾನಿಸಿ ಸಭೆ ನಡೆಸಬೇಕೆಂದಿದ್ದ. ಪದ್ಮಲೋಚನನನ್ನೂ ಈ ಸಭೆಗೆ ಆಹ್ವಾನಿಸುವ ಅಭಿಲಾಷೆ ಅವನದು. ಆದರೆ, ಪದ್ಮಲೋಚನನಂತಹ ಸಂಪ್ರ ದಾಯಸ್ಥ ವಿಪ್ರೋತ್ತಮನೊಬ್ಬನು ಶೂದ್ರನ ಮನೆಗೆ ಬಂದಾನೆಯೆ? ದಾನದಕ್ಷಿಣೆಗಳ ಪ್ರಲೋಭನೆಗೂ ಅವನು ಒಳಗಾಗುವವನಲ್ಲ. ಆದ್ದರಿಂದ ಶ್ರೀರಾಮಕೃಷ್ಣರ ಮೂಲಕ ಹೇಳಿಸಿದರೆ ಒಪ್ಪಿಯಾನೇನೋ ಎಂದು ಮಥುರ ಅವರನ್ನು ವಿನಂತಿಸಿಕೊಂಡ. ಶ್ರೀರಾಮಕೃಷ್ಣರು ಕಲ್ಕತ್ತಕ್ಕೆ ಹೋದಾಗ ಅವನನ್ನು ಕೇಳಿದರು: "ಏನಪ್ಪ, ಮಥುರ ನಿನಗೆ ದಕ್ಷಿಣೇಶ್ವರಕ್ಕೆ ಬರಲು ಹೇಳಿಕಳಿಸಿದ್ದಾನೆ, ಬರುವೆಯಾ?"

ಪದ್ಮಲೋಚನ ನಿರ್ಯೋಚನೆಯಿಂದ ನುಡಿದ:

"ನಿಮ್ಮೊಂದಿಗಾದರೆ ನಾನು ಜಾಡಮಾಲಿಯ ಮನೆಯಲ್ಲಿ ಉಣ್ಣುವುದಕ್ಕೂ ಸಿದ್ಧ. ಇನ್ನು ಬೆಸ್ತರ ಮನೆಗೆ ಬಾರದಿರುವೆನೆ?"

ಆದರೆ ಪದ್ಮಲೋಚನನಿಗೆ ದಕ್ಷಿಣೇಶ್ವರದ ಸಭೆಗೆ ಬರಲು ಸಾಧ್ಯವಾಗದೆ ಹೋಯಿತು. ಏಕೆಂದರೆ ಅಷ್ಟರಲ್ಲೇ ಆತನ ಖಾಯಿಲೆ ಉಲ್ಬಣಿಸಿತು. ತನ್ನ ಅಂತ್ಯಕಾಲ ಸಮೀಪಿಸುತ್ತಿದೆ ಎಂಬುದನ್ನು ಕಂಡುಕೊಂಡು ಕಾಶಿಗೆ ತೆರಳಲು ಸಿದ್ಧನಾದ. ಶ್ರೀರಾಮ ಕೃಷ್ಣರ ಪಾದಧೂಳಿಯನ್ನು ಸ್ವೀಕರಿಸಿ ಕಣ್ಣಲ್ಲಿ ಹನಿದುಂಬಿದವನಾಗಿ ಅವರಿಂದ ಬೀಳ್ಕೊಂಡ. ಕಾಶಿಯನ್ನು ತಲುಪಿದ ಕೆಲದಿನಗಳಲ್ಲೇ ಕೈಲಾಸವಾಸಿಯಾದ.

## ಬೆರಗಾದ ದಯಾನಂದರು ೯

ಶ್ರೀರಾಮಕೃಷ್ಣರು ನೋಡಲು ಇಷ್ಟಪಟ್ಟ ಇನ್ನೊಬ್ಬ ವ್ಯಕ್ತಿ ಸ್ವಾಮಿ ದಯಾನಂದ ಸರಸ್ವತಿಗಳು. ಇವರು ವೇದಗಳಲ್ಲಿ ಅಸಾಧಾರಣ ಪಾಂಡಿತ್ಯವಿದ್ದವರು, ವೇದವನ್ನೇ ಜೀವನದ ಉಸಿರಾಗಿಸಿಕೊಂಡವರು. ಸತ್ಯಸಾಕ್ಷಾತ್ಕಾರಕ್ಕೆ ಮಾರ್ಗವೊಂದಿದ್ದರೆ ಅದು ವೇದಮಾರ್ಗ ಮಾತ್ರವೇ ಎಂದು ನಂಬಿದವರು. ಮುಂದೆ ಪ್ರಸಿದ್ಧಿ ಗಳಿಸಿದ 'ಆರ್ಯ ಸಮಾಜ'ವನ್ನು ಸ್ಥಾಪಿಸುವ ಎರಡು ವರ್ಷಗಳ ಮೊದಲು (೧೮೭೩ರಲ್ಲಿ) ಇವರು ಕಲ್ಕತ್ತಕ್ಕೆ ಬಂದಿದ್ದರು. ಕಲ್ಕತ್ತದಲ್ಲಿ ಬ್ರಾಹ್ಮಸಮಾಜ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲವದು. ಕಲ್ಕತ್ತಕ್ಕೆ ಬಂದ ದಯಾನಂದರಿಗೆ ಅದರ ಮುಖಂಡರಾದ ಕೇಶವಚಂದ್ರ ಸೇನನ ಹಾಗೂ ಮಹರ್ಷಿ ದೇವೇಂದ್ರನಾಥ ಟಾಗೋರರ ಪರಿಚಯವಾಯಿತು. ಅಲ್ಲದೆ, ಅಂದಿನ ಕಾಲದ ಹಿಂದೂ ಪ್ರಮುಖರನೇಕರನ್ನು ಅವರು ಭೇಟಿಯಾದರು. ಕಲ್ಕತ್ತದ ಹಲವು ಸ್ಥಳಗಳಲ್ಲಿ ವೇದದ ತತ್ವಗಳ ಮೇಲೆ ಭಾಷಣ ಮಾಡಿದರು. ಹೀಗೆ ಅಂದಿನ ಭಾರತದ ರಾಜಧಾನಿಯಾದ ಆ ಕಲ್ಕತ್ತದಲ್ಲಿ, ಮೂರ್‍ನಾಲ್ಕು ತಿಂಗಳಲ್ಲೇ ಅವರು ಹೆಸರುವಾಸಿಯಾಗಿಬಿಟ್ಟರು.

ದಯಾನಂದರು ಉದ್ದಾಮ ಪಂಡಿತರು ಹಾಗೂ ಶ್ರೇಷ್ಠ ಸಾಧಕರು ಎಂಬ ಸುದ್ದಿ ಶ್ರೀರಾಮಕೃಷ್ಣರಿಗೆ ತಲುಪಿತು. ಅಂಥವರು ಎಲ್ಲಿದ್ದರೂ ಅವರನ್ನು ನೋಡಲು ಹೋಗುವುದು ಅವರ ಪ್ರಿಯ ಹವ್ಯಾಸವಷ್ಟೆ! ಅವರೆನ್ನುತ್ತಿದ್ದರು: "ಒಬ್ಬ ವ್ಯಕ್ತಿಯನ್ನು ಬಹಳ ಜನ ಗೌರವಿಸಿ ಸತ್ಕರಿಸುತ್ತಿದ್ದಾರೆಂದರೆ ಅವರಲ್ಲಿ ಒಂದು ದೈವೀಶಕ್ತಿ ಇದೆ ಎಂದೇ ಅರ್ಥ." ಸರಿ, ಶ್ರೀರಾಮಕೃಷ್ಣರು ದಯಾನಂದ ಸರಸ್ವತಿಗಳನ್ನು ಭೇಟಿಯಾಗಲು ನಿರ್ಧರಿಸಿಯೇಬಿಟ್ಟರು. ಒಂದು ಮಧ್ಯಾಹ್ನ, ತಮ್ಮ ಭಕ್ತನಾದ ಕ್ಯಾಪ್ಟನ್ ವಿಶ್ವನಾಥ ಉಪಾಧ್ಯಾಯನನ್ನು ಒಡಗೂಡಿಕೊಂಡು ಅವನ ಸಾರೋಟಿನಲ್ಲೇ ದಯಾನಂದರ ಬಳಿಗೆ ಹೊರಟರು.

ಶ್ರೀರಾಮಕೃಷ್ಣರು ನೇರವಾಗಿ ಒಳಗೆ ಪ್ರವೇಶಿಸಿದರು, ಸ್ವಾಮಿಗಳಿಗೆ ಕರಮುಗಿದು ಶಿರಬಾಗಿ ನಮಿಸಿದರು. ಇದು ಅವರ ಎಂದಿನ ಕ್ರಮ. ದಯಾನಂದರೂ ಪ್ರತಿ ನಮಿಸಿದರು. ಶ್ರೀರಾಮಕೃಷ್ಣರು ತಮ್ಮದೇ ಆದ ವಿಧಾನದಿಂದ ದಯಾನಂದರನ್ನು ನೋಡಿದರು, ನೋಡಿ ಅಳೆದರು, ಅಳೆದು ಅವರ ಅಂತರಂಗವನ್ನರಿತರು. ದಯಾನಂದರ ಕುರಿತಾಗಿ ಮುಂದೆ ತಮ್ಮ ಶಿಷ್ಯರೊಂದಿಗೆ ಹೀಗೆನ್ನುತ್ತಾರೆ:

"ಸಿಂಥಿಯ ಉದ್ಯಾನದಲ್ಲಿ ನಾನವರನ್ನು ನೋಡಿದೆ. ಅವರಲ್ಲಿ ಸ್ವಲ್ಪ ಶಕ್ತಿಯಿರುವುದು ಕಂಡುಬಂದಿತು. ಅವರ ಎದೆ ಯಾವಾಗಲೂ ಕೆಂಪೇರಿಕೊಂಡಿರುತ್ತಿತ್ತು. ಅವರು 'ವೈಖರೀ ಸ್ಥಿತಿ'ಯಲ್ಲಿದ್ದರು. ಆದ್ದರಿಂದಲೇ ಹಗಲೂ ರಾತ್ರಿ ಒಂದೇ ಸಮನೆ ಶಾಸ್ತ್ರ ವಿಚಾರವಾಗಿ ಮಾತನಾಡುತ್ತಿದ್ದರು. ವ್ಯಾಕರಣವನ್ನು ತಮಗೆ ಬೇಕೆಂಬಂತೆ ಬಳಸಿಕೊಳ್ಳುವುದು, ಶಬ್ದಗಳ ಅರ್ಥವನ್ನು ತಿರಿಚುವುದು—ಇವುಗಳನ್ನೆಲ್ಲ ಮಾಡುತ್ತಿದ್ದರು. ತಾವೊಂದು ಹೊಸ ಮತವನ್ನು ಸ್ಥಾಪಿಸಬೇಕೆಂಬ ತವಕ ಅವರಲ್ಲಿತ್ತು."

ಶ್ರೀರಾಮಕೃಷ್ಣರು ತಮ್ಮನ್ನು ನೋಡಲು ಬಂದಿದ್ದಾಗ, ದಯಾನಂದರು ಎರ

ಡೆರಡು ನಿಮಿಷಕ್ಕೊ ಹೊರಗೆ ಹೋಗಿ ಯಾರದೋ ಬರವನ್ನು ನಿರೀಕ್ಷಿಸುತ್ತಿದ್ದರು. ಅಂದು ಕೇಶವಚಂದ್ರ ಸೇನ ಬರುವ ಕಾರ್ಯಕ್ರಮವಿತ್ತು ಎಂಬುದು ಶ್ರೀರಾಮಕೃಷ್ಣರಿಗೆ ಆಮೇಲೆ ತಿಳಿಯಿತು. ಆದರೆ ಕೊನೆಗೂ ಅವನು ಅಂದು ಬರಲೇ ಇಲ್ಲ.

ದಯಾನಂದರು ಸಾಧಾರಣತಃ ಮಾತನಾಡುತ್ತಿದ್ದುದು ಸಂಸ್ಕೃತದಲ್ಲಿ. ಅವರಿಗೆ ಬಂಗಾಳಿ ಬರುತ್ತಿರಲಿಲ್ಲ. ಆದ್ದರಿಂದ ಶ್ರೀರಾಮಕೃಷ್ಣ-ದಯಾನಂದರ ನಡುವೆ ಬಹು ಮಟ್ಟಿಗೆ ಹಿಂದಿಯಲ್ಲೇ ಸಂಭಾಷಣೆ ನಡೆಯಿತು.

ಆದರೆ ಮೊದಮೊದಲು ದಯಾನಂದರು ಶ್ರೀರಾಮಕೃಷ್ಣರೊಡನೆ ಮಾತ ನಾಡುವ ಸ್ಥಿತಿಯಲ್ಲಿರಲಿಲ್ಲ. ಏಕೆಂದರೆ ಅವರ ಮನಸ್ಸೆಲ್ಲ ಬಂಗಾಳದ ಗಣ್ಯವ್ಯಕ್ತಿಯಾದ ಕೇಶವಚಂದ್ರ ಸೇನನ ಬರುವಿಕೆಯನ್ನೇ ನಿರೀಕ್ಷಿಸುತ್ತಿತ್ತು. ಆದರೆ ಶ್ರೀರಾಮಕೃಷ್ಣರೇನೂ ಸಾಮಾನ್ಯರಲ್ಲವೆಂಬುದು ಅವರಿಗೆ ತಿಳಿಯಬೇಡವೆ ? ಬಹುಶಃ ಶ್ರೀರಾಮಕೃಷ್ಣರ ಸರಳ ವ್ಯಕ್ತಿತ್ವ ಅವರ ಮನಸ್ಸಿಗೆ ಬಂದಿರಲಿಕ್ಕಿಲ್ಲ. ಅಥವಾ ಘನವಾದ ವೇದತತ್ತ್ವಗಳ ಕುರಿತು ಚರ್ಚಿಸಲು ಇವರು ತಕ್ಕವರಲ್ಲ ಎನ್ನಿಸಿರಬೇಕು. ಈ ನಡುವೆ ದಯಾನಂದರ ಶಿಷ್ಯ ರೊಬ್ಬರು, 'ಇವರನ್ನು ಮಾತನಾಡಿಸಲು ನಮ್ಮ ಗುರುಗಳೇಕೆ, ನಾನೇ ಸಾಕು' ಎಂಬ ಭಾವದಿಂದ ಚರ್ಚೆಗೆ ಶುರು ಮಾಡಿಯೇಬಿಟ್ಟರು. ಚರ್ಚೆ ಬಹುಬೇಗ ಬೆಳೆಯಿತು. ಪರಮಾತ್ಮನ ಸಾಕಾರರೂಪವನ್ನು ಆರಾಧಿಸುವುದು, ಎಂದರೆ, ಮೂರ್ತಿಪೂಜೆ ಮಾಡುವುದು ಸರ್ವಥಾ ನಿಷಿದ್ಧ ಎಂದು ವಾದಿಸಿದರು ಆ ಶಿಷ್ಯರು. ಶ್ರೀರಾಮಕೃಷ್ಣರು ತಮ್ಮ ಅನುಭವಗಳನ್ನೇ ಆಧಾರವಾಗಿ ಕೊಟ್ಟು ಅದಕ್ಕೆ ಸಮಾಧಾನ ಹೇಳಿದರು. ಈ ವೇಳೆಗೆ ದಯಾನಂದರೂ ವಾದಭೂಮಿಗಿಳಿದರು. ತಮ್ಮ ಹರಿತವಾದ ತರ್ಕಶಾಸ್ತ್ರದ ಆಧಾರದಿಂದ ತಮ್ಮ ಅಭಿಪ್ರಾಯವನ್ನೇ ಮತ್ತೆಮತ್ತೆ ಸಮರ್ಥಿಸಿಕೊಳ್ಳುತ್ತ ವಾದ ಮಾಡಿದರು. ಅವರು ಶ್ರೀರಾಮಕೃಷ್ಣರ ಮಾತಿಗೆ ಕಿವಿಯನ್ನೇ ಕೊಡಲಿಲ್ಲ. ಇದು ಶ್ರೀರಾಮಕೃಷ್ಣರನ್ನು ಸಮಾಧಿಯ ಸಪ್ತಮ ಭೂಮಿಕೆಗೇರುವಂತೆ ಮಾಡಿತು. ಅರ್ಧ ಪ್ರಜ್ಞಾವಸ್ಥೆಯಲ್ಲಿ ಮೆಲ್ಲನೆ ನುಡಿದರು: "ಹಾಗಾದರೆ, ತಾಯಿ ಕಾಳಿಯ ದರ್ಶನಕ್ಕಾಗಿ ನಾನು ಮಾಡಿದ ಸಾಧನೆಗಳೆಲ್ಲ ವ್ಯರ್ಥವೆ ? ನನಗಾದ ದರ್ಶನಗಳು, ಅನುಭವಗಳು ಸುಳ್ಳೇ ? ಹಾಗಾದರೆ ನಾನು ಮೋಸಹೋದೆನೆ ?" ಈ ಮಾತುಗಳನ್ನು ಹೇಳುತ್ತ ಹೇಳುತ್ತ ಅತ್ಯಂತ ಗಾಢ ಸಮಾಧಿಯಲ್ಲಿ ಲೀನವಾಗಿಬಿಟ್ಟರು ! ಸ್ವತಃ ನಿಷ್ಠಾವಂತ ಸಾಧಕರಾದ ಸ್ವಾಮಿ ದಯಾನಂದರು ಶ್ರೀರಾಮಕೃಷ್ಣರಿಗುಂಟಾದ ಈ ಅಪೂರ್ವ ಸ್ಥಿತಿ ಯನ್ನು ನೋಡುತ್ತ ವಿಸ್ಮಯಮೂಕರಾಗಿಬಿಟ್ಟರು. ಅಷ್ಟೇ ಅಲ್ಲ, ಅವರೊಳಗೂ ಏನೋ ಸಂಚಾರವಾದಂತಾಗಿ ಇದ್ದಕ್ಕಿದ್ದಂತೆ ನಗಲಾರಂಭಿಸಿದರು. ಮರುಕ್ಷಣವೇ ಅಳಲಾರಂಭಿಸಿದರು. ಭಾವಾವೇಶದ ಸಂಚಾರದಿಂದಾಗಿ ಅವರ ಶರೀರವಿಡೀ ಕಂಪಿಸಿತು. ಶ್ರೀರಾಮಕೃಷ್ಣರಲ್ಲಿ ಯಾವುದೋ ಅಪೂರ್ವ ದೈವಿಕತೆಯೊಂದು ಆವಿರ್ಭಾವಗೊಂಡಿರು ವುದು ಅವರ ಅನುಭವಕ್ಕೆ ಬಂದಿತು. ಕೂಡಲೇ ಶ್ರೀರಾಮಕೃಷ್ಣರ ಪಾದಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು ! ಸ್ವಲ್ಪಹೊತ್ತಿನ ಬಳಿಕ ಶ್ರೀರಾಮಕೃಷ್ಣರು ಸಮಾಧಿ ಯಿಂದಿಳಿದರು. ದಯಾನಂದರ ಅರಿವಿನಲ್ಲಿ ದೊಡ್ಡದೊಂದು ಕ್ರಾಂತಿಯನ್ನು ಮಾಡಿದ ಘಟನೆ ಇದು. ಅವರು ಆನಂದಾಶ್ಚರ್ಯದಿಂದ ಉದ್ಗರಿಸಿದರು:

"ನಾವು ವೇದವೇದಾಂತಗಳನ್ನು ಕೇವಲ ಓದಿದ್ದೇವೆ, ಅಷ್ಟೆ. ಆದರೆ ಇವರು ಅದರ ಸಾರವನ್ನೇ ಸಾಕ್ಷಾತ್ಕರಿಸಿಕೊಂಡಿದ್ದಾರೆ, ಅನುಭವಿಸಿದ್ದಾರೆ. ಇವರನ್ನು ನೋಡಿದ

ಮೇಲೆ ನನಗೆ ಒಂದು ವಿಷಯ ಖಚಿತವಾಗಿದೆ; ಏನೆಂದರೆ, ಪಂಡಿತರೆಲ್ಲ ಶಾಸ್ತ್ರಗಳನ್ನು ಮಥಿಸಿಮಥಿಸಿ ಕೊನೆಗೂ ಮಜ್ಜಿಗೆಯನ್ನು ಕುಡಿಯುವರೇ ಹೊರತು ನವನೀತವನ್ನು ಮೆಲ್ಲುವುದೇ ಇಲ್ಲ. ಆ ಮಧುರವಾದ ನವನೀತವನ್ನು ಮೆಲ್ಲುವವರು ಇವರಂಥ ಮಹಾತ್ಮರು ಮಾತ್ರವೇ.''

ಶ್ರೀರಾಮಕೃಷ್ಣರು ಮುಗುಳ್ನಗುತ್ತ ದಯಾನಂದರಿಂದ ಬೀಳ್ಕೊಂಡು ಸಾರೋಟು ಏರಿದರು. ಕ್ಯಾಪ್ಟನ್ ವಿಶ್ವನಾಥ ಒಡಗೂಡಿಕೊಂಡ.

* * *

ಪಂಡಿತ ಜಯನಾರಾಯಣ ಇನ್ನೊಬ್ಬ ಪ್ರಾಮಾಣಿಕ ಸಾಧಕ. ಆತನನ್ನು ಭೇಟಿಯಾದ ಶ್ರೀರಾಮಕೃಷ್ಣರು ಅವನ ಬಗೆಗೆ ಹೀಗೆನ್ನುತ್ತಿದ್ದರು.

''ಆತ ನಿಜಕ್ಕೂ ಬಹಳ ದೊಡ್ಡ ಪಂಡಿತ. ಆದರೂ ಅವನಲ್ಲಿ ಅಹಂಕಾರ-ದರ್ಪಗಳು ಲೇಶವೂ ಇರಲಿಲ್ಲ. ಅವನಿಗೆ ತಾನು ಮರಣಹೊಂದುವ ದಿನಾಂಕ ಮೊದಲೇ ತಿಳಿದಿತ್ತು. ಆದ್ದರಿಂದ ತಾನು ಆ ಸಮಯದಲ್ಲಿ ಕಾಶಿಯಲ್ಲಿದ್ದು ದೇಹತ್ಯಾಗ ಮಾಡಬೇಕೆಂದಿರುವುದಾಗಿ ನನ್ನೊಡನೆ ಹೇಳುತ್ತಿದ್ದ. ಮತ್ತು ಕೊನೆಗವನು ಹಾಗೆಯೇ ಮಾಡಿಯೂಬಿಟ್ಟ.''

ಜಯನಾರಾಯಣ ಪಂಡಿತನ ಕುರಿತಾಗಿ ತಿಳಿದುಬಂದ ವಿಷಯ ಇಷ್ಟೆ.

ಕೃಷ್ಣಕಿಶೋರ ಭಟ್ಟಾಚಾರ್ಯ ಎಂಬವನು ಆರಿಯದಾಹದ ನಿವಾಸಿ. ಶ್ರೀರಾಮನ ಪರಮಭಕ್ತ. ಶ್ರೀರಾಮಕೃಷ್ಣರು ಅವನ ಮನೆಗೆ ಆಗಾಗ ಹೋಗಿಬರುವುದಿತ್ತು. ಅವನ ಪತ್ನಿಯೂ ಪರಮ ಭಕ್ತಿಮತಿ. ಶ್ರೀರಾಮಕೃಷ್ಣರ ಮೇಲೆ ಆಕೆಗೆ ಅಪಾರ ಭಕ್ತಿ. ಕೃಷ್ಣಕಿಶೋರನ ರಾಮಭಕ್ತಿಯನ್ನು ಕಂಡ ಶ್ರೀರಾಮಕೃಷ್ಣರು ಅವನ ಸಂಬಂಧವಾಗಿ ಹೇಳುತ್ತಿದ್ದರು:

''ರಾಮಮಂತ್ರದ ವಿಷಯ ಅಂತಿರಲಿ; 'ಮರಾ' ಎಂಬುದು ಕೂಡ ಮಂತ್ರವೇ ಸರಿ, ಎಂದು ನಂಬಿದವನು ಆತ! ಏಕೆಂದರೆ, ನಾರದ ಮಹರ್ಷಿಯ ಮುಖಕಮಲದಿಂದ ವ್ಯಾಧನಾದ ವಾಲ್ಮೀಕಿಗೆ ಹಾಗೆಂದೇ ಉಪದೇಶವಾಯಿತಲ್ಲವೆ? ಆದ್ದರಿಂದ 'ಮರಾ' ಎಂಬುದೂ ಮಹಾಮಂತ್ರವೇ ಎನ್ನುತ್ತಿದ್ದ ಆತ! ವಾಲ್ಮೀಕಿಯು 'ಮರಾ', 'ಮರಾ' ಎಂದು ಶ್ರದ್ಧಾಭಕ್ತಿಯಿಂದ ಜಪಿಸಿದ್ದರ ಫಲವಾಗಿಯೇ ಅವನ ಮನದಲ್ಲಿ ಸಮಗ್ರ ರಾಮಾಯಣದ ಲೀಲೆ ಚಿತ್ರಚಿತ್ರವಾಗಿ ವ್ಯಕ್ತವಾಯಿತು. ಅದನ್ನು ಬರೆದು ಮಹಾ ಕವಿ ಎನಿಸಿದ.

''ಕೃಷ್ಣಕಿಶೋರ ದೊಡ್ಡ ಕಷ್ಟ-ಸಂಕಟಗಳಿಗೆ ಗುರಿಯಾಗಬೇಕಾಯಿತು. ಆತನಿಗೆ ಇಬ್ಬರು ಗಂಡುಮಕ್ಕಳು; ಯೋಗ್ಯರು. ಆದರೆ ಇಬ್ಬರೂ ಅಕಾಲಮರಣಕ್ಕೀಡಾದರು. ಕೃಷ್ಣಕಿಶೋರ ಅಂಥಾ ದೊಡ್ಡ ಭಕ್ತನಾಗಿದ್ದರೂ ಕೂಡ ಮೊದಮೊದಲು ಈ ಪುತ್ರಶೋಕವನ್ನು ತಾಳಲಾರದೆ ವಿಲವಿಲನೆ ಒದ್ದಾಡಿದ.''

ಹೀಗೆ ಶ್ರೀರಾಮಕೃಷ್ಣರು ನಾನಾ ಬಗೆಯ ಪಂಡಿತವರೇಣ್ಯರನ್ನು, ಸಾಧಕರನ್ನು ಸಂಧಿಸಿದುದು ಧಾರ್ಮಿಕ ಪ್ರವೃತ್ತಿಯ ಜನರಲ್ಲಿ ಹೆಚ್ಚಿನ ಧರ್ಮಶ್ರದ್ಧೆಯನ್ನುಂಟು ಮಾಡಿತು.

## ದೇವೇಂದ್ರ..! ದೇವೇಂದ್ರ..! ೧೦

ಶ್ರೀರಾಮಕೃಷ್ಣರು ತಮ್ಮ ಸಾಧನಾಕಾಲದಲ್ಲಿ ಭೇಟಿ ಮಾಡಿದ ಗಣ್ಯ ವ್ಯಕ್ತಿಗಳಲ್ಲಿ ಪ್ರಮುಖರಲ್ಲೊಬ್ಬರು ದೇವೇಂದ್ರನಾಥ ಟಾಗೋರ್. ಇವರು ಅಂದಿನ ಪ್ರಸಿದ್ಧ ಧಾರ್ಮಿಕ ಸಂಚಲನವಾದ 'ಆದಿ ಬ್ರಾಹ್ಮಸಮಾಜ'ದ ಸ್ಥಾಪಕರು. ೧೮೨೮ರಲ್ಲಿ 'ಬ್ರಾಹ್ಮ ಸಭಾ' ಎಂಬ ಹೆಸರಿನಲ್ಲಿ ರಾಜಾ ರಾಮಮೋಹನ ರಾಯನಿಂದ ಪ್ರಾರಂಭಿತವಾದ ಈ ಸಂಸ್ಥೆಯು ಟಾಗೋರರ ನೇತೃತ್ವದಲ್ಲಿ ಬಹುಬೇಗ ಬೃಹದಾಕಾರವಾಗಿ ಬೆಳೆದು ಅಂದಿನ ಸಾಮಾಜಿಕ-ಧಾರ್ಮಿಕ ಜೀವನದ ಮೇಲೆ ಗಾಢ ಪ್ರಭಾವವನ್ನು ಬೀರಿತು. ಟಾಗೋರರ ಶ್ರದ್ಧಾಭಕ್ತಿಗಳನ್ನೂ ವ್ಯಕ್ತಿತ್ವದ ವರ್ಚಸ್ಸನ್ನೂ ಕಂಡು ಜನ ಅವರನ್ನು 'ಮಹರ್ಷಿ' ಎಂದು ಗೌರವಿಸಿದರು.

ಓರ್ವ ಧಾರ್ಮಿಕ ಮುಖಂಡ ಹಾಗೂ ಆಧ್ಯಾತ್ಮಿಕ ವ್ಯಕ್ತಿಯೆಂದು ಪ್ರಸಿದ್ಧರಾದ ಟಾಗೋರರ ಕೀರ್ತಿ ಶ್ರೀರಾಮಕೃಷ್ಣರ ಕಿವಿಯನ್ನು ಮುಟ್ಟಿತು. ಟಾಗೋರರು ವೈರಾಗ್ಯ ಶಾಲಿಗಳೆಂದೂ ಭಕ್ತಿಮತಿಗಳೆಂದೂ ಅವರು ಕೇಳಿತಿಳಿದರು. ಕೂಡಲೇ ಅವರು ಟಾಗೋರರನ್ನು ಭೇಟಿಯಾಗಲು ಉತ್ಸುಕರಾದರು. ಮಥುರನನ್ನು ಕೇಳಿದರು:

"ಮಥುರ, ನಾನೊಮ್ಮೆ ಆ ದೇವೇಂದ್ರನಾಥ ಟಾಗೋರರನ್ನು ನೋಡಬೇಕಲ್ಲ! ಅವರು ದೊಡ್ಡ ಭಕ್ತರಂತೆ; ಬಹಳವಾಗಿ ಭಗವನ್ನಾಮಜಪ ಮಾಡುತ್ತಾರಂತೆ! ನನ್ನನ್ನು ಅವರಲ್ಲಿಗೆ ಕರೆದುಕೊಂಡು ಹೋಗುತ್ತೀಯಾ?"

ಮಥುರ ಶ್ರೀರಾಮಕೃಷ್ಣರಿಗಾಗಿ ಏನು ಬೇಕಾದರೂ ಮಾಡಿಯಾನು. ಈ ಕ್ಷಣ ಬೇಕೆಂದರೆ ಅವರಿಗಾಗಿ ನೂರಲ್ಲದಿದ್ದರೆ ಸಾವಿರ ರೂಪಾಯಿ ಖರ್ಚು ಮಾಡಿಯಾನು. ಆದರೆ ಕರೆಸಿಕೊಳ್ಳದೆಯೇ ದೊಡ್ಡಮನುಷ್ಯರ ಮನೆಗೆ ಹೋಗುವುದು ಮಾತ್ರ ಅವನ ಜಾಯಮಾನಕ್ಕೇ ಒಗ್ಗದ ಕೆಲಸ! ನಿರಾಸಕ್ತಿಯಿಂದಲೇ ಉತ್ತರಿಸಿದ:

"ಏನು, ದೇವೇಂದ್ರನ ಮನೆಗೇ...? ಆದರೆ, ಅವನೇನೂ ಈಗ ನಮ್ಮನ್ನು ಕರೆದಿಲ್ಲವಲ್ಲ? ಹೇಗೆ ಹೋಗುವುದು?"

"ಅವರೇ ಕರೆಯಲಿ ಎಂದು ಕುಳಿತಿದ್ದರೆ ಆಗುತ್ತದೆಯೆ? ನೀನು ಸುಮ್ಮನೆ ಬಾ. ನೋಡಿಕೊಂಡು ಬಂದುಬಿಡೋಣ."

ಶ್ರೀರಾಮಕೃಷ್ಣರ ಬಾಯಿಂದ ಒಮ್ಮೆ ಒಂದು ಮಾತು ಬಂದಿತೆಂದರೆ ಮುಗಿ ಯಿತು. ಅದು ನಡೆಯಲೇಬೇಕು. ಇದು ಮಥುರನಿಗೆ ಮನದಟ್ಟಾಗಿದ್ದ ವಿಷಯವೇ. ವಿಧಿಯಿಲ್ಲದೆ, ಕೊನೆಗೆ ಹೇಳಿದ:

"ಸರಿ, ಹಾಗೆಯೇ ಆಗಲಿ. ಹೇಗಿದ್ದರೂ ಅವನು ಕಾಲೇಜಿನಲ್ಲಿ ನನ್ನ ಸಹಪಾಠಿ ಯಾಗಿದ್ದವನು; ಪರಿಚಿತನೇ. ಹೋಗೋಣ."

ಒಂದು ದಿನ ಶ್ರೀರಾಮಕೃಷ್ಣರು ಮಥುರ-ಹೃದಯರ ಸಂಗಡ ಟಾಗೋರರ ಮನೆಗೆ ಹೊರಟರು. ಟಾಗೋರರ ಮನೆ ಜೊರಾಸಾಂಕೋ ಎಂಬಲ್ಲಿ; ದಕ್ಷಿಣೇಶ್ವರ ದಿಂದ ಎಂಟು ಮೈಲಿ. ಟಾಗೋರರಿಗಾಗ ಸುಮಾರು ಐವತ್ತು ವರ್ಷ; ಶ್ರೀರಾಮಕೃಷ್ಣರಿ ಗಿಂತ ಇಪ್ಪತ್ತು ವರ್ಷ ಹಿರಿಯರು.

ಮೂವರೂ ಗಾಡಿಯಿಂದಿಳಿದು ಟಾಗೋರರ ಮನೆಯೊಳಗೆ ಬಂದರು. ಶ್ರೀರಾಮಕೃಷ್ಣರೂ ಹೃದಯನೂ ಹಜಾರದ ಹೊರಗೇ ನಿಂತರು. ಮಥುರ ಸೀದಾ ಒಳನಡೆದ. ಬಹಳ ದಿನಗಳ ಮೇಲೆ ಬಂದ ಸ್ನೇಹಿತನನ್ನು ಕಂಡು ಟಾಗೋರರಿಗೆ ಆಶ್ಚರ್ಯ.

"ಓಹೊ, ಮಥುರ! ಅಪರೂಪದ ಭೇಟಿ! ಸೌಖ್ಯವಾಗಿದ್ದೀಯಾ?"

"ಇಷ್ಟರಮಟ್ಟಿಗಿದ್ದೇನಪ್ಪ. ನೀವೆಲ್ಲ ಸೌಖ್ಯ ತಾನೆ?...ಅದಿರಲಿ, ಈಗ ನನ್ನ ಜೊತೆ ಒಬ್ಬರು ಬಂದಿದ್ದಾರೆ—ಶ್ರೀರಾಮಕೃಷ್ಣ ಪರಮಹಂಸರು ಅಂತ. ನನ್ನ ಪರಮ ಆಪ್ತರು. ನಿನ್ನನ್ನು ನೋಡಬೇಕೆಂದರು. ಕರೆತಂದಿದ್ದೇನೆ."

"ಹೌದೆ? ಎಲ್ಲಿದ್ದಾರೆ ಅವರು?" ಎನ್ನುತ್ತ, ಶಾಲ್ಯವನ್ನು ಸರಿಪಡಿಸಿಕೊಳ್ಳುತ್ತ ಟಾಗೋರರು ಮಥುರನೊಡನೆ ಹೊರಬಂದರು.

ಬಂದು ನೋಡುತ್ತಾರೆ—ಕೃಶಕಾಯದ ವ್ಯಕ್ತಿ; ಕುರುಚಲು ಗಡ್ಡ. ಪಂಚೆಯ ಮೇಲೆ ಷರಟು ಧರಿಸಿದ್ದಾರೆ. ಸ್ವಲ್ಪವೂ ಶಿಸ್ತು-ಸೊಗಸು ಇಲ್ಲ. ವಿನಯವೆಂಬುದು ಅವರ ವ್ಯಕ್ತಿತ್ವದಲ್ಲೇ ಸೇರಿಕೊಂಡಿದೆ. ಮುಖದಲ್ಲಿ ಮಾತ್ರ ಅನಿರ್ವಚನೀಯ ಪ್ರಭೆ!

ಟಾಗೋರರನ್ನು ಕಂಡೊಡನೆ ಶ್ರೀರಾಮಕೃಷ್ಣರು ತಮ್ಮ ಸ್ವಭಾವದಂತೆ ಕೈಜೋಡಿಸಿ, ಶಿರಬಾಗಿ ನಮಸ್ಕರಿಸಿದರು. 'ಯಾರಪ್ಪ ಈ ವಿಲಕ್ಷಣ ಮನುಷ್ಯ!' ಎಂದುಕೊಂಡರು ಟಾಗೋರರು. ಪ್ರತಿನಮಸ್ಕಾರ ಹೇಳಿ ಒಂದು ಬಗೆಯ ಕುತೂಹಲ-ಬಿಗುಮಾನಗಳಿಂದ ಸ್ವಾಗತಿಸಿದರು.

ಎಲ್ಲರೂ ಹಜಾರದಲ್ಲಿ ಕುಳಿತರು. ದೇವೇಂದ್ರನಾಥರ ನಾಲ್ಕಾರು ಮಕ್ಕಳು ಅಲ್ಲಿ ಓಡಿಯಾಡುತ್ತಿದ್ದರು. ಕುಟುಂಬದ ವೈದ್ಯನೊಬ್ಬ ಅವರನ್ನೆಲ್ಲ ಪರೀಕ್ಷೆ ಮಾಡುತ್ತ ಔಷಧಿ ಚೀಟಿ ಬರೆಯುತ್ತಿದ್ದುದನ್ನು ಶ್ರೀರಾಮಕೃಷ್ಣರು ಗಮನಿಸಿದರು. ನಾಲ್ಕುವರ್ಷದ ಬಾಲಕ ರವೀಂದ್ರನಾಥನೂ (ಮುಂದೆ ರಾಷ್ಟ್ರಕವಿಯಾದವನು) ಅಲ್ಲಿದ್ದ. ಪರಸ್ಪರ ಪರಿಚಯ ಕುಶಲೋಪರಿಗಳಾದುವು. ಟಾಗೋರರ ಮಾತು-ವರ್ತನೆಗಳಲ್ಲಿ ಒಂದು ಬಗೆಯ ಪ್ರತಿಷ್ಠೆ ಎದ್ದು ಕಾಣುತ್ತಿತ್ತು. ಮನುಷ್ಯರ ಅಂತರಂಗವನ್ನೇ ಅಳೆಯಬಲ್ಲವರು ಶ್ರೀರಾಮಕೃಷ್ಣರು. ಮುಂದೊಮ್ಮೆ ಅವರು ಹೇಳುತ್ತಾರೆ: "ನಾನು ದೇವೇಂದ್ರರನ್ನು ನೋಡಿದ ಕೂಡಲೇ ಕಂಡುಕೊಂಡೆ, ಅವರೊಬ್ಬ ಬಿಂಕದ ಮೂರ್ತಿ ಎಂದು. ಅಲ್ಲದೆ, ಅವರಿಗೆ ಆ ಬಿಂಕ ಸಹಜವೆ. ಅಂಥಾ ಶ್ರೀಮಂತಿಕೆ, ವೈಭವ; ಅಂಥಾ ಪಾಂಡಿತ್ಯ, ಹೆಸರು-ಕೀರ್ತಿ—ಇವೆಲ್ಲ ಇದ್ದಮೇಲೆ ಜೊತೆಗೊಂದಿಷ್ಟು ಡಂಬವಿಲ್ಲದಿರುತ್ತದೆಯೆ? ಆ ಬಿಂಕದ ಕೊಂಕನ್ನು ಕಂಡು ಆಮೇಲೆ ನಾನು ಮಥುರನನ್ನು ಕೇಳಿದೆ, 'ಸರಿ, ಈ ಅಹಂಕಾರದ ಮೂಲ ಯಾವುದು? ಅದು ಜ್ಞಾನದಿಂದ ಉಂಟಾದುದೋ ಅಜ್ಞಾನದಿಂದಲೊ? ಬ್ರಹ್ಮಜ್ಞಾನಿಯಾದವನಿಗೆ 'ನಾನು ಪಂಡಿತ, ನಾನು ಜ್ಞಾನಿ, ನಾನೊಬ್ಬ ಶ್ರೀಮಂತ' ಎಂಬಂತಹ ಭಾವನೆಗಳಿರಲು ಸಾಧ್ಯವೆ?' ಎಂದು."

ಟಾಗೋರರ ಸ್ವಭಾವಕ್ಕೆ ತದ್ವಿರುದ್ಧವಾಗಿ, ಶ್ರೀರಾಮಕೃಷ್ಣರ ವರ್ತನೆ ನೇರ, ಸಹಜ. ಸ್ವಲ್ಪ ಹೊತ್ತು ಮಾತುಕತೆಯಾದ ಮೇಲೆ ಶ್ರೀರಾಮಕೃಷ್ಣರೆಂದರು: "ನಿಮ್ಮ ಆಧ್ಯಾತ್ಮಿಕ ಪ್ರವೃತ್ತಿ ಎಂಥದು, ಸ್ವಭಾವವೆಂಥದು ಎಂಬುದನ್ನು ತಿಳಿಯಲು ನನಗೆ ಇಷ್ಟ. ಅದಕ್ಕಾಗಿ ನಿಮ್ಮ ಅಂಗಲಕ್ಷಣಗಳನ್ನು ಸ್ವಲ್ಪ ನೋಡಬಹುದೆ?"

ಟಾಗೋರರು ಹೆಚ್ಚೇನೂ ಅಚ್ಚರಿಯನ್ನು ತೋರ್ಪಡಿಸದೆ ಅಥವಾ ಕಸಿವಿಸಿ

ಗೊಳ್ಳದೆ ಅದಕ್ಕೊಪ್ಪಿ ತಮ್ಮ ಮೇಲಂಗಿಯನ್ನು ಕಳಚಿದರು. ಅವರದು ಗೋಧಿಯ ಮೈಬಣ್ಣ, ಎದೆ ಮಾತ್ರ ಕೆಂಪೇರಿತ್ತು, ಅವರ ಕೈಬೆರಳುಗಳು, ಕಣ್ಣುಗಳು ಹಾಗೂ ವಕ್ಷಸ್ಥಲ—ಇವುಗಳನ್ನು ಶ್ರೀರಾಮಕೃಷ್ಣರು ಪರಿಕಿಸಿ ನೋಡಿದರು. ಟಾಗೋರರ ಆಧ್ಯಾತ್ಮಿಕ ಉನ್ನತಿಯ ಬಗ್ಗೆ ಅವರು ಬಾಯಲ್ಲೇನೂ ಹೇಳದಿದ್ದರೂ, ಬಹುಶಃ 'ಪರವಾಗಿಲ್ಲ' ಎಂದು ತೀರ್ಮಾನಿಸಿರಬೇಕು. ಇದು ಮುಂದೆ ಅವರಾಡುವ ಮಾತುಗಳಿಂದ ವ್ಯಕ್ತವಾಗುತ್ತದೆ.

ಮತ್ತೆ ಶ್ರೀರಾಮಕೃಷ್ಣರು ಜಮಖಾನೆಯ ಮೇಲೆ ಕುಳಿತು ಮಾತನಾಡತೊಡಗಿದರು. ಆದರೆ ಸ್ವಲ್ಪಹೊತ್ತಿನಲ್ಲೇ ಸಮಾಧಿಸ್ಥರಾಗಿಬಿಟ್ಟರು. ಕೆಲ ನಿಮಿಷ ಮೌನ. ಈಗ ಶ್ರೀರಾಮಕೃಷ್ಣರು ನಗತೊಡಗಿದರು. ಗಹಗಹಿಸಿ ನಕ್ಕರು. ಬಳಿಕ ನಗು ನಿಂತಿತು. ಮೆಲ್ಲನೆ ಬಾಹ್ಯಪ್ರಜ್ಞೆ ಮರಳಿತು. ತಾವು ನಕ್ಕದ್ದೇಕೆಂದು ಅವರೂ ಹೇಳಲಿಲ್ಲ, ಇತರರೂ ಕೇಳಲಿಲ್ಲ. ಆದರೆ ಮುಂದೊಮ್ಮೆ ಅವರೇ ತಮ್ಮ ಶಿಷ್ಯರ ಮುಂದೆ ಆ ಬಗ್ಗೆ ತಿಳಿಸುತ್ತಾರೆ:

"ದೇವೇಂದ್ರರೊಡನೆ ಮಾತನಾಡುತ್ತಿದ್ದಾಗ ಇದ್ದಕ್ಕಿದ್ದಂತೆ ನನಗೆ ಒಂದು ಸ್ಥಿತಿ ಬಂದುಬಿಟ್ಟಿತು. ಅದೆಂತಹ ಸ್ಥಿತಿಯೆಂದರೆ, ಆಗ, ಒಬ್ಬ ಮನುಷ್ಯ ನಿಜವಾಗಿಯೂ ಎಂಥವನು ಎಂಬುದು ನನ್ನ ಕಣ್ಣಿಗೆ ಸ್ಪಷ್ಟವಾಗಿ ಕಾಣಿಸುತ್ತದೆ. ನನ್ನೊಳಗಿನಿಂದ ನಗು ಉಕ್ಕಿಬಂದಿತು. ಆ ಅವಸ್ಥೆ ಬಂದಾಗ ವಿದ್ವಾಂಸರೂ ಪುಸ್ತಕಜ್ಞಾನಿಗಳೂ ತೃಣಸಮಾನರಾಗಿ ಕಾಣುತ್ತಾರೆ. ಪಂಡಿತರಲ್ಲಿ ವಿವೇಕ-ವೈರಾಗ್ಯ ಇಲ್ಲ ಎಂದು ಕಂಡುಬಂದರೆ ಅವರನ್ನು ನಾನು ಕಸದಂತೆ ಪರಿಗಣಿಸುತ್ತೇನೆ. ಅಂಥವರು, ಆಕಾಶದಲ್ಲೇ ಹಾರುತ್ತಿದ್ದರೂ ಕೆಳಗೆ ಹೆಣದ ಗುಂಡಿಯಲ್ಲೇ ದೃಷ್ಟಿ ನೆಟ್ಟಿರುವ ಹದ್ದಿನಂತೆ."

ಒಟ್ಟಿನಲ್ಲಿ ಟಾಗೋರರ ಬಗ್ಗೆ ಶ್ರೀರಾಮಕೃಷ್ಣರಿಗಾದದ್ದು ನಿರಾಸೆಯೇ. ಜನ ಅವರ ಕುರಿತಾಗಿ ಯಾವ ಉನ್ನತ ಕಲ್ಪನೆಯನ್ನಿಟ್ಟುಕೊಂಡಿದ್ದರೋ ಅವರು ಆ ಎತ್ತರವನ್ನು ಮುಟ್ಟಿಲ್ಲ ಎಂದು ತಿಳಿದುಹೋಯಿತು. ಕ್ಷಣಾರ್ಧದಲ್ಲಿ ಶ್ರೀರಾಮಕೃಷ್ಣರು ಅವರನ್ನು ಅಳೆದುಬಿಟ್ಟರು. ಅದನ್ನವರು ಹೀಗೆ ಹೇಳುತ್ತಾರೆ:

"ಅವರು ತಮ್ಮ ಜೀವನದಲ್ಲಿ ಯೋಗ-ಭೋಗಗಳೆರಡನ್ನೂ ಸೇರಿಸಿಕೊಂಡದ್ದನ್ನು ಕಂಡೆ. ಅವರಿಗೆ ಅನೇಕ ಮಕ್ಕಳು; ಎಲ್ಲವೂ ಚಿಕ್ಕವು. ಅವರು ಜ್ಞಾನಿಗಳಾಗಿದ್ದರೂ ಪ್ರಾಪಂಚಿಕತೆಯಲ್ಲೇ ಮುಳುಗಿದ್ದರು."

ಶ್ರೀರಾಮಕೃಷ್ಣರು ಪ್ರಕೃತಿಸ್ಥರಾದ ಮೇಲೆ ಟಾಗೋರರಿಗೆ ಹೇಳಿದರು:

"ನೀವು ಕಲಿಯುಗದ ಜನಕನೇ ಸರಿ."

ಹೀಗೆನ್ನುತ್ತ ಬಳಿಕ ಒಂದು ಹಾಡನ್ನು ಹಾಡಿದರು:

*ಈ ಜಗವೆಂಬುದು ಮೋಜಿನ ಮನೆಯೊ!*
*ಇದರೊಳು ನಾ ಮನಬಂದೊಲು ನಡೆವೆ.*
*ತಿನ್ನುವೆ-ಕುಡಿಯುವೆ-ಕುಣಿಯುವೆ-ನಲಿವೆ.*

*ಜನಕನ ತೇಜವ ಮೀರಿದರಾರೊ?*
*ಇಹ-ಪರದಲ್ಲೂ ಕೊರತೆಯಿಲ್ಲದೊಲು ಬಾಳಿದನವನು;*

ಅದನೂ ಇದನೂ—ಎರಡನು ಹಿಡಿದು
ಕುಡಿದನು ತುಂಬಿದ ಹಾಲ್ ಬಟ್ಟಲನು!.....*

"ನೀವು ಸಂಸಾರದಲ್ಲೇ ಇದ್ದರೂ ಭಗವಂತನಲ್ಲಿ ಮನಸ್ಸಿಟ್ಟಿದ್ದೀರಿ ಎಂದು ಕೇಳಿದೆ. ಆದ್ದರಿಂದಲೇ ನಿಮ್ಮನ್ನು ನೋಡಲು ಬಂದೆ. ದಯವಿಟ್ಟು ನನಗೆ ದೇವರ ವಿಷಯ ಏನಾದರೂ ಸ್ವಲ್ಪ ತಿಳಿಸಿ."

ಆಗ ಟಾಗೋರರು ವೇದಗಳಿಂದ ಬಹಳ ಅರ್ಥಗರ್ಭಿತವಾದ ಕೆಲವು ಮಂತ್ರಗಳನ್ನು ಎತ್ತಿಹೇಳಿ ಅರ್ಥವನ್ನು ವಿವರಿಸಿದರು. ಅವುಗಳಲ್ಲೊಂದು ಶ್ರೀರಾಮಕೃಷ್ಣರ ಮೇಲೆ ಬಹಳ ಪ್ರಭಾವ ಬೀರಿತು.

ಆ ಶ್ಲೋಕದ ಅರ್ಥ ಹೀಗಿದೆ—'ಈ ಜಗತ್ತು ಒಂದು ಬೃಹತ್ತಾದ ಗೊಂಚಲು ದೀಪ (Chandelier) ಇದ್ದಂತೆ; ಪ್ರತಿಯೊಂದು ಜೀವಿಯೂ ಅದರ ಒಂದೊಂದು ದೀಪದಂತೆ.'

ಇದನ್ನು ಕೇಳಿ ಶ್ರೀರಾಮಕೃಷ್ಣರಿಗೆ ಎಷ್ಟು ಸಂತೋಷವಾಯಿತೆಂದರೆ ತಕ್ಷಣ ಅವರು ಸಮಾಧಿಸ್ಥರಾದರು. ಅವರಿಗೆ ಅಷ್ಟು ಸಂತೋಷವಾಗಲು ಕಾರಣವಿತ್ತು. ಪಂಚವಟಿಯಡಿಯಲ್ಲಿ ಧ್ಯಾನ ಮಾಡುತ್ತಿದ್ದಾಗ ಅವರೊಮ್ಮೆ ಅಂಥದೇ ದರ್ಶನವನ್ನು ಪಡೆದಿದ್ದರು. ಬಾಹ್ಯಪ್ರಜ್ಞೆ ಮರಳಿದ ಮೇಲೆ ಶ್ರೀರಾಮಕೃಷ್ಣರು ಮೃದುವಾಗಿ ನುಡಿದರು: "ಹೌದು; ಅದು ಹಾಗಿರುವುದು ನಿಜವೇ. ಎಲ್ಲಿ, ಅದನ್ನು ಸ್ವಲ್ಪ ವಿವರಿಸಿ."

ಟಾಗೋರರು: "ಭಗವಂತ ತನ್ನ ಮಹಿಮೆ-ವೈಭವಗಳನ್ನು ತಿಳಿಯಪಡಿಸುವುದಕ್ಕಾಗಿಯೇ ಮನುಷ್ಯನನ್ನು ಸೃಷ್ಟಿಸಿರುವುದು. ಇಲ್ಲದಿದ್ದರೆ ಅದನ್ನು ಕಂಡು ಮೆಚ್ಚಿಕೊಳ್ಳುವವರು ಯಾರು? ಗೊಂಚಲುದೀಪದಲ್ಲಿ ದೀಪಗಳೇ ಇಲ್ಲದೆಹೋದರೆ ಎಲ್ಲವೂ ಅಂಧಕಾರಮಯವಾಗುತ್ತದೆ. ಆಗ ಆ ಗೊಂಚಲನ್ನೂ ಕಾಣಲು ಸಾಧ್ಯವಿಲ್ಲ."

ಸಹೃದಯ ವಾತಾವರಣದಲ್ಲಿ ಮಾತುಕತೆ ಹೀಗೆಯೇ ಬಹಳ ಹೊತ್ತು ಮುಂದುವರಿಯಿತು. ಟಾಗೋರರಿಗೆ ಬಹಳ ಆನಂದವಾಗಿಬಿಟ್ಟಿತು. ಅಂದಿಗೆ ಎರಡುಮೂರು ದಿನಗಳ ಮೇಲೆ ಬ್ರಾಹ್ಮಸಮಾಜದ ವಾರ್ಷಿಕೋತ್ಸವ ನಡೆಯುವುದಿತ್ತು. ಶ್ರೀರಾಮಕೃಷ್ಣರನ್ನು ಆಹ್ವಾನಿಸಿ ಟಾಗೋರರೆಂದರು: "ನೀವದಕ್ಕೆ ಬರಲೇಬೇಕು."

"ನಾನು ಬರುವುದು, ಬಿಡುವುದು ಯಾವುದೂ ನನ್ನ ಕೈಯಲ್ಲಿಲ್ಲ. ಅದೆಲ್ಲ ಭಗವಂತನ ಇಚ್ಛೆಯನ್ನವಲಂಬಿಸಿದೆ. ನೀವೇ ನೋಡುತ್ತಿದ್ದೀರಲ್ಲ ನನ್ನ ಸ್ಥಿತಿಯನ್ನು! ಆತ ನನ್ನನ್ನು ಯಾವಾಗ ಯಾವ ಸ್ಥಿತಿಯಲ್ಲಿಡುತ್ತಾನೋ ಹೇಳಬರುವುದಿಲ್ಲ. ನಾನು ಹೇಗೆ ಮಾತು ಕೊಡಲಿ?"

"ಅದಾಗದು; ನೀವು ಬರಲೇಬೇಕು. ಆದರೆ ಒಂದು ಮಾತು—ನೀವು ಸ್ವಲ್ಪ ನೀಟಾಗಿ ಬಟ್ಟೆಬರೆ ಹಾಕಿಕೊಂಡು ಉತ್ತರೀಯ ಹೊದ್ದು ಬರಬೇಕು. ಇಲ್ಲದೆ ಹೋದರೆ,

---

* ಜನಕ ಮಹಾರಾಜನ ಯೋಗ-ಭೋಗ-ಸಂಯೋಗವನ್ನು ಕೊಂಡಾಡುವ ಈ ಹಾಡನ್ನು ಶ್ರೀರಾಮಕೃಷ್ಣರು ಕೆಲವೊಮ್ಮೆ (ಹಚ್ಚಿನ ವೇಳೆ ತಮಾಷೆಗಾಗಿ) ಹಾಡುತ್ತಿದ್ದರು. ನಿಜಕ್ಕೂ ಇದನ್ನೊಂದು ಅಣಕು ಕವಿತೆಯೆನ್ನಬಹುದು. ಬಂಗಾಳೀ ಸಂತಕವಿ ರಾಮಪ್ರಸಾದನಿಗೆ 'ಪ್ರತಿಸ್ಪರ್ಧಿ'ಯಂತಿದ್ದ ಮತ್ತೊಬ್ಬ ಕವಿಯ ರಚನೆ ಇದು. ರಾಮಪ್ರಸಾದನು ತ್ಯಾಗ-ವೈರಾಗ್ಯಗಳನ್ನು ಎತ್ತಿಹಿಡಿಯುವ ಕವನಗಳನ್ನು ರಚಿಸಿದರೆ ಈತ ಅದಕ್ಕೆ ವಿರುದ್ಧಭಾವದ ಹಾಡುಗಳನ್ನು ಬರೆಯುತ್ತಿದ್ದ.

ಯಾರಾದರೂ ಒಂದು ಮಾತು ಅಂದುಬಿಡುತ್ತಾರೆ. ಅದನ್ನು ನಾನು ಸಹಿಸಲಾರೆ."

"ಅಯ್ಯಯ್ಯೊ! ಅದುಮಾತ್ರ ಸಾಧ್ಯವಿಲ್ಲ. ನಾನೊಬ್ಬ 'ಬಾಬು' ಆಗಲಾರೆನಪ್ಪ!"

ಇದನ್ನು ಕೇಳಿ ಅಲ್ಲಿದ್ದವರೆಲ್ಲ ಹೊಟ್ಟೆತುಂಬ ನಕ್ಕರು. ಟಾಗೋರರರೂ ನಕ್ಕರು. ಆದರೆ ಅವರಿಗೇನೂ ಈ ಮಾತು ಒಪ್ಪಿಗೆಯಾಯಿತೆಂದಲ್ಲ. ಮರುದಿನವೇ ಅವರಿಂದ ಮಥುರನಿಗೊಂದು ಪತ್ರ ಬಂದಿತು. ಸಮಾರಂಭಕ್ಕೆ ಬರಬೇಕೆಂದು ಶ್ರೀರಾಮಕೃಷ್ಣರಿಗಿತ್ತಿದ್ದ ಆಹ್ವಾನವನ್ನು ರದ್ದುಪಡಿಸಿ, ನಯವಾಗಿಯೇ ಬರೆದಿದ್ದರು: "ಉತ್ತರೀಯವನ್ನು ಹೊದೆಯದೆ ಬರುವುದು ಸಭ್ಯತೆಯಲ್ಲವಾದುದರಿಂದ ಶ್ರೀರಾಮಕೃಷ್ಣರು ಸಮಾರಂಭಕ್ಕೆ ಬರದಿರುವುದು ಉತ್ತಮವೆಂದು ನಮ್ಮ ಅಭಿಪ್ರಾಯ."

ಮಥುರ ಪತ್ರದ ವಿಷಯವನ್ನು ತಿಳಿಸಿದಾಗ ಶ್ರೀರಾಮಕೃಷ್ಣರು ನಕ್ಕರು. ಟಾಗೋರರರು ಅವರನ್ನು ಆಹ್ವಾನಿಸಿದಾಗ ಅವರು ಭಗವದಿಚ್ಛೆಯ ಮಾತನ್ನು ಆಡಿದುದಕ್ಕೆ ಈಗ ಅರ್ಥ ಹೊಳೆಯಿತು ಮಥುರನಿಗೆ.

ಟಾಗೋರರನ್ನು ಭೇಟಿಯಾದ ಶ್ರೀರಾಮಕೃಷ್ಣರಿಗೆ ಅವರ ವ್ಯಕ್ತಿತ್ವದ ಬಗ್ಗೆ ಎಂತಹ ಅಭಿಪ್ರಾಯ ಮೂಡಿತೆಂಬುದನ್ನು ತಿಳಿಯಲು ಸ್ವಾರಸ್ಯವಾಗಿದೆ. ಒಮ್ಮೆ ಅವರ ಭಕ್ತ ಅಧರಸೇನ ಎಂಬವನು ಅವರೊಡನೆ ಹೇಳಿದ:

"ಸ್ವಾಮಿ, ನಿಮ್ಮಂತಹ ವ್ಯಕ್ತಿಗಳು ಈ ಭೂಮಿ ಸೃಷ್ಟಿಯಾದಂದಿನಿಂದ ಆರೇಳು ಜನರಿಗಿಂತ ಹೆಚ್ಚು ಜನಿಸಿರಲಾರರು ಎಂದು ನಾನು ಖಂಡಿತವಾಗಿ ಹೇಳಬಲ್ಲೆ."

"ಅದು ಹೇಗೆ ಹೇಳುತ್ತಿ? ಭಗವಂತನಿಗಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದವರು ಬಹಳಷ್ಟು ಜನ ಇದ್ದಾರೆ. ಮನುಷ್ಯ ತನ್ನ ಸಂಪತ್ತನ್ನು ತ್ಯಾಗಮಾಡಿದಾಗ ಜನ ಅವನನ್ನು ಗುರುತಿಸದೆ ಇರುವುದಿಲ್ಲ. ಆದರೆ ತ್ಯಾಗ ಮಾಡಿಯೂ ಜನರ ಕಣ್ಣಿಗೆ ಬೀಳದಂತಿರುವವರೂ ಇದ್ದಾರೆ."

"ಹೌದು; ನನಗೂ ಅಂಥವರೊಬ್ಬರು ಗೊತ್ತು. ಅವರೇ ದೇವೇಂದ್ರನಾಥ ಟಾಗೋರ್."

"ಏನೆಂದೆ? ಟಾಗೋರರರೆ? ಪ್ರಾಪಂಚಿಕ ಸುಖವನ್ನು ಅವರಷ್ಟು ಅನುಭವಿಸಿದವರು ಯಾರಿದ್ದಾರೆ? ಎಂಟು ಮಕ್ಕಳು ಅವರಿಗೆ! ಅಷ್ಟಾದ ಮೇಲೂ ಅವರು ಭಗವನ್ನಾಮಸ್ಮರಣೆ ಮಾಡದಿದ್ದರೆ ಇನ್ನ್ಯಾವಾಗ ಮಾಡಬೇಕು? ಅಷ್ಟೊಂದು ಭೋಗಭಾಗ್ಯಗಳನ್ನು ಅನುಭವಿಸಿದ ನಂತರವೂ ಅವರು ಭಗವದ್ವಿಚಾರದಲ್ಲಿ ತೊಡಗಿರದಿದ್ದರೆ ಜನ, 'ಥೂ, ನಾಚಿಕೆಗೇಡು' ಎನ್ನುವುದಿಲ್ಲವೆ?"

ಆಗ ಇನ್ನೊಬ್ಬ ತರುಣಭಕ್ತ ನಿರಂಜನ ಹೇಳಿದ:

"ಆದರೆ ಅವರು ತಮ್ಮ ತಂದೆಯ ಸಾಲವನ್ನೆಲ್ಲ ತೀರಿಸಿಬಿಟ್ಟಿದ್ದಾರೆ!"

"ಸುಮ್ಮನಿರಯ್ಯ! ನನ್ನನ್ನು ಹೆಚ್ಚು ರೇಗಿಸಬೇಡ. ಅನುಕೂಲವಿದ್ದೂ ತಂದೆಯ ಸಾಲ ತೀರಿಸದವನು ಮನುಷ್ಯನೇನಯ್ಯ? ಆದರೆ ಬರೀ ಪ್ರಾಪಂಚಿಕ ಭೋಗದಲ್ಲೇ ಮುಳುಗಿರುವವರಿಗಿಂತ ಟಾಗೋರರರು ಎಷ್ಟೋ ಪಾಲು ಮಿಗಿಲು. ಜನ ಅವರಿಂದ ಬಹಳಷ್ಟು ಕಲಿಯುವುದಿದೆ."

ಹೀಗೆಂದ ಶ್ರೀರಾಮಕೃಷ್ಣರು ಮರುಕ್ಷಣಕ್ಕೇ ಹೇಳಿದರು:

"ನೋಡು, ಸರ್ವಸಂಗಪರಿತ್ಯಾಗ ಮಾಡಿದ ಸಾಧುವಿಗೂ ಗೃಹಸ್ಥಭಕ್ತನಿಗೂ ಸಾಗರದಷ್ಟು ಅಂತರವಿದೆ. ಸರ್ವವನ್ನೂ ತ್ಯಾಗ ಮಾಡಿದ ಸಂನ್ಯಾಸಿಯೋ ಭಕ್ತನೋ

ಇದ್ದಾನಲ್ಲ, ಅವನು ಜೇನ್ನೊಣದ ಹಾಗೆ. ಅದು ಹೂವಿನ ಮೇಲಲ್ಲದೆ ಅಲ್ಲಿ-ಇಲ್ಲಿ ಕೂಡುವುದೇ ಇಲ್ಲ. ಅದು ಜೇನನ್ನಲ್ಲದೆ ಇನ್ನೇನನ್ನೂ ಹೀರುವುದಿಲ್ಲ. ಪ್ರಾಪಂಚಿಕ ಜೀವನ ನಡೆಸುವ ಭಕ್ತನಿದ್ದಾನಲ್ಲ, ಅವನು ಮನೆನೊಣದ ಹಾಗೆ. ಮನೆನೊಣ ನಾರುವ ಹುಣ್ಣಿನ ಮೇಲೂ ಕುಳಿತುಕೊಳ್ಳುತ್ತದೆ, ಸಿಹಿತಿನಿಸಿನ ಮೇಲೂ ಕುಳಿತು ಕೊಳ್ಳುತ್ತದೆ. ಗೃಹಸ್ಥಭಕ್ತ ಒಂದು ಕ್ಷಣ ಭಗವದ್ಭಾವದಲ್ಲಿರುತ್ತಾನೆ, ಆದರೆ, ಮರುಕ್ಷಣ ದಲ್ಲೇ ಕಾಮಕಾಂಚನದ ಭೋಗದಲ್ಲಿ ಓಲಾಡುತ್ತಿರುತ್ತಾನೆ."

ಶ್ರೀರಾಮಕೃಷ್ಣರು ಟಾಗೋರರ ಆಧ್ಯಾತ್ಮಿಕಭಾವವನ್ನೂ ಮೆಚ್ಚುತ್ತಿದ್ದಾರೆ; ಹಾಗೆಯೇ ಅವರಲ್ಲಿ ಪ್ರಾಪಂಚಿಕ ಭೋಗಾಭಿಲಾಷೆಯೂ ಇರುವುದಾಗಿ ಹೇಳುತ್ತಿದ್ದಾರೆ.

ಟಾಗೋರರ ವಿಷಯದಲ್ಲಿ ಅತ್ಯಂತ ಪೂಜ್ಯದೃಷ್ಟಿಯಿಟ್ಟಿದ್ದವನು ಕೇಶವಚಂದ್ರ ಸೇನ. ಒಮ್ಮೆ ಈತನೊಂದಿಗೆ ಮಾತನಾಡುವ ಸಂದರ್ಭದಲ್ಲಿ ಶ್ರೀರಾಮಕೃಷ್ಣರೆನ್ನುತ್ತಾರೆ: "ನೀವು (ಗೃಹಸ್ಥರು) ಸಚ್ಚಿದಾನಂದಸಾಗರದಲ್ಲಿ ಒಮ್ಮೆಗೇ ಮುಳುಗಿಬಿಡಬೇಕೆಂದರೆ ಹೇಗೆ ಸಾಧ್ಯವಾದೀತು ?"

ಕೇಶವ: "ಏಕೆ, ಗೃಹಸ್ಥರಿಗೆ ಎಂದಿಗೂ ಸಾಧ್ಯವಿಲ್ಲವೆನ್ನುವಿರಾ ? ಹಾಗಾದರೆ ಮಹರ್ಷಿ ದೇವೇಂದ್ರನಾಥ ಟಾಗೋರರು ? ಅವರ ಬಗ್ಗೆ ಏನೆನ್ನುವಿರಿ ?"

ಶ್ರೀರಾಮಕೃಷ್ಣರು ಎರಡುಮೂರು ಸಲ ಮೆಲುದನಿಯಲ್ಲಿ ಉದ್ಗರಿಸಿದರು:

"ದೇವೇಂದ್ರನಾಥ ಟಾಗೋರ್ ! ದೇವೇಂದ್ರ !. . ದೇವೇಂದ್ರ. . . !"

ಹೀಗೆನ್ನುತ್ತ ಟಾಗೋರರ ಸದ್ಗುಣಗಳಿಗಾಗಿಯೋ ಎಂಬಂತೆ ಮತ್ತೆಮತ್ತೆ ಕೈಮುಗಿ ದರು. ಬಳಿಕ ಅವರೆಂದದ್ದು ಹೀಗೆ: "ನಿನಗೊಂದು ಕತೆ ಹೇಳುತ್ತೇನೆ, ಕೇಳು. ಒಬ್ಬ ಮನುಷ್ಯ ತನ್ನ ಮನೆಯಲ್ಲಿ ದುರ್ಗಾಪೂಜೆಯನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಿದ್ದ. ಬೆಳಗ್ಗಿನಿಂದ ಸಂಜೆಯವರೆಗೆ ಆಡುಗಳ ಬಲಿ ಭರದಿಂದ ಸಾಗುತ್ತಿತ್ತು. ಆದರೆ, ಕೆಲವು ವರ್ಷಗಳ ಮೇಲೆ ನೋಡಿದರೆ ಈ ಬಲಿಕೊಡುವ ಸಂಭ್ರಮವೆಲ್ಲ ಸಪ್ಪೆಯಾಗಿಬಿಟ್ಟಿದೆ ! ಯಾರೋ ಒಬ್ಬರು ಕೇಳಿದರು, 'ಏನು ಸ್ವಾಮಿ, ಈಚೀಚೆಗೆ ನಿಮ್ಮಲ್ಲಿ ಆಡುಗಳ ಬಲಿ ಕೊಡುವ ಕಾರ್ಯದಲ್ಲಿ ಉತ್ಸಾಹವೇ ಕಾಣುತ್ತಿಲ್ಲ ?' ಅದಕ್ಕೆ ಅವನೆಂದ: 'ನನ್ನ ಹಲ್ಲುಗಳೆಲ್ಲ ಬಿದ್ದುಹೋಗಿರುವುದು ಕಾಣುವುದಿಲ್ಲವೆ ?' ಹಾಗೆಯೇ ಟಾಗೋರರೂ ಕೂಡ. ಈಗ ಸಂಸಾರಾಸಕ್ತಿ ಕಡಿಮೆ ಮಾಡಿಕೊಂಡು ಧ್ಯಾನಜಪಗಳಲ್ಲಿ ತೊಡಗಿದ್ದಾರೆ. ಈ ಇಳಿವಯಸ್ಸಿನಲ್ಲಿ ಅವರು ಹಾಗೆ ಮಾಡಬೇಕಾದ್ದು ಸಹಜವೇ. ಆದರೆ ಅವರು ದೊಡ್ಡ ವ್ಯಕ್ತಿ ಎಂಬುದರಲ್ಲೇನೂ ಸಂಶಯವಿಲ್ಲ."

ಬಾಲ್ಯದಿಂದಲೇ ಭಗವತ್ಸಾಕ್ಷಾತ್ಕಾರಕ್ಕಾಗಿ ಸಾಧನೆಗಿಳಿದವರು ಶ್ರೀರಾಮಕೃಷ್ಣರು. ಭೋಗಗಳನ್ನು ಕಡೆಗಣ್ಣಿನಿಂದಲೂ ನೋಡದೆ ಯೋಗಶಿಖರವನ್ನೇರಿದವರು. ಪೂರ್ಣ ರೂಪದಲ್ಲಿ ಭೋಗವನ್ನು ತ್ಯಾಗ ಮಾಡದೆ ಯೋಗಸಿದ್ಧಿ ಸಾಧ್ಯವಿಲ್ಲ ಎಂಬುದನ್ನು ಮನಗಂಡವರು. ಆದ್ದರಿಂದ, ಜನ ಟಾಗೋರರನ್ನು ಜನ ಬಾಯ್ತುಂಬ 'ಮಹರ್ಷಿ' ಎಂದ ಮಾತ್ರಕ್ಕೆ ಶ್ರೀರಾಮಕೃಷ್ಣರು ಅದನ್ನು ಒಪ್ಪಿಯಾರೆ ? ಆದರೆ ಸಕಲೈಶ್ವರ್ಯ ಗಳಿಂದ ಕೂಡಿದ ಟಾಗೋರರು ಇಳಿವಯಸ್ಸಿನಲ್ಲಾದರೂ ಪರಮಾರ್ಥಕ್ಕೆ ಮನಗೊಟ್ಟು ದನ್ನು ಅವರು ಮೆಚ್ಚಿಕೊಳ್ಳದಿರಲಿಲ್ಲ.

## ನಿರಂತರ ನಿರ್ವಿಕಲ್ಪ ನಿಮಗ್ನ



ಶ್ರೀರಾಮಕೃಷ್ಣರು ವೇದಾಂತಸಾಧನೆ ಮಾಡಿದ ಸಮಯದಲ್ಲಿ ಭೈರವಿ ಬ್ರಾಹ್ಮಣಿ ದಕ್ಷಿಣೇಶ್ವರದಲ್ಲೇ ಇದ್ದಳು. ತೋತಾಪುರಿಯ ಆಗಮನವಾದಾಗಿನಿಂದಲೂ ಆತನೊಂದಿಗೆ ಶ್ರೀರಾಮಕೃಷ್ಣರು ಯಾವ ಬಗೆಯ ಬಾಂಧವ್ಯವನ್ನು ಬೆಳೆಸಿಕೊಳ್ಳುತ್ತಿದ್ದಾರೆ ಎಂಬುದನ್ನು ಆಕೆ ಆತಂಕ - ಶಂಕೆಗಳಿಂದ ಗಮನಿಸುತ್ತಲೇ ಇದ್ದಳು. ತೋತಾಪುರಿಗೆ ಭಕ್ತಿಮಾರ್ಗವೆಂದರೆ ಹೇಗೆ ತಿರಸ್ಕಾರವಿತ್ತೋ ಹಾಗೆಯೇ ಬ್ರಾಹ್ಮಣಿಗೆ ಜ್ಞಾನಮಾರ್ಗ ಅಸಹನೀಯ. ಭಕ್ತಿಮಾರ್ಗದ ಪರಾಕಾಷ್ಠೆಯನ್ನೇ ಮುಟ್ಟಿದ ತನ್ನ ಶಿಷ್ಯನು ಈ ನಗ್ನಸಂನ್ಯಾಸಿಯ ಜಡ-ನೀರಸ ಅದ್ವೈತವಾದಕ್ಕೆ ಬಲಿಯಾಗಿ ಎಲ್ಲಿ ತನ್ನತನವನ್ನೇ ಕಳೆದುಕೊಂಡುಬಿಡುವನೋ ಎಂದಾಕೆ ಬೆದರಿದಳು. ಶ್ರೀರಾಮಕೃಷ್ಣರನ್ನು ಕರೆದು ಹೇಳಿದಳು: "ಅಪ್ಪಾ, ಅವನೊಂದಿಗೆ ಅಷ್ಟೊಂದು ಬೆರೆಯಬೇಡ. ಅವರೆಲ್ಲ ಭಕ್ತಿರಸವಿಲ್ಲದ ಶುಷ್ಕರು. ಅವರ ಸಹವಾಸ ಮಾಡಿದರೆ ನಿನ್ನ ಭಕ್ತಿ ಬರಡಾಗಿಬಿಡುತ್ತದೆ."

ಆದರೆ ಆಕೆಯ ಪರಿಮಿತಿಯನ್ನರಿತಿದ್ದ ಶ್ರೀರಾಮಕೃಷ್ಣರು, ಆಕೆ ಏನು ಹೇಳಿದರೂ ಅದಕ್ಕೆ ಗಮನ ಕೊಡದೆ ತಮ್ಮ ದಾರಿಯಲ್ಲೇ ಮುನ್ನಡೆದರು.

ತೋತಾಪುರಿ ಹನ್ನೊಂದು ತಿಂಗಳಷ್ಟು ದೀರ್ಘಕಾಲ ದಕ್ಷಿಣೇಶ್ವರದಲ್ಲಿದ್ದು, ಶ್ರೀರಾಮಕೃಷ್ಣರನ್ನು ಅದ್ವೈತಭಾವದಲ್ಲಿ ನೆಲೆಗೊಳಿಸಿ ಹೊರಟುಬಿಟ್ಟ. ನಿರ್ವಿಕಲ್ಪ ಸಮಾಧಿಯ ಅತ್ಯುನ್ನತ ಆನಂದವನ್ನು ಸವಿದ ಶ್ರೀರಾಮಕೃಷ್ಣರ ಮನಸ್ಸು ಮತ್ತೆಮತ್ತೆ ತನ್ನ ಆ ಸಹಜ ನೆಲೆಗೇರಲು ತವಕಿಸತೊಡಗಿತು. ಆದ್ದರಿಂದ ತೋತಾಪುರಿ ನಿರ್ಗಮಿಸಿದ ಬಳಿಕ ಅವರು ತಮ್ಮನ್ನು ಇತರೆಲ್ಲ ಆಲೋಚನೆಗಳಿಂದ ಮುಕ್ತಗೊಳಿಸಿಕೊಂಡು ಮನಸ್ಸನ್ನು ಊರ್ಧ್ವಮುಖವಾಗಿ ಹರಿಯಗೊಟ್ಟರು. ಬಂಧನದಲ್ಲಿಟ್ಟ ಪಕ್ಷಿ ಮುಕ್ತವಾದೊಡನೆಯೇ ಗರಿಗೆದರಿ ಹಾರುತ್ತ ನೀಲಾಕಾಶದಲ್ಲಿ ಸ್ವಚ್ಛಂದವಾಗಿ ವಿಹರಿಸುವಂತೆ ಅವರ ಮನಸ್ಸು ಇಹಲೋಕವನ್ನು ತ್ಯಜಿಸಿ ಬಹು ದೂರ ಸಾಗಿತು; ನಿರ್ವಿಕಲ್ಪ ಸಮಾಧಿಯಲ್ಲಿ ಲೀನವಾಯಿತು ! ಶ್ರೀರಾಮಕೃಷ್ಣರ ಜೀವನಚರಿತ್ರೆಯ ಈ ಕಥಾಭಾಗ ತುಂಬ ರೋಮಾಂಚಕಾರಿ. ತಮಗೊಂದು ಶರೀರವಿದೆ ಎನ್ನುವ ಪ್ರಜ್ಞೆಯೇ ಆಗ ಅವರಿಗಿರಲಿಲ್ಲ. ಇತರರೊಡನೆ ಮಾತನಾಡುವ ವಿಷಯ ಹಾಗಿರಲಿ, ತಮ್ಮ ಶರೀರ ಧಾರಣೆಗೆ ಆವಶ್ಯಕವಾದ ಊಟ, ನಿದ್ರೆ, ಶೌಚಗಳ ಕುರಿತ ಅರಿವೂ ಅವರ ಮನದಲ್ಲಿ ಮೂಡುತ್ತಿರಲಿಲ್ಲ. ಆ ಮನವಾದರೂ ಎಲ್ಲಿದೆ ? ಅದು ಪರಬ್ರಹ್ಮದಲ್ಲಿ ಲೀನವಾಗಿಬಿಟ್ಟಿದೆ ! ಆದ್ದರಿಂದ ಅಲ್ಲಿ 'ನಾನು'-'ನನ್ನದು' ಎಂಬ ಭಾವವೂ ಇಲ್ಲ, 'ನೀನು'-'ನಿನ್ನದು' ಎಂಬ ಮಾತೂ ಇಲ್ಲ. ಅಲ್ಲಿ ಏಕವೂ ಇಲ್ಲ, ಅನೇಕವೂ ಇಲ್ಲ. ಏಕವೇ ಇಲ್ಲದಿದ್ದಮೇಲೆ ಅನೇಕದ ಮಾತೆಲ್ಲಿ ? ಆ ಸ್ಥಿತಿಯಲ್ಲಿ ಈ ಏಕ-ಅನೇಕಗಳನ್ನು ಎಣಿಸುವ ಮನಸ್ಸು ತನ್ನೆಲ್ಲ ಸ್ಪಂದನಗಳನ್ನು ನೀಗಿಕೊಂಡು ನೀರವ ಮೌನದಲ್ಲಿ ನಿಮಗ್ನವಾಗಿರುತ್ತದೆ. 'ವಿವೇಕಚೂಡಾಮಣಿ'ಯಲ್ಲಿ ಆ ಸ್ಥಿತಿಯನ್ನು ಹೀಗೆ ವರ್ಣಿಸಲಾಗಿದೆ:

*ಕಿಮಪಿ ಸತತಬೋಧಂ ಕೇವಲಾನಂದರೂಪಂ*
*ನಿರುಪಮಮತಿವೇಲಂ ನಿತ್ಯಮುಕ್ತಂ ನಿರೀಹಮ್ ।*

*ನಿರವಧಿಗಗನಾಭಂ ನಿಷ್ಕಲಂ ನಿರ್ವಿಕಲ್ಪಂ*
*ಹೃದಿ ಕಲಯತಿ ವಿದ್ವಾನ್ ಬ್ರಹ್ಮಪೂರ್ಣಂ ಸಮಾಧೌ ॥*
*ಪ್ರಕೃತಿವಿಕೃತಿಶೂನ್ಯಂ ಭಾವನಾತೀತಭಾವಂ॥*

ಎಂದರೆ, ಬಾಯಿಂದ ವರ್ಣಿಸಲಾಗದ ಪರಿಪೂರ್ಣ ಜ್ಞಾನಾನಂದಸ್ವರೂಪ ಅದು. ಅದಕ್ಕೆ ಉಪಮಾನವಾಗಿ ನಿಲ್ಲಬಲ್ಲ ಇನ್ನೊಂದು ವಸ್ತುವಿಲ್ಲ. ಅದನ್ನು ಯಾವೊಂದು ಮಿತಿಯ ಒಳಗೂ ಸೀಮಿತಗೊಳಿಸುವಂತಿಲ್ಲ. ಅದು ಎಂದೆಂದೂ ಬಂಧನಕ್ಕೆ ಸಿಲುಕು ವಂಥದಲ್ಲ. ಅನಂತವಾದ ಆಕಾಶದಂತಿರುವ ಅದಕ್ಕೊಂದು ಹೆಸರೆಂಬುದೇ ಇಲ್ಲ. ಅದು ಅನಂತವಾದುದರಿಂದಲೇ ಅದಕ್ಕೆ ಅಂಗಾಂಗಗಳಿಲ್ಲ. ಅಲ್ಲಿ ಮನಸ್ಸೇ ಇಲ್ಲವೆಂದ ಮೇಲೆ ಸಂಕಲ್ಪ-ವಿಕಲ್ಪಗಳ ಮಾತೂ ಇಲ್ಲ. ಅಲ್ಲಿ ಕಾರಣವೂ ಇಲ್ಲ, ಕಾರ್ಯವೂ ಇಲ್ಲ; ಅದು ಎಲ್ಲ ಲೌಕಿಕಭಾವಗಳನ್ನೂ ಮೀರಿದ ದಿವ್ಯ ಭಾವ. ಇಂಥದೊಂದು ಮಹಾದ್ಭುತ ಸ್ಥಿತಿಯನ್ನು ಜ್ಞಾನಿಯು ಸಮಾಧಿಕಾಲದಲ್ಲಿ ತನ್ನ ಹೃದಯದಲ್ಲೇ ಅನುಭವಿಸುತ್ತಿರುತ್ತಾನೆ.

ಆನಂದ! ಕೇವಲ ಆನಂದ! ಅದಕ್ಕಿಲ್ಲ ದಿಕ್ಕು, ಅದಕ್ಕಿಲ್ಲ ದೇಶ, ಅದಕ್ಕಿಲ್ಲ ಆಧಾರ, ಅದಕ್ಕಿಲ್ಲ ರೂಪ, ಅದಕ್ಕಿಲ್ಲ ಹೆಸರು! ಆ ದೇಹಬೋಧರಹಿತನಾದ ಆತ್ಮನು, ತನ್ನೊಳಗೆ ತಾನೇ ಅದಾವುದೋ ವರ್ಣನಾತೀತ ಆನಂದದಲ್ಲಿ ನೆಲಸಿರುತ್ತಾನೆ. "ಆತ್ಮರತಿಃ ಆತ್ಮಕ್ರೀಡಃ" ಎಂದು ಭಗವದ್ಗೀತೆ ಬಣ್ಣಿಸುವ ಸ್ಥಿತಿ ಇದೇ. ಇಂಥ ಸ್ಥಿತಿಯಲ್ಲಿ ಶ್ರೀರಾಮಕೃಷ್ಣರು ನಿರಂತರವೂ ಏಕಪ್ರಕಾರವಾಗಿ ಆನಂದವನ್ನನುಭವಿಸುತ್ತಿದ್ದರು, ಆರು ತಿಂಗಳ ಕಾಲ!

ಇಂತಹ ಅಪೂರ್ವ ಸ್ಥಿತಿಗೆ ಮನಸ್ಸು ಏರಬೇಕಾದರೆ ಅದಕ್ಕೆ ವ್ಯಕ್ತಿಗಳ ಮೇಲಣ ಆಸಕ್ತಿಯೂ ಇರಬಾರದು, ವಸ್ತುಗಳ ಮೇಲಣ ಮೋಹವೂ ಇರಬಾರದು, ಮರ್ತ್ಯ ಲೋಕ, ಸ್ವರ್ಗಲೋಕಗಳ ಭೋಗಾಭಿಲಾಷೆಯೂ ಇರಬಾರದು. ಇವುಗಳೆಲ್ಲ, ಮನಸ್ಸು ಸಮಾಧಿಸ್ಥಿತಿಗೇರುವ ದಾರಿಯಲ್ಲಿ ತಡೆಯಾಗಿ ನಿಲ್ಲುವಂಥವು. ಆದರೆ ಶ್ರೀರಾಮಕೃಷ್ಣರ ವಿಷಯದಲ್ಲಿ ಈ ಸಮಸ್ಯೆ ಎದುರಾಗಲೇ ಇಲ್ಲ. ಏಕೆಂದರೆ, ಅವರು ಜಗನ್ಮಾತೆಯನ್ನು ಸಾಕ್ಷಾತ್ಕರಿಸಿಕೊಳ್ಳುವ ಸಂದರ್ಭದಲ್ಲೇ ತಮ್ಮ ಸರ್ವಕಾಮನೆಗಳನ್ನೂ ಅವಳ ಪದತಲದಲ್ಲಿ ಸಮರ್ಪಿಸಿದವರಲ್ಲವೆ? ಅವರ ಇತಿಹಾಸಪ್ರಸಿದ್ಧವಾದ ಪ್ರಾರ್ಥ ನೆಯ ವೈಖರಿಯಿಂದಲೇ ಇದು ವೇದ್ಯವಾಗುತ್ತದೆ:

"ಓ ತಾಯಿ, ಇದೋ ನಿನ್ನ ಜ್ಞಾನ, ಇದೋ ನಿನ್ನ ಅಜ್ಞಾನ—ಇವೆರಡನ್ನೂ ನೀನೇ ತೆಗೆದುಕೊ. ನನಗೆ ನಿನ್ನ ಪಾದಕಮಲಗಳಲ್ಲಿ ಶುದ್ಧವಾದ ಭಕ್ತಿಯನ್ನು ಮಾತ್ರ ಕರುಣಿಸು.

"ಓ ತಾಯಿ, ಇದೋ ನಿನ್ನ ಧರ್ಮ, ಇದೋ ನಿನ್ನ ಅಧರ್ಮ—ಇವನ್ನು ನೀನೇ ತೆಗೆದುಕೊ. ನನಗೆ ನಿನ್ನ ಪಾದಕಮಲಗಳಲ್ಲಿ ಶುದ್ಧವಾದ ಭಕ್ತಿಯನ್ನು ಮಾತ್ರ ಕರುಣಿಸು.

"ಇದೋ ನಿನ್ನ ಶುಭ, ಇದೋ ನಿನ್ನ ಅಶುಭ—ಇವನ್ನೂ ನೀನೇ ತೆಗೆದುಕೊ. ಇದೋ ನಿನ್ನ ಪುಣ್ಯ, ಇದೋ ನಿನ್ನ ಪಾಪ—ಇವನ್ನೂ ನೀನೇ ತೆಗೆದುಕೊ. ನನಗೆ ನಿನ್ನ ಪಾದಕಮಲಗಳಲ್ಲಿ ಶುದ್ಧವಾದ ಭಕ್ತಿಯನ್ನು ಮಾತ್ರ ಕರುಣಿಸು.

"ಇದೋ ನಿನ್ನ ಶುಚಿ, ಇದೋ ನಿನ್ನ ಅಶುಚಿ—ಇವನ್ನೂ ನೀನೇ ತೆಗೆದುಕೊ. ನನಗೆ ನಿನ್ನ ಪಾದಕಮಲಗಳಲ್ಲಿ ಶುದ್ಧವಾದ ಭಕ್ತಿಯನ್ನು ಮಾತ್ರ ಕರುಣಿಸು.

"ಇದೋ ನಿನ್ನ ಮಾನ, ಇದೋ ನಿನ್ನ ಅಪಮಾನ—ಇವನ್ನೂ ನೀನೇ ತೆಗೆದುಕೊ. ನನಗೆ ನಿನ್ನ ಪಾದಕಮಲಗಳಲ್ಲಿ ಶುದ್ಧವಾದ ಭಕ್ತಿಯನ್ನು ಮಾತ್ರ ಕರುಣಿಸು."

ಶ್ರೀರಾಮಕೃಷ್ಣರು ಈ ಪ್ರಾರ್ಥನೆಯನ್ನು ಪರಮ ಪ್ರಾಮಾಣಿಕ ಭಾವದಿಂದ ಮಾಡಿದ್ದರು. ಲೌಕಿಕರ ವಂಚಕಮನಸ್ಸು ಮಾಡುವ ಪ್ರಾರ್ಥನೆಯಂತಿರಲಿಲ್ಲ ಅದು ಎಂಬುದು ಗಮನಾರ್ಹ. ಏಕೆಂದರೆ ತಮ್ಮ ಭಾವನೆ, ಮಾತು, ಕೃತಿ—ಇವು ಸತ್ಯಶೀಲ ವಾಗಿರಬೇಕೆಂಬ ಎಚ್ಚರಿಕೆ ಶ್ರೀರಾಮಕೃಷ್ಣರದಾಗಿತ್ತು. ಅವರೇ ಹೇಳುವಂತೆ, "ಓ ತಾಯಿ, ಇದೋ ನಿನ್ನ ಸತ್ಯ, ಇದೋ ನಿನ್ನ ಅಸತ್ಯ" ಎಂದು ಪ್ರಾರ್ಥಿಸಲು ಮಾತ್ರ ಅವರಿಂದ ಸಾಧ್ಯವಾಗಲಿಲ್ಲ. ಇದಕ್ಕೆ ಕಾರಣವನ್ನೂ ಅವರೇ ಹೇಳುತ್ತಾರೆ: "ಹಾಗೆ ಸತ್ಯ ವನ್ನು ತ್ಯಾಗ ಮಾಡಿಬಿಟ್ಟರೆ ನಾನು ಇಲ್ಲಿಯವರೆಗೆ ಜಗನ್ಮಾತೆಗೆ ಸರ್ವ ಸಮರ್ಪಣೆ ಮಾಡಿಕೊಂಡದ್ದರ ಸತ್ಯತೆಗೆ ಸಾಕ್ಷ್ಯವೇನು ?" ಎಂದು. ಸತ್ಯನಿಷ್ಠೆಯೊಂದಿದ್ದುಬಿಟ್ಟರೆ ಜಗನ್ಮಾತೆ ನಮ್ಮ ಸಂಕಲ್ಪಗಳನ್ನೆಂದಿಗೂ ಸುಳ್ಳಾಗಗೊಡಳು ಎನ್ನುತ್ತಾರೆ ಶ್ರೀರಾಮ ಕೃಷ್ಣರು.

ಹೀಗೆ ಅವರು ತಮ್ಮ ಅಪೂರ್ವ ಸತ್ಯನಿಷ್ಠ ಪ್ರಾರ್ಥನೆಯಿಂದ, ಅತ್ಯುನ್ನತ ನಿರ್ವಿಕಲ್ಪ ಸಮಾಧಿಗೇರುವ ಸಂದರ್ಭದಲ್ಲಿ ಅಡ್ಡಬರುವ ಅಂತರಾಯಗಳಿಂದ ಪಾರಾ ಗಿದ್ದರು. ಆದ್ದರಿಂದಲೇ ಅವರು ಅಪೇಕ್ಷಿಸಿದ ನಿರ್ವಿಕಲ್ಪ ಸಮಾಧಿಯಲ್ಲಿ ನಿರಂತರ ಆರು ತಿಂಗಳ ಕಾಲ ಮಗ್ನವಾಗಿರಲು ಸಾಧ್ಯವಾಯಿತು. ಇಲ್ಲಿಯವರೆಗೆ ಜಗತ್ತು ಕಂಡರಿಯದಿದ್ದ ಈ ಸುದೀರ್ಘ ಸಮಾಧಿಯ ಕುರಿತು ಶ್ರೀರಾಮಕೃಷ್ಣರ ಶ್ರೀಮುಖ ದಿಂದಲೇ ಕೇಳೋಣ: "ನಾನು ಆರು ತಿಂಗಳ ಕಾಲ ನಿರ್ವಿಕಲ್ಪ ಸಮಾಧಿಯ ಸ್ಥಿತಿ ಯಲ್ಲಿದ್ದೆ. ಸಾಮಾನ್ಯ ಜೀವಾತ್ಮರಾದರೆ ಆ ಸ್ಥಿತಿಯಿಂದ ಹಿಂದಿರುಗುವ ಸಂಭವವೇ ಇಲ್ಲ. ಏಕೆಂದರೆ ಆ ಸ್ಥಿತಿಗೇರಿದವನ ದೇಹ ಕೇವಲ ಇಪ್ಪತ್ತೊಂದು ದಿನಗಳವರೆಗೆ ಬದುಕಿದ್ದು, ಬಳಿಕ ಒಣಗಿದ ಎಲೆ ಮರದಿಂದ ಉದುರಿ ಬೀಳುವಂತೆ ಅದು ಬಿದ್ದು ಹೋಗುತ್ತದೆ. ಆ ಅವಧಿಯಲ್ಲಿ ನನಗೆ, ಯಾವಾಗ ಬೆಳಗಾಯಿತು, ಯಾವಾಗ ರಾತ್ರಿ ಕಳೆಯಿತು ಎಂದು ಹೇಳುವವರಾರಿದ್ದರು ? ನನಗೆ ಮೈಮೇಲೆ ಪ್ರಜ್ಞೆ ಇದ್ದರೆ ತಾನೆ ! ನೊಣಗಳು ಹೆಣದ ಬಾಯಿ ಮೂಗುಗಳನ್ನು ಪ್ರವೇಶಿಸುವಂತೆ ನನ್ನ ಬಾಯಿ-ಮೂಗು ಗಳೊಳಗೆ ಹೋಗಿಬರುತ್ತಿದ್ದುವು ! ತಲೆಗೂದಲಂತೂ ಧೂಳಿನಿಂದ ಜಟೆಗಟ್ಟಿಹೋಗಿತ್ತು. ಜಲ-ಮಲ ವಿಸರ್ಜನೆಗಳೆಲ್ಲ ತಮ್ಮ ಪಾಡಿಗೆ ಆಗಿಬಿಡುತ್ತಿದ್ದುವು; ನನಗೆ ಮಾತ್ರ ಯಾವುದರ ಅರಿವೂ ಆಗುತ್ತಿರಲಿಲ್ಲ. ಇಂಥ ಸ್ಥಿತಿಯಲ್ಲಿ ಈ ಶರೀರ ಬದುಕಿ ಉಳಿದ ದ್ದೊಂದು ಪವಾಡವೇ ಸರಿ. ನಿಜಕ್ಕೂ ಇದು ಯಾವಾಗಲೋ ಸತ್ತುಹೋಗಿಬಿಡ ಬೇಕಿತ್ತು. ಆದರೆ ಆ ವೇಳೆಗೆ ಇಲ್ಲಿಗೊಬ್ಬ ಸಾಧು ಬಂದಿದ್ದ. ಅವನು ಎಲ್ಲಿಂದ ಬಂದನೋ, ಆಮೇಲೆ ಎಲ್ಲಿಗೆ ಹೋದನೋ ಯಾರಿಗೂ ತಿಳಿಯದು. ಆತ ನನ್ನ ಸ್ಥಿತಿಯನ್ನು ಕಂಡ. ಕೂಡಲೆ ಅವನಿಗೆ ಎಲ್ಲವೂ ಅರ್ಥವಾಯಿತು. ಈ ಶರೀರದ ಮೂಲಕ ಜಗನ್ಮಾತೆಯ ಕಾರ್ಯ ನಡೆಯಬೇಕಾದದ್ದು ಇನ್ನೂ ಇದೆ; ಇದನ್ನು ರಕ್ಷಿಸಿದರೆ ಇದರಿಂದ ಬಹು ಜನರಿಗೆ ಶ್ರೇಯಸ್ಸಾಗುವುದು ಖಂಡಿತ ಎಂದರಿತ. ಆದ್ದರಿಂದ ಕಾಲಕಾಲಕ್ಕೆ ಆಹಾರ ವನ್ನು ತಂದು ನನಗೆ ಉಣಿಸಲು ಯತ್ನಿಸಿದ. ಆದರೆ ಮೈಯಲ್ಲಿ ಪ್ರಜ್ಞೆಯಿದ್ದರಲ್ಲವೆ

ನಾನು ಬಾಯಿ ತೆರೆಯುವುದು? ಅವನು ತನ್ನ ಕೈಯಲ್ಲಿದ್ದ ಒಂದು ಸಣ್ಣ ದೊಣ್ಣೆಯಿಂದ ನನ್ನನ್ನು ಹೊಡೆದು ಪ್ರಜ್ಞೆ ಮರಳುವಂತೆ ಮಾಡುತ್ತಿದ್ದ. ಸ್ವಲ್ಪವೇನಾದರೂ ಪ್ರಜ್ಞೆ ಬಂದ ಸೂಚನೆ ಕಂಡೊಡನೆಯೇ ಬಾಯಿಗೆ ಆಹಾರವನ್ನು ತುರುಕುತ್ತಿದ್ದ. ಹೀಗೆ ಮಾಡಿದ್ದರಿಂದ ಕೆಲವು ದಿನವಾದರೂ ಒಂದಿಷ್ಟು ಆಹಾರ ನನ್ನ ಹೊಟ್ಟೆಯೊಳಗೆ ಹೋಯಿತು. ಇನ್ನು ಕೆಲವು ದಿನ ಅದೂ ಹೋಗುತ್ತಿರಲಿಲ್ಲ. ಈ ರೀತಿಯಲ್ಲಿ ಆರು ತಿಂಗಳು ಕಳೆದು ಹೋದುವು. ಆಗೊಂದು ದಿನ ಈ ಸ್ಥಿತಿಯಲ್ಲಿದ್ದಾಗಲೇ ನನಗೆ, 'ಲೋಕ ಶಿಕ್ಷಣಕ್ಕಾಗಿ ಭಾವ ಮುಖದಲ್ಲಿರು' ಎಂದು ಜಗಜ್ಜನನಿ ಆಜ್ಞಾಪಿಸಿದ್ದು ಕೇಳಿಸಿತು. ಆ ಬಳಿಕವೇ ನನಗೆ ಆಮಶಂಕೆ ತಗಲಿಕೊಂಡದ್ದು. ತಾಳಲಾರದ ವೇದನೆ! ಕರುಳನ್ನು ಹಿಂಡಿದಂತಾಗುತಿತ್ತು. ಆರು ತಿಂಗಳ ಕಾಲ ಈ ವೇದನೆಯನ್ನು ಅನುಭವಿಸಿದ ಮೇಲೆ ಕ್ರಮೇಣ ಮನಸ್ಸು ದೇಹದ ಕಡೆಗೆ ಮರಳಿತು. ಎಲ್ಲರಂತೆ ಮೈತಿಳಿದೆದ್ದೆ. ಈ ಕಾಯಿಲೆ ಬಾರದೆ ಹೋಗಿದ್ದರೆ ಮನಸ್ಸು ಮತ್ತೆಮತ್ತೆ ತನ್ನಷ್ಟಕ್ಕೆ ತಾನೇ ನಿರ್ವಿಕಲ್ಪ ಸಮಾಧಿಗೇರಿ ಬಿಡುತ್ತಿತ್ತು."

ಶ್ರೀರಾಮಕೃಷ್ಣರು ದೇಹತ್ಯಾಗ ಮಾಡಲು ಇನ್ನೂ ಹತ್ತು ಹನ್ನೆರಡು ವರ್ಷ ಇರುವಾಗ ಅವರ ದರ್ಶನಭಾಗ್ಯ ಯಾರ್‍ಯಾರಿಗೆ ಲಭಿಸಿತ್ತೊ ಅಂಥವರಿಗೆ ಆಗ ಶ್ರೀರಾಮಕೃಷ್ಣರ ವಾಣಿಯನ್ನು ಆಲಿಸಲು ಅಷ್ಟೇನೂ ಅವಕಾಶವಿರಲಿಲ್ಲ. ಏಕೆಂದರೆ, ಅವರು ಯಾವಾಗೆಂದರೆ ಆವಾಗ ಸರಕ್ಕನೆ ಸಮಾಧಿಗೇರಿ ನಿಶ್ಚಲರಾಗಿಬಿಡುತ್ತಿದ್ದರು. ಶ್ರೀರಾಮಕೃಷ್ಣರ ಪರಮಭಕ್ತರಲ್ಲೊಬ್ಬ ಕ್ಯಾಪ್ಟನ್ ವಿಶ್ವನಾಥ ಉಪಾಧ್ಯಾಯ. ಈತ ಹೇಳುತ್ತಾನೆ, "ಶ್ರೀರಾಮಕೃಷ್ಣರು ಮೂರು ದಿನ ಹಗಲಿರುಳೂ ನಿರಂತರವಾಗಿ ಸಮಾಧಿಯಲ್ಲಿರುವುದನ್ನು ನಾನು ಕಣ್ಣಾರೆ ನೋಡಿದ್ದೇನೆ" ಎಂದು. ಅವರು ಆ ರೀತಿಯ ದೀರ್ಘಕಾಲದ ಸಮಾಧಿಯಲ್ಲಿದ್ದಾಗ ಕೆಲವೊಮ್ಮೆ ಅವನು ಅವರ ಪವಿತ್ರ ದೇಹಕ್ಕೆ, ಕೊರಳಿನಿಂದ ಮೇರುದಂಡದವರೆಗೆ, ತೊಡೆಯಿಂದ ಪಾದದವರೆಗೆ ಕೆಳಮುಖವಾಗಿ ಆಕಳಿನ ತುಪ್ಪವನ್ನು ತಿಕ್ಕುತ್ತಿದ್ದ. ಇದರಿಂದಾಗಿ ಅವರಿಗೆ ಆ ಅತ್ಯುನ್ನತ ಸ್ಥಿತಿಯಿಂದಿಳಿದು ಬಾಹ್ಯಪ್ರಜ್ಞೆಗೆ ಮರಳಲು ಅನುಕೂಲವಾಗುತ್ತಿತ್ತು. ಈ ವಿಷಯವಾಗಿ ಶಿಷ್ಯರೊಡನೆ ಶ್ರೀರಾಮಕೃಷ್ಣರು ಹೇಳುವ ಕೆಲವು ಮಾತುಗಳು ತುಂಬ ಸ್ವಾರಸ್ಯಕರ:

"ಸದಾ ಆ ನಿರ್ವಿಕಲ್ಪಸಮಾಧಿಯತ್ತ ಧಾವಿಸುವುದೇ ನನ್ನ ಮನಸ್ಸಿನ ಸಹಜ ಸ್ಥಿತಿ. ಒಮ್ಮೆ ಅದು ಸಮಾಧಿಗೇರಿತೆಂದರೆ ಕೆಳಗಿಳಿದು ಬರಲು ಅದಕ್ಕೆ ಇಚ್ಛೆಯೇ ಆಗುವುದಿಲ್ಲ. ನಿಮಗಾಗಿ ಅದನ್ನು ಬಲಾತ್ಕಾರದಿಂದ ಇಳಿಸಿ ತರುತ್ತೇನೆ. ಆದರೆ ಸುಮ್ಮಸುಮ್ಮನೆ ಅದನ್ನು ಕೆಳಗಿಳಿಸಲು ಸಾಧ್ಯವಿಲ್ಲ. ಅದಕ್ಕೆ ಲೌಕಿಕವಾದ ಏನಾದರೊಂದು ಆಸೆಯನ್ನು ತೋರಿಸಬೇಕಾಗುತ್ತದೆ. ಲೌಕಿಕ ಆಸೆಯಿಲ್ಲದಿದ್ದರೆ ಈ ಲೋಕಕ್ಕೆ ಬರಲು ಸಾಧ್ಯವಾಗುವುದಿಲ್ಲ. ಆದ್ದರಿಂದ 'ತಂಬಾಕು ಸೇದುತ್ತೇನೆ', 'ನೀರು ಕುಡಿಯುತ್ತೇನೆ', 'ಇವನನ್ನು ಕಾಣುತ್ತೇನೆ', 'ಮಾತುಕತೆಯಾಡುತ್ತೇನೆ' ಎಂಬೀ ತೆರನಾದ ಯಾವುದಾದರೊಂದು ಸಣ್ಣ ಆಸೆಯನ್ನು ಮನಸ್ಸಿನಲ್ಲಿ ತಂದುಕೊಂಡು ಮತ್ತೆಮತ್ತೆ ಅದನ್ನು ಉಚ್ಚರಿಸುತ್ತಿದ್ದರೆ ಮನಸ್ಸು ಮೆಲ್ಲಮೆಲ್ಲನೆ ಶರೀರದತ್ತ ಹರಿದು ಬರಲಾರಂಭಿಸುತ್ತದೆ. ಆದರೆ ಹಾಗೆ ಹರಿದುಬರುತ್ತಿರುವಾಗಲೇ ಈ ಮನಸ್ಸು ಸಮಾಧಿಸುಖದ ಸವಿಯನ್ನು ನೆನಸಿಕೊಂಡು ಮತ್ತೆ ವೇಗವಾಗಿ ಆ ದಿಕ್ಕಿನತ್ತಲೇ ಧಾವಿಸುತ್ತದೆ. ಆಗ ಮತ್ತೆ ಅದಕ್ಕೆ ಕಾಮನೆಯನ್ನೊಡ್ಡಿ ಕೆಳಗೆಳೆದು ತರಬೇಕಾಗುತ್ತದೆ."

ಶ್ರೀರಾಮಕೃಷ್ಣರ ಈ ಮಾತುಗಳನ್ನೂ, ದಿವ್ಯಾದ್ಭುತ ಭಾವಗಳನ್ನೂ ಅರ್ಥ ಮಾಡಿಕೊಳ್ಳುವುದು ಸಾಮಾನ್ಯ ಜನರಿಗೆ ಸಾಧ್ಯವೇ ಇಲ್ಲ. ಇಂಥ ವಿಷಯಗಳನ್ನು ಕೇಳಿದವರು ಇದೊಂದು ಕಟ್ಟುಕಥೆಯೆಂದೋ ಅದ್ಭುತವಾದ ಕಲ್ಪನೆಯೆಂದೋ ತಳ್ಳಿ ಹಾಕಿಬಿಟ್ಟರೆ ಆಶ್ಚರ್ಯವೇನಿಲ್ಲ. ಏಕೆಂದರೆ ಶ್ರೀರಾಮಕೃಷ್ಣರ ಈ ಭಾವಗಳನ್ನು ಕಣ್ಣಾರೆ ಕಂಡವರೇ ಅವುಗಳ ಮರ್ಮವನ್ನು ಎಷ್ಟರಮಟ್ಟಿಗೆ ಅರಿಯಲು ಸಮರ್ಥರಾದರೋ ಹೇಳಬರುವಂತಿಲ್ಲ. ಹೀಗಿರುವಾಗ ಕೇವಲ ಕಿವಿಯಿಂದ ಕೇಳಿದವರು ಆ ಸ್ಥಿತಿಯನ್ನು ಊಹಿಸಲಾದರೂ ಸಾಧ್ಯವೆ? ಆದರೆ ಶ್ರೀರಾಮಕೃಷ್ಣರ ಆ ಎಲ್ಲ ಭಾವಗಳಿಗೆ, ವರ್ತನೆಗಳಿಗೆ ಶಾಸ್ತ್ರಗಳಲ್ಲಿ ವಿವರಣೆ ಇದೆ.

ಒಬ್ಬ ಮನುಷ್ಯನು ಯಾವುದೇ ಕೆಲಸ ಮಾಡಲಿ, ಯಾವುದೇ ಮಾತನ್ನಾಡಲಿ ಅಥವಾ ಯಾವುದೇ ಭಾವನೆಯನ್ನು ತಾಳಲಿ, ಅದು ಅವನ ಮನಸ್ಸಿನ ಮೇಲೆ ಒಂದು ಗುರುತನ್ನು ಮೂಡಿಸುತ್ತದೆ. ಆ ಕ್ರಿಯೆಯು—ಅದು ಶಾರೀರಿಕವಾಗಲಿ ವಾಚಿಕವಾಗಲಿ ಮಾನಸಿಕವಾಗಲಿ—ಒಳ್ಳೆಯದಾದರೆ, ಮೂಡಿದ ಗುರುತೂ ಒಳ್ಳೆಯದಾಗಿರುತ್ತದೆ; ಕ್ರಿಯೆ ಕೆಟ್ಟದ್ದಾದರೆ ಗುರುತೂ ಕೆಟ್ಟದ್ದಾಗಿರುತ್ತದೆ. ಇದು ಸರ್ವವೇದ್ಯವಾದ ಸತ್ಯ. ಮತ್ತು ಇದು ಇಲ್ಲಿಗೇ ನಿಲ್ಲುವುದಿಲ್ಲ. ಯೋಗಶಾಸ್ತ್ರಗಳ ಪ್ರಕಾರ, ಈ ಗುರುತುಗಳು ಮನುಷ್ಯನ ಮುಂದಿನ ವರ್ತನೆಯನ್ನು ನಿರ್ದೇಶನಗೊಳಿಸುವ ಸೂಕ್ಷ್ಮ ಪ್ರೇರಕಶಕ್ತಿಯಾಗಿ ಮಾರ್ಪಡುತ್ತವೆ; ಹಾಗೂ ಮೇರುದಂಡದ (ಬೆನ್ನುಹುರಿಯ) ಕೆಳಭಾಗದಲ್ಲಿರುವ ಮೂಲಾಧಾರವೆಂಬ ಚಕ್ರದಲ್ಲಿ ಶಾಶ್ವತವಾಗಿ ನೆಲಸುತ್ತವೆ. ಈ ಶಕ್ತಿಯನ್ನೇ ಸಂಸ್ಕಾರವೆಂದು ಕರೆಯುತ್ತಾರೆ. ಮನುಷ್ಯನು ಮುಂದೆ ಮಾಡಲಿರುವ ಒಳ್ಳೆಯ ಅಥವಾ ಕೆಟ್ಟ ಕಾರ್ಯಗಳಿಗೂ ಈ ಸಂಸ್ಕಾರಗಳೇ ಕಾರಣ. ಇವುಗಳು ಮನುಷ್ಯನ ಕಡೆಯುಸಿರಿನವರೆಗೂ ಭದ್ರವಾಗಿ ಕುಳಿತಿರುತ್ತವೆ. ಅಷ್ಟೇ ಅಲ್ಲ; ಜೀವಾತ್ಮನು ಒಂದು ದೇಹದಿಂದ ನಿರ್ಗಮಿಸಿ ಮತ್ತೊಂದನ್ನು ಪ್ರವೇಶಿಸುವಾಗಲೂ ಆ ಸಂಸ್ಕಾರಗಳ ಚೀಲವನ್ನು—ಗಾಳಿಯು ತನ್ನೊಂದಿಗೆ ವಾಸನೆಯನ್ನು ಸಾಗಿಸುವಂತೆ—ಕೊಂಡೊಯ್ಯುತ್ತಾನೆ. ಮನುಷ್ಯನಿಗೆ ಭಗವತ್ಸಾಕ್ಷಾತ್ಕಾರವಾದಾಗ ಅಥವಾ ನಿರ್ವಿಕಲ್ಪ ಸಮಾಧಿ ಪ್ರಾಪ್ತವಾದಾಗ ಮಾತ್ರ ಈ ಸಂಸ್ಕಾರಗಳೆಲ್ಲ ನಾಶವಾಗಿ, ಜೀವಾತ್ಮನು ಅವುಗಳ ಮುಷ್ಟಿಯಿಂದ ಬಿಡುಗಡೆ ಹೊಂದುತ್ತಾನೆ.

ಮನುಷ್ಯನ ಶರೀರಕ್ಕೂ ಮನಸ್ಸಿಗೂ ನಿಕಟ ಸಂಬಂಧವಿದೆ—ಇದು ಸಕಲರಿಗೂ ಅನುಭವವೇದ್ಯವಾದ ಸಂಗತಿ. ಮಾತ್ರವಲ್ಲ, ಮನೋವಿಜ್ಞಾನಿಗಳೂ ಇದನ್ನು ಸಾಬೀತು ಪಡಿಸಿದ್ದಾರೆ. ಶರೀರಕ್ಕೇನಾದರೂ ತೊಂದರೆಯುಂಟಾದಾಗ ಮನಸ್ಸಿನ ಮೇಲೆ ಅದರ ಪರಿಣಾಮವಾಗುತ್ತದೆ; ಮನಸ್ಸಿಗೇನಾದರೂ ಆಘಾತವುಂಟಾದರೆ ಅದರ ಪ್ರತಿಕ್ರಿಯೆ ಶರೀರದಲ್ಲೂ ಕಂಡುಬರುತ್ತದೆ. ಆದರೆ ಈ ಮಾತು ಅನ್ವಯವಾಗುವುದು ಅದ್ವೈತಜ್ಞಾನವುಂಟಾಗುವವರೆಗೆ ಮಾತ್ರ. ಅದ್ವೈತಜ್ಞಾನದ ಸ್ಥಿತಿಯಲ್ಲಿ ಶರೀರ-ಮನಸ್ಸುಗಳ ಸಂಬಂಧವು ಕಡಿದುಹೋಗಿಬಿಟ್ಟಿರುತ್ತದೆ.

ಮನಸ್ಸಿನಲ್ಲುಂಟಾದ ಯಾವುದೇ ಭಾವನೆಯು ಶರೀರದ ಮೇಲೆ ತನ್ನದೇ ಆದ ಪರಿಣಾಮವನ್ನುಂಟುಮಾಡುತ್ತದೆ. ಆದರಂತೆಯೇ, ತೀವ್ರವಾದ ಭಗವದ್ಭಕ್ತಿಯಿಂದ ಶರೀರದಲ್ಲಿ ಅಪೂರ್ವ ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ. ಭಗವಂತನನ್ನು ಪ್ರಾಮಾಣಿಕವಾಗಿ ಧ್ಯಾನಿಸಿದವನಲ್ಲಿ ವಿಷಯವಸ್ತುಗಳ ಕುರಿತಾದ ಭೋಗಲಾಲಸೆ ಮಾಯವಾಗುತ್ತದೆ; ಆತನ ಆಹಾರ-ನಿದ್ರೆಗಳು ತಾವಾಗಿಯೇ ಕಡಿಮೆಯಾಗುತ್ತವೆ. ಶ್ರೀರಾಮಕೃಷ್ಣರೇ ಹೇಳುವಂತೆ, ಆತನ ಶರೀರದಲ್ಲಿನ ಮಹಾವಾಯು ಎನ್ನುವುದು—ಎಂದರೆ, ಪರಿಪೂರ್ಣ ಏಕಾಗ್ರತೆಯ ಅಭ್ಯಾಸದಿಂದ ಉತ್ಪನ್ನವಾದ ಪ್ರಾಣಶಕ್ತಿಯು—ಸಹಸ್ರಾರದತ್ತ ಧಾವಿಸುವುದು ನಿಶ್ಚಯ.

ಹೀಗೆ, ತೀವ್ರವಾದ ಭಗವದ್ಭಕ್ತಿಯ ಪರಿಣಾಮವಾಗಿ ಮನದಲ್ಲಿ ಉದಿಸುವ ಭಾವಗಳಿಗೆ ತಕ್ಕಂಥ ಲಕ್ಷಣಗಳು ಶರೀರದಲ್ಲೂ ಕಾಣಿಸಿಕೊಳ್ಳುತ್ತವೆ. ವೈಷ್ಣವಶಾಸ್ತ್ರಗಳು ಈ ಭಗವದ್ಭಾವಗಳನ್ನು ಕ್ರಮವಾಗಿ ವಿಂಗಡಿಸಿ ಅವು ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ ಹಾಗೂ ಮಧುರಭಾವಗಳೆಂದು ಗುರುತಿಸಿವೆ. ಶಾಂತಭಾವವನ್ನು ಆಶ್ರಯಿಸಿದ ಸಾಧಕನ ಮನಸ್ಸು ಭಗವಂತನ ಅನಂತತೆ, ಅಗಾಧತೆ, ಅದ್ಭುತಗಳನ್ನು ಭಾವಿಸಿದಂತೆ ಪರಮ ಶಾಂತವಾಗುತ್ತದೆ. ಇದರ ಪರಿಣಾಮವಾಗಿ ಸಾಧಕನ ಶರೀರದಲ್ಲೂ ಅದೇ ಪರಮಶಾಂತಿಯ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಹೀಗೆಯೇ ಇತರ ಭಾವಗಳ ವಿಷಯದಲ್ಲಿಯೂ ಕೂಡ. ಈ ಆಧ್ಯಾತ್ಮಿಕ ಭಾವಗಳಿಂದ ದೈಹಿಕವಾಗಿ ಯಾವಯಾವ ಪರಿವರ್ತನೆಗಳಾಗುತ್ತವೆ ಎಂಬುದನ್ನೇ ಆಧಾರವಾಗಿಟ್ಟುಕೊಂಡು ಯೋಗಕ್ಕೆ ಸಂಬಂಧಿಸಿದ ಶಾಸ್ತ್ರಗಳು (ಉದಾ: ಪಾತಂಜಲ ಯೋಗಶಾಸ್ತ್ರ) ಷಟ್ಚಕ್ರಗಳ ಹಾಗೂ ಕುಂಡಲಿನೀ ಶಕ್ತಿಯ ವರ್ಣನೆ ಮಾಡಿವೆ.

ಈ ಜನ್ಮದಲ್ಲೂ ಹಿಂದಿನ ಎಲ್ಲ ಜನ್ಮಗಳಲ್ಲೂ ಉಂಟಾದ ಸಮಸ್ತ ಭಾವಗಳ ಪರಿಣಾಮವಾಗಿ ಜೀವಾತ್ಮನಲ್ಲಿ ಅತ್ಯಂತ ಪ್ರಚಂಡ ಪ್ರೇರಕಶಕ್ತಿಯೊಂದು ನಿರ್ಮಾಣಗೊಂಡಿರುತ್ತದೆ. ಈ ಶಕ್ತಿಯು, ಬಲವಾಗಿ ಒತ್ತಿ ಹಿಡಿಯಲ್ಪಟ್ಟ 'ಸ್ಪ್ರಿಂಗಿ'ನಂತೆ (ಸುರುಳಿಯಾಕಾರದಲ್ಲಿ) ಮೇರುದಂಡದ ಮೂಲದಲ್ಲಿ ಶೇಖರವಾಗಿರುತ್ತದೆ. ಇದನ್ನೇ ಯೋಗಿಗಳು ಕುಂಡಲಿನೀ ಶಕ್ತಿಯೆಂದು ಕರೆದಿದ್ದಾರೆ. ಹಾವಿನಂತೆ ಸುತ್ತಿಕೊಂಡಿರುವುದರಿಂದ ಇದಕ್ಕೆ ಆ ಹೆಸರು (ಕುಂಡಲ = ಹಾವು). ಸಾಧಾರಣಮನುಷ್ಯರಲ್ಲಿ, ಎಂದರೆ ಬದ್ಧಜೀವರಲ್ಲಿ, ಇದು ಹೆಚ್ಚು ಕಡಿಮೆ ಸಂಪೂರ್ಣ ಸುಪ್ತವಾಗಿ ಇರುತ್ತದೆ. ಹೀಗೆ ಇದು ನಿದ್ರಾವಸ್ಥೆಯಲ್ಲಿದ್ದರೂ ಮನುಷ್ಯನಲ್ಲಿ, ಆಲೋಚನೆ ಮಾಡುವುದು, ನೆನಪಿಸಿಕೊಳ್ಳುವುದು ಇವೇ ಮೊದಲಾದ ಚಟುವಟಿಕೆಗಳೆಲ್ಲ ಇದ್ದೇ ಇರುತ್ತವೆ. ಇದು ಸಾಧ್ಯವಾಗುವುದು ಆ ಶಕ್ತಿಯು ಅತ್ಯಂತ ಅಲ್ಪ ಪ್ರಮಾಣದಷ್ಟಾದರೂ ಜಾಗೃತವಾಗಿರುವುದರಿಂದ. ಯಾವ ರೀತಿಯಿಂದಲಾದರೂ ಅದು ಸಂಪೂರ್ಣ ಜಾಗೃತವಾದರೆ ಆಗ ಅದು ಮನುಷ್ಯನಿಗೆ ಅನಂತ ಜ್ಞಾನವನ್ನು ಕೊಟ್ಟು, ತನ್ಮೂಲಕ ಭಗವಂತನ ಸಾಕ್ಷಾತ್ಕಾರವನ್ನು ಮಾಡಿಸುತ್ತದೆ.

ಮಿದುಳಿನ ಮಧ್ಯದಲ್ಲಿರುವ ಬ್ರಹ್ಮರಂಧ್ರದಲ್ಲಿನ 'ಆಕಾಶ'ದಲ್ಲಿ ಅಖಂಡನೂ ಸಚ್ಚಿದಾನಂದಸ್ವರೂಪನೂ ಆದ ಪರಮಾತ್ಮನು ಜ್ಞಾನಸ್ವರೂಪದಲ್ಲಿ ನೆಲಸಿರುತ್ತಾನೆಂದು ಯೋಗಿಗಳು ಹೇಳುತ್ತಾರೆ. ಈ ಪರಮಾತ್ಮನು ಕುಂಡಲಿನೀಶಕ್ತಿಯನ್ನು ನಿರಂತರವೂ ತೀವ್ರವಾಗಿ ತನ್ನೆಡೆಗೆ ಆಕರ್ಷಿಸುತ್ತಿರುತ್ತಾನೆ. ಅಥವಾ ಇದನ್ನೇ ಹೀಗೂ

ಹೇಳಬಹುದು: ಕುಂಡಲಿನೀ ಶಕ್ತಿಗೆ ಪರಮಾತ್ಮನಲ್ಲಿ ವಿಶೇಷ ಆಕರ್ಷಣೆಯಿರುತ್ತದೆ. ಆದರೆ ಕುಂಡಲಿನಿಯು ಜಾಗೃತವಾಗದೆ ಈ ಆಕರ್ಷಣಶಕ್ತಿಯು ಅನುಭವಕ್ಕೆ ಬರುವುದಿಲ್ಲ. ಅದು ಜಾಗೃತವಾದೊಡನೆಯೇ ಪರಮಾತ್ಮನಿಂದ ಸೆಳೆಯಲ್ಪಟ್ಟು ಆತನೆಡೆಗೆ ಸಾಗಲು ಪ್ರಯತ್ನಿಸುತ್ತದೆ. ಅದು ಹೀಗೆ ಸಂಚರಿಸಲು ಶರೀರದಲ್ಲೊಂದು ನಿರ್ದಿಷ್ಟವಾದ ಮಾರ್ಗವಿದೆ. 'ಸುಷುಮ್ನಾ ಮಾರ್ಗ' ಎಂದು ಯೋಗಶಾಸ್ತ್ರದಲ್ಲಿ ವರ್ಣಿತವಾಗಿರುವ ಇದು ಮಿದುಳಿನಿಂದ ಆರಂಭವಾಗುತ್ತದೆ. ಮೇರುದಂಡದ ಮಧ್ಯದಿಂದ ನೇರವಾಗಿ ಬಂದು 'ಮೂಲಾಧಾರ'ವೆಂಬ ಚಕ್ರದವರೆಗೆ ಹೋಗುತ್ತದೆ. ಈ ಕುಂಡಲಿನೀ ಶಕ್ತಿಯು ಮೂಲತಃ ಪರಮಾತ್ಮನಿಂದಲೇ ಹೊರಟು, ಮೆದುಳಿನಿಂದ ಸುಷುಮ್ನಾ ಮಾರ್ಗವಾಗಿ ಕೆಳಗಿಳಿದು ಮೂಲಾಧಾರಕ್ಕೆ ಬಂದು, ಅಲ್ಲಿ ನಿದ್ರಿತಾವಸ್ಥೆಯಲ್ಲಿರುತ್ತದೆ; ಜಾಗೃತವಾದಾಗ ಅದೇ ಮಾರ್ಗದಲ್ಲಿ ಸಂಚರಿಸಿ ಸ್ವಸ್ಥಾನವನ್ನು ಸೇರುತ್ತದೆ.

ಮೇರುದಂಡದಲ್ಲಿ ಒಂದರ ಮೇಲೊಂದರಂತೆ ಆರು ಚಕ್ರಗಳಿವೆ. ಕುಂಡಲಿನಿಯನ್ನು ಜಾಗೃತಗೊಳಿಸಿದಾಗ ಅದು ಪುನಃ ಸುಷುಮ್ನಾ ಮಾರ್ಗವಾಗಿ ಸಂಚರಿಸಿ, ಆ ಆರು ಚಕ್ರಗಳನ್ನೂ ಒಂದಾದ ಮೇಲೊಂದರಂತೆ ಭೇದಿಸಿಕೊಂಡು ಮೇಲೇರುತ್ತ, ಕೊನೆಗೆ ಮೆದುಳಿನ ಮೇಲ್ಭಾಗದಲ್ಲಿರುವ ಸಹಸ್ರಾರಕ್ಕೆ ಹೋಗಿಸೇರುತ್ತದೆ. ಯೋಗಶಾಸ್ತ್ರದಲ್ಲಿ ಈ ಚಕ್ರಗಳ ಹೆಸರುಗಳನ್ನೂ ಸ್ಥಾನಗಳನ್ನೂ ಹೀಗೆ ವಿವರಿಸಲಾಗಿದೆ:

ಮೇರುದಂಡದ ಕೆಳತುದಿಯಲ್ಲಿರುವುದು 'ಮೂಲಾಧಾರ'; ಅದರ ಮೇಲಿರುವ ಲಿಂಗಮೂಲದಲ್ಲಿ 'ಸ್ವಾಧಿಷ್ಠಾನ'; ಅದರ ಮೇಲಿರುವ ನಾಭಿಸ್ಥಾನದಲ್ಲಿ 'ಮಣಿಪೂರ'; ಅದಕ್ಕಿಂತಲೂ ಮೇಲಿರುವ ಹೃದಯಸ್ಥಾನದಲ್ಲಿ 'ಅನಾಹತ'; ಅದಕ್ಕಿಂತಲೂ ಮೇಲಿರುವ ಕಂಠಪ್ರದೇಶದಲ್ಲಿ 'ವಿಶುದ್ಧ'; ಮತ್ತು ಭ್ರೂಮಧ್ಯದಲ್ಲಿರುವುದು 'ಆಜ್ಞಾ ಚಕ್ರ'. ಈ ಚಕ್ರಗಳೆಲ್ಲ ಇರುವುದು ಮೇರುದಂಡದ ಮಧ್ಯದಲ್ಲಿರುವ ಸುಷುಮ್ನಾ ಮಾರ್ಗದಲ್ಲಿಯೇ. 'ಹೃದಯಸ್ಥಾನ', 'ಕಂಠಪ್ರದೇಶ' ಎಂದು ಹೇಳಿದಾಗ ಅದರ ಎದುರಿಗಿರುವ ಮೇರುಸ್ಥಾನದಲ್ಲಿ ಎಂದೇ ತಿಳಿಯಬೇಕು.

ಕುಂಡಲಿನಿಯು ಜಾಗೃತವಾಗಿ ಒಂದೊಂದು ಚಕ್ರವನ್ನೂ ಕ್ರಮಿಸುತ್ತ ಸಾಗಿದಂತೆ, ಜೀವಾತ್ಮನಿಗೆ ಒಂದೊಂದು ಪ್ರಕಾರದ ಅಭೂತಪೂರ್ವ ಅನುಭವವುಂಟಾಗುತ್ತದೆ. ಅಂತಿಮವಾಗಿ ಅದು ಸಹಸ್ರಾರವನ್ನು ತಲುಪಿದೊಡನೆಯೇ ಆತನಿಗೆ ಆಧ್ಯಾತ್ಮಿಕ ಜ್ಞಾನದ ಪರಮಾನುಭವ ! ಎಂದರೆ, ಆಗ ಅದ್ವೈತಜ್ಞಾನದ ಬೋಧೆಯುಂಟಾಗಿ 'ಸಕಲ ಕಾರಣಗಳಿಗೂ ಕಾರಣ'ನಾದ ('ಕಾರಣಂ ಕಾರಣಾನಾಂ' ಆದ) ಪರಮಾತ್ಮನೊಂದಿಗೆ ತನ್ಮಯತೆಯುಂಟಾಗುತ್ತದೆ.

ಇವೆಲ್ಲವೂ ಯೋಗಶಾಸ್ತ್ರಗಳಲ್ಲಿ ಬರೆದಿಡಲಾಗಿರುವ ಜಟಿಲ, ಗೂಢತಮ ವಿಷಯಗಳು. ಆದರೆ ಈ ವಿಷಯಗಳಾವುದನ್ನೂ ಅಧ್ಯಯನ ಮಾಡುವ ಗೋಜಿಗೆ ಹೋಗದೆ ಏಕನಿಷ್ಠೆಯಿಂದ ಸಾಧನೆ ಮಾಡಿದವರು ಶ್ರೀರಾಮಕೃಷ್ಣರು. ಇಂತಹ ಸಾಧನೆಯಿಂದ ತಮಗುಂಟಾದ ಪರಮಾದ್ಭುತ ಅನುಭವಗಳನ್ನು ಮುಂದೆ ಅವರು ತಮ್ಮ ಶಿಷ್ಯರಿಗೆ ಸುಲಭ ಮಾತುಗಳಲ್ಲಿ ತಿಳಿಸುವ ಪ್ರಯತ್ನ ಮಾಡುತ್ತಾರೆ:

"ನೋಡಿ, ಕುಂಡಲಿನಿ ಜಾಗೃತವಾದರೆ ಏನಾಗುವುದು ಗೊತ್ತೆ? ಪಾದದಡಿಯಿಂದ ಯಾವುದೋ ಒಂದು ಶಕ್ತಿ ಜುಮ್ಮನೆ ತಲೆಗೇರತೊಡಗುತ್ತದೆ. ಅದು ಸಹಸ್ರಾರವನ್ನು ಮುಟ್ಟುವವರೆಗೂ ಪ್ರಜ್ಞೆಯಿರುತ್ತದೆ. ಆದರೆ ಅದು ಸಹಸ್ರಾರವನ್ನು ಮುಟ್ಟಿ

ತೆಂದರೆ ನಾನು ಸಂಪೂರ್ಣ ಬಾಹ್ಯಜ್ಞಾನಶೂನ್ಯನಾಗಿಬಿಡುತ್ತೇನೆ. ಆಗ ಮಾತನಾಡುವುದಿರಲಿ, ನೋಡುವುದು ಕೇಳುವುದು ಕೂಡ ಸಾಧ್ಯವಾಗುವುದಿಲ್ಲ. 'ನಾನು' 'ನೀನು' ಎಂಬ ಭೇದವೇ ಇಲ್ಲದಂತಾದಾಗ ಮಾತನಾಡುವವರಾದರೂ ಯಾರು ? ಅದು ಕ್ರಮವಾಗಿ ಏರುತ್ತಿರುವಾಗ ಎಷ್ಟೋ ದರ್ಶನಗಳಾಗುತ್ತವೆ. ಅವುಗಳನ್ನೆಲ್ಲ ನಿಮಗೆ ಹೇಳಬೇಕೆಂಬ ಆಸೆ ನನಗೆ. ಆದರೆ ಅದು (ತಮ್ಮ ಹೃದಯವನ್ನು ತೋರಿಸುತ್ತ) ಇಲ್ಲಿಗೆ ಬರುವವರೆಗೆ ಮಾತ್ರ, ಅಥವಾ ಹೆಚ್ಚೆಂದರೆ (ಕಂಠವನ್ನು ತೋರಿಸಿ) ಇಲ್ಲಿಗೆ ಬರುವವರೆಗೂ ಮಾತನಾಡಬಹುದು. ಅಂತೆಯೇ ನಾನು ಮಾತನಾಡುತ್ತಲೂ ಇರುತ್ತೇನೆ. ಆದರೆ ಅದು (ಆ ಶಕ್ತಿಯು) ಇದನ್ನು (ಕಂಠವನ್ನು) ಬಿಟ್ಟು ಮೇಲೇರಿತೆಂದರೆ ಯಾರೋ ನನ್ನ ಬಾಯಿ ಮುಚ್ಚಿದಂತಾಗಿಬಿಡುತ್ತದೆ. ತಕ್ಷಣ ನಾನು ಪ್ರಜ್ಞಾಶೂನ್ಯನಾಗುತ್ತೇನೆ. ಅದನ್ನು ತಡೆಯಲು ನನ್ನಿಂದ ಸಾಧ್ಯವೇ ಇಲ್ಲ. ಅದು ಕೊರಳಿನ ಹಂತವನ್ನು ಮೀರಿದಾಗ ಎಂತಹ ಅನುಭವವಾಗುತ್ತದೆ ಎಂದು ವಿವರಿಸಹೊರಟರೆ ಏನಾಗುತ್ತದೆ ಗೊತ್ತೆ? ನಾನು ಆ ಬಗ್ಗೆ ಆಲೋಚಿಸುತ್ತಿದ್ದಂತೆಯೇ ಮನಸ್ಸು ಆ ಭೂಮಿಕೆಗೆ ನುಗ್ಗಿ, ಮಾತನಾಡುವುದೇ ಅಸಾಧ್ಯವಾಗುತ್ತದೆ!''

ತಮ್ಮ ಈ ಅಲೌಕಿಕ ಅನುಭವಗಳನ್ನೆಲ್ಲ ಆಪ್ತಶಿಷ್ಯರ ಮುಂದೆ ಮುಚ್ಚುಮರೆಯಿಲ್ಲದಂತೆ ಬಣ್ಣಿಸಲು ಶ್ರೀರಾಮಕೃಷ್ಣರು ಅದೆಷ್ಟು ದಿನ ಪ್ರಯತ್ನಿಸಿದ್ದರೋ! ಅಂತಹ ಒಂದು ದಿವ್ಯಾದ್ಭುತ ಘಳಿಗೆಯಲ್ಲಿ ಅಲ್ಲಿದ್ದ ಒಬ್ಬ ಭಾಗ್ಯಶಾಲೀ ಶಿಷ್ಯ ಅದನ್ನು ಹೀಗೆ ವಿವರಿಸುತ್ತಾನೆ:

''ಒಂದು ದಿನ ಶ್ರೀರಾಮಕೃಷ್ಣರು, 'ಇಂದು ನಿಮಗೆ ನಾನು ಎಲ್ಲವನ್ನೂ ಹೇಳಿಬಿಡುತ್ತೇನೆ. ಒಂದಿಷ್ಟೂ ಗುಟ್ಟು ಮಾಡುವುದಿಲ್ಲ' ಎಂದು ಹೇಳಿ ಪ್ರಾರಂಭಿಸಿದರು. ಹೃದಯ ಮತ್ತು ಕಂಠದವರೆಗಿನ ಚಕ್ರಗಳ ವಿಷಯವನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಅನುಭವಗಳನ್ನು ಸ್ಪಷ್ಟವಾಗಿ ತಿಳಿಯಪಡಿಸಿದರು. ಬಳಿಕ ಹುಬ್ಬುಗಳ ನಡುವನ್ನು ತೋರಿಸುತ್ತ ನುಡಿದರು: 'ಇಲ್ಲಿಗೆ ಮನಸ್ಸು ಏರಿದೊಡನೆಯೇ ಪರಮಾತ್ಮನ ದರ್ಶನವಾಗುತ್ತದೆ! ಒಡನೆಯೇ ಜೀವಾತ್ಮನು ಸಮಾಧಿಸ್ಥನಾಗುತ್ತಾನೆ. ಆಗ ಜೀವಾತ್ಮ-ಪರಮಾತ್ಮರ ನಡುವೆ ಕೇವಲ ಒಂದು ಸ್ವಚ್ಛವಾದ, ತೆಳುವಾದ ಪರದೆಯಂತಹ ತಡೆ ಮಾತ್ರ ಇರುತ್ತದೆ. ಆಗ ಅವನು ಏನು ಕಾಣುತ್ತಾನೆಂದರೆ—' ಇಷ್ಟು ಹೇಳಿ ಪರಮಾತ್ಮ ದರ್ಶನದ ವಿಷಯವನ್ನು ಬಣ್ಣಿಸಹೊರಟರು; ಅಷ್ಟರಲ್ಲಿಯೇ ಸಮಾಧಿಸ್ಥರಾದರು! ಸ್ವಲ್ಪ ಹೊತ್ತಿನ ಮೇಲೆ ಬಾಹ್ಯಪ್ರಜ್ಞೆಗೆ ಮರಳಿದರು. ಆಗ ಪುನಃ ಆ ಅನುಭವವನ್ನು ವಿವರಿಸಲು ಹೊರಟರು; ಮತ್ತೆ ಸಮಾಧಿಗೇರಿದರು!! ಹೀಗೆ ಮತ್ತೆಮತ್ತೆ ಪ್ರಯತ್ನ ಮಾಡಿದರೂ ಮತ್ತೆಮತ್ತೆ ಸಮಾಧಿಯುಂಟಾಗಿ, ಅದನ್ನು ವಿವರಿಸಲು ಕೊನೆಗೂ ಅವರಿಂದಾಗಲೇ ಇಲ್ಲ! ಆಗ ಅವರು ಕಣ್ಣೀರ್ದುಂಬಿ, 'ಅಪ್ಪಾ, ಒಂದು ಸ್ವಲ್ಪವೂ ಮುಚ್ಚುಮರೆ ಮಾಡದೆ ಎಲ್ಲವನ್ನೂ ನಿಮಗೆ ತಿಳಿಸಿಬಿಡಬೇಕು ಎಂದು ನಿಜವಾಗಿಯೂ ನನಗೆ ತುಂಬ ಆಸೆ ಇದೆ. ಆದರೇನು ಮಾಡಲಿ! ಏನೇ ಆದರೂ ತಾಯಿ ಅದನ್ನು ಹೇಳಲು ಬಿಡುವುದಿಲ್ಲ. ಆಕೆ ನನ್ನ ಬಾಯಿಯನ್ನು ಮುಚ್ಚಿಬಿಡುತ್ತಾಳೆ' ಎಂದರು.

''ಇದನ್ನೆಲ್ಲ ನೋಡುತ್ತ ಕುಳಿತಿದ್ದ ನಾವೆಲ್ಲ ಅವಾಕ್ಕಾಗಿ ಭಾವಿಸಿದೆವು: 'ಆಹಾ, ಇದೇನು ಅದ್ಭುತ ! ಅವರು ತಿಳಿಸಬೇಕೆಂದು ಅದೆಷ್ಟು ಪ್ರಯತ್ನ ಪಡುತ್ತಿದ್ದಾರೆಂಬುದು ನಮಗೇ ಗೊತ್ತಾಗುತ್ತಿದೆ; ಆದರೆ ಅದನ್ನು ವ್ಯಕ್ತಪಡಿಸಲಾಗದೆ ಸಂಕಟ ಪಡುತ್ತಿರು

ವುದೂ ಕಾಣುತ್ತಿದೆ! ಇದೇನನ್ಯಾಯ! ಆ ಹೆಂಗಸು—ಜಗನ್ಮಾತೆ—ತುಂಬ ದುಷ್ಟಳೇ ಸರಿ. ಇಲ್ಲದಿದ್ದರೆ, ಅಂಥಾ ಪುಣ್ಯದ ವಿಷಯವನ್ನು, ಭಗವತ್ಸಾಕ್ಷಾತ್ಕಾರದ ವಿಷಯವನ್ನು ಹೇಳಲು ಹೊರಟಾಗ ಅವರ ಬಾಯಿ ಮುಚ್ಚುವುದೇಕಪ್ಪಾ!' ಎಂದು. ಆದರೆ ಯಾವ ಬುದ್ಧಿ-ಮನಸ್ಸುಗಳೆಂಬ ಕರಣಗಳಿಂದ ನಾವು ಮಾತುಕತೆಯನ್ನಾಡಬಹುದೋ ಅವುಗಳ ಶಕ್ತಿ ಬಹಳ ಮಿತವಾದದ್ದೆಂದು, ಅವುಗಳನ್ನು ಮೀರಿಹೋಗದಿದ್ದರೆ ಪರಮಾತ್ಮನ ದರ್ಶನ ಸಾಧ್ಯವಿಲ್ಲವೆಂದು ಆಗ ನಮಗೆಲ್ಲಿ ತಿಳಿದಿತ್ತು? ಶ್ರೀರಾಮಕೃಷ್ಣರು ಕೇವಲ ನಮ್ಮ ಮೇಲಿನ ಪ್ರೇಮದಿಂದಾಗಿ ಅಸಾಧ್ಯವಾದುದನ್ನು ಸಾಧ್ಯವಾಗಿಸಲು ಪ್ರಯತ್ನಿಸುತ್ತಿದ್ದರೆಂಬುದು ಆಗ ನಮಗೆಲ್ಲಿ ಅರ್ಥವಾಗಿತ್ತು?''

ನಿಜಕ್ಕೂ ಇದೊಂದು ಅದ್ಭುತ! ತಾವು ನಿಶ್ಚಯವಾಗಿಯೂ ಅನುಭವಿಸಿದ ಆ ಬ್ರಹ್ಮಾನಂದದ ವೈಭವವನ್ನು ವಾಕ್ಕಿನಿಂದ ವರ್ಣಿಸಲು ಸಾಧ್ಯವಾಗದಂಥ ದಿವ್ಯಾದ್ಭುತ ಸ್ಥಿತಿ! *'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'*—ಪರಬ್ರಹ್ಮವನ್ನು ತಿಳಿಯಲು ಹೋದ ಮನಸ್ಸು ಮಾತುಗಳು ಅದನ್ನು ಅರಿಯಲಾರದೆ, ಹೋದ ದಾರಿಯಲ್ಲೇ ಹಿಂದಿರುಗಿದುವು' ಎಂದು ಘೋಷಿಸಿದ ಉಪನಿಷತ್ತಿನ ಸತ್ಯ ಇದೇ ಅಲ್ಲವೆ? ಶ್ರೀರಾಮಕೃಷ್ಣರೇ ಮತ್ತೆಮತ್ತೆ ಹೇಳುತ್ತಿದ್ದ ಸಮುದ್ರವನ್ನಳೆಯಲು ಹೋದ ಉಪ್ಪಿನ ಬೊಂಬೆಯ ಸ್ಥಿತಿ ಇದೇ ಅಲ್ಲವೆ?

ಕುಂಡಲಿನೀ ಶಕ್ತಿಯು ಸುಷುಮ್ನಾಮಾರ್ಗವಾಗಿ ಯಾವ ಪ್ರಕಾರದಿಂದ ಮೇಲೇರುತ್ತದೆ ಎಂಬುದನ್ನು ಶ್ರೀರಾಮಕೃಷ್ಣರು ಕೆಲವೊಮ್ಮೆ ಸವಿಸ್ತಾರವಾಗಿ ತಿಳಿಸುತ್ತಿದ್ದರು:

''ನೋಡು, ಯಾವುದೋ ಒಂದು ಶಕ್ತಿ ಪಾದದಡಿಯಿಂದ ಪ್ರಾರಂಭವಾಗಿ ತಲೆಗೇರುತ್ತದೆ ಎಂದೆನಲ್ಲ, ಅದು ಯಾವಾಗಲೂ ಒಂದೇ ಪ್ರಕಾರವಾಗಿ ಏರುವುದಿಲ್ಲ. ಅದು ಸಂಚರಿಸುವ ರೀತಿ ಐದು ಪ್ರಕಾರವಾಗಿರುತ್ತದೆ ಎಂದು ಶಾಸ್ತ್ರದಲ್ಲಿ ಹೇಳಿದೆ:

೧. 'ಪಿಪೀಲಿಕಾ ಗತಿ'—ಎಂದರೆ, ಇರುವೆಗಳಂತೆ ಚಲಿಸುವುದು. ಇರುವೆಗಳು ಬಾಯಲ್ಲಿ ತಿಂಡಿಯನ್ನು ಕಚ್ಚಿಕೊಂಡು ಸಾಲಾಗಿ ಸರಸರನೆ ಒಂದೇ ವೇಗದಲ್ಲಿ ಚಲಿಸುವುದಿಲ್ಲವೆ? ಹಾಗೆಯೇ ಪಾದದಡಿಯಿಂದ ಜುಮ್ಮೆನ್ನುವುದು ಪ್ರಾರಂಭವಾಗಿ ಮೆಲ್ಲನೆ ಮೇಲಕ್ಕೇರುತ್ತದೆ. ಮಸ್ತಕದವರೆಗೆ ಏರಿ ಸಮಾಧಿಯನ್ನುಂಟುಮಾಡುತ್ತದೆ.

೨.' ಭೇಕ ಗತಿ'—ಎಂದರೆ, ಕಪ್ಪೆಯಂತೆ ಕುಪ್ಪಳಿಸುವುದು. ಕಪ್ಪೆಗಳು ಒಮ್ಮೆಗೆ ಎರಡು-ಮೂರು ಬಾರಿ ಕುಪ್ಪಳಿಸಿ, ಸುಮ್ಮನೆ ಕುಳಿತಿರುತ್ತವೆ. ಬಳಿಕ ಮತ್ತೆ ಎರಡು-ಮೂರು ಬಾರಿ ಕುಪ್ಪಳಿಸಿ ಮತ್ತೆ ಕುಳಿತುಕೊಳ್ಳುತ್ತವೆ. ಹಾಗೆಯೇ, ಆ ಶಕ್ತಿ ಪಾದದಡಿಯಿಂದ ನಿಂತುನಿಂತು ಮೇಲೇರುವುದನ್ನು ತಿಳಿಯಬಹುದು. ಅದು ತಲೆಗೇರಿದೊಡನೆಯೇ ಸಮಾಧಿ!

೩. 'ಸರ್ಪಗತಿ'— ಹಾವುಗಳಂತೆ ಚಲಿಸುವುದು. ಹಾವುಗಳು ವಿಶ್ರಮಿಸುತ್ತಿರುವಾಗ ನೇರವಾಗಿಯೋ ಸುರುಳಿ ಸುತ್ತಿಕೊಂಡೋ ಸುಮ್ಮನೆ ಬಿದ್ದಿರುತ್ತವೆ. ಆದರೆ ಎದುರಿಗೆ ತಮ್ಮ ಆಹಾರವನ್ನು ಕಂಡರೆ, ಇಲ್ಲವೆ ಹೆದರಿದಾಗ, ಓರೆಕೋರೆಯಾಗಿ ಓಡುತ್ತವೆ. ಆ ರೀತಿಯಾಗಿಯೇ ಕುಂಡಲಿನೀ ಶಕ್ತಿಯು ವಕ್ರವಾಗಿ ಚಲಿಸುತ್ತ ಮೆದುಳಿಗೇರುತ್ತದೆ. ತಕ್ಷಣವೇ ಸಮಾಧಿ!

೪. 'ಪಕ್ಷಿ ಗತಿ'— ಪಕ್ಷಿಗಳಂತೆ ಹಾರುವುದು. ಪಕ್ಷಿಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹಾರಿಹೋಗಿ ಕುಳಿತುಕೊಳ್ಳುವಾಗ, ಒಮ್ಮೆ ಸ್ವಲ್ಪ ಎತ್ತರದಲ್ಲಿ

ಹಾರಬಹುದು; ಇನ್ನೊಮ್ಮೆ ಕೆಳಗೆ ಹಾರಬಹುದು. ಆದರೆ ನಡುವೆ ಎಲ್ಲೂ ಇಳಿದು ವಿಶ್ರಮಿಸುವುದಿಲ್ಲ. ಕುಂಡಲಿನಿಯು ಏರುವಾಗ ಕೆಲವೊಮ್ಮೆ ಇಂಥದೇ ಅನುಭವವಾಗಿ, ಸಮಾಧಿಯು ಉತ್ತುಂಗ ಸ್ಥಿತಿಯಲ್ಲಿ ಮುಕ್ತಾಯಗೊಳ್ಳುತ್ತದೆ.

೫. 'ಮರ್ಕಟ ಗತಿ'—ಎಂದರೆ, ಮಂಗಗಳಂತೆ ಜಿಗಿಯುವುದು. ಮಂಗಗಳು ಒಂದು ಮರದಿಂದ ಇನ್ನೊಂದು ಮರಕ್ಕೆ ಹೋಗಬೇಕೆಂದರೆ, ಒಂದು ಕೊಂಬೆಯಿಂದ ಇನ್ನೊಂದು ಕೊಂಬೆಗೆ ಛಗನೆ ಹಾರುತ್ತವೆ. ಹೀಗೆ ಎರಡು-ಮೂರು ಬಾರಿ ಲಾಗ ಹಾಕಿ, ಎಲ್ಲಿಗೆ ಹೋಗಬೇಕೆಂದು ನಿರ್ಧರಿಸುತ್ತ ಬಳಿಕ ಅಲ್ಲಿಗೆ ಹೋಗಿ ಕುಳಿತುಕೊಳ್ಳುತ್ತವೆ. ಹಾಗೆಯೇ, ಕುಂಡಲಿನೀ ಶಕ್ತಿಯು ಕೂಡ ಎರಡು-ಮೂರು ನೆಗೆತಗಳಲ್ಲಿ ತಲೆಗೇರುವುದನ್ನು ಅನುಭವಿಸಬಹುದು. ತಕ್ಷಣವೇ ಸಮಾಧಿ!"

ಕುಂಡಲಿನೀ ಶಕ್ತಿಯು ಸುಷುಮ್ನಾ ಮಾರ್ಗವಾಗಿ ಕ್ರಮಿಸುವಾಗ ಒಂದೊಂದು ಚಕ್ರದಲ್ಲೂ ಯಾವಯಾವ ಬಗೆಯ ದರ್ಶನಗಳಾಗುತ್ತದೆಂಬುದನ್ನು ಶ್ರೀರಾಮಕೃಷ್ಣರು ಹೀಗೆ ವಿವರಿಸುತ್ತಾರೆ:

"ವೇದಾಂತದಲ್ಲಿ ಸಪ್ತ ಭೂಮಿಕೆಗಳ ವಿಷಯವಿದೆ. ಒಂದೊಂದು ಭೂಮಿಕೆಗೇರಿದಾಗಲೂ ಉಂಟಾಗುವ ಅನುಭವ ಒಂದೊಂದು ರೀತಿಯದು. ಮನುಷ್ಯನ ಮನಸ್ಸು ಸಾಧಾರಣವಾಗಿ ಕೆಳಗಿನ ಮೂರು ಭೂಮಿಕೆಗಳಲ್ಲೇ—ಎಂದರೆ ಗುದ, ಲಿಂಗ, ನಾಭಿ ಇವುಗಳಲ್ಲಿ ಏರಿಳಿಯುತ್ತಿರುತ್ತದೆ. ಆಗ ಮನುಷ್ಯನು ಆಹಾರ ವಿಹಾರ ಮೈಥುನಗಳಲ್ಲೇ ಮಗ್ನನಾಗಿರುತ್ತಾನೆ. ಒಂದು ವೇಳೆ ಏನಾದರೂ ಮನಸ್ಸು ಈ ಮೂರು ಭೂಮಿಕೆಗಳನ್ನೂ ಮೀರಿ ಹೃದಯಕ್ಕೇರಿತೆಂದರೆ ಆಗ ಮನುಷ್ಯನಿಗೆ ಜ್ಯೋತಿ ದರ್ಶನವಾಗುತ್ತದೆ. ಆದರೆ ಅದು ಹೀಗೆ ಕೆಲವೊಮ್ಮೆ ಹೃದಯಕ್ಕೇರಿದರೂ ಮತ್ತೆ ಬೇಗನೆ ಗುದ, ಲಿಂಗ, ನಾಭಿ—ಈ ಹಂತಗಳಿಗೆ ಜಾರಿಬಿಡುತ್ತದೆ. ಒಮ್ಮೆ ಸಾಧಕನ ಮನಸ್ಸು ಹೃದಯದಿಂದಲೂ ಮೇಲೇರಿ ಕಂಠದ ಮಟ್ಟಕ್ಕೆ ಬಂದಿತೆಂದರೆ ಆಗ ಅವನಿಗೆ ಭಗವದ್ವಿಚಾರವಲ್ಲದೆ ಬೇರೆ ಮಾತನ್ನಾಡಲು ಸಾಧ್ಯವೇ ಆಗುವುದಿಲ್ಲ. ನಾನು ಆ ಸ್ಥಿತಿಯಲ್ಲಿದ್ದಾಗ ಯಾರಾದರೂ ನನ್ನೆದುರಿನಲ್ಲಿ ಲೌಕಿಕ ವಿಚಾರವನ್ನೆತ್ತಿದರೆ ನನ್ನ ತಲೆಗೆ ದೊಣ್ಣೆಯಿಂದ ಬಡಿದಂತಾಗುತ್ತಿತ್ತು. ಅವರಿಂದ ತಪ್ಪಿಸಿಕೊಳ್ಳಲು ನಾನು ಪಂಚವಟಿಗೆ ಓಡುತ್ತಿದ್ದೆ. ಅಲ್ಲಿ ಇಂಥ ಮಾತುಗಳೆಲ್ಲ ಕೇಳಿಬರಲವಕಾಶವಿಲ್ಲ. ಪ್ರಾಪಂಚಿಕ ಜನರು ಕಣ್ಣಿಗೆ ಬಿದ್ದರೆ ಸಾಕು, ಹೆದರಿ ಎಲ್ಲಿಯಾದರೂ ಅವಿತಿಟ್ಟುಕೊಳ್ಳುತ್ತಿದ್ದೆ. ನೆಂಟರಿಷ್ಟರೆಂದರೆ, ನನ್ನನ್ನು ಆಳವಾದ ಹಳ್ಳದೊಳಕ್ಕೆ ತಳ್ಳಲು ಪ್ರಯತ್ನಿಸುವ ವೈರಿಗಳೆಂದು ಭಾವಿಸುತ್ತಿದ್ದೆ! ಒಮ್ಮೆ ಆ ಹಳ್ಳದೊಳಗೆ ಬಿದ್ದುಬಿಟ್ಟೆನೆಂದರೆ ಮತ್ತೆ ಎದ್ದುಬರುವಂತೆಯೇ ಇಲ್ಲ ಎಂದು ಭಯಭೀತನಾಗುತ್ತಿದ್ದೆ. ಪ್ರಾಪಂಚಿಕವಾದ ಮಾತುಕತೆ ಕಿವಿಗೆ ಬಿದ್ದರೆ ಉಸಿರು ಕಟ್ಟಿದಂತಾಗುತ್ತಿತ್ತು; ಮರಣಾವಸ್ಥೆ ಒದಗಿದಂತಾಗುತ್ತಿತ್ತು. ಅಲ್ಲಿಂದ ತಪ್ಪಿಸಿಕೊಂಡು ಸ್ವಲ್ಪ ದೂರ ಹೋದ ಮೇಲೆಯೇ ಸ್ವಲ್ಪ ಶಾಂತಿ ಸಿಗುತ್ತಿದ್ದುದು!

"ಮನಸ್ಸು ಕಂಠದ ಮಟ್ಟಕ್ಕೆ ಹೋದರೂ, ಅದು ತಿರುಗಿ ಗುದ-ಲಿಂಗ-ನಾಭಿಗಳ ಹಂತಕ್ಕೆ ಜಾರುವ ಸಾಧ್ಯತೆ ಇದ್ದೇ ಇರುತ್ತದೆ. ಆದ್ದರಿಂದ ಸಾಧಕನು ಆಗಲೂ ಎಚ್ಚರದಿಂದಿರಬೇಕು. ಆದರೆ ಒಮ್ಮೆ ಅದು ಭ್ರೂಮಧ್ಯಸ್ಥಿತಿಗೇರಿತೆಂದರೆ ಆಮೇಲೆ ಪತನದ ಭಯವಿಲ್ಲ. ಆಗ ಸಾಧಕನಿಗೆ ಪರಮಾತ್ಮನ ದರ್ಶನವಾಗುತ್ತದೆ; ಮನಸ್ಸು ನಿರಂತರ ಸಮಾಧಿಯಲ್ಲಿ ಮುಳುಗಿಹೋಗುತ್ತದೆ. ಈ ಭೂಮಿಕೆಗೂ ಮೆದುಳಿ

ನಲ್ಲಿರುವ ಸಹಸ್ರಾರಕ್ಕೂ ನಡುವಿನ ತಡೆಯೆಂದರೆ, ಗಾಜಿನಂತೆ ಸ್ವಚ್ಛವಾದ ಒಂದು ಪರದೆ ಮಾತ್ರವೆ! ಆಗ ಪರಮಾತ್ಮನು ಎಷ್ಟು ಸಮೀಪನಾಗಿ ತೋರುತ್ತಾನೆಂದರೆ ಆತನೊಂದಿಗೆ ತಾನು ವಿಲೀನವಾಗಿಬಿಟ್ಟಿರುವಂತೆಯೇ ಮನಸ್ಸಿಗೆ ತೋರುತ್ತದೆ. ಆದರೆ ಇಲ್ಲ, ಇನ್ನೂ ಅದು ವಿಲೀನವಾಗಿಲ್ಲ! ಸ್ವಲ್ಪ ಅಂತರವಿದೆ! ಇಲ್ಲಿಂದಲೂ ಮನಸ್ಸು ಕೆಳಗಿಳಿಯಬಹುದು; ಆದರೆ ಅದು ಕಂಠದವರೆಗೆ, ಹೆಚ್ಚೆಂದರೆ ಹೃದಯದವರೆಗೆ ಇಳಿದೀತಷ್ಟೆ. ಅದಕ್ಕಿಂತ ಕೆಳಗಿಳಿಯಲಾರದು. ಜೀವಕೋಟಿಗಳು ಈ ಭ್ರೂಮಧ್ಯದ ಹಂತದಿಂದ ಕೆಳಗೆ ಬರುವುದೇ ಇಲ್ಲ. ಈ ಸ್ಥಿತಿಯಲ್ಲಿ ನಿರಂತರವಾಗಿ ಇಪ್ಪತ್ತೊಂದು ದಿನ ಇದ್ದರೆ, ಆ ತೆಳುವಾದ ಪೊರೆ ಭೇದಿಸಲ್ಪಡುತ್ತದೆ. ಆಗ ಅವರು ಪರಮಾತ್ಮನೊಂದಿಗೆ ಒಂದಾಗುತ್ತಾರೆ. ಕೂಡಲೇ ಅವರ ದೇಹವು ತರಗೆಲೆಯಂತೆ ಬಿದ್ದು ಹೋಗುತ್ತದೆ.''

ಸುಮಾರು ಆರು ತಿಂಗಳ ಕಾಲ ನಿರ್ವಿಕಲ್ಪ ಸಮಾಧಿಯಲ್ಲಿ ಮುಳುಗಿದ್ದ ಬಳಿಕ ಒಮ್ಮೆ ಶ್ರೀರಾಮಕೃಷ್ಣರಿಗೆ ಅಲೌಕಿಕ ದನಿಯೊಂದು "ಭಾವಮುಖದಲ್ಲಿರು" ಎಂದು ಆಜ್ಞಾಪಿಸಿತು. ಇದೇ ರೀತಿಯ ಆಜ್ಞೆ ಅವರಿಗೆ ಹಿಂದೆ ಎರಡು ಬಾರಿ ದೊರಕಿತ್ತು. ಅದು, ಹಲಧಾರಿಯ ಮಾತುಗಳಿಂದಾಗಿ ಅವರು ದಿಗ್ಭ್ರಮೆಗೊಂಡು ಜಗನ್ಮಾತೆಯ ಮರೆಹೊಕ್ಕಾಗ ಆದದ್ದು. ಆ ಎರಡು ಬಾರಿಯೂ ಅವರು ಸಾಕಾರ ಮೂರ್ತಿಯೊಂದರ ಮೂಲಕ ಆ ಮಾತುಗಳನ್ನು ಕೇಳಿದ್ದರು. ಆದರೆ ಈ ಬಾರಿ ಅವರಿಗೆ ಯಾವ ದರ್ಶನವೂ ಆಗಲಿಲ್ಲ. ಆದ್ದರಿಂದ ಇದೊಂದು ಆಂತರಿಕ 'ಅನುಭವ' ಎಂದು ಹೇಳಬಹುದು. ಆ ಸಮಯದಲ್ಲಿ ಅವರ ಮನಸ್ಸು ನಿರಂತರವೂ ತುರೀಯ–ಅದ್ವೈತ ತತ್ತ್ವದಲ್ಲಿ ಲೀನವಾಗಿರುತ್ತಿತ್ತು. ಒಂದು ವೇಳೆ, ಅದೇನಾದರೂ ಕೆಲಕಾಲದ ಮಟ್ಟಿಗೆ ಕೆಳಗಿಳಿದು ಬಂದರೂ ಕೂಡ ಇಂದ್ರಿಯಗಳ ಮಟ್ಟಕ್ಕೆ ಬರಲು ಸಾಧ್ಯವಿರಲಿಲ್ಲ. ಆಗ ಅದು, 'ವಿರಾಟ್ ಸಗುಣ-ಸಾಕಾರ ಬ್ರಹ್ಮನ ಅಂಶ ನಾನು' ಅಥವಾ 'ಜಗನ್ಮಾತೆಯ ಅಂಶ ನಾನು' ಎಂಬಂಥ ವಿಶಿಷ್ಟಾದ್ವೈತದ ಸ್ಥಿತಿಯಲ್ಲಿರುತ್ತಿತ್ತು. ಆದ್ದರಿಂದ "ಭಾವ ಮುಖದಲ್ಲಿರು!" ಎಂಬುದು ಅವರಿಗೆ ಮತ್ತೊಬ್ಬ ವ್ಯಕ್ತಿಯು ನೀಡಿದ ಆಜ್ಞೆಯಂತೆ ತೋರದೆ, ಅದು ವಿರಾಟ್ ಬ್ರಹ್ಮದ ವಿರಾಟ್ ಮನಸ್ಸಿನಲ್ಲಿ ಮೂಡಿದ ಭಾವ ಎಂಬಂತೆ ಗೋಚರವಾಯಿತು.

ಈ ಅಲೌಕಿಕ ಅನುಭವವು ಶ್ರೀರಾಮಕೃಷ್ಣರ ವ್ಯಕ್ತಿತ್ವವನ್ನೇ ಬದಲಿಸಿತೆನ್ನಬಹುದು. ಅಲ್ಲದೆ ಇದು ಅವರಿಗೆ ತಮ್ಮ ಜೀವಿತೋದ್ದೇಶವೇನೆಂಬುದನ್ನು ಕಂಡುಕೊಳ್ಳಲು ನೆರವಾಯಿತು. ಇದೇ ಸಮಯದಲ್ಲಿ ನಡೆದ ಇನ್ನೊಂದು ಘಟನೆಯೂ ಇದರಲ್ಲಿ ಒಂದು ಮಹತ್ವದ ಪಾತ್ರ ವಹಿಸಿತು.

ಈ ನಡುವೆ, ಶ್ರೀರಾಮಕೃಷ್ಣರ ಪರಮ ಭಕ್ತನಾದ ಮಥುರಾನಾಥನ ಹೆಂಡತಿ ಜಗದಂಬಾ ದಾಸಿ ಆಮಶಂಕೆಗೆ ಗುರಿಯಾದಳು. ಕೂಡಲೇ ಔಷಧೋಪಚಾರ-ಪಥ್ಯಕ್ಕೆಲ್ಲ ಏರ್ಪಾಡಾಯಿತು. ಆದರೆ ಏನೇನು ಮಾಡಿದರೂ ಕಾಯಿಲೆ ಇಳಿಮುಖವಾಗಲಿಲ್ಲ; ಬದಲಾಗಿ ದಿನೇದಿನೇ ಉಲ್ಬಣಗೊಂಡಿತು. ಕ್ರಮೇಣ ಅದು ಎಲ್ಲಿಯವರೆಗೆ ಬಂದಿತೆಂದರೆ ಆಕೆಯ ಜೀವ ಉಳಿಯುವುದೇ ಕಷ್ಟ ಎನ್ನುವಂತಾಯಿತು. ಕಲ್ಕತ್ತದ ಸುಪ್ರಸಿದ್ಧ ವೈದ್ಯರೆಲ್ಲ ಬಂದು ಪರೀಕ್ಷೆ ಮಾಡಿದರು; ಔಷಧಿ ನೀಡಿದರು. ಕಡೆಗೆ ಎಲ್ಲರೂ ಹತಾಶರಾಗಿ, ಇನ್ನು ತಮ್ಮ ಕೈಯಲ್ಲೇನೂ ಇಲ್ಲ ಎಂದುಬಿಟ್ಟರು.

ಮಥುರಾನಾಥ ನಡುಗಿಹೋದ. ತನ್ನ ಪ್ರೀತಿಯ ಪತ್ನಿ ತನ್ನಿಂದ ದೂರವಾಗುವುದನ್ನು ಅವನಿಂದ ಊಹಿಸಲೂ ಸಾಧ್ಯವಿಲ್ಲ! ಅಲ್ಲದೆ ಅದರೊಂದಿಗೆ ಮತ್ತೊಂದು ಗಂಡಾಂತರವೂ ಕಾದಿತ್ತು. ರಾಣಿ ರಾಸಮಣಿಯ ಆಸ್ತಿಯ ಪಾಲು ಇದ್ದದ್ದು ಜಗದಂಬಾ ದಾಸಿಯ ಹೆಸರಿನಲ್ಲಿ. ಈಗ ಅವಳೇನಾದರೂ ತೀರಿಹೋದಲ್ಲಿ ಅವಳೊಂದಿಗೆ ಆ ಸಮಸ್ತ ಸಂಪತ್ತೂ ಅವನ ಕೈಯಿಂದ ಜಾರಿಹೋದಂತೆಯೇ! ಇಂದು ಲಕ್ಷಾಧಿಪತಿಯಾಗಿದ್ದವನು ನಾಳೆ ಭಿಕ್ಷಾಧಿಪತಿಯಾಗುವ ಸಂಭವ! ಇವೆಲ್ಲದರೊಂದಿಗೆ ಶ್ರೀರಾಮ

ಕೃಷ್ಣರ ಸೇವೆ ಮಾಡುವ ಸುಯೋಗವೂ ಅವನ ಪಾಲಿಗಿಲ್ಲವಾಗುತ್ತದೆ.

ಜಗದಂಬಾಳನ್ನು ಪರೀಕ್ಷಿಸಿ ವೈದ್ಯರು ತಮ್ಮ ಕೊನೆಯ ಅಭಿಪ್ರಾಯವನ್ನು ಹೇಳಿ ಹೋದ ಮೇಲೆ ಮಥುರಬಾಬು ಕೆಲಕಾಲ ಕಣ್ಣು ಕತ್ತಲೆ ಬಂದಂತೆ ಕುಳಿತಿದ್ದ. ವೈದ್ಯರೇ ಕೈಬಿಟ್ಟಮೇಲೆ ತನಗಿನ್ನಾರು ದಿಕ್ಕು? ಆದರೆ ಆ ಕತ್ತಲೆಯಲ್ಲೂ ಬೆಳಕಿನ ಕಿರಣವೊಂದು ಮಿನುಗಿತು. ಮರುಭೂಮಿಯ ಮಧ್ಯೆ ತಣ್ಣೀರಿನ ಚಿಲುಮೆಯೊಂದು ಕಂಡಿತು.

ಈಗ ಅವನ ಸಾರೋಟು ನೇರವಾಗಿ ಸಾಗಿದ್ದು ದಕ್ಷಿಣೇಶ್ವರದೆಡೆಗೆ. ಭವತಾರಿಣಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಎದ್ದ ಮಥುರ, 'ತಂದೆ'ಯನ್ನು ಹುಡುಕಿಕೊಂಡು ಪಂಚವಟಿಗೆ ಓಡಿದ.

ಶ್ರೀರಾಮಕೃಷ್ಣರು ಶಾಂತವಾಗಿ ಕುಳಿತು ತಮ್ಮದೇ ಆದ ಭಾವದಲ್ಲಿ ವಿಹರಿಸುತ್ತಿದ್ದಾರೆ. ಇದ್ದಕ್ಕಿದ್ದಂತೆ ಬಂದ ಮಥುರನನ್ನು ಕಂಡು ಅವರಿಗೆ ಆಶ್ಚರ್ಯ. ಮಥುರನ ಮುಖದಲ್ಲಿ ಹೆಪ್ಪುಗಟ್ಟಿದ್ದ ದುಃಖ ಯಾತನೆ ಹತಾಶೆಗಳನ್ನು ಗಮನಿಸಿ ಅವರು ಮತ್ತೂ ಆಶ್ಚರ್ಯಗೊಂಡು ಕೇಳಿದರು:

"ಮಥುರ! ಏನಾಯಿತು ನಿನಗೆ? ಏಕೆ ಹೀಗಿದ್ದೀಯೆ?"

ಮಥುರ ಉತ್ತರಿಸಲಿಲ್ಲ. ಸೀದಾ ಬಂದು ಅವರ ಪಾದಗಳ ಮೇಲೆ ಕುಸಿದ. ಶ್ರೀರಾಮಕೃಷ್ಣರು ಅವನನ್ನು ಪ್ರೀತಿಯಿಂದ ಮೇಲೆಬ್ಬಿಸುತ್ತ ನುಡಿದರು:

"ಏಳು, ಏಳು. ಸಮಾಧಾನ ತಂದುಕೊ. ಏನಾಯಿತು, ಹೇಳು."

ಮಥುರ ಗದ್ಗದ ಸ್ವರದಲ್ಲಿ ನುಡಿದ:

"ಅಪ್ಪಾ, ಏನೇನು ಆಗಬೇಕೆಂದು ನನ್ನ ಹಣೆಯಲ್ಲಿ ಬರೆದಿದೆಯೋ ಎಲ್ಲವೂ ಆಗಿಯೇ ತೀರುವಂತೆ ಕಾಣುತ್ತಿದೆ. ಇನ್ನೇನು ತಾನೆ ಹೇಳಲಿ?"

ಮಗುವಿನಂತೆ ತನ್ನ ಅಳಲನ್ನು ತೋಡಿಕೊಂಡ. ಬಳಿಕ ಅತ್ಯಂತ ನಮ್ರತೆಯಿಂದ ಮತ್ತೆಮತ್ತೆ ಹೇಳತೊಡಗಿದ:

"ಅಪ್ಪಾ, ನಿಮ್ಮ ಸೇವೆ ಮಾಡುವ ಭಾಗ್ಯದಿಂದ ವಂಚಿತನಾಗಿಬಿಟ್ಟೆ ನಾನು! ಆ ಸುಯೋಗ ಇನ್ನು ನನಗೆಲ್ಲಿ?"

ಮಥುರನ ದೈನ್ಯವನ್ನು ಕಂಡು ಶ್ರೀರಾಮಕೃಷ್ಣರ ಹೃದಯ ಕರುಣೆಯಿಂದ ಕರಗಿತು. ಅವರು ಮೆಲ್ಲನೆ ಭಾವಸಮಾಧಿಗೇರಿದರು. ಬಳಿಕ ಮಥುರನ ತಲೆಯನ್ನು ನೇವರಿಸುತ್ತ ನುಡಿದರು:

"ಏನೂ ಭಯವಿಲ್ಲ. ನಿನ್ನ ಹೆಂಡತಿ ಗುಣಮುಖವಾಗುತ್ತಾಳೆ, ಹೋಗು."

ಮಥುರನಿಗೆ ಇದಕ್ಕಿಂತ ಮತ್ತಿನ್ನೇನು ಬೇಕು? ವೈದ್ಯರಾಡಿದ ನಿರಾಶೆಯ ಮಾತೆಲ್ಲ ಮರೆತುಹೋಯಿತು. 'ಠಾಕೂರರ ಮಾತು ಸುಳ್ಳಾಗಲು ಸಾಧ್ಯವೇ ಇಲ್ಲ' ಎಂಬ ದೃಢ ವಿಶ್ವಾಸ ಅವನಿಗೆ. ಅಷ್ಟೇ ಅಲ್ಲ, ಅವರೇ ಅವನ ಪಾಲಿನ ಪ್ರತ್ಯಕ್ಷ ದೇವರು. ಅಭಯದಾನವನ್ನು ಪಡೆದ ಮಥುರ ಸಂತಸದಿಂದ ಹಿಗ್ಗಿ, ಅವರಿಗೆ ಮತ್ತೆಮತ್ತೆ ನಮಿಸಿ ಕಲ್ಕತ್ತಕ್ಕೆ ಹಿಂದಿರುಗಿದ. ಜಾನ್ ಬಜಾರಿಗೆ ಬಂದು ನೋಡುತ್ತಾನೆ—ಜಗದಂಬಾಳ ಸ್ಥಿತಿ ಆಗಲೇ ಇದ್ದಕ್ಕಿದ್ದಂತೆ ಸುಧಾರಿಸಿಬಿಟ್ಟಿದೆ!

ಅಂದಿನಿಂದಲೇ ಆಕೆ ಗುಣಮುಖವಾಗತೊಡಗಿದಳು. ಮತ್ತು ಕೆಲದಿನಗಳಲ್ಲೇ ಹಿಂದಿನಂತಾದಳು. ಆದರೆ ಈಗ ಶ್ರೀರಾಮಕೃಷ್ಣರೇ ಆ ರೋಗಕ್ಕೆ ಈಡಾದರು! ಭಯಂಕರ ಹೊಟ್ಟೆನೋವು, ಆಮಶಂಕೆ. "ಜಗದಂಬಾಳ ಕಾಯಿಲೆಯೇನೋ ವಾಸಿ

ಯಾಯಿತು. ಆದರೆ ಆ ಕಾಯಿಲೆ ಈ ಶರೀರಕ್ಕೆ ಅಂಟಿಕೊಂಡಿತು" ಎಂದು ಅವರೇ ಮುಂದೆ ಹೇಳುತ್ತಿದ್ದರು.

ನಿರಂತರ ಆಧ್ಯಾತ್ಮಿಕ ಸಾಧನೆಗಳಿಂದಾಗಿ, ಅದರಲ್ಲೂ ಆರು ಮಾಸಗಳ ನಿರ್ವಿಕಲ್ಪ ಸಮಾಧಿಯ ಪರಿಣಾಮವಾಗಿ, ಶ್ರೀರಾಮಕೃಷ್ಣರ ಶರೀರ ತುಂಬ ಸೂಕ್ಷ್ಮವಾಗಿಬಿಟ್ಟಿತ್ತು. ಇದೇ ಸಮಯಕ್ಕೆ ಅಂಟಿಕೊಂಡ ರಕ್ತಾತಿಸಾರದಿಂದಾಗಿ ಅದು ಮತ್ತಷ್ಟು ಹದಗೆಟ್ಟಿತು. ಹೊಟ್ಟೆಯಲ್ಲಿ ಹಿಂಡುವಂತಹ ಯಾತನೆ. 'ಭಾವಮುಖದಲ್ಲಿರು' ಎಂಬ ಜಗನ್ಮಾತೆಯ ಆದೇಶದಂತೆ ಶ್ರೀರಾಮಕೃಷ್ಣರು ತಮ್ಮ ಮನಸ್ಸನ್ನು ನಿರ್ವಿಕಲ್ಪಸಮಾಧಿಯಿಂದ ಕೆಳಕ್ಕೆಳೆದು ತರುವಲ್ಲಿ ಈ ಯಾತನೆ ನೆರವಾಯಿತೆನ್ನಬೇಕು. ಇಹಲೋಕದ ಬಂಧನಗಳಿಂದ ಬಿಡಿಸಿಕೊಂಡು ಆ ಮನಸ್ಸು ಗಾಳೀಪಟದಂತೆ ಮೇಲುಮೇಲಕ್ಕೆ ಹಾರಿಹೋಗಲೆಳಸುತ್ತಿದ್ದರೆ, ಈ ಕಾಯಿಲೆಯ ಶೂಲೆ ಅದಕ್ಕೆ ಕಟ್ಟಿದ ಕಲ್ಲಿನಂತೆ ಕೆಳಕ್ಕೆ ಜಗ್ಗಿತು!

ಶ್ರೀರಾಮಕೃಷ್ಣರ ತೀವ್ರ ಅನಾರೋಗ್ಯವನ್ನು ಕಂಡು ಎಲ್ಲರೂ ಅತ್ಯಂತ ವ್ಯಾಕುಲಿತರಾದರು. ನೆಚ್ಚಿನ ಬಂಟ ಹೃದಯರಾಮ ತನ್ನ ಶಕ್ತಿಮೀರಿ ಅವರ ಸೇವೆ ಮಾಡಿದ. ಪ್ರಸಿದ್ಧ ವೈದ್ಯ ಗಂಗಾಪ್ರಸಾದ ಸೇನನಿಂದ ಚಿಕಿತ್ಸೆ, ಪಥ್ಯಾದಿಗಳನ್ನು ಮಾಡಿಸಲು ಮಥುರ ವ್ಯವಸ್ಥೆ ಮಾಡಿದ. ಆದರೆ ಶರೀರವು ಹೀಗೆ ವ್ಯಾಧಿಪೀಡಿತವಾದರೂ ಶರೀರಪ್ರಜ್ಞೆಯನ್ನು ನೀಗಿಕೊಂಡ ಶ್ರೀರಾಮಕೃಷ್ಣರ ಮನಸ್ಸು ಅಪೂರ್ವ ಶಾಂತಿಯಿಂದಲೂ ಅನವರತ ಆನಂದದಿಂದಲೂ ಕೂಡಿತ್ತು. ಅತಿ ಸ್ವಲ್ಪ ಪ್ರಚೋದನೆ ಸಿಕ್ಕಿದರೂ ಸಾಕು, ಅದು ಸಕಲ ವಿಷಯಗಳಿಂದಲೂ ಬಿಡಿಸಿಕೊಂಡು ಸುಂಯ್ಯನೆ ನಿರ್ವಿಕಲ್ಪ ಭೂಮಿಕೆಗೆ ಹಾರಿಹೋಗುತ್ತಿತ್ತು. ಅವರ ಮನಸ್ಸನ್ನು ಆ ಸ್ಥಿತಿಗೇರಿಸಲು ಬ್ರಹ್ಮ, ಆತ್ಮ ಆನಂದ—ಎಂಬ ಈ ಶಬ್ದಗಳೇ ಸಾಕಾಗಿದ್ದುವು.

ವೇದಾಂತಸಾಧಕರಾದ ಪರಮಹಂಸಸಂನ್ಯಾಸಿಗಳು ದಕ್ಷಿಣೇಶ್ವರಕ್ಕೆ ಬರತೊಡಗಿದುದು ಈ ಸಂದರ್ಭದಲ್ಲೇ. ಶ್ರೀರಾಮಕೃಷ್ಣರ ಕೋಣೆಯು ಯಾವಾಗಲೂ 'ನೇತಿ-ನೇತಿ', 'ಅಯಮಾತ್ಮಾ ಬ್ರಹ್ಮ', 'ಅಸ್ತಿ-ಭಾತಿ-ಪ್ರಿಯ' ಇತ್ಯಾದಿ ವೇದಾಂತಪ್ರಸಿದ್ಧ ವಿಚಾರಗಳ ಚರ್ಚೆಯಿಂದ ಕೂಡಿರುತ್ತಿತ್ತು. ಆ ಪರಮಹಂಸಸಂನ್ಯಾಸಿಗಳು ನಡೆಸುತ್ತಿದ್ದ ಸಂವಾದವನ್ನು ಶ್ರೀರಾಮಕೃಷ್ಣರು ಮೌನವಾಗಿ ಆಲಿಸುತ್ತಿದ್ದರು. ಯಾವುದಾದರೊಂದು ವಿಷಯದಲ್ಲಿ ಅವರಿಗೆ ನಿಷ್ಕರ್ಷೆಗೆ ಬರಲು ಸಾಧ್ಯವಾಗದಿದ್ದರೆ ಆಗ ತಾವು ಮಧ್ಯೆ ಪ್ರವೇಶ ಮಾಡಿ ಅದನ್ನು ಇತ್ಯರ್ಥಪಡಿಸುತ್ತಿದ್ದರು. ಇತರ ಸಾಮಾನ್ಯರಾಗಿದ್ದರೆ, ಆ ಅಸಹನೀಯ ಯಾತನೆಯ ನಡುವೆ ಅಂತಹ ಜಟಿಲ ವಿಚಾರಗಳ ಬಗ್ಗೆ ಆಲೋಚಿಸಲೂ ಮಾತನಾಡಲೂ ಸಾಧ್ಯವಿರುತ್ತಿತ್ತೆ?

ಶ್ರೀರಾಮಕೃಷ್ಣರು ಭಾವಮುಖದಲ್ಲಿ ನೆಲಸತೊಡಗಿದಂತೆ ಅವರಿಗೆ ತಮ್ಮ ಜೀವನೋದ್ದೇಶವು ಸ್ಪಷ್ಟವಾಗತೊಡಗಿತು. ದೇಹಬುದ್ಧಿಯನ್ನು ಮೀರಿ ಬಹುದೂರ ಸಾಗಿದ್ದ ಅವರಿಗೀಗ ತಮ್ಮ ಶರೀರದಿಂದ ಆಗಬೇಕಾದುದೇನೂ ಇರಲಿಲ್ಲ. ಇನ್ನೂ ಕೆಲ ಕಾಲ ಬದುಕಿರಬೇಕೆಂಬ ಇಚ್ಛೆಯೂ ಅವರಿಗಿರಲಿಲ್ಲ. ಹೀಗಿರುವಾಗ, "ನೀನು ಭಾವ ಮುಖದಲ್ಲಿದ್ದು ಜೀವಿಸಬೇಕು" ಎಂದು ಜಗನ್ಮಾತೆಯ ಆದೇಶ ದೊರಕಿದೆ! 'ನನ ಗೇನೂ ಪ್ರಯೋಜನವಿಲ್ಲವಾದರೂ ಭಗವಂತನ ಲೀಲೆ ನಡೆಯುವುದಕ್ಕಾಗಿ ನನ್ನೀ ಶರೀರ ಉಳಿಯಬೇಕಾಗಿದೆ. ಆದರೆ ನಿರಂತರವೂ ನಾನು ಬ್ರಹ್ಮದಲ್ಲಿ ತಲ್ಲೀನರಾಗಿದ್ದರೆ ಶರೀರ ಉಳಿಯುವುದು ಸಾಧ್ಯವಿಲ್ಲ; ಆದ್ದರಿಂದಲೇ ನನಗೆ ಈ ಆದೇಶ' ಎಂದು ಶ್ರೀರಾಮಕೃಷ್ಣರು ಅರಿತುಕೊಂಡರು. ಅಲ್ಲದೆ, ಪೂರ್ವಜನ್ಮಗಳನ್ನೆಲ್ಲ ನೆನಪು ಮಾಡಿ ಕೊಳ್ಳುವ ಶಕ್ತಿಯನ್ನು ಪಡೆದರು. ಅದರ ಮೂಲಕ, ತಾವು ನಿತ್ಯ-ಶುದ್ಧ-ಬುದ್ಧ-ಮುಕ್ತಸ್ವರೂಪರಾದ ಆಧಿಕಾರಿಕ ಪುರುಷರು, ಎಂದರೆ, ಲೋಕಕಲ್ಯಾಣಕ್ಕಾಗಿ ವಿಶೇಷ ಅಧಿಕಾರವನ್ನು ಅಥವಾ ಶಕ್ತಿಯನ್ನು ಹೊಂದಿ ಜನ್ಮವೆತ್ತಿದವರು ಎಂದರಿತರು; ಆಧುನಿಕ ಯುಗದ ಧರ್ಮಗ್ಲಾನಿಯನ್ನು ದೂರಗೈಯಲೆಂದೇ ತಾವು ದೇಹಧಾರಣೆ ಮಾಡಿ ಬಂದುದು ಮತ್ತು ನಾನಾ ಬಗೆಯ ಸಾಧನೆಗಳನ್ನು ಮಾಡಿದುದು ಎಂಬುದನ್ನು ಅವರು ಕಂಡುಕೊಂಡರು. ಜಗನ್ಮಾತೆಯು ತನ್ನ ಒಂದು ವಿಶೇಷ ಉದ್ದೇಶಕ್ಕಾಗಿಯೇ ಈ ಬಾರಿ (ಈ ಅವತಾರದಲ್ಲಿ) ತಾವು ಯಾವುದೇ ಬಾಹ್ಯ ವೈಭವ-ಆಡಂಬರ-ವಿಭೂತಿಗಳಿಲ್ಲದೆ, ವಿದ್ಯಾಭ್ಯಾಸವಿಲ್ಲದೆ ಬಡ ಬ್ರಾಹ್ಮಣ ಕುಟುಂಬದಲ್ಲಿ ಜನ್ಮ ತಳೆಯುವಂತೆ ಮಾಡಿದ್ದಾಳೆ; ಈ ಲೀಲಾರಹಸ್ಯವನ್ನು ತಮ್ಮ ಜೀವಮಾನದಲ್ಲಿ ಕೆಲವರು ಮಾತ್ರ ತಿಳಿಯಲು ಸಮರ್ಥರಾಗುತ್ತಾರೆ; ಈ ಅಂಶವನ್ನು ಜನಸಾಮಾನ್ಯರೂ ಅರಿಯತೊಡಗಿದಾಗ ಜಗನ್ಮಾತೆ ತಮ್ಮನ್ನು ತನ್ನೊಳಗೆ ಕರೆದುಕೊಂಡುಬಿಡುತ್ತಾಳೆ; ಹಾಗೂ, ತಮ್ಮ ಜೀವಿತಾ ವಧಿಯಲ್ಲೇ ತಮ್ಮಿಂದ ಉದ್ಭವಿಸುವ ಪ್ರಬಲ ಆಧ್ಯಾತ್ಮಿಕ ತರಂಗಗಳು ತಮ್ಮ ಅವಸಾನಾನಂತರ ಇನ್ನೂ ಹೆಚ್ಚಿನ ಶಕ್ತಿಯಿಂದೊಡಗೂಡಿ, ಲೋಕದಲ್ಲೆಲ್ಲ ವ್ಯಾಪಿಸಿ ಅನವರತವೂ ಜಗತ್ಕಲ್ಯಾಣಕ್ಕೆ ಕಾರಣವಾಗಲಿವೆ ಎಂಬ ಈ ಎಲ್ಲ ವಿಷಯಗಳೂ ಅವರಿಗೆ ಗೋಚರವಾದುವು.

ಯಾರು ತ್ರೇತಾಯುಗದಲ್ಲಿ ಶ್ರೀರಾಮನಾಗಿ, ದ್ವಾಪರಯುಗದಲ್ಲಿ ಶ್ರೀಕೃಷ್ಣನಾಗಿ ಅವತರಿಸಿ ಲೋಕಕಲ್ಯಾಣವನ್ನುಂಟುಮಾಡಿದನೋ ಅವನೇ ಈ ಯುಗದಲ್ಲಿ ಪುನಃ ಶರೀರಧಾರಣೆ ಮಾಡಿ ಶ್ರೀರಾಮಕೃಷ್ಣರೂಪದಲ್ಲಿ ಆವಿರ್ಭವಿಸಿದ್ದಾನೆ ಎಂಬ ಸತ್ಯವನ್ನು ಅವರು ತಮಗೆ ಜನ್ಮಾಂತರಸ್ಮರಣೆಯುಂಟಾದ ಈ ಕಾಲದಲ್ಲಿ ತಿಳಿದುಕೊಂಡರು.

ಅದ್ವೈತದ ತುರೀಯ ಸ್ಥಿತಿಯಿಂದ ಭಾವರಾಜ್ಯಕ್ಕೆ ಇಳಿದಾಗ ಶ್ರೀರಾಮಕೃಷ್ಣರು ಈ ರೀತಿಯಾಗಿ ತಮ್ಮ ಜೀವನದ ಭೂತ-ಭವಿಷ್ಯಗಳೆಲ್ಲವನ್ನೂ ಆಮೂಲಾಗ್ರವಾಗಿ ಅರಿತುಕೊಂಡರು. ಆದರೆ ಈ ಅನುಭವಗಳೆಲ್ಲ ಅವರಿಗೆ ಏಕಕಾಲದಲ್ಲಿ, ಒಂದೇ ದಿನದಲ್ಲಿ, ಇದ್ದಕ್ಕಿದ್ದಂತೆ ಆದದ್ದಲ್ಲ. ಭಾವಭೂಮಿಕೆಗೆ ಇಳಿದ ಸುಮಾರು ಒಂದು

ವರ್ಷದಲ್ಲಿ ಕ್ರಮೇಣ ಇವೆಲ್ಲ ಅವರ ಅರಿವಿಗೆ ಬಂದುವೆಂದು ಹೇಳಬಹುದು. ಜಗನ್ಮಾತೆಯು ಅವರ ಕಣ್ಣ ಮುಂದಿನ ಪರದೆಗಳನ್ನೆಲ್ಲ ಒಂದೊಂದಾಗಿ ಸರಿಸಿ ದಿನೇ ದಿನೇ ಈ ವಿಷಯಗಳನ್ನೆಲ್ಲ ಸ್ಪಷ್ಟವಾಗಿ ತಿಳಿಯಗೊಟ್ಟಳು.

ಆದರೆ, ಈ ಅನುಭವಗಳೆಲ್ಲ ಅವರಿಗೆ ಏಕಕಾಲದಲ್ಲಿ ಆಗಬಹುದಿತ್ತಲ್ಲ? ಅಷ್ಟೊಂದು ದಿನ ಏಕೆ ಹಿಡಿಯಿತು? ಎಂದು ಕೇಳಿದರೆ ಅದಕ್ಕೆ ಉತ್ತರವಿಷ್ಟೆ: ಅದ್ವೈತ ಭಾವದಲ್ಲಿ ನೆಲಸಿ ಅಮಿತವಾದ ಬ್ರಹ್ಮಾನಂದದಲ್ಲಿ ಮುಳುಗಿದ್ದ ಅವರ ಮನಸ್ಸು ಅಷ್ಟು ಬೇಗನೆ ಆ ಸ್ಥಿತಿಯಿಂದ ಕೆಳಗಿಳಿಯಲು ಸಾಧ್ಯವಿರಲಿಲ್ಲ. ಮತ್ತು ಹೀಗೆ ಅವರು ಬಹಿರ್ಮುಖರಾಗುವವರೆಗೂ ಈ ವಿಷಯಗಳೆಲ್ಲ ಅವರ ಅರಿವಿಗೆ ಬರುವ ಸಂಭವವೂ ಇರಲಿಲ್ಲ. ತಮ್ಮ ಸಾಧನಾಕಾಲದ ಪ್ರಾರಂಭದಲ್ಲಿ ಅವರು ಜಗನ್ಮಾತೆಯನ್ನು ಮತ್ತೆಮತ್ತೆ ಬೇಡಿಕೊಂಡಿದ್ದರು:

"ಅಮ್ಮ, ನಾನು ಏನು ಮಾಡಬೇಕೋ, ಏನು ಮಾಡಬಾರದೋ, ಒಂದೂ ಗೊತ್ತಿಲ್ಲ. ನೀನು ನನಗೆ ಏನು ಹೇಳಿಕೊಡುತ್ತೀಯೋ ಅದನ್ನು ಕಲಿಯುತ್ತೇನೆ. ಏನು ಮಾಡಿಸುತ್ತೀಯೋ ಅದನ್ನು ಮಾಡುತ್ತೇನೆ."

ಜಗನ್ಮಾತೆಯೂ ಅವರ ಆ ಪ್ರಾರ್ಥನೆಯನ್ನು ಈಡೇರಿಸಿಕೊಟ್ಟುದನ್ನು ನಾವಿಲ್ಲಿ ಕಾಣಬಹುದು.

ಅದ್ವೈತಸಾಮ್ರಾಜ್ಯವನ್ನು ಸಿದ್ಧಿಸಿಕೊಂಡ ಶ್ರೀರಾಮಕೃಷ್ಣರಿಗೆ ಇದೇ ಸಮಯದಲ್ಲಿ ಮತ್ತೊಂದು ವಿಷಯ ಗೋಚರವಾಯಿತು—ಸಕಲ ವಿಧದ ಸಾಧನೆ ಭಜನೆ ಜಪ ತಪಗಳೆಲ್ಲದರ ಅಂತಿಮೋದ್ದೇಶವು ಅದ್ವೈತಭಾವವನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಆಗಿದೆ ಎಂದು. ಅವರು ಭಾರತದಲ್ಲಿ ಅನುಸರಿಸಲ್ಪಡುತ್ತಿರುವ ಎಲ್ಲ ಪ್ರಧಾನ ಮತ-ಪಂಥಗಳ ಪ್ರಕಾರವೂ ಸಾಧನೆ ಮಾಡಿ, ಅವುಗಳಲ್ಲಿ ಪ್ರತಿಯೊಂದೂ ಸಾಧಕನನ್ನು ಅಂತಿಮವಾಗಿ ಅದ್ವೈತಸ್ಥಿತಿಯೆಡೆಗೇ ಒಯ್ಯುತ್ತದೆ ಎಂಬ ಸತ್ಯವನ್ನು ಹಿಂದೆಯೇ ಕಂಡುಕೊಂಡಿದ್ದರು; ಈಗ ಅದು ದೃಢವಾಯಿತು. ಆದ್ದರಿಂದ ಯಾರಾದರೂ ಅವರನ್ನು ಅದ್ವೈತಮಾರ್ಗದ ಬಗ್ಗೆ ಪ್ರಶ್ನಿಸಿದರೆ ಅವರೆನ್ನುತ್ತಿದ್ದರು:

"ಅದು ಕೊನೆಯ ಮಾತಪ್ಪಾ, ಕೊನೆಯ ಮಾತು! ಭಗವದ್ಭಕ್ತಿಯು ಪರಿಪಕ್ವವಾಗಿ, ಸಾಧಕಜೀವನದ ಅಂತಿಮ ಸ್ಥಿತಿಯಲ್ಲಿ ತಾನಾಗಿಯೇ ಬಂದೊದಗುವಂಥದು ಆ ಸ್ಥಿತಿ. ಅದು ಎಲ್ಲ ಮತಗಳಲ್ಲಿಯೂ ಕಟ್ಟಕಡೆಯ ಮಾತೆಂದು ತಿಳಿ. ಅಲ್ಲದೆ, ಎಷ್ಟು ಮತಗಳೋ ಅಷ್ಟು ಪಥಗಳು!"

'ಅದ್ವೈತವು ಕೊನೆಯ ಮಾತು' ಎಂಬುದನ್ನು ವಿವರಿಸಲು ಶ್ರೀರಾಮಕೃಷ್ಣರು ಒಂದು ದೃಷ್ಟಾಂತವನ್ನು ಕೊಡುತ್ತಿದ್ದರು:

"ಇದು ಹೇಗೆ ಗೊತ್ತೆ? ಒಬ್ಬ ಯಜಮಾನನಿಗೆ ಬಹು ವರ್ಷಗಳಿಂದ ನಂಬಿಕಸ್ಥನಾದ ಸೇವಕನೊಬ್ಬನಿದ್ದಾನೆ ಎನ್ನಿ. ಯಜಮಾನ ಆತನ ಗುಣಗಳಿಗೆ ಮೆಚ್ಚಿ ಆತನ ಮಾತಿನಲ್ಲೆಲ್ಲ ವಿಶ್ವಾಸವಿಡುತ್ತಾನೆ. ಎಲ್ಲ ವಿಷಯಗಳಲ್ಲೂ ಆತನ ಸಲಹೆ ತೆಗೆದುಕೊಳ್ಳುತ್ತಾನೆ. ಕಡೆಗೊಂದು ದಿನ ಅವನ ಬಗ್ಗೆ ಬಹಳ ಸಂತೋಷಪಟ್ಟು ಅವನ ಕೈಹಿಡಿದು ತನ್ನ ಗದ್ದುಗೆಯ ಮೇಲೆಯೇ ಕುಳ್ಳಿರಿಸುತ್ತಾನೆ! ಆಗ ಆ ಸೇವಕ ಸಂಕೋಚಪಟ್ಟುಕೊಂಡು, 'ಬುದ್ಧಿ! ಬುದ್ಧಿ! ಇದೇನು ಮಾಡುತ್ತಿದ್ದೀರಿ ನೀವು! ನಾನು ನಿಮ್ಮ ಸೇವಕ!' ಎಂದರೂ ಕೇಳದೆ ಯಜಮಾನ ಬಲವಂತದಿಂದ ತನ್ನ ಪಕ್ಕದಲ್ಲಿಯೇ

ಆತನನ್ನು ಕುಳ್ಳಿರಿಸಿಕೊಳ್ಳುತ್ತ ಹೇಳುತ್ತಾನೆ, 'ಇರಲಿ, ಬಾ ಕುಳಿತುಕೊ! ನಾನೂ ನೀನೂ ಒಂದೇ ಅಲ್ಲವೆ?' ಎಂದು. ಹಾಗೆಯೇ ಈ ವಿಷಯವೂ ಕೂಡ."

ಹಾಗಾದರೆ ಶ್ರೀರಾಮಕೃಷ್ಣರು ದ್ವೈತ-ವಿಶಿಷ್ಟಾದ್ವೈತ ಸಿದ್ಧಾಂತಗಳ ಬಗ್ಗೆ ಏನು ಹೇಳುತ್ತಾರೆ? ಅವರು ತಮ್ಮ ಸಾಧನೆಯನ್ನು ಪ್ರಾರಂಭಿಸಿದ್ದೇ ದ್ವೈತಭಾವದ ಮೂಲಕ. ಅದು ವಿಶಿಷ್ಟಾದ್ವೈತದ ಹಾದಿಯಲ್ಲಿ ಮುಂದುವರಿಯಿತು. ಬಳಿಕ ಅದ್ವೈತಭಾವದಲ್ಲಿ ಪರಿಸಮಾಪ್ತಿಹೊಂದಿತು. ಆದ್ದರಿಂದ ಅವರು ದ್ವೈತ, ವಿಶಿಷ್ಟಾದ್ವೈತ ಹಾಗೂ ಅದ್ವೈತ—ಈ ಮೂರೂ ಭಾವಗಳನ್ನು ಸಮಾನವಾಗಿ ಗೌರವಿಸುತ್ತಿದ್ದರು. ಆದರೆ ಈ ಮೂರು ಪ್ರಕಾರದ ಭಾವಗಳು, ಸಾಧಕನ ಮನಸ್ಸು ಮೆಲ್ಲನೆ ಮೇಲೇರಿದಂತೆ, ಒಂದಾದ ಮೇಲೊಂದರಂತೆ ಬಂದೊದಗುತ್ತವೆ ಎನ್ನುತ್ತಾರೆ ಅವರು.

ಮನಸ್ಸು ಒಂದು ಹಂತದಲ್ಲಿರುವಾಗ ದ್ವೈತಭಾವ ಇಷ್ಟವಾಗುತ್ತದೆ. ಆಗ ಉಳಿದೆರಡು ಭಾವಗಳೂ ಮಿಥ್ಯವೆಂದು ತೋರುತ್ತವೆ. ಸಾಧಕನ ಆಧ್ಯಾತ್ಮಿಕ ಮಟ್ಟ ಮತ್ತೂ ಮೇಲೇರಿದಾಗ ಅವನಿಗೆ ವಿಶಿಷ್ಟಾದ್ವೈತ ರುಚಿಸುತ್ತದೆ. ಆಗ ದ್ವೈತವಾದವೂ ಹಿಡಿಸುವುದಿಲ್ಲ, ಅದ್ವೈತವಾದವೂ ಸರಿಯೆನಿಸುವುದಿಲ್ಲ. ಬಳಿಕ ಅವನು ಆಧ್ಯಾತ್ಮಿಕ ಪ್ರಗತಿಯ ಕೊನೆಯ ಹಂತಕ್ಕೆ ಬಂದಾಗ ಭಗವಂತನ ನಿರ್ಗುಣ-ನಿರಾಕಾರ ತತ್ತ್ವವನ್ನು ಮಾತ್ರವೇ ಅಂಗೀಕರಿಸಿ ಅದ್ವೈತಭಾವದಲ್ಲಿ ನೆಲಸುತ್ತಾನೆ. ಆಗ 'ನಾನು-ನೀನು', 'ಜೀವ-ಜಗತ್ತು', 'ಭಕ್ತಿ-ಮುಕ್ತಿ', 'ಪಾಪ-ಪುಣ್ಯ', 'ಧರ್ಮ-ಅಧರ್ಮ', ಎಂಬುದೆಲ್ಲವೂ ಆ ಅನಂತತೆಯಲ್ಲಿ ಕರಗಿಹೋಗುತ್ತವೆ.

ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಈ ಮೂರೂ ತತ್ತ್ವಗಳು ಒಬ್ಬನೇ ವ್ಯಕ್ತಿಯಲ್ಲಿ ಹೇಗೆ ಮೈದಳೆಯಬಲ್ಲವು ಎಂಬುದಕ್ಕೆ ಶ್ರೀರಾಮಕೃಷ್ಣರು, ದಾಸ್ಯಭಾವದ ಆದರ್ಶ ಸ್ವರೂಪನೂ ಮಹಾಜ್ಞಾನಿಯೂ ಆದ ಹನುಮಂತನ ಉದಾಹರಣೆ ಕೊಡುತ್ತಾರೆ:

"ಶ್ರೀರಾಮಚಂದ್ರ ಒಂದು ದಿನ ತನ್ನ ಭಕ್ತನಾದ ಹನುಮಂತನನ್ನು ಕೇಳಿದ, 'ಆಂಜನೇಯ, ನೀನು ನನ್ನನ್ನು ಯಾವ ಭಾವದಿಂದ ಕಾಣುತ್ತೀಯೆ? ಯಾವ ಭಾವದಿಂದ ನನ್ನ ಪೂಜೆ-ಧ್ಯಾನಗಳನ್ನು ಮಾಡುತ್ತೀಯೆ?' ಎಂದು. ಅದಕ್ಕೆ ಹನುಮಂತ,' ಹೇ ರಾಮ, "ನಾನು ಈ ದೇಹ" ಎಂಬ ಭಾವದಲ್ಲಿರುವಾಗ "ನೀನು ಪ್ರಭು–ನಾನು ದಾಸ, ನೀನು ಪೂಜ್ಯ–ನಾನು ಪೂಜಕ" ಎಂದು ತಿಳಿದು, ಅದರಂತೆ ನಿನ್ನನ್ನು ಪೂಜಿಸುತ್ತೇನೆ. ಮನಸ್ಸು ಬುದ್ಧಿ ಆತ್ಮ—ಇವುಗಳಿಂದ ಕೂಡಿ, "ನಾನು ಜೀವಾತ್ಮ" ಎಂಬ ಈ ಬಗೆಯ ಅರಿವಿನಲ್ಲಿರುವಾಗ, "ನೀನು ಪೂರ್ಣ, ನಾನು ನಿನ್ನ ಅಂಶ" ಎಂಬ ಭಾವದಿಂದ ನಿನ್ನನ್ನು ಆರಾಧಿಸುತ್ತೇನೆ. ನಾನು ಸಮಾಧಿಮಗ್ನನಾಗಿ, "ಉಪಾಧಿರಹಿತನಾದ ಶುದ್ಧ ಆತ್ಮನೇ ನಾನು" ಎಂಬ ಬೋಧೆಯಲ್ಲಿರುವಾಗ, "ನೀನು ಏನಾಗಿರುವೆಯೋ ನಾನೂ ಅದೇ ಆಗಿದ್ದೇನೆ; ಆದ್ದರಿಂದ ನಾನೂ ನೀನೂ ಒಂದೇ, ಭೇದವೇನೂ ಇಲ್ಲ" ಎಂದರಿತು ಆತ್ಮರತನಾಗಿರುತ್ತೇನೆ' ಎಂದುತ್ತರಿಸಿದ."

ಅದ್ವೈತಜ್ಞಾನದ ಬಗ್ಗೆ, ಆ ಜ್ಞಾನವನ್ನು ಗಳಿಸಿಕೊಂಡವನ ಬಗ್ಗೆ ಶ್ರೀರಾಮಕೃಷ್ಣರು ಹೀಗೆ ಹೇಳುತ್ತಾರೆ:

"ಯಾವನು ನಿಜವಾಗಿಯೂ ಅದ್ವೈತಾನುಭವಿಯೋ ಅವನು ಮೌನವನ್ನು ಅವಲಂಬಿಸುತ್ತಾನೆ. ಏಕೆಂದರೆ ಅದ್ವೈತವೆಂಬುದು ಬಾಯಿಮಾತಿನ ವಿಷಯವಲ್ಲ. ಮಾತನಾಡಲು ಹೊರಟೊಡನೆಯೇ ಅದು ದ್ವೈತವಾಗಿಬಿಡುತ್ತದೆ. ಭಾವನೆ, ಕಲ್ಪನೆ—

ಇವೆಲ್ಲ ಇರುವವರೆಗೆ ಅಲ್ಲಿ ದ್ವೈತವಿರುತ್ತದೆ. ಆಗಿನ್ನೂ ಸರಿಯಾಗಿ ಅದ್ವೈತಜ್ಞಾನ ಉಂಟಾಗಿಲ್ಲ ಎಂದರ್ಥ. ಈ ಜಗತ್ತಿನಲ್ಲಿ ಎಲ್ಲ ವಸ್ತುಗಳೂ ಎಂಜಲಾಗಿವೆ; ವೇದ ಶಾಸ್ತ್ರ ಪುರಾಣಗಳೂ ಕೂಡ. ಆದರೆ ಬ್ರಹ್ಮವಸ್ತುವು ಮಾತ್ರ, ಅಥವಾ ಭಗವಂತನ ನಿರ್ಗುಣಭಾವವು ಮಾತ್ರ ಎಂದಿಗೂ ಎಂಜಲಾಗದು.''

ಇಲ್ಲಿ, 'ಎಂಜಲಾಗುವುದು' ಎಂದರೆ ಕೇವಲ ನಾಲಿಗೆಗೆ ಸ್ಪರ್ಶವಾಗುವುದು ಎಂದರ್ಥವಲ್ಲ. ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ಮತ್ತು ಮನಸ್ಸು—ಈ ಆರು ಇಂದ್ರಿಯಗಳು ಅನುಭವಿಸಲು ಸಾಧ್ಯವಾಗುವಂತಹ ವಸ್ತುಗಳೆಲ್ಲವೂ ಎಂಜಲಾಗಿವೆ ಯೆಂದೇ ಅರ್ಥ. ಆದರೆ ಉಪನಿಷತ್ತು 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದು ಘೋಷಿಸುವಂತೆ, ಪರಬ್ರಹ್ಮವಸ್ತುವು ಈ ಆರು ಇಂದ್ರಿಯು ಗಳಿಂದಲೂ ಅನುಭವಿಸಲ್ಪಡುವಂಥದಲ್ಲ. ಆದ್ದರಿಂದ ಅದು ಮಾತ್ರ ಎಂಜಲಾಗುವ ಸಂಭವವಿಲ್ಲ. ಪರಬ್ರಹ್ಮವಸ್ತುವನ್ನು ಮಾತಿನಿಂದ ಕೂಡ ವರ್ಣಿಸಲು ಸಾಧ್ಯವಿಲ್ಲ ಎಂಬ ಸತ್ಯವನ್ನು, ನಾವು ಹಿಂದೆ ನೋಡಿದಂತೆ, ಶ್ರೀರಾಮಕೃಷ್ಣರು ತಮ್ಮ ಅತ್ಯುನ್ನತ ಅನುಭವಗಳನ್ನು ಶಿಷ್ಯರ ಮುಂದೆ ಬಣ್ಣಿಸಲು ಹೋಗಿ ವಿಫಲರಾದುದರ ಮೂಲಕ ತಿಳಿಯಬಹುದಾಗಿದೆ.

ಶ್ರೀರಾಮಕೃಷ್ಣರು ಮತ್ತೂ ಹೇಳುತ್ತಾರೆ: ''ಎಲ್ಲಿಯವರೆಗೆ 'ನಾನು-ನೀನು', 'ಹೇಳುವುದು-ಕೇಳುವುದು' ಎಂಬುವೆಲ್ಲ ಇರುತ್ತವೆಯೋ ಅಲ್ಲಿಯವರೆಗೆ 'ನಿರ್ಗುಣ-ಸಗುಣ', 'ನಿತ್ಯ-ಲೀಲೆ' ಎಂಬ ಈ ಎರಡನ್ನೂ ಒಪ್ಪಿಕೊಳ್ಳಲೇಬೇಕು. ಅಲ್ಲಿಯು ವರೆಗೂ, ಅದ್ವೈತಭಾವದ ಬಗ್ಗೆ ನೀನು ಮಾತನ್ನೇನೋ ಎಷ್ಟು ಬೇಕಾದರೂ ಆಡ ಬಹುದು; ಆದರೆ ಕಾರ್ಯದಲ್ಲಿಯೂ ವ್ಯವಹಾರದಲ್ಲಿಯೂ ನೀನು ವಿಶಿಷ್ಟಾದ್ವೈತಿಯೇ ಆಗಿರಬೇಕಾಗುತ್ತದೆ.''

ಆ ಬಗ್ಗೆ ಅವರು ಇನ್ನೂ ಹಲವಾರು ದೃಷ್ಟಾಂತಗಳನ್ನು ಕೊಡುತ್ತಾರೆ:

''ಸಂಗೀತದ ಉದಾಹರಣೆ ತೆಗೆದುಕೊಂಡರೆ, ಅದರಲ್ಲಿ ಸ-ರಿ-ಗ-ಮ-ಪ-ದ -ನಿ-ಸ ಎಂದು ಏರಿಸುವುದು, ಸ-ನಿ-ದ-ಪ-ಮ-ಗ-ರಿ-ಸ ಎಂದು ಇಳಿಸುವುದು ಕ್ರಮ. ಹಾಗೆಯೇ ಅಧ್ಯಾತ್ಮದಲ್ಲಿ 'ನಾನು' ಎಂಬ ವ್ಯಾವಹಾರಿಕತೆಯಿಂದ ಪ್ರಾರಂಭಿಸಿ, ಮುಂದುವರಿಯುತ್ತ, ಅಂತಿಮವಾಗಿ ಸಮಾಧಿಯಲ್ಲಿ ಅದ್ವೈತಜ್ಞಾನಕ್ಕೆ ಏರುವುದು; ಬಳಿಕ, ಅಲ್ಲಿಂದ ಕೆಳಗಿಳಿಯುತ್ತ ಮತ್ತೆ 'ನಾನು' ಎಂಬ ವ್ಯಾವಹಾರಿಕ ಪ್ರಜ್ಞೆಯಲ್ಲಿ ನಿಲ್ಲುವುದು—ಇದು ಕ್ರಮ.

''ಇನ್ನೊಂದು ಉದಾಹರಣೆ: ಒಮ್ಮೆ ನಾನು ಒಂದು ಬಿಲ್ವಫಲವನ್ನು ಕೈಯಲ್ಲಿ ಹಿಡಿದು, ಅದರ ಸಿಪ್ಪೆ, ಬೀಜ, ತಿರುಳು—ಇವುಗಳಲ್ಲಿ ಬಿಲ್ವಫಲ ಎನ್ನುವುದು ಯಾವುದು ? ಎಂದು ಆಲೋಚನೆ ಮಾಡಿದೆ. ಮೊದಲು, 'ಸಿಪ್ಪೆ ಅಸಾರವಾದುದು, ಆದರಿಂದ ಪ್ರಯೋಜನವಿಲ್ಲ' ಎಂದು ಅದನ್ನು ಬಿಸಾಡಿದೆ. ತರುವಾಯ ಬೀಜಗಳನ್ನೂ ಹಾಗೆಯೇ ಭಾವಿಸಿ ಬಿಸಾಡಿದೆ. ತಿರುಳನ್ನು ಮಾತ್ರ ಕೈಯಲ್ಲಿ ಹಿಡಿದುಕೊಂಡು ಭಾವಿಸಿದೆ—'ಹೌದು, ಇದೇ ಬಿಲ್ವಫಲದ ಸಾರ, ಇದೇ ನಿಜವಾದ ಬಿಲ್ವಫಲ' ಎಂದು. ಆದರೆ ಮತ್ತೆ ವಿಚಾರ ಮಾಡಿ ನೋಡಿದಾಗ ಅನ್ನಿಸಿತು, 'ತಿರುಳು ಯಾವುದರದ್ದೋ ಸಿಪ್ಪೆ ಮತ್ತು ಬೀಜಗಳೂ ಅದರದ್ದೇ ಅಲ್ಲವೆ ? ಸಿಪ್ಪೆ, ಬೀಜ, ತಿರುಳು—ಇವೆಲ್ಲವೂ ಸೇರಿಕೊಂಡೇ ಬಿಲ್ವಫಲ ಎನ್ನಿಸಿಕೊಳ್ಳುವುದಲ್ಲವೆ ?' ಎಂದು. ಅಂತೆಯೇ, ನಿತ್ಯನಾದ

ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ನಂತರ ಆಲೋಚಿಸಿ ನೋಡಿದರೆ, 'ಯಾವುದು ನಿತ್ಯವೋ ಅದೇ ಲೀಲೆಯಲ್ಲಿ ಜಗತ್ತು ಎಂದು ಕರೆಯಲ್ಪಡುತ್ತದೆ' ಎಂದು ಗೊತ್ತಾಗುತ್ತದೆ.

"ಬಾಳೆದಿಂಡನ್ನು ಹಿಡಿದುಕೊಂಡು ಅದರ ಪದರಗಳನ್ನು ಒಂದೊಂದಾಗಿ ಬಿಡಿಸುತ್ತ ಬಂದೆ. ಒಳಗಿನ ತಿರುಳನ್ನು ಕಂಡು ಇದೇ ಅದರ ಸಾರ ಎಂದು ಭಾವಿಸಿದೆ. ತರುವಾಯ ವಿಚಾರ ಮಾಡಿ ನೋಡಿದರೆ ಸಿಪ್ಪೆಗಳದ್ದೇ ದಿಂಡು, ದಿಂಡಿನದ್ದೇ ಸಿಪ್ಪೆಗಳು; ಎಲ್ಲವೂ ಸೇರಿಯೇ ಬಾಳೆದಿಂಡು!

"ಈರುಳ್ಳಿಯ ಎಸಳುಗಳನ್ನು ಬಿಡಿಸುತ್ತ ಬಿಡಿಸುತ್ತ ಕೊನೆಗೆ ಅಲ್ಲಿ ಏನೂ ಇರುವುದಿಲ್ಲ. ಹಾಗೆಯೇ, 'ನಾನು ಯಾರು?' ಎಂದು ವಿಶ್ಲೇಷಣೆ ಮಾಡುತ್ತ ಭಾವಿಸುತ್ತೇವೆ: 'ನಾನು ಈ ಶರೀರವಲ್ಲ, ಈ ಮನಸ್ಸಲ್ಲ, ಬುದ್ಧಿಯಲ್ಲ...' ಹಾಗಾದರೆ ಮತ್ತೇನು? ಕಡೆಗೆ ಗೊತ್ತಾಗುತ್ತದೆ—'ನಾನು ಎನ್ನುವಂಥದು ಬೇರೇನೂ ಇಲ್ಲ, ಎಲ್ಲವೂ ಆತನೇ' ಎಂದು. 'ಆತ'ನೇ ಎಂದರೆ ಪರಮಾತ್ಮನೇ, ಪರಬ್ರಹ್ಮವೇ. ಇದು ಹೇಗೆಂದರೆ, ಗಂಗಾನದಿಗೆ ಒಂದು ಸಣ್ಣ ತಡೆಯನ್ನು ಕಟ್ಟಿ, 'ಇದು ನನ್ನ ಗಂಗಾನದಿ' ಎಂದಂತೆ!"

ಶ್ರೀರಾಮಕೃಷ್ಣರು ತಮ್ಮ ನಿರ್ವಿಕಲ್ಪ ಸಮಾಧಿಯ ಮೂಲಕ ಸಾಕ್ಷಾತ್ಕರಿಸಿಕೊಂಡ ಇಂತಹ ಹಲವಾರು ತತ್ತ್ವಗಳನ್ನು ನಾವು ಇನ್ನೂ ನೋಡಲಿದ್ದೇವೆ. ಆದರೆ ಆ ಆರು ತಿಂಗಳ ನಿರ್ವಿಕಲ್ಪ ಸಮಾಧಿಸ್ಥಿತಿಯಿಂದ ವ್ಯಾವಹಾರಿಕ ಸ್ತರಕ್ಕೆ ಇಳಿದು ಬರಬೇಕಾದರೆ ಶರೀರಕ್ಕೆ ಆಮಶಂಕೆಯ ಆಘಾತ ಬೇಕಾಗಿತ್ತು. ಅದನ್ನೂ ಅವರು ಅನುಭವಿಸಿದ್ದು ಆರು ತಿಂಗಳ ಕಾಲ. ಬಳಿಕ ಕ್ರಮೇಣ ಚೇತರಿಸಿಕೊಂಡರು. ಈಗ ಅವರು ವ್ಯಾವಹಾರಿಕ ಪ್ರಪಂಚದಲ್ಲೂ ಪಾರಮಾರ್ಥಿಕ ಸ್ತರದಲ್ಲೂ ಏಕಪ್ರಕಾರವಾಗಿ ಸಂಚರಿಸಬಲ್ಲವರಾದರು. ತಮ್ಮ ಜೀವನದ ಅಂತ್ಯದವರೆಗೂ ಇದೇ ಸ್ಥಿತಿಯಲ್ಲಿ ಉಳಿದುಕೊಂಡರು.

ಶ್ರೀರಾಮಕೃಷ್ಣರ ಆಗಿನ ಮನಸ್ಥಿತಿಯನ್ನು ಇಳಿಜಾರಿನಲ್ಲಿ ನಿಲ್ಲಿಸಿದ ಒಂದು ಚೆಂಡಿಗೆ ಹೋಲಿಸಬಹುದು. ಚೆಂಡು ಇಳಿಜಾರಿನ ಪ್ರದೇಶದಲ್ಲಿ ಒಂದು ಆನಿಕೆಯ ಮೇಲೆ ನಿಂತಿರಬಹುದು. ಆದರೆ ಸ್ವಲ್ಪ ಅಲುಗಿಸಿದರೂ ಸಾಕು, ಅದು ಕೆಳಕ್ಕೋಡುವುದೇ ನಿಜ! ಹಾಗೆಯೇ ಶ್ರೀರಾಮಕೃಷ್ಣರ ಮನಸ್ಸಿಗೆ ಸ್ವಲ್ಪ ಪ್ರಚೋದನೆ ಸಿಕ್ಕಿಬಿಟ್ಟಿತೆಂದರೆ ಕೂಡಲೇ ಅದು ಊರ್ಧ್ವಮುಖವಾಗಿ ಹಾರುತ್ತಿತ್ತು.

ಅವರ ಆ ಮನಸ್ಥಿತಿಯಲ್ಲಿ ಇನ್ನೂ ಒಂದು ಸ್ವಾರಸ್ಯವಿತ್ತು. ಅವರದು ಅದ್ವೈತ ಭಾವದಲ್ಲಿ ಮುಳುಗಿ ತಣಿದ ಮನಸ್ಸಾದುದರಿಂದ ದ್ವೈತಭೂಮಿಯ ಸೀಮಾಂತರಾಳದಲ್ಲಿರುವ ವಸ್ತುಗಳನ್ನೋ ವ್ಯಕ್ತಿಗಳನ್ನೋ ಕಂಡರೆ ಹಠಾತ್ತನೆ ಅದ್ವೈತಭಾವದ ಸ್ಮರಣೆ ತೀವ್ರವಾಗಿ ಮರುಕಳಿಸುತ್ತಿತ್ತು, ತಕ್ಷಣ ಅವರು ತುರೀಯದಲ್ಲಿ ಲೀನರಾಗಿಬಿಡುತ್ತಿದ್ದರು. ಇದೆಲ್ಲ ಅವರ ಇಚ್ಛೆಯನ್ನು ಮೀರಿ ನಡೆದುಹೋಗುತ್ತಿತ್ತು. ಇದಕ್ಕೆ ಉದಾಹರಣೆಯಾಗಿ ಹಲವಾರು ಘಟನೆಗಳನ್ನು ಅವರ ಜೀವನದುದ್ದಕ್ಕೂ ಕಾಣಬಹುದು:

ದಕ್ಷಿಣೇಶ್ವರದ ಕಾಳೀದೇವಾಲಯಕ್ಕೆ ಸೇರಿದಂತೆ ಒಂದು ವಿಶಾಲವಾದ ಉದ್ಯಾನ. ಅಲ್ಲಿ ಅನೇಕ ಬಗೆಯ ತರಕಾರಿಗಳನ್ನು ಬೆಳೆಯುತ್ತಿದ್ದರು. ಆದರೆ ಮಳೆಗಾಲದಲ್ಲಿ ಅಲ್ಲಿ ದಟ್ಟವಾಗಿ ಹುಲ್ಲು ಬೆಳೆದುಬಿಡುತ್ತಿತ್ತು. ಇದರಿಂದಾಗಿ ತರಕಾರಿಯನ್ನು ಬೆಳೆಸಲು ತೋಟಗಾರರಿಗೆ ತುಂಬ ಶ್ರಮ. ಆದ್ದರಿಂದ ಈ ಸಮಯದಲ್ಲಿ ಹುಲ್ಲನ್ನು ಕೊಯ್ದು

ಕೊಳ್ಳಲು ಯಾರಿಗೆ ಬೇಕಾದರೂ ಅನುಮತಿ ಕೊಡುತ್ತಿದ್ದರು.

ಒಂದು ದಿನ ಒಬ್ಬ ಮುದುಕ ಅಲ್ಲಿಗೆ ಬಂದು ಹುಲ್ಲು ಕೊಯ್ಯಲಾರಂಭಿಸಿದ. ಹುಲ್ಲಿಗೆ ಹಣ ಕೊಡಬೇಕಾಗಿರಲಿಲ್ಲ; ಅಲ್ಲದೆ ಕೊಯ್ದಷ್ಟೂ ಸಂಪಾದನೆ ಹೆಚ್ಚು. ಇದರಿಂದ ಮುದುಕನಿಗೆ ಬಹಳ ಖುಷಿಯಾಗಿಬಿಟ್ಟಿದೆ. ಬೆಳಗಿನಿಂದ ಹಿಡಿದು ಮಧ್ಯಾಹ್ನದವರೆಗೆ ಕೊಯ್ದೇ ಕೊಯ್ದ. ಕಡೆಗೆ, ಆಯಾಸವಾಯಿತೇನೋ, ಇನ್ನು ಸಾಕು ಇವತ್ತಿಗೆ ಎನ್ನಿಸಿತೇನೋ; ಕೆಲಸ ನಿಲ್ಲಿಸಿದ. ಕೊಯ್ದ ಹುಲ್ಲನ್ನೆಲ್ಲ ಹೊರೆಕಟ್ಟಿದ. ಬಹು ದೊಡ್ಡ ಹೊರೆಯೇ ಆಯಿತು. ಇನ್ನು ಅದನ್ನು ಮಾರುಕಟ್ಟೆಗೆ ಕೊಂಡೊಯ್ಯುವುದೊಂದೇ ಬಾಕಿ.

ಶ್ರೀರಾಮಕೃಷ್ಣರು ದೂರದಲ್ಲಿ ನಿಂತು ಮುದುಕ ಏನು ಮಾಡುತ್ತಾನೆಂಬುದನ್ನು ಗಮನಿಸುತ್ತಿದ್ದಾರೆ. ಆತ ಹೆಚ್ಚು ಲಾಭದ ಆಸೆಗೆ ಭಾರೀ ಹೊರೆಯನ್ನೇನೋ ಕಟ್ಟಿದ; ಆದರೆ ಅದನ್ನು ಎತ್ತಿ ತನ್ನ ತಲೆಯ ಮೇಲಿಟ್ಟುಕೊಳ್ಳಲು ಮಾತ್ರ ಆಗುತ್ತಿಲ್ಲ! ಹೊರೆಯನ್ನು ಹಾಗೆ ಹಿಡಿದ, ಹೀಗೆ ಹಿಡಿದ, ಏನೇನೋ ಮಾಡಿದ. ಅರ್ಧ ಎತ್ತುತ್ತಾನೆ; ಇಳಿಸುತ್ತಾನೆ! ಈತ ಅತ್ಯಾಸೆಗೊಳಗಾಗಿ ತನ್ನಿಂದ ಹೊರಲಾರದಷ್ಟು ಹುಲ್ಲನ್ನು ಕೊಯ್ದುಬಿಟ್ಟಿದ್ದಾನೆ ಎಂಬುದು ಶ್ರೀರಾಮಕೃಷ್ಣರಿಗೆ ಕಾಣುತ್ತಲಿದೆ. ಆದರೆ ಆಸೆಯ ಮಂಕು ಕವಿದ ಮುದುಕನ ಬುದ್ಧಿಗೆ ಅದು ತೋಚಲೇ ಇಲ್ಲ. ಆ ಹೊರೆಯನ್ನು ತಲೆಯ ಮೇಲಿಟ್ಟುಕೊಳ್ಳಲು ನಾನಾ ಪ್ರಕಾರವಾಗಿ ಪುನಃಪುನಃ ಪ್ರಯತ್ನಿಸುತ್ತಲೇ ಇದ್ದ. ಪಾಪ, ಕೊನೆಗೂ ಅವನಿಂದ ಅದನ್ನು ಎತ್ತಲಾಗಲಿಲ್ಲ.

ಅದನ್ನು ನೋಡುತ್ತ ನೋಡುತ್ತ ಶ್ರೀರಾಮಕೃಷ್ಣರಲ್ಲಿ ಒಂದು ಭಾವಸ್ಫುರಣೆಯುಂಟಾಯಿತು. "ಮನುಷ್ಯನ ಅಂತರ್ಯದಲ್ಲಿ ಪೂರ್ಣಜ್ಞಾನಸ್ವರೂಪನಾದ ಆತ್ಮನಿರುತ್ತಾನೆ. ಆದರೂ ಹೊರಗೆ ಇಷ್ಟು ಬುದ್ಧಿಹೀನತೆ! ಇಷ್ಟು ಅಜ್ಞಾನ! ಹೇ ರಾಮ, ನಿನ್ನ ಲೀಲೆ ಅದೆಷ್ಟು ವಿಚಿತ್ರ!" ಎನ್ನುತ್ತ ಅವರು ಸಮಾಧಿಸ್ಥರಾಗಿಬಿಟ್ಟರು.

ಒಮ್ಮೆ ಕಾಳೀದೇವಾಲಯಕ್ಕೆ ಸೇರಿದ ಉದ್ಯಾನವನದ ಒಂದು ಭಾಗದಲ್ಲಿ ಹೊಸದಾಗಿ ಹುಲ್ಲು ಚಿಗುರೊಡೆದಿತ್ತು. ಹಚ್ಚ ಹಸಿರಾದ ಆ ಭಾಗ ನಯನಮನೋಹರವಾಗಿತ್ತು. ಒಂದು ದಿನ ಶ್ರೀರಾಮಕೃಷ್ಣರು ಅದನ್ನು ಈಕ್ಷಿಸುತ್ತ ಅದರಲ್ಲೇ ತನ್ಮಯರಾಗಿಬಿಟ್ಟಿದ್ದರು—ಎಷ್ಟರಮಟ್ಟಿಗೆಂದರೆ, ಅದು ತಮ್ಮದೇ ದೇಹದ ಒಂದು ಅಂಗವೆಂಬಂತೆ ಅನುಭವಿಸುತ್ತಿದ್ದರು. ಆ ಹೊತ್ತಿಗೆ ಸರಿಯಾಗಿ ಯಾರೋ ಒಬ್ಬ ವ್ಯಕ್ತಿ ಆ ಹುಲ್ಲನ್ನು ತುಳಿದುಕೊಂಡು ಈ ಕಡೆಯಿಂದ ಆ ಕಡೆಗೆ ನಡೆಯತೊಡಗಿದ. ತಕ್ಷಣ ಶ್ರೀರಾಮಕೃಷ್ಣರಿಗೆ ತಮ್ಮ ಎದೆಯನ್ನೇ ಯಾರೋ ತುಳಿದಂಥ ಅನುಭವವಾಗಿ ನೋವಿನಿಂದ 'ಹಾ!' ಎಂದು ಕೂಗಿದರು. ಆ ಭಾಗದಲ್ಲಿ ರಕ್ತ ಹೆಪ್ಪುಗಟ್ಟಿ ಕಪ್ಪನೆಯ ಗುರುತಾಯಿತು!

ಮುಂದೊಮ್ಮೆ ಅವರು ಈ ಘಟನೆಯನ್ನು ಪ್ರಸ್ತಾಪಿಸಿ ತಮ್ಮ ಶಿಷ್ಯರ ಮುಂದೆ ಹೇಳುತ್ತಾರೆ:

"ಆಗ ನನಗೆ ಯಾರೋ ನನ್ನ ಎದೆಯ ಮೇಲೆಯೇ ನಡೆದುಕೊಂಡು ಹೋದಷ್ಟು ನೋವಾಗಿತ್ತು. ಅಂತಹ ಭಾವಾವಸ್ಥೆ ಬಹಳ ಯಾತನೆಯನ್ನುಂಟುಮಾಡುತ್ತದೆ. ಆ ಬಗೆಯ ಅವಸ್ಥೆ ಆರು ಗಂಟೆಯ ಕಾಲ ಮಾತ್ರ ಇದ್ದು ಬಿಟ್ಟುಹೋಯಿತು. ಆದರೆ ಅಷ್ಟರಲ್ಲಿಯೇ ನಾನು ಸಾಕಷ್ಟು ತೊಂದರೆಯನ್ನು ಅನುಭವಿಸಿಬಿಟ್ಟೆ."

ಮತ್ತೊಂದು ಸಂದರ್ಭ. ಶ್ರೀರಾಮಕೃಷ್ಣರು ಕಾಳೀಮಂದಿರದ ಎದುರಿನ ನದೀ ಘಟ್ಟದ ಮೇಲೆ ನಿಂತಿದ್ದಾರೆ; ಗಂಗೆಯ ದರ್ಶನ ಮಾಡುತ್ತ ಭಾವೋತ್ಕರ್ಷಿತರಾಗಿದ್ದಾರೆ. ಆಗತಾನೆ ಅಲ್ಲಿ ಎರಡು ದೋಣಿಗಳು ಬಂದು ನಿಂತಿದ್ದುವು. ಇಬ್ಬರು ನಾವಿಕರ ನಡುವೆ ಯಾವುದೋ ಕಾರಣಕ್ಕಾಗಿ ಜಗಳ ಹತ್ತಿಕೊಂಡಿತು. ಮಾತಿಗೆ ಮಾತು ಬೆಳೆಯಿತು. ಜಗಳ ಜೋರಾಯಿತು; ಹೊಡೆದಾಟವೇ ಶುರುವಾಯಿತು. ಆಗ ಒಬ್ಬ ನಾವಿಕ ಒಳ್ಳೇ ಗಟ್ಟಿಮುಟ್ಟಾಗಿದ್ದವನು, ಸ್ವಲ್ಪ ದುರ್ಬಲನಾದ ಮತ್ತೊಬ್ಬನ ಬೆನ್ನಿಗೊಂದು ಬಲವಾಗಿ ಬಿಗಿದ. ತಕ್ಷಣ ಇತ್ತ ಶ್ರೀರಾಮಕೃಷ್ಣರು ಚೀತ್ಕರಿಸುತ್ತ ಅಳಲಾರಂಭಿಸಿದರು! ಆ ಕೂಗು ಒಳಗೆ ದೇವಾಲಯದಲ್ಲಿದ್ದ ಹೃದಯನ ಕಿವಿಗೆ ಬಿದ್ದಿತು. ಏನಾಯಿತೋ ಎಂದು ಗಾಬರಿಯಾಗಿ ಓಡಿಬಂದು ನೋಡುತ್ತಾನೆ—ಶ್ರೀರಾಮಕೃಷ್ಣರ ಬೆನ್ನಿನ ಮೇಲೆ ಕೆಂಪಗೆ ಬಾಸುಂಡೆ ಎದ್ದಿದೆ! ಅದನ್ನು ಕಂಡು ಹೃದಯ ಕಿಡಿಕಿಡಿಯಾದ. ರೋಷದಿಂದ ತಾಳ್ಮೆ ಗೆಟ್ಟು ಕೂಗಿದ:

"ಮಾವಯ್ಯ! ಯಾರು ನಿನಗೆ ಹೀಗೆ ಹೊಡೆದವರು? ಹೇಳು, ನಾನು ಅವನ ತಲೆಯನ್ನೇ ಕತ್ತರಿಸಿಬಿಡುತ್ತೇನೆ."

ಶ್ರೀರಾಮಕೃಷ್ಣರು ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ನೋವು ಸ್ವಲ್ಪ ಉಪ ಶಮನವಾದ ಮೇಲೆ ಸುಧಾರಿಸಿಕೊಂಡು ಹೇಳಿದರು:

"ಇಲ್ಲಪ್ಪ, ನನಗೆ ಯಾರೂ ಹೊಡೆಯಲಿಲ್ಲ. ಅಲ್ಲಿ ಅವರಿಬ್ಬರು ಜಗಳವಾಡು ತ್ತಿದ್ದಾರೆ ನೋಡು, ಅವರಲ್ಲಿ ಒಬ್ಬ ಇನ್ನೊಬ್ಬನಿಗೆ ಹೊಡೆದ ಏಟು ನನಗೆ ತಗುಲಿತು, ಅಷ್ಟೆ."

ಹೃದಯನಿಗೆ ಇದೊಂದು ಒಗಟಾಗಿ ಕಾಣಿಸಿತು, ಕಣ್ ಕಣ್ಣುಬಿಡುತ್ತ ನಿಂತ. ಆಗ ಶ್ರೀರಾಮಕೃಷ್ಣರು, ನಡೆದುದನ್ನು ವಿವರಿಸಿದರು. ಅದನ್ನು ಕೇಳಿದ ಹೃದಯ, 'ಇಂಥ ದೊಂದು ಸಂಗತಿ ಈ ಜಗತ್ತಿನಲ್ಲಿದೆಯೆ! ಅದೆಲ್ಲಾದರೂ ಸಾಧ್ಯವೆ!' ಎಂದು ಭಾವಿ ಸುತ್ತ ಕಂಬವಾಗಿ ನಿಂತ.

ಅದ್ವೈತ ಸಾಧನೆಯಿಂದ ಶ್ರೀರಾಮಕೃಷ್ಣರು ಗಳಿಸಿಕೊಂಡ ಒಂದು ಅಪೂರ್ವ ಗುಣವೆಂದರೆ ಅಸೀಮ ಔದಾರ್ಯ, ಹೃದಯವೈಶಾಲ್ಯ. ಈ ಸದ್ಗುಣ ಅವರಲ್ಲಿ ಹಿಂದೆ ಇರಲಿಲ್ಲವೆಂದಲ್ಲ. ಹಾಗೆ ನೋಡಿದರೆ, ಅದು ಅವರಿಗೆ ಜನ್ಮತಃ ಬಂದುದೇ. ಆದರೆ ಅಧ್ಯಾತ್ಮಾನುಭವದ ತುತ್ತತುದಿಯಾದ ನಿರ್ವಿಕಲ್ಪಸಮಾಧಿಯಲ್ಲಿ ಮಿಂದು ಬಂದ ಮೇಲೆ ಅವರ ಮನಸ್ಸು ಬುದ್ಧಿ-ಹೃದಯಗಳು ಮೊದಲಿಗಿಂತ ನೂರು ಪಟ್ಟು ಹಿಗ್ಗಿ ವಿಶಾಲವಾದುವು. ಭಗವತ್ಸಾಕ್ಷಾತ್ಕಾರವೇ ಮಾನವಜೀವನದ ಪರಮೋದ್ದೇಶವೆಂದು ಸಾರುವಂತಹ ಯಾವಯಾವ ಮತ ಧರ್ಮ ಸಂಪ್ರದಾಯಗಳಿವೆಯೋ, ಅವೆಲ್ಲವುಗಳ ವಿಷಯದಲ್ಲಿ ಶ್ರೀರಾಮಕೃಷ್ಣರಿಗೀಗ ಅಪೂರ್ವ ಆದರ ಉದಿಸಿತು. ಅವೆಲ್ಲವನ್ನೂ ಅವರೀಗ ಸಮದೃಷ್ಟಿಯಿಂದ ಕಾಣಬಲ್ಲವರಾದರು.

ಈ ರೀತಿ ಸರ್ವಮತಗಳನ್ನೂ ಆದರದಿಂದ ಕಾಣುವ ಹಾಗೂ ಸರ್ವಮತಗಳೂ ತಮ್ಮ ಮತದಂತೆಯೇ ಎಂದು ಭಾವಿಸಿ ಅವುಗಳನ್ನು ಸ್ವೀಕರಿಸುವ ಔದಾರ್ಯಗುಣವು ಪೂರ್ಣರೂಪದಲ್ಲಿ ಪ್ರಥಮತಃ ವ್ಯಕ್ತವಾದದ್ದು ಶ್ರೀರಾಮಕೃಷ್ಣರಲ್ಲೇ ಎಂದು ನಿಸ್ಸಂದೇಹ ವಾಗಿ ಹೇಳಬಹುದು. ದಕ್ಷಿಣೇಶ್ವರಕ್ಕೆ ಬರುತ್ತಿದ್ದ ಅಸಂಖ್ಯಾತ ಯೋಗಿಗಳಲ್ಲಿ, ಸಿದ್ಧರಲ್ಲಿ, ಧರ್ಮದ-ಆಧ್ಯಾತ್ಮಿಕತೆಯ ಒಂದೊಂದು ಅಂಶ ಮಾತ್ರ ಎದ್ದುಕಾಣುತ್ತಿದ್ದರೆ ಶ್ರೀರಾಮ ಕೃಷ್ಣರಲ್ಲಿ ಅದು ನೂರಕ್ಕೆ ನೂರು ವ್ಯಕ್ತವಾಗಿದ್ದುದು ಸುಸ್ಪಷ್ಟ. ಇದರ ಪರಿಣಾಮವಾಗಿ ಅವರು ಮತೀಯ ಅಸಹಿಷ್ಣುತೆಯನ್ನು, ತಮ್ಮ ಮತವೇ ಶ್ರೇಷ್ಠವೆಂಬ ಮತಾಂಧತೆ ಯನ್ನು ಸ್ವಲ್ಪವೂ ಸಹಿಸದಾದರು. ಆದ್ದರಿಂದಲೇ ಧಾರ್ಮಿಕ ವಿಷಯಗಳಲ್ಲಿ ಸಂಕುಚಿತ ಮನೋಭಾವವನ್ನು ಕಂಡರೆ ಕೂಡಲೇ ಅದನ್ನು ತಿದ್ದುವ ಯತ್ನ ಮಾಡುತ್ತಿದ್ದರು.

ಶ್ರೀರಾಮಕೃಷ್ಣರ ಮತೀಯ ಔದಾರ್ಯವನ್ನು ಜಗತ್ತಿಗೇ ಸಾಬೀತುಪಡಿಸುವ ಒಂದು ಸಂದರ್ಭ ಒದಗಿ ಬಂದಿತು. ಅವರು ಆಮಶಂಕೆಯಿಂದ ಗುಣಮುಖರಾಗು ತ್ತಿದ್ದ ಸಮಯವದು. ಆಗ ದಕ್ಷಿಣೇಶ್ವರಕ್ಕೆ ಗೋವಿಂದ ರಾಯ್ ಎಂಬೊಬ್ಬ ವ್ಯಕ್ತಿ ಆಗಮಿಸಿದ. ಈತ ಭಗವದ್ಭಕ್ತ. ಬಹುಕಾಲದಿಂದಲೂ ಭಗವಚ್ಚಿಂತನೆ-ಸಾಧನೆಗಳಲ್ಲಿ ತೊಡಗಿದ್ದವನು. ಮೂಲತಃ ಕ್ಷತ್ರಿಯ; ಆದರೆ ಈಚೆಗೆ ಸ್ವ-ಇಚ್ಛೆಯಿಂದ ಇಸ್ಲಾಂ ಧರ್ಮ ವನ್ನು ಅವಲಂಬಿಸಿದ್ದ. ಪಾರಸೀ, ಅರಬ್ಬೀ ಭಾಷೆಗಳಲ್ಲಿ ಪಂಡಿತ. ಇವನು ಚಿಂತನಶೀಲ ವ್ಯಕ್ತಿ. ಧರ್ಮಕ್ಕೆ ಸಂಬಂಧಿಸಿದ ನಾನಾ ತತ್ವಗಳ ಬಗ್ಗೆ ಆಳವಾಗಿ ಚಿಂತನ ನಡೆಸಿದ್ದ; ವಿವಿಧ ಮತ-ಸಂಪ್ರದಾಯದ ಜನರೊಂದಿಗೆ ಬೆರೆತು ಒಡನಾಡುತ್ತಿದ್ದ. ಆ ಸಂದರ್ಭ ದಲ್ಲಿ, ಇಸ್ಲಾಂ ಧರ್ಮದ ವಿಶ್ವಭ್ರಾತೃತ್ವ-ಔದಾರ್ಯದ ಬೋಧನೆಗಳಿಗೆ ಅವನು ಮನಸೋತು, ಯೋಗ್ಯ ಗುರುವಿನಿಂದ ನಿಯಮಾನುಸಾರವಾಗಿ ಆ ಧರ್ಮದೀಕ್ಷೆ ಯನ್ನು ಪಡೆದುಕೊಂಡಿದ್ದ.

ಗೋವಿಂದ ರಾಯ್ ಈಗ ತತ್ವತಃ ಮುಸಲ್ಮಾನನೇ ಆಗಿದ್ದರೂ, ನಡೆ-ನುಡಿ, ಸಾಮಾಜಿಕ ಆಚಾರ-ಪದ್ಧತಿಗಳಲ್ಲೆಲ್ಲ ಕಟ್ಟಾ ಮುಸಲ್ಮಾನನಂತೆಯೇ ಇದ್ದನೆಂದು ಹೇಳಲಾಗುವುದಿಲ್ಲ. ಆದರೆ ದೀಕ್ಷೆ ತೆಗೆದುಕೊಂಡಾಗಿನಿಂದ ಕೊರಾನ್ ಪಠಣವನ್ನೂ

ಆದರಲ್ಲಿ ನಿರ್ದೇಶಿಸಿರುವ ಸಾಧನೆ ಭಜನೆಗಳನ್ನೂ ಉತ್ಸಾಹ-ನಿಷ್ಠೆಗಳಿಂದ ಮಾಡಿಕೊಂಡು ಬಂದಿದ್ದ. ಗೋವಿಂದನದು ಪ್ರೇಮಮಯ ಪ್ರಕೃತಿ. ಅವನ ಭಗವತ್ಪ್ರೇಮ ಆಳವಾದುದು. ಇಸ್ಲಾಮಿನಲ್ಲಿ ಸೂಫಿ ಎಂಬುದೊಂದು ಸಂಪ್ರದಾಯ. ಈ ಮಾರ್ಗದಲ್ಲಿ ಆತನಿಗೆ ಅಧಿಕ ಒಲವು. ಆದ್ದರಿಂದ ಸೂಫಿ ಫಕೀರರಂತೆ ಹಗಲಿರುಳೂ ಭಕ್ತಿಭಾವಸಾಧನೆಯಲ್ಲಿ ನಿರತನಾಗಿದ್ದ.

ದಕ್ಷಿಣೇಶ್ವರಕ್ಕೆ ಬಂದುಹೋಗುತ್ತಿದ್ದ ಹಲವಾರು ಸಾಧುಸಂನ್ಯಾಸಿಗಳಂತೆಯೇ ಗೋವಿಂದನೂ ಅಲ್ಲಿಗೆ ಬಂದಿದ್ದ. ಶಾಂತ-ರಮಣೀಯ ಕ್ಷೇತ್ರ; ಗಂಗಾ ಸನ್ನಿಧಿ. ಆದರಲ್ಲೂ ಪಂಚವಟಿಯ ಏಕಾಂತತೆ ಅವನನ್ನು ತುಂಬ ಆಕರ್ಷಿಸಿತು. ಧ್ಯಾನಕ್ಕೆ ಬಹಳ ಸೂಕ್ತವಾಗಿ ಕಂಡಿತು. ಗೋವಿಂದ ಅಲ್ಲಿ ತನ್ನ ಆಸನವನ್ನು ಹರಡಿ ಕುಳಿತುಕೊಂಡ. ರಾಸಮಣಿಯ ಕಾಳೀದೇವಾಲಯದಲ್ಲಿ ಜಾತಿ-ಮತ ಪರಿಭೇದವಿಲ್ಲದೆ, ತ್ಯಾಗಿಗಳಾದ ಎಲ್ಲರಿಗೂ ಮನ್ನಣೆಯಿತ್ತು. ಹಿಂದೂ ಸಂನ್ಯಾಸಿಗಳಂತೆ ಮುಸಲ್ಮಾನ ಫಕೀರರಿಗೂ ಸಮಪ್ರಮಾಣವಾಗಿ ಆದರ-ಆತಿಥ್ಯವಿತ್ತು. ಆದ್ದರಿಂದ ಗೋವಿಂದರಾಯ್ ಭಿಕ್ಷೆ ಹುಡುಕಿಕೊಂಡು ಬೇರೆಲ್ಲಿಗೂ ಹೋಗಬೇಕಾಗಿರಲಿಲ್ಲ. ಹೀಗಾಗಿ, ಆತ ತನ್ನ ಇಷ್ಟ ಚಿಂತನದಲ್ಲಿ ತತ್ಪರನಾಗಿ, ಆನಂದದಿಂದ ಇರತೊಡಗಿದ.

ಅಂತರ್ಮುಖಿಯಾಗಿ ಕುಳಿತ ಈ ಫಕೀರನನ್ನು ಕಂಡೊಡನೆಯೇ ಶ್ರೀರಾಮಕೃಷ್ಣರು ಆಕರ್ಷಿತರಾದರು. ಅವನೊಂದಿಗೆ ಮಾತಿಗೆ ತೊಡಗಿ ಆತನ ಸ್ವಭಾವವೆಂಥದು, ಹಿನ್ನೆಲೆಯೇನು ಎಂಬುದನ್ನು ಗ್ರಹಿಸಿದರು. ಅವನ ಸರಳ ಶ್ರದ್ಧೆ, ದೈವಪ್ರೇಮಗಳಿಗೆ ಮಾರುಹೋದರು. ಕ್ರಮೇಣ, ಇಸ್ಲಾಂ ಧರ್ಮದ ತತ್ತ್ವಗಳನ್ನು, ಬೋಧನೆಗಳನ್ನು ಆತನ ಮೂಲಕ ತಿಳಿದರು. ಅವರ ಮನಸ್ಸೀಗ ಏಕಪ್ರಕಾರವಾಗಿ ಆ ದಿಕ್ಕಿಗೆ ಹರಿಯತೊಡಗಿತು ! ಅವರು ಆಲೋಚಿಸಿದರು:

'ಇದು ಕೂಡ ಭಗವತ್ಸಾಕ್ಷಾತ್ಕಾರದ ಒಂದು ದಾರಿಯೇ. ಅನಂತ ಲೀಲಾಮಯಿಯಾದ ಜಗನ್ಮಾತೆ, ಈ ಮಾರ್ಗದಿಂದಲೂ ಎಷ್ಟೋ ಜನರಿಗೆ ತನ್ನ ಶ್ರೀಚರಣಗಳ ದರ್ಶನವಿತ್ತು ಧನ್ಯರನ್ನಾಗಿಸುತ್ತಿದ್ದಾಳೆ. ಈ ಮಾರ್ಗದಿಂದ ಬರುವ ತನ್ನ ಆಶ್ರಿತರನ್ನು ಅವಳು ಯಾವ ರೀತಿಯಲ್ಲಿ ಉದ್ಧರಿಸುತ್ತಿದ್ದಾಳೋ, ನೋಡಬೇಕು ! . . . ಹೌದು, ಇವನಿಂದ ನಾನು ದೀಕ್ಷೆಯನ್ನು ಪಡೆದುಕೊಂಡು ಈ ಭಾವಸಾಧನೆಯಲ್ಲಿ ತೊಡಗುತ್ತೇನೆ !'

ಒಮ್ಮೆ ಶ್ರೀರಾಮಕೃಷ್ಣರ ಮನಸ್ಸಿನಲ್ಲಿ ಈ ಆಲೋಚನೆ ಬಂದಿತೋ ಇಲ್ಲವೋ, ಅವರಿನ್ನು ತಡ ಮಾಡಲಿಲ್ಲ. ಅದನ್ನು ಕಾರ್ಯರೂಪಕ್ಕಿಳಿಸುವವರೆಗೆ ಅವರಿಗೆ ಸಮಾಧಾನವಿಲ್ಲ ! ತಮ್ಮ ಅಭಿಲಾಷೆಯನ್ನು ಅವರು ಗೋವಿಂದನ ಮುಂದೆ ಹೇಳಿಕೊಂಡರು. ಅವರ ಪ್ರಾರ್ಥನೆಗೆ ಅವನು ಸಂತೋಷದಿಂದ ಒಪ್ಪಿದ. ಒಂದು ಸುಮುಹೂರ್ತದಲ್ಲಿ ಅವರಿಗೆ ಇಸ್ಲಾಂ ಧರ್ಮದೀಕ್ಷೆಯನ್ನು ನೀಡಿದ. ಶ್ರೀರಾಮಕೃಷ್ಣರು ತಮಗೆ ಸಹಜವಾದ ಪೂರ್ಣನಿಷ್ಠೆಯಿಂದ ಅದಕ್ಕನುಸಾರವಾದ ಸಾಧನೆಯಲ್ಲಿ ನಿರತರಾಗಿಯೇಬಿಟ್ಟರು.

ವಿವಿಧ ಭಾವಗಳ ಸಾಧನೆಗಳನ್ನು ಕೈಗೊಂಡಾಗ ಶ್ರೀರಾಮಕೃಷ್ಣರು ಆಯಾ ಭಾವಗಳಲ್ಲೇ ತ್ರಿಕರಣಪೂರ್ವಕವಾಗಿ ಮುಳುಗಿಹೋಗುತ್ತಿದ್ದುದನ್ನು ನಾವು ಹಿಂದೆಯೇ ನೋಡಿದ್ದೇವೆ. ಅಂತೆಯೇ ಇಸ್ಲಾಂ ಧರ್ಮದ ಸಾಧನೆಯಲ್ಲಿ ತೊಡಗಿದಾಗಲೂ ಸಹ. ಆ ಸಮಯದಲ್ಲಿ ಅವರಿಗೆ ಮುಸಲ್ಮಾನರ ಆಹಾರವನ್ನೇ ತಿನ್ನುವ ಇಚ್ಛೆಯುಂಟಾಯಿತು. ಮಥುರನೇನೋ ಅದಕ್ಕೆ ವ್ಯವಸ್ಥೆ ಮಾಡಿಕೊಡಬಲ್ಲ. ಶ್ರೀರಾಮಕೃಷ್ಣರೂ

ಅದನ್ನು ಯಾವ ಭಯ ಸಂಕೋಚಗಳಿಲ್ಲದೆ ಸ್ವೀಕರಿಸಬಲ್ಲರು. ಆದರೆ ಹಿಂದೂಗಳಿಗೆ ವರ್ಜ್ಯವಾದ ಆಹಾರವನ್ನು ತಿಂದರೆ ನಾಳೆ ದಿನ ಏನಾದೀತೋ ಹೇಗೆ ಹೇಳುವುದು ?—ಇದು ಮಥುರನ ಚಿಂತೆ. ಆದ್ದರಿಂದ ಶ್ರೀರಾಮಕೃಷ್ಣರು ಹಾಗೆ ಮಾಡದಂತೆ ಅವನು ಕಷ್ಟಪಟ್ಟು ಅವರ ಮನವೊಲಿಸಿದ. ಆದರೆ ಶ್ರೀರಾಮಕೃಷ್ಣರ ಇಚ್ಛೆಯನ್ನು ಸಾಂಕೇತಿಕವಾಗಿಯಾದರೂ ಪೂರೈಸದಿದ್ದರೆ ಅವರಿಗೆ ಸಮಾಧಾನವಾಗುವುದಿಲ್ಲವೆಂಬುದೂ ಅವನಿಗೆ ಗೊತ್ತು. ಆದ್ದರಿಂದ ಅವನು ಒಬ್ಬ ಮುಸಲ್ಮಾನ ಬಾಣಸಿಗನನ್ನು ಕರೆಯಿಸಿದ; ಆತನ ನಿರ್ದೇಶನದಂತೆ ಮುಸಲ್ಮಾನ ಪದ್ಧತಿಯ ಅಡಿಗೆಯನ್ನು ತಯಾರಿಸಲು ಒಬ್ಬ ಬ್ರಾಹ್ಮಣನನ್ನು ನೇಮಿಸಿದ.

ಇಸ್ಲಾಂ ಧರ್ಮಸಾಧನೆಯಲ್ಲಿ ತೊಡಗಿದ್ದಾಗ ಶ್ರೀರಾಮಕೃಷ್ಣರು ಒಮ್ಮೆಯೂ ಕಾಳೀದೇವಾಲಯವನ್ನು ಪ್ರವೇಶಿಸಲಿಲ್ಲ. ಅದರ ಆವರಣದಾಚೆ ಇರುವ, ಮಥುರನಿಗೆ ಸೇರಿದ ಕೋಣೆಯೊಂದರಲ್ಲಿ ಇರತೊಡಗಿದರು.

ಪ್ರಾಮಾಣಿಕಭಾವದಿಂದ ಸಾಧನೆಗೈಯುವುದು ಶ್ರೀರಾಮಕೃಷ್ಣರ ಸ್ವಭಾವ. ಅಂಥವರಿಗೆ ಸಿದ್ಧಿ ಸ್ವತಸ್ಸಿದ್ಧವಲ್ಲವೆ! ತಮ್ಮ ಆ ಸಾಧನೆಯ ಬಗ್ಗೆ ಅವರೇ ಮುಂದೆ ಹೀಗೆ ಹೇಳಿಕೊಳ್ಳುತ್ತಾರೆ:

"ಆಗ ನಾನು ಅತ್ಯಂತ ಭಕ್ತಿಯಿಂದ 'ಅಲ್ಲಾ' ನಾಮಜಪ ಮಾಡುತ್ತಿದ್ದೆ. ಮುಸಲ್ಮಾನ ರೀತಿಯಲ್ಲಿ ಪಂಚೆ ಉಡುತ್ತಿದ್ದೆ. ದಿನಕ್ಕೆ ಮೂರು ಹೊತ್ತು ನಮಾಜು ಮಾಡುತ್ತಿದ್ದೆ. ಆಗ ಹಿಂದೂಭಾವವು ಮನಸ್ಸಿನಿಂದ ಪೂರ್ಣ ಹೊರಟೇಹೋಗಿತ್ತು. ಆದ್ದರಿಂದ ಹಿಂದೂ ದೇವದೇವಿಯರಿಗೆ ನಮಸ್ಕರಿಸುವುದಿರಲಿ, ಅವರ ದರ್ಶನ ಮಾಡುವ ಮನಸ್ಸೂ ಇರಲಿಲ್ಲ. ಆ ಭಾವದಲ್ಲಿ ಏಕಪ್ರಕಾರವಾಗಿ ಮೂರು ದಿನ ಕಳೆದ ಮೇಲೆ ಆ ಸಾಧನೆಯ ಫಲ ಕೈಗೂಡಿತು."

ಸಾಧನಾಂತ್ಯದಲ್ಲಿ ಶ್ರೀರಾಮಕೃಷ್ಣರಿಗೆ ಉದ್ದವಾದ ಗಡ್ಡವುಳ್ಳ ಜ್ಯೋತಿರ್ಮಯನೂ, ಗಂಭೀರವದನನೂ ಆದ ದಿವ್ಯಪುರುಷನೊಬ್ಬನ ದರ್ಶನವಾಯಿತು. ಒಡನೆಯೇ ಅವರ ಮನಸ್ಸು ಸಗುಣ-ಸಾಕಾರ ಬ್ರಹ್ಮದ ಅನುಭವವನ್ನು ಪಡೆದುಕೊಂಡು ಮುಂದೆ ಸಾಗಿತು; ಅಂತಿಮವಾಗಿ ಅದು ಲೀನಗೊಂಡದ್ದು ನಿರ್ಗುಣ-ನಿರಾಕಾರ ಬ್ರಹ್ಮದಲ್ಲಿ.

ಇಸ್ಲಾಂ ಧರ್ಮ ಎಂಬ ದಾರಿಯೇನೋ ಬೇರೆಯೇ. ಆದರೆ ಅದರಲ್ಲಿ ಮುಂದುವರಿದಾಗ ತಲುಪುವುದು ಮಾತ್ರ ಆ ಏಕೈಕ ಗುರಿಗೆ—ಅದೇ ನಿರ್ಗುಣ-ನಿರಾಕಾರ ಪರತತ್ತ್ವ !

ಶ್ರೀರಾಮಕೃಷ್ಣರ ಮನಸ್ಸೀಗ ಸಕಲ ಮತ-ಧರ್ಮಗಳ ಬಗ್ಗೆ ಹೇಗೆ ಸಮಾನ ಭಾವದಿಂದ ಆದರ ತಾಳಿತ್ತೆಂಬುದಕ್ಕೆ, ಅವರ ಇಸ್ಲಾಂ ಧರ್ಮಸಾಧನೆಯೇ ನಿಚ್ಚಳ ಸಾಕ್ಷ್ಯ. ಹಿಂದೂಧರ್ಮದ ಎಲ್ಲೆಯೊಳಗೇ ಬರುವ ಹಲವು ಸಂಪ್ರದಾಯಗಳ ಪ್ರಕಾರ ಅವರು ಮಾಡಿದ ಸಾಧನೆಗಿಂತ, ಒಂದು ದೃಷ್ಟಿಯಲ್ಲಿ, ಇದು ಹೆಚ್ಚು ಮಹತ್ವದ್ದೆನ್ನಬಹುದು. ಏಕೆಂದರೆ, ಚರಿತ್ರೆಯಲ್ಲಿ ಎಂದಿನಿಂದಲೂ ಹಿಂದೂ-ಮುಸಲ್ಮಾನರ ಸಂಬಂಧವು ಮಧುರವಾಗಿದ್ದುದು ಅಪರೂಪವೇ. ಶ್ರೀರಾಮಕೃಷ್ಣರು ಕೂಡ ವಿಷಾದದಿಂದ ಹೇಳುತ್ತಿದ್ದರು, "ಹಿಂದೂ ಮುಸಲ್ಮಾನರ ನಡುವೆ ಪರ್ವತೋಪಮವಾದ ಅಂತರವಿದೆ. ಇಷ್ಟು ದೀರ್ಘಕಾಲ ಭಾರತದಲ್ಲಿ ಅವರಿರ್ವರೂ ಒಟ್ಟಿಗೆ ಜೀವಿಸಿದ್ದರೂ

ಅವರ ಭಾವನೆಗಳು, ನಂಬಿಕೆಗಳು, ಸ್ವಭಾವ-ವರ್ತನೆಗಳು ಪರಸ್ಪರರಿಗೆ ಸ್ವಲ್ಪವೂ ಅರ್ಥವಾಗಿಲ್ಲ'' ಎಂದು. ಹಾಗಿರುವಾಗ ಸಂಪ್ರದಾಯಸ್ಥ ಬ್ರಾಹ್ಮಣವಂಶಸ್ಥರಾದ ಶ್ರೀರಾಮಕೃಷ್ಣರು ಎಲ್ಲ ಕಟ್ಟುಪಾಡುಗಳನ್ನೂ ಮೀರಿ, ವಿಧರ್ಮವನ್ನು ತತ್ತ್ವನಿಷ್ಠದೃಷ್ಟಿಯಿಂದ ಅರಿಯುವ ಇಚ್ಛೆ ತಳೆದುದೊಂದು ಸಾಮಾನ್ಯ ವಿಷಯವೇ? ಅಲ್ಲದೆ, ದೇವಾಲಯವೊಂದರ ಅರ್ಚಕರಾಗಿದ್ದುಕೊಂಡೂ ತಮ್ಮ ಆ ಇಚ್ಛೆಯನ್ನು ಸಾಧಿಸಿದ್ದು ಎಂತಹ ಅದ್ಭುತ! ಶ್ರೀರಾಮಕೃಷ್ಣರ ಈ ಸಾಧನೆಯಲ್ಲಿ ಇಂದಿನ ಭಾರತಕ್ಕೆ ಮಾತ್ರವಲ್ಲ, ಎಲ್ಲ ಕಾಲಗಳಿಗೆ, ಎಲ್ಲ ದೇಶಗಳಿಗೆ ಒಂದು ಅಮೂಲ್ಯ ಪಾಠವಿದೆ. 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದ ಕರ್ತೃಗಳಾದ ಸ್ವಾಮಿ ಶಾರದಾನಂದರು ಈ ವಿಷಯವಾಗಿ ತಮ್ಮ ಆಶಾಪೂರ್ಣ ಅನಿಸಿಕೆಯನ್ನು ವ್ಯಕ್ತಪಡಿಸುತ್ತಾರೆ:

''ಕೇವಲ ವೇದಾಂತ ತತ್ತ್ವಗಳಲ್ಲಿ ವಿಶ್ವಾಸವಿಡುವುದರ ಮೂಲಕ ಹೇಗೆ ಭಾರತದ ಹಿಂದೂ-ಮುಸಲ್ಮಾನರು ಪರಸ್ಪರ ಸಹಾನುಭೂತಿ ತಾಳಿ ಭ್ರಾತೃಭಾವದಿಂದ ಬದುಕಬಹುದೆಂಬುದನ್ನು ಈ ಘಟನೆಯು ಮನವರಿಕೆ ಮಾಡಿಕೊಡುತ್ತದೆ. ಅವೆರಡು ಧರ್ಮಗಳ ನಡುವಿನ ಅಗಾಧ ಅಂತರವು ಮುಂದೊಂದು ದಿನ ಅಳಿಯುತ್ತದೆ ಮತ್ತು ಉಭಯರೂ ಪರಸ್ಪರರನ್ನು ಪ್ರೀತಿಯಿಂದ ಆಲಿಂಗಿಸುತ್ತಾರೆ ಎಂಬುದಕ್ಕೆ ಶ್ರೀರಾಮಕೃಷ್ಣರು ಮಾಡಿದ ಇಸ್ಲಾಂ ಧರ್ಮಸಾಧನೆಯ ಈ ಘಟನೆಯು ಮುನ್ಸೂಚಿಯಾಗಿರಬಹುದು. . .''

ಶ್ರೀರಾಮಕೃಷ್ಣರಿಗಂಟಿದ ಆಮಶಂಕೆ ರೋಗ ಸುಮಾರು ಆರು ತಿಂಗಳ ಕಾಲ ಚೆನ್ನಾಗಿ ಕಾಡಿ ಕಡೆಗೆ ಬಿಟ್ಟುಹೋಯಿತು. ಆದರೆ ಆಮೇಲೂ ಅವರು ಬೇಗ ಹಿಂದಿನ ಸುಸ್ಥಿತಿಗೆ ಬರಲಿಲ್ಲ; ಬಹುಕಾಲ ನಿತ್ರಾಣರಾಗಿಯೇ ಇದ್ದರು. ಈ ವೇಳೆಗೆ ಮಳೆಗಾಲ ಬೇರೆ ಸನ್ನಿಹಿತವಾಯಿತು. ದಕ್ಷಿಣೇಶ್ವರದಿಂದ ಗಂಗಾನದಿಯ ಸಾಗರಸಂಗಮ ಹೆಚ್ಚೇನೂ ದೂರವಿಲ್ಲ. ಆದ್ದರಿಂದ ಮಳೆಗಾಲ ಬಂದಿತೆಂದರೆ ನದಿಯಲ್ಲಿ ಪ್ರವಾಹ ಹಿಮ್ಮುಖವಾಗಿ ಹರಿದು, ನದಿಯ ನೀರೆಲ್ಲ ಉಪ್ಪಾಗುತ್ತದೆ. ಅಂತಹ ನೀರು ತುಂಬ ಅನಾರೋಗ್ಯಕರ. ಆದ್ದರಿಂದ ಈ ಸಮಯದಲ್ಲಿ ಶ್ರೀರಾಮಕೃಷ್ಣರು ಕೆಲತಿಂಗಳ ಕಾಲ ಕಾಮಾರಪುಕುರಕ್ಕೆ ಹೋಗಿರುವುದು ಮೇಲು ಎಂದು ಮಥುರ ಮುಂತಾದವರೆಲ್ಲ ಸೇರಿ ತೀರ್ಮಾನಿಸಿದರು. ಶ್ರೀರಾಮಕೃಷ್ಣರು ಇದಕ್ಕೆ ಒಪ್ಪಿದರು. ಆಗ ೧೮೬೭ ನೇ ಮೇ ತಿಂಗಳು.

ಶ್ರೀರಾಮಕೃಷ್ಣರನ್ನು ಕಳಿಸಿಕೊಡಲು ದಕ್ಷಿಣೇಶ್ವರದಲ್ಲಿ ಸಂಭ್ರಮದ ಸಿದ್ಧತೆ ನಡೆಯಿತು. ಕಾಮಾರಪುಕುರದಲ್ಲಿ ಅವರ ಕುಟುಂಬದ ಸ್ಥಿತಿಗತಿ ಎಂಥದೆಂಬುದು ಮಥುರನಿಗೆ ಚೆನ್ನಾಗಿ ಗೊತ್ತು. ಅದು ಕುಚೇಲನ ಸಂಸಾರವೇ! ಅವರ ತಂದೆ-ತಾತಂದಿರ ಕಾಲದಿಂದಲೂ ನಾಳೆಗಾಗಿ ಎಂದು ಮೂರು ಕಾಸನ್ನಾದರೂ ಕೂಡಿಡುವ ಬುದ್ಧಿ ಆ ಕುಟುಂಬದಲ್ಲಿ ಯಾರಿಗೂ ಇರಲಿಲ್ಲ. ಕುಲದೇವತೆಯಾದ ರಘುವೀರನ ಹೆಸರಿನಲ್ಲಿ ದೊರೆತ ಅರ್ಧ ಎಕರೆ ಭೂಮಿಯಲ್ಲಿ ಬೆಳೆದ ಫಸಲೇ ವರ್ಷಕ್ಕೆಲ್ಲ ಆಧಾರ. ಇದರ ಮೇಲೆ ಪೌರೋಹಿತ್ಯ, ಜ್ಯೋತಿಷಗಳಿಂದ ಸಿಗುವ ನಾಲ್ಕು ಕಾಸು. ಹಳ್ಳಿಯ ದಿನಸಿ ಅಂಗಡಿಯೇ ಈ ಕುಟುಂಬದ ಕಣಜ! ಕೈಯಲ್ಲಿ ಕಾಸಿದ್ದ ದಿನ ಅಂದಿಗೆ ಬೇಕಾದ ಉಪ್ಪನ್ನೋ ಎಣ್ಣೆಯನ್ನೋ ಕೊಂಡುಕೊಳ್ಳುವುದು. ಕಾಸಿಲ್ಲವೆ ? ಚಿಂತೆಯಿಲ್ಲ. ಕೆರೆಯ ದಂಡೆಯ ಮೇಲೆ ತಂತಾನೇ ಸ್ವೇಚ್ಛೆಯಾಗಿ ಬೆಳೆದುಕೊಂಡ ಸೊಪ್ಪು ಇದ್ದೇ ಇದೆ. ಅದನ್ನೇ ಬೇಯಿಸಿ ರಘುವೀರನಿಗೆ ನೈವೇದ್ಯ ಮಾಡಿ ತಿಂದರಾಯಿತು! ಊರಿನಿಂದ ಶ್ರೀರಾಮಕೃಷ್ಣರು ಬಂದರೂ ಅಷ್ಟೆ. ಅವರೂ ಇತರರಂತೆಯೇ ಪಾಲಿಗೆ ಬಂದ ಪಂಚಾಮೃತವನ್ನುಂಡು ಆನಂದದಿಂದಿರಬೇಕು! ಅಂದು ಕ್ಷುದಿರಾಮನ ಈ ಪರತ್ತಿಗೆ ಒಪ್ಪಿಯೇ ಅಲ್ಲವೆ ಗಯಾವಿಷ್ಣು ಆತನ ಮಗನಾಗಿ ಜನಿಸಿದ್ದು!...

ಆದರೆ ಶ್ರೀರಾಮಕೃಷ್ಣರು ಹಾಗಿರಲು ಮಥುರ ಬಿಡಬೇಕಲ್ಲ. ಅವರು ಊರಿಗೆ ಹೊರಟಾಗ ದಾರಿಖರ್ಚಿನಿಂದ ಹಿಡಿದು ಹಿಂದಿರುಗಿ ಬರುವವರೆಗೂ ಬೇಕಾಗಬಹುದಾದ ಸಕಲ ಸಾಮಾನು ಸರಂಜಾಮುಗಳನ್ನು ಅವರೊಡನೆ ಕಳಿಸಿಕೊಡಲು ವ್ಯವಸ್ಥೆ ಮಾಡಿದ. ಮಥುರನ ಹೆಂಡತಿ ಜಗದಂಬಾ ದಾಸಿಯಂತೂ ಅತೀವ ಮುತುವರ್ಜಿಯಿಂದ ತಾನೇ ನಿಂತು ಪ್ರತಿಯೊಂದು ವಸ್ತುವಿನ ಕಡೆಗೂ ಗಮನವಿತ್ತಳು. ಕೆಲವು ಪ್ರಾಂತಗಳಲ್ಲಿ, ತಾಯಿ ತನ್ನ ಮಗಳನ್ನು ಅತ್ತೆಯ ಮನೆಗೆ ಕಳುಹಿಸಿಕೊಡುವಾಗ ಹಲ್ಲುಜ್ಜುವ ಕಡ್ಡಿಯಿಂದ ಹಿಡಿದು ದೀಪದ ಬತ್ತಿಯವರೆಗೆ ಪ್ರತಿಯೊಂದು ಸಾಮಾನನ್ನೂ ಕಟ್ಟಿಕೊಡುವ ವಾಡಿಕೆಯಿದೆ. ಜಗದಂಬಾಳ ಕಾಳಜಿಯೂ ಹಾಗೆಯೇ ಇತ್ತು.

ಶ್ರೀರಾಮಕೃಷ್ಣರೊಂದಿಗೆ ಅವರ ಅನುಚರ-ಅಂಗರಕ್ಷಕ ಹೃದಯರಾಮನಿದ್ದೇ

ಇದ್ದ. ಜೊತೆಗೆ ಭೈರವಿ ಬ್ರಾಹ್ಮಣಿಯೂ ಹೊರಟುನಿಂತಳು. ಆದರೆ ಚಂದ್ರಮಣೀದೇವಿ ಮಾತ್ರ ಊರಿಗೆ ಬರಲು ಇಚ್ಛಿಸಲಿಲ್ಲ. ಕಡೆಗಾಲವನ್ನು ಗಂಗಾತೀರದಲ್ಲಿ ಕಳೆಯಬೇಕೆಂಬ ತನ್ನ ಸಂಕಲ್ಪಕ್ಕೆ ಅನುಗುಣವಾಗಿ ದಕ್ಷಿಣೇಶ್ವರದಲ್ಲೇ ಉಳಿದುಕೊಂಡಳು. ಶುಭ ಮುಹೂರ್ತದಲ್ಲಿ ಮೂವರೂ ಹೊರಟರು. ಮಥುರನೂ ಅವನ ಕುಟುಂಬವರ್ಗ ದವರೂ ಭಾರವಾದ ಹೃದಯದಿಂದ ಶ್ರೀರಾಮಕೃಷ್ಣರನ್ನು ಬೀಳ್ಕೊಂಡರು.

ಶ್ರೀರಾಮಕೃಷ್ಣರು ಕಾಮಾರಪುಕುರಕ್ಕೆ ಹೋಗಿ ಆಗಲೇ ಎಂಟು ವರ್ಷವಾಗಿತ್ತು. ಎಂಟು ವರ್ಷವೆಂದರೆ ಸಾಕಷ್ಟು ದೀರ್ಘಾವಧಿಯೇ. ಈ ಅವಧಿಯಲ್ಲಿ ಅವರ ಜೀವನದಲ್ಲಿ ನಡೆದುಹೋದ ಅದ್ಭುತ ಘಟನೆಗಳು ಅದೆಷ್ಟು! ಎಂತೆಂಥ ಬದಲಾವಣೆ ಗಳೆಲ್ಲ ಆಗಿಹೋದುವು! ಎಂತೆಂಥ ಚಂಡಮಾರುತಗಳೆಲ್ಲ ಬೀಸಿದುವು! ಆ ಕಾಲದಲ್ಲಿ ಅವರು ನಡೆಸಿದ ಸಾಧನೆಗಳೇನು, ಪಡೆದ ಸಿದ್ಧಿಗಳೇನು! ಆದರೆ ಇತ್ತ ಕಾಮಾರ ಪುಕುರಕ್ಕೆ ತಲುಪಿದ್ದ ಸುದ್ದಿಯೇ ಬೇರೆ—'ಅವರು ಒಮ್ಮೆ ಹೆಂಗಸರಂತೆ ಸೀರೆ ರವಿಕೆ ತೊಟ್ಟು 'ಹರಿ, ಹರಿ' ಎಂದು ಕೂಗುತ್ತಿದ್ದರಂತೆ! ಇನ್ನೊಮ್ಮೆ ಜುಟ್ಟು-ಜನಿವಾರ ಕಿತ್ತು ಹಾಕಿ ಸಂನ್ಯಾಸಿಯಾದರಂತೆ! ಮೊನ್ನೆ ತಾನೆ ಸಾಬರ ಹಾಗೆ ವೇಷ ಧರಿಸಿ 'ಅಲ್ಲಾ, ಅಲ್ಲಾ' ಎನ್ನುತ್ತಿದ್ದರಂತೆ! ಒಟ್ಟಿನಲ್ಲಿ ಅವರಿಗೆ ಹುಚ್ಚು ಹಿಡಿದಿದೆಯಂತೆ!' ಹೀಗೇ ಏನೇನೋ ಸುದ್ದಿ.

ಆದರೆ ಈಗ ಶ್ರೀರಾಮಕೃಷ್ಣರು ಊರಿಗೆ ಬರುತ್ತಿದ್ದಂತೆ ನೆಂಟರಿಷ್ಟರಿಗೆಲ್ಲ ಅತೀವ ಸಮಾಧಾನ, ಸಂತೋಷವಾಯಿತು. ಜನರ ಆಡಿಕೆಗೆ ಆಧಾರವಿಲ್ಲ ಎಂದು ಅರಿತರು. ಶ್ರೀರಾಮಕೃಷ್ಣರಲ್ಲಿ ಅದೇ ನಿಷ್ಕಪಟತೆ, ಅದೇ ವಿನಮ್ರತೆ, ಅದೇ ಧರ್ಮನಿಷ್ಠೆ, ಅದೇ ಭಕ್ತಿಭಾವೋತ್ಕರ್ಷತೆ—ಎಲ್ಲವೂ ಹಿಂದಿನಂತೆಯೇ. ಬುದ್ಧಿಭ್ರಮಣೆಯ ಯಾವ ಲಕ್ಷ ಣವೂ ಕಾಣಲಿಲ್ಲ. ಆದರೆ ಈಗ ಅವರಲ್ಲಿ ಯಾವುದೋ ಒಂದು ನೂತನ ವಿಶಿಷ್ಟ ಭಾವ; ಯಾವಾಗಲೂ ಒಂದು ಬಗೆಯ ಅಪೂರ್ವ, ಅನಿರ್ವಚನೀಯ ದಿವ್ಯಾವೇಶ! ಅದರಿಂದಾಗಿ ಅವರ ವ್ಯಕ್ತಿತ್ವ ಹೇಗೆ ದೇದೀಪ್ಯಮಾನವಾಗಿ ಬೆಳಗುತ್ತಿತ್ತೆಂದರೆ, ಇತರರಿಗೆ ಅವರ ಬಳಿಗೆ ಹೋಗುವುದಕ್ಕೇ ಸ್ವಲ್ಪ ಅಳುಕುಂಟಾಗುತ್ತಿತ್ತು. ಇನ್ನು, ಸಾಂಸಾರಿಕ ವಿಷಯವಾಗಿ—ಅವರು ತಾವಾಗಿಯೇ ಕೇಳಿದ ಹೊರತು—ಅವರೊಂದಿಗೆ ಮಾತ ನಾಡಲು ಮನೆಯವರಿಗೂ ಸಾಧ್ಯವಿಲ್ಲ! ಆದರೆ ಅವರ ಸಾನ್ನಿಧ್ಯದಲ್ಲಿರುವವರೆಗೂ ಇತರರಿಗೆ ತಮ್ಮ ಮನಸ್ಸಿನಿಂದ ಸಕಲ ಕ್ಲೇಶ-ಕಲ್ಮಷಗಳೂ ಮಾಯವಾಗಿ ಆನಂದ-ಶಾಂತಿಗಳ ಸ್ಥಿರ ಪ್ರವಾಹವೊಂದು ಅಂತರ್ಯದಲ್ಲಿ ಹರಿಯುತ್ತಿರುವ ಅನುಭವವಾಗು ತ್ತಿತ್ತು. ಆದ್ದರಿಂದ, ಅವರಿಂದ ಸ್ವಲ್ಪ ಹೊತ್ತು ದೂರವಾದರೂ ಸಾಕು, ಪುನಃ ಯಾವಾಗ ಅವರ ಸಮೀಪಕ್ಕೆ ಹೋದೇವೋ ಎಂಬ ಕಾತರತೆ! ಹೀಗೆ, ಬಹುದಿನಗಳ ಮೇಲೆ ಶ್ರೀರಾಮಕೃಷ್ಣರನ್ನು ತಮ್ಮ ನಡುವೆ ಕಂಡುಕೊಂಡ ಆ ಬಡ ಕುಟುಂಬದಲ್ಲೀಗ ಆನಂದದ ಸಂತೆಯೇ ಸೇರಿದಂತಾಗಿತ್ತು.

ಈಗ ಕಾಮಾರಪುಕುರದ ಆ ಕುಟುಂಬದಲ್ಲಿದ್ದವರೆಂದರೆ ಕ್ಷುದಿರಾಮನ ಎರಡ ನೆಯ ಮಗ ರಾಮೇಶ್ವರ, ಅವನ ಹೆಂಡತಿ, ಹಾಗೂ ಇವರ ಮಕ್ಕಳಾದ ರಾಮಲಾಲ, ಲಕ್ಷ್ಮೀದೇವಿ ಮತ್ತು ಶಿವರಾಮ. ಅಲ್ಲದೆ ಶ್ರೀರಾಮಕೃಷ್ಣರ ಹತ್ತಿರದ ಬಂಧುಗಳೆಲ್ಲ ಸಿಹೋರ್, ಗೌರ್ ಹಾಟಿ ಮುಂತಾದ ಸುತ್ತಮುತ್ತಲ ಗ್ರಾಮಗಳಲ್ಲೇ ಇದ್ದು ಆಗಾಗ ಬಂದುಹೋಗುತ್ತಿದ್ದರು. ರಾಮಕುಮಾರನ ಏಕಮಾತ್ರ ಪುತ್ರ ಅಕ್ಷಯರಾಮ

ದಕ್ಷಿಣೇಶ್ವರದಲ್ಲಿ ವಿಷ್ಣುಮಂದಿರದ ಅರ್ಚಕನಾಗಿದ್ದ.

ಬಹುಕಾಲದ ಮೇಲೆ ಮನೆಯ ಕಿರಿಯ ಮಗ ಮನೆಗೆ ಬಂದಿರುವ ಈ ಸಮಯದಲ್ಲಿ ಸೊಸೆಯೂ ಇರುವಂತಾದರೆ ಅದೆಷ್ಟು ಚೆನ್ನ! ಆನಂದದ ಬಟ್ಟಲು ತುಂಬಿ ಹರಿಯಲು ಅದೊಂದೇ ಬಾಕಿ! ಸರಿ, ಶಾರದಾಮಣಿಯನ್ನು ಕರೆತರಲು ಕೂಡಲೇ ಜಯರಾಂಬಾಟಿಗೆ ಕರೆ ಹೋಯಿತು. ಶ್ರೀರಾಮಕೃಷ್ಣರಿಗೂ ಈ ವಿಷಯ ತಿಳಿಯಿತು. ಆ ಬಗ್ಗೆ ಅವರು ಸಂತಸವನ್ನಾಗಲಿ ಆಕ್ಷೇಪಣೆಯನ್ನಾಗಲಿ ವ್ಯಕ್ತಪಡಿಸಲಿಲ್ಲ. ಕಾಮಾರಪುಕುರದಿಂದ ಜಯರಾಂಬಾಟಿಗೆ ಹೆಚ್ಚು ದೂರವೇನಿಲ್ಲ—ಸುಮಾರು ನಾಲ್ಕು ಮೈಲಿ ಅಷ್ಟೆ. ಬಹುಶಃ ಆ ದಿನವೋ ಅಥವಾ ಮಾರನೇ ದಿನವೋ ಬಂದ ಶಾರದೆಯನ್ನು ಮನೆಯವರು ತುಂಬ ಆದರದಿಂದ ಬರಮಾಡಿಕೊಂಡರು.

ಶಾರದೆಗೆ ಈಗ ಹದಿನಾಲ್ಕು ವರ್ಷ ನಡೆಯುತ್ತಿದೆ. ಒಂದು ದೃಷ್ಟಿಯಿಂದ, ಇದೇ ಪತಿ-ಪತ್ನಿಯರ ಪ್ರಥಮ ಸಮಾಗಮ. ಏಕೆಂದರೆ, ಶ್ರೀರಾಮಕೃಷ್ಣರು ಕಳೆದ ಬಾರಿ ಕಾಮಾರಪುಕುರಕ್ಕೆ ಬಂದಿದ್ದಾಗಲೇ ಒಮ್ಮೆ ಆಕೆಯ ಮನೆಗೆ ಹೋಗಿದ್ದರಾದರೂ ಆಗ ಆಕೆಗೆ ಕೇವಲ ಏಳು ವರ್ಷ; 'ಮದುವೆ' 'ಗಂಡ' ಎನ್ನುವ ಶಬ್ದಗಳ ಅರ್ಥವೆಲ್ಲ ತಿಳಿದಿರುವ ವಯಸ್ಸಲ್ಲ ಅದು. ಆಕೆ ತನ್ನ ಹದಿಮೂರನೆಯ ವಯಸ್ಸಿನಲ್ಲಿ ಒಮ್ಮೆ ಕಾಮಾರಪುಕುರಕ್ಕೆ ಬಂದು ಒಂದು ತಿಂಗಳು ಉಳಿದುಕೊಂಡಿದ್ದಳು. ಆದರೆ ಶ್ರೀರಾಮಕೃಷ್ಣರೂ ಚಂದ್ರಮಣಿಯೂ ದಕ್ಷಿಣೇಶ್ವರದಲ್ಲಿದ್ದುದರಿಂದ ಅವರನ್ನು ನೋಡಲಾಗಿರಲಿಲ್ಲ. ಮತ್ತೆ ಸುಮಾರು ಆರು ತಿಂಗಳ ಮೇಲೆ ಬಂದು ಅತ್ತೆಯ ಮನೆಯಲ್ಲಿ ಒಂದು ತಿಂಗಳಿದ್ದು ಹೋಗಿದ್ದಳು. ಇದಾಗಿ ಮೂರ್ನಾಲ್ಕು ತಿಂಗಳಾಗುವಷ್ಟರಲ್ಲಿ ಶ್ರೀರಾಮಕೃಷ್ಣರು ಬಂದದ್ದರಿಂದ ಈಗ ಮತ್ತೆ ಕಾಮಾರಪುಕುರಕ್ಕೆ ಬಂದಿದ್ದಾಳೆ.

ಈ ಬಾರಿ ಶ್ರೀರಾಮಕೃಷ್ಣರು ಕಾಮಾರಪುಕುರದಲ್ಲಿ ಆರೇಳು ತಿಂಗಳು ವಾಸ ಮಾಡಿದರು. ಅವರ ಬಾಲ್ಯಸ್ನೇಹಿತರೂ ಗ್ರಾಮದ ಇತರ ಪರಿಚಿತ ಸ್ತ್ರೀಪುರುಷರೂ ಅತ್ಯಂತ ಸಂತಸದಿಂದ ಅವರೊಡನೆ ಹಿಂದಿನ ಸ್ನೇಹ-ಸಲಿಗೆಗಳಿಂದ ಬೆರೆಯಲು ಧಾವಿಸಿದರು. ಶ್ರೀರಾಮಕೃಷ್ಣರೂ ಬಹುಕಾಲದ ಮೇಲೆ ಇವರನ್ನೆಲ್ಲ ನೋಡಿ ಸಂತುಷ್ಟರಾದರು. ಆದರೆ ಅವರೀಗ ಬೇರೆಯೇ ವ್ಯಕ್ತಿಯೆನ್ನಬೇಕು! ಅವರ ದೃಷ್ಟಿಕೋನ ಅಷ್ಟರಮಟ್ಟಿಗೆ ಬದಲಾಗಿದೆ! ವಯೋವೃದ್ಧನೂ ಜ್ಞಾನವೃದ್ಧನೂ ಆದ ವ್ಯಕ್ತಿಯೊಬ್ಬ ಪುಟ್ಟ ಮಕ್ಕಳೊಂದಿಗೆ ಬೆರೆತು ಆಟವಾಡಿ ಆನಂದಿಸುವಂತೆ ಶ್ರೀರಾಮಕೃಷ್ಣರು ಆ ಹಳ್ಳಿಯ ಮುಗ್ಧ ಜನರೊಂದಿಗೆ ಬೆರೆತು ಆನಂದಿಸಿದರು. ಆದರೆ, ಇಹಜೀವನದ ನಶ್ವರತೆಯನ್ನು ಮನಗಾಣುವಂತೆ ಮತ್ತು ಸಂಸಾರದಲ್ಲಿದ್ದೂ ಕ್ರಮೇಣ ಆತ್ಮಸಂಯಮವನ್ನು ರೂಢಿಸಿಕೊಂಡು ಭಗವಂತನಲ್ಲಿ ಶರಣಾಗುವಂತೆ ಅವರು ಆ ಹಳ್ಳಿಯ ಜನರಿಗೆ ತಿಳಿವಳಿಕೆ ನೀಡುತ್ತಿದ್ದರು.

ಆ ಜನಗಳಲ್ಲಿ ಹೆಚ್ಚಿನವರು ಅನಕ್ಷರಸ್ಥರು, ಅವಿದ್ಯಾವಂತರು. ಇನ್ನು ಆಧ್ಯಾತ್ಮಿಕ ವಿಷಯಗಳಲ್ಲಿ ತಿಳಿವಳಿಕೆಯಿದ್ದವರು ಕೂಡ ತೀರಾ ಅಪರೂಪವೆನ್ನಬೇಕು. ಆದರೆ ಆ ಗ್ರಾಮದಲ್ಲಿದ್ದುಕೊಂಡೇ ಆಧ್ಯಾತ್ಮಿಕ ಜೀವನದಲ್ಲಿ ನಿರೀಕ್ಷಣೆಗೆ ಮೀರಿ ಮುಂದುವರಿದ ಕೆಲವರನ್ನು ಶ್ರೀರಾಮಕೃಷ್ಣರು ಕಂಡರು; ಮತ್ತು ಭಗವಂತನ ಅಚಿಂತ್ಯ ಮಹಿಮೆಯನ್ನು ಭಾವಿಸುತ್ತ ಮುಗ್ಧರಾದರು. ಆ ವಿಷಯವಾಗಿ ಅವರೊಂದು ಘಟನೆಯನ್ನು ಹೇಳುತ್ತಿದ್ದರು:

ಒಂದು ದಿನ ಶ್ರೀರಾಮಕೃಷ್ಣರು ಮಧ್ಯಾಹ್ನದ ಊಟವಾದ ಮೇಲೆ ಕೋಣೆಯಲ್ಲಿ ವಿಶ್ರಮಿಸುತ್ತಿದ್ದರು. ನೆರೆಹೊರೆಯ ಕೆಲವು ಹೆಂಗಸರು ಅವರನ್ನು ಕಾಣಲು ಬಂದಿದ್ದರು. ಆಧ್ಯಾತ್ಮಿಕ ವಿಷಯವಾಗಿ ಸಂಭಾಷಿಸುತ್ತ ನಾನಾ ಪ್ರಶ್ನೆಗಳಿಗೆ ಪರಿಹಾರವನ್ನು ಪಡೆದುಕೊಳ್ಳುತ್ತಿದ್ದರು. ಆಧ್ಯಾತ್ಮಿಕ ವಿಚಾರವೆಂದ ಮೇಲೆ ಕೇಳಬೇಕೆ? ಶ್ರೀರಾಮಕೃಷ್ಣರು ಬಾರಿಬಾರಿಗೂ ಸಮಾಧಿಗೇರುತ್ತಿದ್ದರು. ಆಗ ಅವರಿಗೆ, ಸಚ್ಚಿದಾನಂದಸಾಗರದಲ್ಲಿ ಕ್ರೀಡಿಸುವ ಮೀನು ತಾವೆಂಬ ಅನುಭವವಾಗುತ್ತಿತ್ತು. ಹೀಗೆ ಒಂದು ಸಂದರ್ಭದಲ್ಲಿ ಅವರು ಆನಂದಿತರಾಗಿ ಸಮಾಧಿಸ್ಥಿತಿಗೇರಿದರು. ಆದರೆ ಶ್ರೀರಾಮಕೃಷ್ಣರ ಆ ಸ್ಥಿತಿಯನ್ನು ನೋಡಿ ತಮಗೆ ಅಭ್ಯಾಸವಾಗಿಹೋಗಿದ್ದರಿಂದಲೋ ಏನೋ, ಅಲ್ಲಿದ್ದ ಹೆಂಗಸರು ಸ್ವಲ್ಪವೂ ಲಕ್ಷಿಸದೆ ತಮತಮಗೆ ತೋರಿದಂತೆ ಮಾತನಾಡುತ್ತ ಗಲಭೆಯೆಬ್ಬಿಸಿದರು. ಆಗ ಅವರಲ್ಲೊಬ್ಬಳು ಮಾತ್ರ, "ಶ್ ಶ್! ಸುಮ್ಮನಿರಿ! ಠಾಕೂರರು ಈಗ ಒಂದು ಮೀನಿನಂತೆ ಸಚ್ಚಿದಾನಂದಸಾಗರದಲ್ಲಿ ಈಜಾಡುತ್ತಿದ್ದಾರೆ. ನಾವು ಗಲಾಟೆ ಮಾಡಿದರೆ ಅವರ ಆನಂದಕ್ಕೆ ಅಡಚಣೆಯುಂಟಾಗುತ್ತದೆ!" ಎನ್ನುತ್ತ ಇತರರನ್ನು ಸುಮ್ಮನಾಗಿಸಿದಳು. ಅವಳ ಮಾತಿನಲ್ಲಿ ಯಾರಿಗೂ ನಂಬಿಕೆ ಬರಲಿಲ್ಲ; ಆದರೂ ತತ್ಕಾಲಕ್ಕೆ ಸುಮ್ಮನಾದರು. ಶ್ರೀರಾಮಕೃಷ್ಣರು ಪ್ರಕೃತಿಸ್ಥರಾದ ಮೇಲೆ ಕೆಲವು ಹೆಂಗಸರು ಕೇಳಿದರು, "ಈಕೆ ಈ ವಿಷಯವಾಗಿ ಹೀಗೆಂದಳು, ಅದು ನಿಜವೆ?" ಎಂದು. ಆಗ ಅವರು ವಿಸ್ಮಯಭರಿತರಾಗಿ, "ಅವಳು ಹೇಳಿದ್ದು ಸಂಪೂರ್ಣ ಸತ್ಯ. ಆದರೆ, ಏನಾಶ್ಚರ್ಯ! ಆ ವಿಷಯವನ್ನು ಅವಳು ಹೇಗೆ ಅರಿತುಕೊಂಡಳು?" ಎಂದುದ್ಗರಿಸಿದರು.

ಆದರೂ ಕಾಮಾರಪುಕುರದ ಜನಜೀವನವೀಗ ಶ್ರೀರಾಮಕೃಷ್ಣರಿಗೆ ಏನೋ ಒಂದು ರೀತಿಯಲ್ಲಿ ಹೊಸತಾಗಿ, ಸ್ವಲ್ಪ ತಮಾಷೆಯಾಗಿ ತೋರುತ್ತಿತ್ತು. ಬಹಳ ವರ್ಷ ಪರದೇಶವೊಂದರಲ್ಲಿ ಇದ್ದು ಸ್ವಸ್ಥಳಕ್ಕೆ ಹಿಂದಿರುಗಿದವನಿಗೆ ಎಲ್ಲ ವಿಷಯಗಳೂ ವ್ಯಕ್ತಿಗಳೂ ಹೊಸದಾಗಿ ತೋರುವುದಿಲ್ಲವೆ? ಹಾಗೆ.

ಕಾಮಾರಪುಕುರದ ಸ್ತ್ರೀಪುರುಷರನ್ನೆಲ್ಲ ಶ್ರೀರಾಮಕೃಷ್ಣರು ಎಂತಹ ಅದ್ಭುತವಾದ ಪ್ರೇಮಪಾಶದಿಂದ ಕಟ್ಟಿಹಾಕಿದ್ದರೆಂಬುದನ್ನು ಕಂಡರೆ ವಿಸ್ಮಯವಾಗದಿರದು ! ಗ್ರಾಮದ ಜಮೀನ್ದಾರರಾದ ಲಾಹಾ ಮನೆಯವರಿಂದ ಹಿಡಿದು, ಬ್ರಾಹ್ಮಣ, ಕಮ್ಮಾರ, ಬಡಗಿ, ಅಕ್ಕಸಾಲಿಗ ಮೊದಲಾದ ಎಲ್ಲ ಜಾತಿಗಳಿಗೆ ಸೇರಿದ ಜನರೂ ಅವರ ಮೇಲಿನ ಭಕ್ತಿಪೂರ್ಣ ಪ್ರೇಮದಿಂದ ಬಿಗಿಯಲ್ಪಟ್ಟಿದ್ದರು. ಧರ್ಮದಾಸ ಲಾಹಾನ ವಿಧವೆ ತಂಗಿ ಪ್ರಸನ್ನೆ, ಬಾಲ್ಯ ಸ್ನೇಹಿತ ಗಯಾವಿಷ್ಣು, ಶ್ರೀರಾಮಕೃಷ್ಣರನ್ನು ಅವರ ಬಾಲ್ಯದಿಂದಲೂ ಪೂಜ್ಯ ದೃಷ್ಟಿಯಿಂದ ಕಾಣುತ್ತಿದ್ದ ಸರಳ ಶ್ರದ್ಧಾವಂತ ಶ್ರೀನಿವಾಸ ಶಾಂಖಾರಿ, ಪೈನೆ ಕುಟುಂಬದ ಧರ್ಮನಿಷ್ಠ ಮಹಿಳೆಯರು, ಭಿಕ್ಷಾಮಾತೆ-ಕಮ್ಮಾರಗಿತ್ತಿ ಧನಿ—ಇವರೆಲ್ಲ ತಮ್ಮ ಪ್ರಾಣಪ್ರಿಯರಾದ ಶ್ರೀರಾಮಕೃಷ್ಣರ ದಿವ್ಯ ಸಾನ್ನಿಧ್ಯ ದೊರೆತುದಕ್ಕಾಗಿ ಅತೀವ ಸಂತಸಗೊಂಡರು.

ಶ್ರೀರಾಮಕೃಷ್ಣರು ಕಾಮಾರಪುಕುರದಲ್ಲಿದ್ದಷ್ಟು ದಿನವೂ ಅವರನ್ನು ಸುಮ್ಮನೆ ನೋಡಲು, ಇಲ್ಲವೆ ಅವರ ಬಾಯಿಂದ ನಾಲ್ಕು ಮಾತುಗಳನ್ನು ಕೇಳಲು ಜನ ನೆರೆಯುತ್ತಿದ್ದರು. ಮುಂಜಾನೆಯಿಂದ ಸಂಜೆಯವರೆಗೂ ಜನವೋ ಜನ ! ಹೆಂಗಸರು ಗಂಡಸರು ಮಕ್ಕಳು ಮುದುಕರು—ಎಲ್ಲರೂ !

ಸೂರ್ಯೋದಯವಾಗುವುದನ್ನೇ ಕಾಯುತ್ತಿದ್ದಂತೆ, ನೆರೆಹೊರೆಯ ಹೆಂಗಸರೆಲ್ಲ ಸ್ನಾನಕ್ಕಾಗಿ ಹಲ್ದಾರ ಕೆರೆಗೆ ಬರುತ್ತಿದ್ದರು. ಮೊದಲು, ತಾವು ತಂದ ಕೊಡಗಳಲ್ಲಿ ನೀರು ತುಂಬಿಸಿ ದಡದಲ್ಲಿರಿಸುತ್ತಿದ್ದರು. ಬಳಿಕ, ಎದುರಿನಲ್ಲೇ ಇರುವ 'ಚಟರ್ಜಿಗಳ ಮನೆ'ಗೆ (ಶ್ರೀರಾಮಕೃಷ್ಣರ ಮನೆಗೆ) ಹೋಗಿ ಕುಳಿತುಬಿಡುತ್ತಿದ್ದರು. ಇದು ಅವರ ಪ್ರತಿದಿನದ ಕಾರ್ಯಕ್ರಮ. ಶ್ರೀರಾಮಕೃಷ್ಣರೊಂದಿಗೂ ಅವರ ಮನೆಯ ಹೆಂಗಸರೊಂದಿಗೂ ಮಾತನಾಡುತ್ತ ಸುಮಾರು ಒಂದು ಗಂಟೆ ಹೊತ್ತು ಕಳೆದು ಸ್ನಾನಕ್ಕೆ ಹೋಗುತ್ತಿದ್ದರು. ಅಲ್ಲದೆ, ಹಿಂದಿನ ರಾತ್ರಿ ಮನೆಯಲ್ಲಿ ಏನಾದರೂ ವಿಶೇಷ ಭಕ್ಷ್ಯವನ್ನು ಮಾಡಿದ್ದರೆ, ಅದರ ಅಗ್ರಭಾಗವನ್ನು ತೆಗೆದಿಟ್ಟಿದ್ದು ಬೆಳಗ್ಗೆ ತಂದುಕೊಡುತ್ತಿದ್ದರು. ಇವಾದ ಮೇಲೆ, ಹೆಂಗಸರು ಮನೆಗಳಿಗೆ ತೆರಳಿ ಬೆಳಗಿನ ಅಡಿಗೆಯಲ್ಲಿ ನಿರತರಾಗಿದ್ದಾಗ, ಸುತ್ತಮುತ್ತಲಿನ ಗಂಡಸರೆಲ್ಲ ಬಂದು, ತಮಗೆ ಬೇಕೆಂಬಷ್ಟು ಹೊತ್ತು ಶ್ರೀರಾಮಕೃಷ್ಣರೊಂದಿಗೆ ಮಾತನಾಡುತ್ತ ಕುಳಿತಿರುತ್ತಿದ್ದರು. ಮಧ್ಯಾಹ್ನ ಪುರುಸೊತ್ತಾದಾಗ ಹೆಂಗಸರೆಲ್ಲ ಮತ್ತೆ ಹಾಜರು ! ಸಂಜೆಯಾದ ಮೇಲೆ ಪುನಃ ಗಂಡಸರು ! ಹೆಂಗಸರಾಗಲಿ ಗಂಡಸರಾಗಲಿ, ಬಹಳ ದೂರದಿಂದ ಬರುವವರಾದರೆ, ಮಧ್ಯಾಹ್ನವೇ ಬಂದು ಸಂಜೆಯೊಳಗೆ ಹಿಂದಿರುಗುತ್ತಿದ್ದರು. ಪುನಃ ಬೆಳಗ್ಗೆ ಅಷ್ಟು ಮುಂಚೆ ಬರುತ್ತಿದ್ದ ಹೆಂಗಸರನ್ನು ಕಂಡು ಶ್ರೀರಾಮಕೃಷ್ಣರು ಪರಿಹಾಸ ಮಾಡುತ್ತಾರೆ:

"ವೃಂದಾವನದಲ್ಲಿ ನಾನಾ ಸಮಯದಲ್ಲಿ ನಾನಾ ಭಾವಗಳಿಂದ ಶ್ರೀಕೃಷ್ಣನೊಡನೆ ಗೋಪಿಯರ ಮಿಲನವಾಗುತ್ತಿತ್ತು. ನದಿಯಿಂದ ನೀರು ತರಲು ಹೋದಾಗ ಗೋಷ್ಠ ಮಿಲನ, ಸಂಜೆ ಹೊತ್ತು ಕೃಷ್ಣನು ಹಸುಗಳನ್ನು ಮೇಯಿಸಿಕೊಂಡು ಮನೆಗೆ

ಹಿಂದೆರಳುವಾಗ ಗೋಧೂಳೀ ಮಿಲನ, ತರುವಾಯ ರಾತ್ರಿ ಹೊತ್ತು ರಾಸನೃತ್ಯ ಮಿಲನ, ಇತ್ಯಾದಿ. ನಿಮ್ಮ ಮಿಲನವನ್ನು ಸ್ನಾನಮಿಲನವೆಂದು ಕರೆಯೋಣವೆ ?''

ಇಂಥ ಮಾತುಗಳನ್ನು ಕೇಳಿ ಅವರೆಲ್ಲ ಬಿದ್ದುಬಿದ್ದು ನಗುತ್ತಿದ್ದರು.

ಶ್ರೀರಾಮಕೃಷ್ಣರು ಪ್ರತಿದಿನವೂ ಸಂಜೆಯ ಹೊತ್ತಿಗೆ ತಂಗಾಳಿಯನ್ನು ಆಸ್ವಾದಿಸುತ್ತ ಮನೆಯ ಮುಂಬಾಗಿಲಲ್ಲಿ ಕುಳಿತುಕೊಳ್ಳುತ್ತಿದ್ದರು. ತಮ್ಮದೇ ಆದ ಭಾವದಲ್ಲಿ ಮುಳುಗಿ, ಅತ್ತಿತ್ತ ಓಡಾಡುವ ಜನರ ರೀತಿ ನೀತಿಗಳನ್ನು ಗಮನಿಸುತ್ತಿದ್ದರು. ಶ್ರೀರಾಮಕೃಷ್ಣರನ್ನು ಕಂಡೊಡನೆ, ನೀರು ತರಲು ಕೆರೆಗೆ ಹೊರಟಿದ್ದ ಹೆಂಗಳೆಯರಿಗೆ ಬೇರೆಲ್ಲವೂ ಮರೆತೇಹೋಗುತ್ತಿತ್ತು. ಕೊಡಗಳನ್ನೆಲ್ಲ ಅಲ್ಲೇ ಮುಂಭಾಗದಲ್ಲಿಟ್ಟು ಬಂದು ಅವರೊಡನೆ ಮಾತನಾಡುತ್ತ, ಅವರ ಹಾಡುಗಳನ್ನು ಆಲಿಸುತ್ತ ಮೈಮರೆಯುತ್ತಿದ್ದರು.

ಇವರೆಲ್ಲ ಹೀಗೆ ತಮ್ಮ ಕೆಲಸಕಾರ್ಯಗಳನ್ನು ಬಿಟ್ಟು ಕುಳಿತುಕೊಳ್ಳುವುದನ್ನು ಕಂಡು ಶ್ರೀರಾಮಕೃಷ್ಣರೇ ಆಗಾಗ ಅವರನ್ನು ಕೇಳುವುದಿತ್ತು, ''ಏನಮ್ಮ, ಮನೆಯಲ್ಲಿ ಯಾವ ಕೆಲಸವನ್ನೂ ಅರ್ಧಕ್ಕೆ ಬಿಟ್ಟುಬಂದಿಲ್ಲ ತಾನೆ ?'' ಎಂದು. ಒಂದು ದಿನ ಅವರು ಹಾಗೆಂದಾಗ ಒಬ್ಬಳು ಹುಡುಗಿ ನಿಶ್ಚಿಂತೆಯಿಂದ ಉತ್ತರಿಸಿದಳು: ''ನಮ್ಮ ಮನೆಯಲ್ಲಿ ಒಂದು ಹಸು ಇದೆ. ನೀವು ಊರಿಗೆ ಬರುವ ವಿಷಯ ಗೊತ್ತಾದೊಡನೆಯೆ, ಒಂದು ತಿಂಗಳಿಗಾಗುವಷ್ಟು ಹುಲ್ಲು ಕೊಯ್ದು ತಂದು ಕೊಟ್ಟಿಗೆಯನ್ನೆಲ್ಲ ತುಂಬಿಸಿಬಿಟ್ಟೆ !''

ಇನ್ನೊಂದು ದಿನ ಮಾತಿನ ಮಧ್ಯೆ ಅವರು ಒಬ್ಬಳನ್ನು ಕೇಳಿದರು, ''ನಿನ್ನ ಮಗು ಹೇಗಿದೆ ?'' 'ಮಗು' ಎಂದೊಡನೆಯೇ ಅವಳು ಗಡಿಬಿಡಿಯಿಂದ ಎದ್ದು ಹೊರಟಳು, ''ಅಯ್ಯೋ, ಮರೆತೇಬಿಟ್ಟೆನಲ್ಲಪ್ಪಾ ! ಮಗುವನ್ನು ಪಕ್ಕದ ಮನೆಯಲ್ಲಿ ಬಿಟ್ಟು ಬಂದಿದ್ದೆ !'' ಎನ್ನುತ್ತ. ಅವಳು ಒಂದು ಮೈಲಿ ದೂರದಿಂದ ಇಲ್ಲಿಗೆ ಬಂದಿದ್ದಳಂತೆ !

ಒಮ್ಮೆ ಹೀಗೇ ಕೆಲವಾರು ಹೆಣ್ಣುಮಕ್ಕಳು ಸೇರಿದ್ದಾಗ ಶ್ರೀರಾಮಕೃಷ್ಣರೆಂದರು: ''ಎಲ್ಲಿ, ಇವೊತ್ತು ನೀವು ಹಾಡಿ, ನಾನು ಕೇಳುತ್ತೇನೆ.'' ಎಲ್ಲರೂ ಸ್ತಬ್ಧರಾಗಿಬಿಟ್ಟರು. ಒಬ್ಬಳೂ ಬಾಯಿ ಬಿಚ್ಚಲಿಲ್ಲ. ಅವರ ಪೈಕಿ ಒಬ್ಬ ಹುಡುಗಿಯನ್ನು ಶ್ರೀರಾಮಕೃಷ್ಣರು ಬಹಳವಾಗಿ ಪ್ರೀತಿಸುತ್ತಿದ್ದರು. ಅವಳು ಎಂದಾದರೂ ಬರದಿದ್ದರೆ ಹೇಳಿಕಳಿಸಿ ಕರೆಸುತ್ತಿದ್ದರು. ಈಗ ಯಾರೂ ಹಾಡಲು ಮುಂದಾಗದ್ದನ್ನು ಕಂಡು, ಕಡೆಗೆ ಅವಳೇ ಹಾಡು ಶುರು ಮಾಡಿದಳು. ಅವಳದು ಕೀರಲು ದನಿ; ಅವಳಿಗೂ ಅದು ಗೊತ್ತು. ಆದರೂ ಠಾಕೂರರ ಮಾತನ್ನು ಮೀರಬಾರದು ಎಂಬ ಕಾರಣದಿಂದ ಹಾಡಿದಳು. ಅವಳ ದನಿಯನ್ನು ಕೇಳಿ ಎಲ್ಲರೂ ನಕ್ಕರು. ಆದರೆ ಅವಳು ಹಾಡನ್ನು ಮುಗಿಸಿದಾಗ ಶ್ರೀರಾಮಕೃಷ್ಣರು ಆನಂದದಿಂದ ಉದ್ಗರಿಸಿದರು: ''ನೋಡಿದಿರಾ, ಅವಳ ಭಕ್ತಿ ಎಷ್ಟು ದೊಡ್ಡದು ! ನಿಮ್ಮಲ್ಲೆಲ್ಲ ನಿಜವಾದ ಭಕ್ತಿಯಿರುವುದು ಅವಳೊಬ್ಬಳಿಗೇ !''

ಶ್ರೀರಾಮಕೃಷ್ಣರಿಗೆ ಪ್ರಾಪಂಚಿಕವಾದ ಮಾತುಕತೆಯನ್ನು ಮಾತ್ರ ಸಹಿಸಿಕೊಳ್ಳಲಾಗುತ್ತಿರಲಿಲ್ಲ. ಒಮ್ಮೆ ಕೆರೆಗೆ ಕೆಲವು ಹೆಂಗಸರು ಬಂದಿದ್ದರು. ಅವರೆಲ್ಲ 'ಹಾಲ್ದಾರ' ಕುಟುಂಬದವರು—ಶ್ರೀಮಂತರು, ದೊಡ್ಡಮನುಷ್ಯರು. ಆ ದಿನ ಮೀನಿನಿಂದ ಯಾವ ಯಾವ ಅಡಿಗೆ ಮಾಡಬೇಕು ಎಂಬ ಬಗ್ಗೆ ದೀರ್ಘವಾಗಿ ಚರ್ಚಿಸುತ್ತಿದ್ದರು. ಇವರ ಮಾತುಕತೆ ಶ್ರೀರಾಮಕೃಷ್ಣರ ಕಿವಿಗೆ ಬಿತ್ತು, ತಕ್ಷಣ ಹೃದಯುನನ್ನು ಕರೆದು ಹೇಳಿದರು:

''ನೋಡಿದೆಯಾ ಅವರನ್ನು ! ಬರೀ ಅಡಿಗೆಯ ವಿಚಾರವಾಗಿ ಹರಟೆ ಕೊಚ್ಚುತ್ತಿದ್ದಾರೆ. ಛೆ ! . . . ನಾನು ಹೋಗಿ ಅವರಿಗೆ ಹೇಳಿಬಿಡಲೆ—ಇಂಥ ಕಾಡುಹರಟೆ

ಯನ್ನೆಲ್ಲ ನಿಲ್ಲಿಸಿ ಅಂತ ?"

ಹೃದಯ ಗಾಬರಿಯಿಂದ ಹೇಳಿದ:

"ಅಯ್ಯೋ ಸುಮ್ಮನಿರು ಸದ್ಯ. ನಿನಗ್ಯಾಕೆ ಅವರ ಉಸಾಬರಿ. ಅವರೆಲ್ಲ ದೊಡ್ಡ ಮನುಷ್ಯರು ! ಏನು ಬೇಕಾದರೂ ಮಾಡಿಕೊಳ್ಳಲಿ."

ಶ್ರೀರಾಮಕೃಷ್ಣರು ಸುಮ್ಮನಾದರು. ಆದರೂ ಅಸಹನೆಯಿಂದ ಅತ್ತಲೇ ನೋಡುತ್ತಿದ್ದರು. ಹೃದಯ ಒಳಗೆ ಹೋದನೋ ಇಲ್ಲವೋ, ಸೀದಾ ಅವರ ಬಳಿಗೆ ಹೋಗಿ ಗದರಿದರು:

"ನೀವೇನು ಜೀವನವಿಡೀ ಹೀಗೇ ಮೀನಿನ ವಿಷಯವನ್ನೇ ಚರ್ಚೆ ಮಾಡುತ್ತಾ ಇದ್ದುಬಿಡುತ್ತೀರೋ ಅಥವಾ ದೇವರ ವಿಷಯವನ್ನೂ ಏನಾದರೂ ಮಾತನಾಡುತ್ತೀರೋ ?"

ಶ್ರೀರಾಮಕೃಷ್ಣರ ರೌದ್ರಾವತಾರವನ್ನು ಕಂಡ ಹೆಂಗಸರು ಮರುಮಾತನಾಡದೆ ತಲೆತಗ್ಗಿಸಿ ಅಲ್ಲಿಂದ ಹೊರಟುಬಿಟ್ಟರು.

ಕಾಮಾರಪುಕುರದಲ್ಲಿ ಮಾತ್ರವಲ್ಲ, ಶ್ರೀರಾಮಕೃಷ್ಣರು ಸುತ್ತಮುತ್ತಲ ಯಾವ ಹಳ್ಳಿಗೆ ಹೋದರೂ ಜನರು ಅವರನ್ನು ಸುತ್ತುಗಟ್ಟುತ್ತಿದ್ದರು. ಆದರೆ ಈ ಜನ ಹೀಗೇಕೆ ಮಾಡುತ್ತಾರೆ ಎಂಬುದು ಶ್ರೀರಾಮಕೃಷ್ಣರಿಗೇ ತಿಳಿದಿರಲಿಲ್ಲ. ಅಷ್ಟೇ ಅಲ್ಲ, ಬಹುಶಃ ಆ ಜನಗಳಿಗೂ ತಾವು ಅವರಲ್ಲೇನು ಕಂಡೆವೆಂದು ಹೇಳಲು ಸಾಧ್ಯವಿರಲಿಲ್ಲ! ಅವರ ಆ ಅಯಸ್ಕಾಂತೀಯ ಆಕರ್ಷಣೆಯ ಹಿಂದೆ ಅದೆಷ್ಟು ಅಂಶಗಳಿದ್ದಿರಬೇಕು! ಆ ನಯನ ಮನೋಹರ ರೂಪ, ಅಪೂರ್ವ ಮಂದಹಾಸ, ಮಾತು-ನಡವಳಿಕೆಗಳ ಮಾಧುರ್ಯ, ಎಲ್ಲಕ್ಕಿಂತ ಮಿಗಿಲಾಗಿ, ಉಕ್ಕಿ ಹರಿಯುತ್ತಿದ್ದ ಅವರ ಆಧ್ಯಾತ್ಮಿಕ ಶಕ್ತಿ, ಮತ್ತು ಉನ್ನತ ಆಧ್ಯಾತ್ಮಿಕ ತತ್ತ್ವಗಳನ್ನೂ ಉದಾತ್ತ ಜೀವನವಿಧಾನವನ್ನೂ ಆಡುಭಾಷೆಯಲ್ಲೇ ತಿಳಿಸಿಕೊಡುವ ಅವರ ಸಹಜ ಸಾಮರ್ಥ್ಯ—ಇವೆಲ್ಲ ಸೇರಿಕೊಂಡಿರಬೇಕೆಂಬುದು ಭಾವಿಸಿದರೆ ಗೊತ್ತಾಗುತ್ತದೆ.

ಮೊಟ್ಟಮೊದಲು, ಜನರನ್ನು ಅವರೆಡೆಗೆ ಸೆಳೆಯುತ್ತಿದ್ದ ಅಂಶವೆಂದರೆ ಅವರ ಬಾಹ್ಯರೂಪವೇ ಎನ್ನದೆ ವಿಧಿಯಿಲ್ಲ. ಏಕೆಂದರೆ, ನಿಜಕ್ಕೂ ಅದು ಅಷ್ಟು ಅಲೌಕಿಕ ವಾಗಿತ್ತು. ನಾವಿಂದು ಕಾಣುವ ಶ್ರೀರಾಮಕೃಷ್ಣರ ಭಾವಚಿತ್ರವು ಅಂದಿನ ಅವರ ರೂಪದ 'ಛಾಯೆ' ಮಾತ್ರವೇ. ಸಾಧನಾಕಾಲದ ಉತ್ತರಭಾಗದಲ್ಲಿ ಅವರ ರೂಪವು ಉಕ್ಕಿ ಚೆಲ್ಲುವಂತಿತ್ತು—ಅಂಥ ಚೆಲುವು, ಅಂಥ ಕಾಂತಿ! ಭಾವಭರಿತರಾದಾಗ ಆ ಕಾಂತಿಯು ಮತ್ತಷ್ಟು ಉಜ್ವಲವಾಗುತ್ತಿತ್ತು. ದೇಹದಿಂದ ಒಂದು ಪ್ರಭೆ ಹೊರಹೊಮ್ಮುತ್ತಿತ್ತು. ಅವರು ತಮ್ಮ ತೋಳಿನಲ್ಲಿ ಧರಿಸುತ್ತಿದ್ದ ಬಂಗಾರದ ಇಷ್ಟಕವಚದ ವರ್ಣವೂ ಅವರ ದೇಹವರ್ಣವೂ ಬಹಳ ಸೊಗಸಾಗಿ ಒಂದರೊಂದಿಗೊಂದು ಹೊಂದಿಕೆಯಾಗುತ್ತಿದ್ದುವು ಎಂದು ಶ್ರೀಮಾತೆ ಶಾರದಾದೇವಿಯವರು ಮುಂದೆ ಹೇಳುತ್ತಿದ್ದರು. ಅಲ್ಲದೆ ಶ್ರೀರಾಮ ಕೃಷ್ಣರೇ ಹೇಳುತ್ತಿದ್ದರು:

"ಆ ಕಾಲದಲ್ಲಿ ಈ ಶರೀರದ ರೂಪ ಅದೆಷ್ಟು ಮನೋಹರವಾಗಿತ್ತೆಂದರೆ, ಜನರು ಇದನ್ನು ಎವೆಯಿಕ್ಕದೆ ನೋಡುತ್ತ ನಿಲ್ಲುತ್ತಿದ್ದರು. ಮುಖವೂ ಎದೆಯೂ ಕೆಂಪೇರಿರುತ್ತಿದ್ದುವು. ದೇಹದಿಂದ ಒಂದು ಜ್ಯೋತಿ ಹೊರಸೂಸುತ್ತಿರುವಂತೆ ತೋರು ತ್ತಿತ್ತು! ಜನರು ಹಾಗೆ ನೆಟ್ಟನೋಟದಿಂದ ನೋಡುತ್ತಾರಲ್ಲ ಎಂದು ನಾನು ಒಂದು ದಪ್ಪವಾದ ಅಂಗವಸ್ತ್ರವನ್ನು ಮೈಮೇಲೆ ಸದಾ ಹೊದ್ದುಕೊಳ್ಳುತ್ತಿದ್ದೆ..."

ಈ ಸಂದರ್ಭದಲ್ಲಿ ಶ್ರೀರಾಮಕೃಷ್ಣರ ಜೀವನದ ಮತ್ತೊಂದು ಘಟನೆಯನ್ನು ಉಲ್ಲೇಖಿಸಬಹುದಾಗಿದೆ. ಆಗ ಅವರು ಪ್ರತಿವರ್ಷವೂ ಮಳೆಗಾಲದಲ್ಲಿ ಮೂರ್ನಾಲ್ಕು ತಿಂಗಳನ್ನು ಕಳೆಯಲು ತಮ್ಮ ಸ್ವಗ್ರಾಮಕ್ಕೆ ಬರಲಾರಂಭಿಸಿದ್ದರು. ಮಧ್ಯೆಮಧ್ಯೆ ಹೃದಯನ ಊರಾದ ಸಿಹೋರಿಗೂ, ಹಾಗೆಯೇ ಜಯರಾಂಬಾಟಿಗೂ ಹೋಗುತ್ತಿ ದ್ದರು. ಅಲ್ಲಿಯ ಜನರೂ ಅವರನ್ನು ಒತ್ತಾಯಪಡಿಸಿ ಕೆಲವು ದಿನ ತಮ್ಮೊಂದಿಗೆ ಉಳಿಸಿ ಕೊಳ್ಳುತ್ತಿದ್ದರು.

ಹೀಗೆಯೇ ಒಮ್ಮೆ ಶ್ರೀರಾಮಕೃಷ್ಣರು ಕಾಮಾರಪುಕುರದಿಂದ ಜಯರಾಂ

ಬಾಟಿಗೂ ಸಿಹೋರಿಗೂ ಹೋಗಲು ಸಿದ್ಧರಾಗಿದ್ದಾರೆ; ಜೊತೆಯಲ್ಲಿ ಹೃದಯನಿದ್ದೇ ಇದ್ದಾನೆ. ಯಾವಾಗಲೂ ಭಾವಸಮಾಧಿಯಲ್ಲಿರುತ್ತಿದ್ದುದರಿಂದ ಅವರ ಶರೀರವು ಮಕ್ಕಳ ಶರೀರದಂತೆ ಸುಕೋಮಲವಾಗಿಹೋಗಿದ್ದು, ಸ್ವಲ್ಪವೇ ದೂರ ಹೋಗಬೇಕಾದರೂ ಗಾಡಿಯಲ್ಲೋ ಪಲ್ಲಕ್ಕಿಯಲ್ಲೋ ಹೋಗಬೇಕಾಗಿತ್ತು. ಆದ್ದರಿಂದ ಪಲ್ಲಕ್ಕಿಯನ್ನು ತಂದಿರಿಸಲಾಗಿದೆ. ಶ್ರೀರಾಮಕೃಷ್ಣರು ಊಟ ಮಾಡಿ ಎಲೆಯಡಿಕೆ ಜಗಿಯುತ್ತ ಕೆಂಪು ರೇಶ್ಮೆ ಬಟ್ಟೆಯನ್ನುಟ್ಟು ಹೊರಬಂದರು. ನೋಡುತ್ತಾರೆ—ಪಲ್ಲಕ್ಕಿಯ ಸುತ್ತಮುತ್ತೆಲ್ಲ ಜನ! ಶ್ರೀರಾಮಕೃಷ್ಣರು ಅಚ್ಚರಿಯಿಂದ ಕೇಳಿದರು:

"ಹೃದೂ, ಇದೇನು ಇಷ್ಟೊಂದು ಜನ ಸೇರಿದ್ದಾರಲ್ಲ! ಏನು ಸಮಾಚಾರ ?"

ಹೃದಯು: "ಮತ್ತಿನ್ನೇನು ? ನೀನು ಅಲ್ಲಿಗೆ ಹೋಗುತ್ತೀಯಲ್ಲ ? ಇನ್ನು ಕೆಲವು ದಿನ ಇವರಿಗೆ ನೀನು ಕಾಣಸಿಗುವುದಿಲ್ಲ; ಆದ್ದರಿಂದಲೇ ನಿನ್ನನ್ನು ನೋಡೋಣವೆಂದು ಬಂದಿದ್ದಾರೆ."

ಶ್ರೀರಾಮಕೃಷ್ಣರು: "ಇವರೆಲ್ಲ ನನ್ನನ್ನು ಪ್ರತಿದಿನವೂ ನೋಡುತ್ತಲೇ ಇದ್ದಾರಲ್ಲ! ಪುನಃ ಹೊಸದಾಗಿ ನೋಡುತ್ತ ನಿಲ್ಲುವುದಕ್ಕೇನಿದೆ ?"

ಹೃದಯು: "ಅದು ಸರಿಯೇ. ಆದರೆ ಇವೊತ್ತು ನೀನು ಒಳ್ಳೇ ರೇಶ್ಮೆ ಬಟ್ಟೆಯನ್ನುಟ್ಟು ಸಿದ್ಧನಾಗಿದ್ದೀಯೆ. ಅಲ್ಲದೆ ಎಲೆಯಡಿಕೆ ಹಾಕಿಕೊಂಡು ತುಟಿಗಳು ಕೆಂಪಾಗಿ ಹೊಳೆಯುತ್ತಿರುವುದರಿಂದ ನೀನೀಗ ಮತ್ತಷ್ಟು ಸುಂದರವಾಗಿ ಕಾಣುತ್ತಿದ್ದೀಯೆ. ಅದಕ್ಕೇ ಎಲ್ಲರೂ ನಿನ್ನನ್ನು ನೋಡಲು ನೆರೆದಿದ್ದಾರೆ. ಅಲ್ಲದೆ ಮತ್ತೇನು ?"

ಜನಗಳು ತಮ್ಮ ಸುಂದರ ರೂಪದಿಂದ ಆಕರ್ಷಿತರಾಗಿದ್ದಾರೆಂದು ಕೇಳಿದ ತಕ್ಷಣ ಶ್ರೀರಾಮಕೃಷ್ಣರ ಮನಸ್ಸು ಒಂದು ಅಪೂರ್ವ ಭಾವದಿಂದ ತುಂಬಿತು. ಕಂಗಳು ಅಶ್ರುಭರಿತವಾದುವು. 'ಅಯ್ಯೋ, ಇವರೆಲ್ಲ ಈ ಎರಡು ದಿನದ ಬಾಹ್ಯರೂಪಕ್ಕೇ ಮೋಹಗೊಳ್ಳುತ್ತಾರಲ್ಲ! ಒಳಗಿನ ಆತ್ಮನನ್ನು ಕಾಣಲು ಯಾರೂ ಪ್ರಯತ್ನಿಸುವುದಿಲ್ಲವಲ್ಲ!' ಎಂದು ವಿಷಾದಪಡುತ್ತ ಜುಗುಪ್ಸೆಯಿಂದ ನುಡಿದರು:

"ಏನಿದು, ಒಬ್ಬ ಮನುಷ್ಯನನ್ನು ನೋಡಲು ಇಷ್ಟು ಜನಸಂದಣಿಯೆ ? ಹಾಳಾಗಿಹೋಗಲಿ, ನಾನೆಲ್ಲಿಗೂ ಹೋಗುವುದೇ ಇಲ್ಲ. ನಾನೀಗ ಹೋಗಲಿರುವ ಊರಿನಲ್ಲಿಯೂ ಹೀಗೆಯೇ ಜನ ಸೇರುತ್ತಾರಲ್ಲ ? ಅಲ್ಲಿಯೂ ಇದೇ ಕತೆಯಾದರೆ ನಾನೇಕೆ ಹೋಗಬೇಕು ?"

ಹೀಗೆಂದವರೇ ಮನೆಯೊಳಗೆ ಹೋಗಿ ಬಟ್ಟೆಬರೆಗಳನ್ನೆಲ್ಲ ಬಿಚ್ಚಿಟ್ಟು, ದುಃಖಿತರಾಗಿ ಸುಮ್ಮನೆ ಕುಳಿತುಬಿಟ್ಟರು. ಹೃದಯನೂ ಮನೆಯ ಇತರರೂ ಎಷ್ಟೆಷ್ಟೋ ಪರಿಯಿಂದ ಸಮಾಧಾನ ಮಾಡಿದರು. ಆದರೆ ಎಲ್ಲವೂ ವ್ಯರ್ಥವಾಯಿತು. ದೀನಭಾವದಿಂದ ತುಂಬಿದ ಶ್ರೀರಾಮಕೃಷ್ಣರು ಅಂದು ಎಲ್ಲಿಗೂ ಹೋಗಲೇ ಇಲ್ಲ.

ಬಾಹ್ಯರೂಪದ ಬಗ್ಗೆ ಅವರಿಗೆ ಮೊದಲಿನಿಂದಲೂ ವೈರಾಗ್ಯವಿದ್ದದ್ದೇ. ಈ ಘಟನೆಯಿಂದ ಅದು ಸಾವಿರಮಡಿ ಹೆಚ್ಚಾಯಿತು. ಬಳಿಕ ತಾವೇನು ಮಾಡಿದೆವೆಂಬುದನ್ನು ಅವರೇ ಹೇಳುತ್ತಾರೆ:

"...ನಾನು ದೇಹವನ್ನು ಒಂದು ದಪ್ಪ ಅಂಗವಸ್ತ್ರದಿಂದ ಮುಚ್ಚಿಕೊಂಡಿರುತ್ತಿದ್ದೆ. ಮತ್ತು ತಾಯಿಯನ್ನು ಕೇಳಿಕೊಳ್ಳುತ್ತಿದ್ದೆ, 'ಅಮ್ಮಾ! ಈ ಹೊರಗಿನ ರೂಪವನ್ನು ನೀನೇ ತೆಗೆದುಕೊ; ನನಗೆ ಒಳಗಿನ ಸೌಂದರ್ಯವನ್ನು ಮಾತ್ರ ದಯಪಾಲಿಸು'

ಎಂದು. ನನ್ನ ಮೈಮೇಲೆ ಕೈಯಾಡಿಸುತ್ತ ತಟ್ಟಿತಟ್ಟಿ 'ಒಳಗೆ ಸರಿದುಕೊ, ಒಳಗೆ ಸರಿದುಕೊ' ಎಂದು ಹೇಳುತ್ತಿದ್ದೆ. ಹಾಗೆ ಮಾಡಿದ ಕೆಲವು ದಿನಗಳ ತರುವಾಯ ದೇಹದ ಹೊರಭಾಗವು ಈ ರೀತಿಯಾಗಿ ವಾಸಿಹೋಯಿತು."

ಪ್ರಾಪಂಚಿಕ ಜನರಿಗೂ ಆಧ್ಯಾತ್ಮಿಕ ವ್ಯಕ್ತಿಗಳಿಗೂ ಅದೆಷ್ಟು ಅಂತರ! ಪ್ರಾಪಂಚಿಕರು ಮನಸೋಲುವುದು ಬಹಿರಂಗದ ಬೆಡಗಿಗೆ. ಆಧ್ಯಾತ್ಮಿಕರು ಅಮೂಲ್ಯವೆಂದು ಅರಿತಿರುವುದು ಅಂತರಂಗದ ಅಂದವನ್ನು. ಆದರೆ ಮನುಷ್ಯರು ಪ್ರಾಪಂಚಿಕರಾಗಿರುವವರೆಗೆ ಹೊರಗಣ ಸೌಂದರ್ಯಕ್ಕೆ ಮಾರುಹೋಗುವುದೇ ಸಹಜ. ಆದ್ದರಿಂದಲೇ ತಮ್ಮ ಹೊರಮೈಯನ್ನು ಮೆರುಗುಗೊಳಿಸಿಕೊಳ್ಳಲು ಯತ್ನಿಸುತ್ತಾರೆ. ಸುಗಂಧದ ಸಾಬೂನುಗಳಿಂದ ಉಜ್ಜಿ ತೊಳೆದು ಸ್ನೋ ಪೌಡರ್ ಪೊಮೇಡ್‌ಗಳನ್ನು ತಿಕ್ಕಿಕೊಂಡು ಚರ್ಮವನ್ನು ಥಳಥಳಿಸುವಂತೆ, ಪರಿಮಳಿಸುವಂತೆ ಮಾಡುತ್ತಾರೆ. ಆದರೂ ಮರುದಿನ ಅದು ಹೊರಸೂಸುವುದು ತನ್ನ ಸಹಜಸಿದ್ಧ ದುರ್ವಾಸನೆಯನ್ನೇ. ಕೊನೆಗೊಂದು ದಿನ ಸುಕ್ಕುಗಟ್ಟಲು ಪ್ರಾರಂಭಿಸಿದಾಗ ಎಷ್ಟು ಅಲಂಕಾರ ಮಾಡಿದರೂ ವ್ಯರ್ಥವಾಗುತ್ತದೆ. ಆದರೂ ಈ ಮನುಷ್ಯ ತನ್ನ ಚರ್ಮಕ್ಕೆ ಯೌವನ ಬರಿಸುವ ಸಾಹಸದಲ್ಲಿಯೇ ನಿರತನಾಗಿರುತ್ತಾನೆ. ಹೀಗೆಯೇ ಹಲವು ಜನ್ಮಗಳು ಕಳೆದಮೇಲೆ ತನ್ನ ಪ್ರಯತ್ನದ ವ್ಯರ್ಥತೆಯನ್ನು ಮನಗಂಡು ಅಂತರಂಗದತ್ತ ಪಯಣಿಸಲು ಅನುವಾಗುತ್ತಾನೆ. ಶ್ರೀರಾಮಕೃಷ್ಣರು ಈ ಅಂತರಂಗದ ಅಂದವನ್ನೂ ಆನಂದವನ್ನೂ ಅನುಭವಿಸಿ ಅದನ್ನೇ ಇತರರಿಗೆ ತಿಳಿಯಹೇಳಲು ಬಂದವರು.

ಶ್ರೀರಾಮಕೃಷ್ಣರಿಗೆ ತಮ್ಮ ಸೋದರ ರಾಮೇಶ್ವರನ ಮಗಳು ಲಕ್ಷ್ಮಿಯೆಂದರೆ ಅಪಾರ ವಾತ್ಸಲ್ಯ. ಅವಳನ್ನು ತಮ್ಮ ಮನೆದೇವರಾದ ಶೀತಲಾದೇವಿಯ ಅಂಶಸಂಭೂತೆಯೆಂದು ಪರಿಗಣಿಸಿದ್ದರು. ಅವರಿಗೆ ಆ ನಂಬಿಕೆ ಉಂಟಾಗಲು ಒಂದು ಕಾರಣವಿತ್ತು.

ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿದ್ದಾಗ ಯಾರಾದರೂ ಭಕ್ತರು ಹಣ್ಣು-ಸಿಹಿತಿನಿಸುಗಳನ್ನು ಆಗಾಗ ತಂದುಕೊಡುತ್ತಿದ್ದರು. ಒಂದು ದಿನ ಅವರ ಮನಸ್ಸಿಗೆ ಒಂದು ಆಲೋಚನೆ ಬಂದಿತು—'ಅಲ್ಲ, ನನಗೇನೋ ಇಲ್ಲಿ ಇಷ್ಟೊಂದು ತಿಂಡಿತಿನಿಸು ಬರುತ್ತಿದೆ. ಆದರೆ ಊರಿನಲ್ಲಿ ತಾಯಿ ಶೀತಲಾದೇವಿಗೆ ಇದೊಂದೂ ಸಿಗುವುದೇ ಇಲ್ಲವಲ್ಲ!' ಇದಾದ ಕೆಲದಿನಗಳ ಮೇಲೆ ಅವರೊಂದು ಕನಸಿನಲ್ಲಿ ಶೀತಲಾದೇವಿಯನ್ನು ಕಂಡರು. ಆಕೆ ಹೇಳಿದಳು: "ನಾನು ನಿಮ್ಮ ಮನೆಯಲ್ಲಿ ಎರಡು ರೂಪಗಳಿಂದ ವಾಸಿಸುತ್ತಿದ್ದೇನೆ. ಒಂದು, ನೀವು ಪೂಜಿಸುವ ಕಳಶ*; ಇನ್ನೊಂದು, ನಿನ್ನ ಅಣ್ಣನ ಮಗಳು ಲಕ್ಷ್ಮಿ. ನೀನು ಆಕೆಗೆ ತಿಂಡಿತಿನಿಸು ಕೊಟ್ಟರೆ ನನಗೆ ನೈವೇದ್ಯ ಮಾಡಿದಂತೆಯೇ ಆಗುತ್ತದೆ."

ಇದಾದ ನಂತರ, ಶ್ರೀರಾಮಕೃಷ್ಣರು ಲಕ್ಷ್ಮಿಯನ್ನು ಪೂಜ್ಯದೃಷ್ಟಿಯಿಂದ ಕಾಣತೊಡಗಿದರು. ಕೆಲವೊಮ್ಮೆ ಆಕೆಗೆ ತಮ್ಮ ಕೈಯಾರೆ ಏನನ್ನಾದರೂ ತಿನ್ನಿಸುತ್ತಿದ್ದರು.

ಲಕ್ಷ್ಮಿಯ ಜನನ ೧೮೬೪ ರಲ್ಲಿ; ಶಾರದಾಮಣಿಗಿಂತ ಹತ್ತು ವರ್ಷ ಚಿಕ್ಕವಳು. ಬಾಲ್ಯದಿಂದಲೂ ಆಕೆ ಏಕಾಂತಪ್ರಿಯೆ. ಅವಳ ಆಟದ ವೇಳೆಯೆಲ್ಲ ದೇವರ ಪೂಜೆಯಲ್ಲೇ ಕಳೆದುಹೋಗುತ್ತಿತ್ತು. ಶಾಲೆಗೆ ಹೋಗಿ ಅವಳೂ ನಾಲ್ಕಕ್ಷರ ಕಲಿತಳು. ಶಾರದೆ ತನ್ನ ಪತಿಯ ಮನೆಗೆ ಬಂದಾಗಲೆಲ್ಲ ಆಕೆಗೆ ಈ ಲಕ್ಷ್ಮಿ ಅಚ್ಚುಮೆಚ್ಚಿನ ಸಂಗಾತಿ. ತಾನು ಶಾಲೆಯಲ್ಲಿ ಕಲಿತ ಪಾಠವನ್ನು ಇವಳು ತನ್ನ ಚಿಕ್ಕಮ್ಮನಿಗೆ (ಶಾರದೆಗೆ) ಹೇಳಿಕೊಡುತ್ತಿದ್ದಳು. (ಮುಂದೆ ದಕ್ಷಿಣೇಶ್ವರದಲ್ಲಿ ಶರತ್ ಭಂಡಾರಿ ಎಂಬ ಪುಟ್ಟ ಹುಡುಗನಿಂದ ಶ್ರೀರಾಮಕೃಷ್ಣರೇ ಇಬ್ಬರಿಗೂ ಪ್ರಾಥಮಿಕ ಶಾಲೆಯ ಎರಡನೇ ಪುಸ್ತಕದ ಪಾಠಗಳನ್ನು ಹೇಳಿಸಿದರು.)

ಶ್ರೀಕೃಷ್ಣನು ಕದಂಬವೃಕ್ಷದ ಕೆಳಗೆ ವಾಸಿಸುತ್ತಾನೆ ಎಂದು ಶ್ರೀರಾಮಕೃಷ್ಣರೊಮ್ಮೆ ಹೇಳಿದ್ದು ಲಕ್ಷ್ಮಿಯ ಕಿವಿಗೆ ಬಿದ್ದಿತು. ಸರಿ, ಅದೇ ಮಾತು ತಲೆಯಲ್ಲಿ ಗುಂಯ್‌ಗುಡಲಾರಂಭಿಸಿತು. ಒಂದು ದಿನ ಮಧ್ಯಾಹ್ನ ಯಾರಿಗೂ ಹೇಳದೆ ಕದಂಬವೃಕ್ಷವನ್ನೂ ಕೃಷ್ಣನನ್ನೂ ಹುಡುಕಿಕೊಂಡು ಹೊರಟುಬಿಟ್ಟಳು. ಕಾಮಾರಪುಕುರದಲ್ಲೆಲ್ಲ ಹುಡುಕಿದಳು. ಆ ವೃಕ್ಷ ಸಿಗಲಿಲ್ಲ. ಕಡೆಗೆ ಪಕ್ಕದ ಹಳ್ಳಿಯಲ್ಲಿ ಕದಂಬವೃಕ್ಷವೇನೋ ಸಿಕ್ಕಿತು. ಆದರೆ ಕೃಷ್ಣ? ಅವನೆಲ್ಲಿ...? ಎಲ್ಲೋ ಹೋಗಿರಬಹುದು, ಬಂದಾನು, ಎಂದು ಬಹಳ

* ನಮಗೆ ತಿಳಿದಿರುವಂತೆ ಶ್ರೀರಾಮಕೃಷ್ಣರ ಮನೆದೇವರುಗಳಲ್ಲೊಬ್ಬಳು ಶೀತಲಾದೇವಿ. ಅವರ ಮನೆಯಲ್ಲಿ ಶೀತಲಾದೇವಿಯನ್ನು ಪೂಜಿಸುತ್ತಿದ್ದುದು ಕಲಶದ ರೂಪದಲ್ಲೇ. ಅದರಲ್ಲಿ ನೀರು ತುಂಬಿದ್ದು, ಮೇಲೆ ಒಂದು ಮಾವಿನೆಲೆಯ ಗೊಂಚಲು ಇರುತ್ತಿತ್ತು. ಸುತ್ತಲೂ ಕುಂಕುಮ ಹಚ್ಚಿರುತ್ತಿತ್ತು. ಈ ಕಲಶವನ್ನು ಬಿಟ್ಟರೆ ಆಕೆಯ ವಿಗ್ರಹವಾಗಲಿ ಚಿತ್ರವಾಗಲಿ ಬೇರೆ ಯಾವುದೂ ಇರಲಿಲ್ಲ.

ಹೊತ್ತು ಕಾದಳು. ಕಾದುಕಾದು ಕಡೆಗೆ ನಿರಾಶೆಯಿಂದ ಮನೆಯ ಕಡೆಗೆ ಹೆಜ್ಜೆ ಹಾಕಿದಳು. ಅವಳನ್ನು ಕಂಡು ಶ್ರೀರಾಮಕೃಷ್ಣರು ಅಚ್ಚರಿಯಿಂದ ಕೇಳಿದರು:

"ಲಕ್ಷ್ಮಿ! ಎಲ್ಲಿಗೆ ಹೋಗಿದ್ದೆಯಮ್ಮ ಇಷ್ಟು ಹೊತ್ತೂ!"

"ಚಿಕ್ಕಪ್ಪಾ, ಅವತ್ತು ನೀವು ಹೇಳಲಿಲ್ಲವೆ, ಕೃಷ್ಣ ಕದಂಬವೃಕ್ಷದ ಕೆಳಗೆ ಇರುತ್ತಾನೆ ಅಂತ? ಅದಕ್ಕೇ ನಾನು ಕದಂಬವೃಕ್ಷವನ್ನು ಹುಡುಕುತ್ತ ಹುಡುಕುತ್ತ ಪಕ್ಕದ ಹಳ್ಳಿಗೆ ಹೋಗಿದ್ದೆ. ಅಲ್ಲಿ ಅವನಿಗಾಗಿ ಎಷ್ಟು ಹೊತ್ತು ಕಾದೆ ಗೊತ್ತಾ? ಆದರೂ ಅವನು ಬರಲೇ ಇಲ್ಲ. . . !"

"ಓ! ನೀನು ಕೃಷ್ಣನನ್ನು ಹುಡುಕಿಕೊಂಡು ಹೋಗಿದ್ದೆಯೇನು? ಭಲೇ! ಬಹಳ ಒಳ್ಳೇದು. ಅವನು ನಿಜಕ್ಕೂ ಕದಂಬವೃಕ್ಷದ ಕೆಳಗೆ ಇರುತ್ತಾನಮ್ಮ. ಅವನನ್ನು ನೀನು ನೋಡಬಹುದು. ಆದರೆ ಆ ವೃಕ್ಷವಿರುವುದು ಮಾತ್ರ ಹೊರಗೆಲ್ಲೂ ಅಲ್ಲ; ಅದಿರುವುದು ನಿನ್ನೊಳಗೇ! ಭಕ್ತಿಯಿಂದ ಅವನನ್ನು ಪ್ರಾರ್ಥಿಸಿಕೊಂಡರೆ ಅವನು ಖಂಡಿತ ಕಾಣಿಸಿಕೊಳ್ಳುತ್ತಾನೆ!"

ಇದೀಗ ಬಾಲೆಗೆ ಸಮಾಧಾನವಾಯಿತು.

ಲಕ್ಷ್ಮಿಯ ಮುಂದಿನ ಜೀವನವೂ ಅತ್ಯಂತ ವಿಶೇಷವಾದ ಪವಿತ್ರ ಜೀವನ. ಅದನ್ನು ಹೆಚ್ಚು ವಿವರವಾಗಿ ಪರಿಶೀಲಿಸುವುದು ಪ್ರಸ್ತುತವಲ್ಲವಾದ್ದರಿಂದ ಆಕೆಯ ಜೀವನಕ್ಕೆ ಸಂಬಂಧಿಸಿದ ಕೆಲವೇ ಅಂಶಗಳನ್ನು ಇಲ್ಲಿ ನೋಡಬಹುದಾಗಿದೆ.

ಶ್ರೀರಾಮಕೃಷ್ಣರ ಆಲೋಚನೆಯ ಧಾಟಿಯು ಲೋಕದ ಇತರರಿಗಿಂತ ಅತಿ ವಿಭಿನ್ನವೆಂಬುದನ್ನು ನಾವು ಚೆನ್ನಾಗಿ ಬಲ್ಲೆವು. ಬಾಲೆ ಲಕ್ಷ್ಮಿಯ ಮನೋವ್ಯಾಪಾರಗಳನ್ನು, ಗುಣನಡತೆಗಳನ್ನು ಗಮನಿಸಿ ಆನಂದಿಸುತ್ತಿದ್ದ ಅವರೊಮ್ಮೆ ಉದ್ಗರಿಸುತ್ತಾರೆ:

"ಲಕ್ಷ್ಮಿ ಬಾಲವಿಧವೆಯಾಗಿಬಿಟ್ಟರೆ ಒಳ್ಳೆಯದು. ಆಗ ಅವಳು ಆಧ್ಯಾತ್ಮಿಕ ಸಾಧನೆಯನ್ನು ಅಡೆತಡೆಯಿಲ್ಲದೆ ಮಾಡಿಕೊಂಡುಹೋಗಲು ಅನುಕೂಲವಾಗುತ್ತದೆ."

ಛೆ! ಇಂಥ ಮಾತನ್ನಾಡಿದರೆ ಸದ್ಗೃಹಸ್ಥರೆನ್ನಿಸಿಕೊಂಡವರಿಗೆ ಏನೆನ್ನಿಸಬೇಡ! ಆದರೆ ಭಗವತ್ಸಾಕ್ಷಾತ್ಕಾರವೇ ಜೀವನದ ಏಕಮೇವ ಧ್ಯೇಯವೆಂದು ನಂಬಿ ನಡೆದ ಶ್ರೀರಾಮಕೃಷ್ಣರು ಈ ಮಾತನ್ನಾಡಿದರೆ ಆಶ್ಚರ್ಯವೇನಿದೆ? ಹೆಣ್ಣುಮಗಳೊಬ್ಬಳು ಮದುವೆಯಾಗದೆ ಉಳಿಯುವುದು ಆಕೆ ವಿಧವೆಯಾಗುವುದಕ್ಕಿಂತ ಘೋರವೆನ್ನುವಂತಹ ಸ್ಥಿತಿ ಆಗಿನ ಕಾಲದ್ದು. ಆದ್ದರಿಂದ ಲಕ್ಷ್ಮಿಯ ತಂದೆತಾಯಂದಿರು ಆಕೆಗೆ ಮದುವೆ ಮಾಡದಿರುವುದೆಲ್ಲ ಆಗದ ಮಾತು. ಆದರೆ ಮದುವೆಯಾಯಿತೆಂದರೆ ಸಾಧನೆ-ಸಾಕ್ಷಾತ್ಕಾರದ ವಿಷಯ ಸಡಿಲವಾಗುವುದೇ ದಿಟ. ಆದ್ದರಿಂದಲೇ ಶ್ರೀರಾಮಕೃಷ್ಣರು ಹಾಗೆ ಹೇಳಿರಬೇಕು ಎಂದು ಊಹಿಸಬಹುದು.

ಲಕ್ಷ್ಮಿಗೆ ಹನ್ನೊಂದು ವರ್ಷವಾದಾಗ ರಾಮೇಶ್ವರ ಆಕೆಯನ್ನು ಗೋಘಾಟ ಗ್ರಾಮದ ಧನಕೃಷ್ಣ ಎಂಬವನಿಗೆ ಕೊಟ್ಟು ಮದುವೆ ಮಾಡಿದ. ದಕ್ಷಿಣೇಶ್ವರದಲ್ಲಿದ್ದ ಶ್ರೀರಾಮಕೃಷ್ಣರಿಗೆ ಈ ಸುದ್ದಿ ಮುಟ್ಟಿತು. ತಕ್ಷಣವೇ ಅವರು "ಲಕ್ಷ್ಮಿ ವಿಧವೆಯಾಗುತ್ತಾಳೆ" ಎಂದು ನುಡಿದು ಸಮಾಧಿಸ್ಥರಾದರು. ಬಳಿಯಲ್ಲಿದ್ದ ಹೃದಯ ಬೆಚ್ಚಿಬಿದ್ದ. ಶ್ರೀರಾಮಕೃಷ್ಣರಿಗೆ ಬಾಹ್ಯಪ್ರಜ್ಞೆ ಮರಳಿದೊಡನೆ ಆತ ಉದ್ವಿಗ್ನತೆಯಿಂದ ಕೇಳಿದ:

"ಮಾವ! ನಿನಗೆ ಲಕ್ಷ್ಮಿಯನ್ನು ಕಂಡರೆ ಅಷ್ಟೊಂದು ಪ್ರೀತಿ, ವಾತ್ಸಲ್ಯ. ಅಂಥದರಲ್ಲಿ ಅವಳ ಮದುವೆಯ ಸುದ್ದಿ ಕೇಳಿ ನೀನು ಆಶೀರ್ವಾದ ಮಾಡುವುದನ್ನು

ಬಿಟ್ಟು ಇದೇನೋ ಅಪಶಕುನ ನುಡಿದುಬಿಟ್ಟೆಯಲ್ಲ! ಹೀಗೇಕೆ ಮಾಡಿದೆ?"

"ನನ್ನ ಕೈಲಿ ಏನಿದೆಯಪ್ಪ? ಜಗನ್ಮಾತೆಯೇ ನನ್ನ ಮೂಲಕ ಹಾಗೆ ಹೇಳಿದಳು. ನೋಡು, ಲಕ್ಷ್ಮಿ ಇದ್ದಾಳಲ್ಲ, ಅವಳು ಶೀತಲಾದೇವಿಯ ಆಂಶಿಕ ಅವತಾರ. ಆದರೆ ಅವಳ ಗಂಡನಾದವನು ಒಬ್ಬ ಸಾಧಾರಣ ಮನುಷ್ಯ. ಅವರಿಬ್ಬರೂ ಒಟ್ಟಿಗೆ ಜೀವಿಸುವುದು ಸಾಧ್ಯವಿಲ್ಲದ ಮಾತು."

ಮದುವೆಯಾಗಿ ಕೆಲತಿಂಗಳು ಕಳೆಯಿತು. ಧನಕೃಷ್ಣ ಕಾಮಾರಪುಕುರಕ್ಕೆ ಬಂದು ಲಕ್ಷ್ಮಿಯನ್ನು ಕಂಡು, ತಾನು ಯಾವುದಾದರೊಂದು ಊರಿನಲ್ಲಿ ಕೆಲಸಕ್ಕೆ ಸೇರಿಕೊಳ್ಳಲು ಹೋಗುವುದಾಗಿ ಹೇಳಿ ಹೊರಟ. ಆದರೆ ಅದಾಗಿ ವರ್ಷಗಳೇ ಉರುಳಿದರೂ ಅವನು ಹಿಂದಿರುಗಲೇ ಇಲ್ಲ. ಅವನ ಬಗ್ಗೆ ಯಾವ ವರ್ತಮಾನವೂ ದೊರೆಯಲಿಲ್ಲ. ಕೊನೆಗೆ ಹನ್ನೆರಡು ವರ್ಷಗಳ ಬಳಿಕ, ಹಿಂದೂ ವಿಧಿಯಂತೆ ಅವನ ಮನೆಯವರು ಅವನ ಶ್ರಾದ್ಧಕರ್ಮ ಮಾಡಿದರು. ಲಕ್ಷ್ಮಿಗೆ ಅವಳ ಗಂಡನ ಮನೆಯಿಂದ ಆಸ್ತಿಯ ಒಂದು ಭಾಗ ದೊರೆಯಬೇಕಿತ್ತು. ಆದರೆ ಶ್ರೀರಾಮಕೃಷ್ಣರು ಅವಳಿಗೆ "ಅದನ್ನು ನೀನು ತೆಗೆದುಕೊಳ್ಳಬೇಡ" ಎಂದು ಹೇಳಿದರು. ಅದರಂತೆ ಅವಳು ತನ್ನ ಪಾಲಿಗೆ ಬಂದದ್ದನ್ನು ಗಂಡನ ಮನೆಯ ಇತರರಿಗೆ ಹಂಚಿಬಿಟ್ಟಳು.

ಧನಕೃಷ್ಣ ಮನೆ ಬಿಟ್ಟು ಹೋದಮೇಲೆ ಲಕ್ಷ್ಮಿ ಮೂರು ವರ್ಷ ಕಾಮಾರಪುಕುರದಲ್ಲೇ ಇದ್ದು ಬಳಿಕ ದಕ್ಷಿಣೇಶ್ವರಕ್ಕೆ ಬಂದುಬಿಟ್ಟಳು. ಆಗ ಅವಳಿನ್ನೂ ಹದಿನಾಲ್ಕು ವರ್ಷದ ಸುಂದರ ಬಾಲಕಿ. ಆಗ ಶ್ರೀರಾಮಕೃಷ್ಣರು ಆಕೆಗೆ, "ನೀನು ನಿನ್ನ ಪಾಲಿನ ಮನೆಗೆಲಸಗಳನ್ನೆಲ್ಲ ಮಾಡು; ಮತ್ತು ಪೂಜೆ ಜಪಾದಿಗಳನ್ನು ಮಾಡಿಕೊಂಡು ನಿನ್ನ ಚಿಕ್ಕಮ್ಮನ ಜೊತೆಯಲ್ಲೇ ವಾಸವಾಗಿರು. ತೀರ್ಥಯಾತ್ರೆಗೆಂದು ಒಬ್ಬಳೇ ಹೊರಟು ಬಿಡಬೇಡ. ಈ ಜಗತ್ತಿನಲ್ಲಿ ಜೀವನ ಅಷ್ಟು ಕ್ಷೇಮವಲ್ಲ. ಎಲ್ಲಿ ಯಾವಾಗ ಏನು ತೊಂದರೆಯಾಗುವುದೋ ಯಾರು ಬಲ್ಲರು?" ಎಂದು ಆದೇಶ ನೀಡಿದರು. ಲಕ್ಷ್ಮಿ ಅವರ ಮಾತಿನಂತೆಯೇ ನಡೆಯುತ್ತ ಸಾರ್ಥಕ ಜೀವನವನ್ನು ಬಾಳಿದಳು.

## ಅಪೂರ್ವ ಗೃಹಸ್ಥ ೨೦

ಶ್ರೀರಾಮಕೃಷ್ಣರು ಕಾಮಾರಪುಕುರಕ್ಕೆ ಬಂದು ಇದ್ದ ಈ ಅವಧಿಯು ಅವರ ಲೀಲಾನಾಟಕದ ಅತಿ ಮುಖ್ಯ ತಿರುವುಗಳಲ್ಲೊಂದು. 'ಆಧ್ಯಾತ್ಮಿಕ ಸಾಧನೆಗಳು' ಎಂದು ಯಾವುದನ್ನು ಕರೆಯಬಹುದೋ, ಹೆಚ್ಚುಕಡಮೆ, ಅವೆಲ್ಲವೂ ಈ ವೇಳೆಗೆ ಫಲಪ್ರದ ವಾಗಿ ಮುಕ್ತಾಯಗೊಂಡಿದ್ದುವು. ಆದ್ದರಿಂದ ಇಷ್ಟು ವರ್ಷಗಳ ಕಾಲ ಅವರಲ್ಲಿ ಎದ್ದು ಕಾಣುತ್ತಿದ್ದ 'ಸಾಧಕ ಭಾವ'ವು ಮರೆಯಾಗಿ ಇನ್ನು ಮುಂದೆ ಹೊಸಹೊಸ ಭಾವಗಳು, ಭಾವನೆಗಳು ವಿಕಸನಗೊಂಡು ಮೈದೋರುವುದನ್ನು ನೋಡಬಹುದು.

ಶ್ರೀರಾಮಕೃಷ್ಣರ ವಿವಾಹವಾಗಿ ಏಳು ವರ್ಷಗಳೇ ಕಳೆದುಹೋದುವು. ಆದರೆ ಈಗತಾನೆ ಅವರ 'ಗೃಹಸ್ಥಜೀವನ' ಪ್ರಾರಂಭವಾಗಿದೆಯೆನ್ನಬೇಕು. ಜಯರಾಂಬಾಟಿ ಯಿಂದ ಶಾರದೆಯನ್ನು ಕರೆತರುವ ವಿಷಯದಲ್ಲಿ ಶ್ರೀರಾಮಕೃಷ್ಣರು ಈ ಹಿಂದೆ ನಿರ್ಲಿಪ್ತರಾಗಿರುವಂತೆ ಕಂಡಿತ್ತು. ಆದರೆ ಆಕೆ ಊರಿಗೆ ಬಂದ ಮೇಲೆ ಮಾತ್ರ ಅವರು ತಮ್ಮ ಪಾಲಿನ ಕರ್ತವ್ಯಗಳನ್ನು, ಎಂದರೆ ಪತಿಯ ಪಾತ್ರವನ್ನು ನಿರ್ವಹಿಸುವಲ್ಲಿ ಹಿಂದುಳಿಯಲಿಲ್ಲ. ಆಕೆಯ ವ್ಯಕ್ತಿತ್ವವನ್ನು ರೂಪಿಸಲು ಅಗತ್ಯವಾದ ಸಕಲ ಶಿಕ್ಷಣ ವನ್ನೂ ತಾವೇ ನೀಡಲು ಉದ್ಯುಕ್ತರಾದರು. ಇದು ಅವರ ಪಾಲಿನ ಒಂದು ದೊಡ್ಡ ಕರ್ತವ್ಯ.

ಇಲ್ಲೊಂದು ಪ್ರಶ್ನೆಯೇಳಬಹುದು: ವೈರಾಗ್ಯಶಿಖಾಮಣಿಗಳಾದ, ಕಾಮಕಾಂಚನ ವನ್ನು ಪರಿಪೂರ್ಣವಾಗಿ ವಿವರ್ಜಿಸಿದ, ಅಷ್ಟಲ್ಲದೆ ನೈಜಸಂನ್ಯಾಸಿಗಳೇ ಆದ ಶ್ರೀರಾಮ ಕೃಷ್ಣರಿಗೆ ಸಾಂಸಾರಿಕ ಜೀವನವನ್ನು ನಡೆಸಲು ಹೇಗೆ ಸಾಧ್ಯವಾಯಿತು? ಅಥವಾ ಅವರು ತಮ್ಮ ಮನೋಭಾವವನ್ನು ಬದಲಿಸಿಕೊಂಡರೇ ಹೇಗೆ? ಈ ಪ್ರಶ್ನೆಗಳಿಗೆಲ್ಲ ಸಮರ್ಪಕವಾದ ಹಾಗೂ ವಿವರಪೂರ್ಣವಾದ ಉತ್ತರವನ್ನು ಮುಂದೆ ನಾವು ಕಾಣಲಿದ್ದೇವೆ. ಆದರೆ ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಬಹುದು. ಶ್ರೀರಾಮಕೃಷ್ಣರು ಕೂಡ ಸಾಂಸಾರಿಕ ಜೀವನವನ್ನು ಪ್ರಾರಂಭಿಸುವ ಮುನ್ನ ಈ ಬಗ್ಗೆ ಸಾಕಷ್ಟು ಆಲೋಚಿಸಿದ್ದರು. ಸಂನ್ಯಾಸಜೀವನಕ್ಕೆ ಮೊದಲು ಅವರು ಗುರು ತೋತಾ ಪುರಿಯೊಡನೆ, ತಮಗೆ ಆದಾಗಲೇ ವಿವಾಹವಾಗಿರುವ ವಿಷಯವನ್ನು ತಿಳಿಸಿ 'ತಾವು ಈ ಅದ್ವೈತ ಸಾಧನೆಗೆ ಅರ್ಹರೇ?' ಎಂದು ಕೇಳಿದ್ದಾಗ ಆತನೆಂದಿದ್ದ: "ಅದರಿಂದೇ ನಂತೆ? ತ್ಯಾಗ ವೈರಾಗ್ಯ ವಿವೇಕಗಳು ನಿನ್ನಲ್ಲಿ ಸ್ಥಿರವಾಗಿ ಬೇರೂರಿದ್ದ ಪಕ್ಷದಲ್ಲಿ ನಿನಗೆ ಯಾವ ಭಯವೂ ಇಲ್ಲ. ನೀನು ವಿವಾಹಿತನಾಗಿದ್ದರೂ ಯಥಾರ್ಥಜ್ಞಾನವನ್ನು ಹೊಂದ ಬಲ್ಲೆ. ಯಾವನು ಸದಾ ಸ್ತ್ರೀಪುರುಷರಿಬ್ಬರನ್ನೂ ಸಮಭಾವದಿಂದ ಆತ್ಮಸ್ವರೂಪರೆಂದು ಕಾಣುವನೋ ಮತ್ತು ಅವರೊಂದಿಗೆ ಅದಕ್ಕನುಗುಣವಾಗಿ ನಡೆದುಕೊಳ್ಳುವನೋ ಅವನು ಮಾತ್ರವೇ ಬ್ರಹ್ಮಜ್ಞಾನಿಯಾಗಬಲ್ಲ. ಇಲ್ಲದಿದ್ದರೆ, ಅವನೆಷ್ಟೇ ಸಾಧನೆ ಮಾಡು ತ್ತಿದ್ದರೂ ತನ್ನ ಗುರಿಯಿಂದ ದೂರವೇ ಇರುತ್ತಾನೆ."

ಶ್ರೀರಾಮಕೃಷ್ಣರು ಈ ಗುರುವಾಕ್ಯದ ಆಧಾರದ ಮೇಲೆ ವೈವಾಹಿಕ ಜೀವನವನ್ನು ಪ್ರಾರಂಭಿಸಿದರು. ಜೊತೆಗೆ ಶಾರದಾಮಣಿಯನ್ನು ತಮಗೆ ಅನುರೂಪವಳಾದ ಸಹ

ಧರ್ಮಿಣಿಯನ್ನಾಗಿ ರೂಪಿಸುವ ಕಾರ್ಯದಲ್ಲಿ ನಿರತರಾದರು.

ಶಾರದೆ ಅನಕ್ಷರಸ್ಥೆಯಾದರೂ ತುಂಬ ಜಾಣೆ. ಸದಾಚಾರಸಂಪನ್ನರೂ ದೈವ ಭಕ್ತರೂ ಆದ ಬಡ ಬ್ರಾಹ್ಮಣದಂಪತಿಗಳ ಪುತ್ರಿಯಾಗಿ, ತಂದೆತಾಯಿಗಳ ಸದ್ಗುಣಗಳ ನ್ನೆಲ್ಲ ಬಳುವಳಿಯಾಗಿ ಪಡೆದುಕೊಂಡವಳು. ಅತ್ಯಂತ ಸರಳ ಸ್ವಭಾವ, ಮುಗ್ಧತೆ, ಜೊತೆಗೆ ಲಜ್ಜಾಶೀಲತೆ—ಇವು ವ್ಯಕ್ತಿತ್ವದಲ್ಲಿ ಸೇರಿಕೊಂಡೇ ಇದ್ದುವು. ಮನೆಗೆಲಸ, ಗದ್ದೆಯ ಕೆಲಸಗಳಲ್ಲೆಲ್ಲ ನಿಪುಣೆ. ತಂದೆತಾಯಂದಿರ ಮೂಲಕ ಹಾಗೂ ನಾಟಕ ಬಯಲಾಟ ಹರಿಕಥೆಗಳಿಂದ ಹಲವಾರು ಧಾರ್ಮಿಕ ವಿಚಾರಗಳನ್ನು, ಆದರ್ಶಗಳನ್ನು ಕಲಿತಿದ್ದಳು. ಶ್ರೇಷ್ಠ ವಿಗ್ರಹದ ರಚನೆಗೆ ಬೇಕಾದ ಶಿಲೆಯಂತೆ, ಆದರ್ಶ ಸ್ತ್ರೀಯಾಗಿ—ಅಷ್ಟೇಕೆ, ಜಗನ್ಮಾತೆಯಾಗಿ—ವ್ಯಕ್ತಗೊಳ್ಳಲು ಬೇಕಾದ ಸಕಲ ಮಹಿಮಾಗುಣಗಳೂ ಆದಾಗಲೇ ಆಕೆಯಲ್ಲಿ ಬೀಜರೂಪದಲ್ಲಿದ್ದುವು ಎನ್ನಬಹುದು. ಈಗ ಶ್ರೀರಾಮಕೃಷ್ಣರು ನಿಪುಣ ಶಿಲ್ಪಿಯಂತೆ ಪತ್ನಿಯ ವ್ಯಕ್ತಿತ್ವನಿರ್ಮಾಣಕಾರ್ಯದಲ್ಲಿ ನಿರತರಾದರು.

ಮೊಟ್ಟಮೊದಲು ಅವರು ತಮ್ಮ ಅಲೌಕಿಕ, ಅಹೈತುಕ ಪ್ರೇಮದಿಂದ ಪುಟ್ಟ ಪತ್ನಿಯ ಹೃದಯವನ್ನು ಸಂಪೂರ್ಣವಾಗಿ ಗೆದ್ದುಕೊಂಡರು. ಬಳಿಕ ಮೆಲ್ಲಮೆಲ್ಲನೆ, ತಾವು ಗಳಿಸಿಕೊಂಡ ದಿವ್ಯಾನುಭವಗಳನ್ನು ಆಕೆಗೆ ಧಾರೆಯೆರೆದುಕೊಟ್ಟರು. ಶೀಲ ಸಂಪನ್ನವಾದ ಪರಿಪೂರ್ಣ ಜೀವನದ ಆದರ್ಶವನ್ನು ಅವಳ ಮುಂದೆ ಬಣ್ಣಿಸಿದರು. ಆ ಆದರ್ಶವನ್ನು ಸಿದ್ಧಿಸಿಕೊಳ್ಳಲು ಪ್ರಾಪಂಚಿಕ ಭೋಗಾಸಕ್ತಿಯನ್ನು ತ್ಯಜಿಸಬೇಕಾದ ಅಗತ್ಯವೇನು ಎಂಬುದನ್ನು, ಮತ್ತು ಮನಸ್ಸು ಮಾತು ಕೃತಿಗಳ ಸಂಯಮದಿಂದ ಆಧ್ಯಾತ್ಮಿಕ ಜೀವನದ ಪರಮೋನ್ನತಿಯನ್ನು ಹೇಗೆ ಸಾಧಿಸಬಹುದು ಎಂಬುದನ್ನು ಮನಗಾಣಿಸಿದರು. ಇನ್ನೊಂದು ಕಡೆಯಿಂದ, ದೈನಂದಿನ ಜೀವನವನ್ನು ಅತ್ಯುತ್ಕೃಷ್ಟ ರೀತಿಯಲ್ಲಿ ನಡೆಸಲು ಬೇಕಾದ ಶಿಕ್ಷಣವನ್ನು ನೀಡುತ್ತ ಬಂದರು. ದೇವರ ಪೂಜೆ-ಪುರ ಸ್ಕಾರ, ಅತಿಥಿ-ಬ್ರಾಹ್ಮಣರ ಸತ್ಕಾರ, ಕುಟುಂಬದ ಸಮಸ್ತರೊಂದಿಗೆ ವಿಶ್ವಾಸಪೂರ್ಣ ವ್ಯವಹಾರ, ಕಿರಿಯರಿಗೆ ತೋರಬೇಕಾದ ಔದಾರ್ಯಪೂರ್ಣ ಪ್ರೀತ್ಯಾದರ—ಈ ಎಲ್ಲ ವಿಷಯಗಳನ್ನೂ ವಿಶದವಾಗಿ ತಿಳಿಸಿಕೊಟ್ಟರು. ಅಲ್ಲದೆ, ಅಮೂಲ್ಯವಾದ ವಿವೇಕ ಸಂಪನ್ನತೆಯನ್ನು ಗಳಿಸಿಕೊಳ್ಳುವಲ್ಲಿ ಸತಿಗೆ ಹೆಜ್ಜೆಹೆಜ್ಜೆಯಲ್ಲೂ ನೆರವಾದರು. ಯಾವ ಸ್ಥಳದಲ್ಲಿ ಯಾವ ಸಂದರ್ಭದಲ್ಲಿ ಹೇಗೆ ವ್ಯವಹರಿಸಿದರೆ ಸೂಕ್ತ, ಯಾರೊಂದಿಗೆ ಹೇಗೆ ನಡೆದುಕೊಂಡರೆ ಯುಕ್ತ ಎಂಬುದನ್ನು ತಿಳಿಸಿಕೊಟ್ಟರು.

ಇದಕ್ಕೆ ಹಲವಾರು ಉದಾಹರಣೆಗಳನ್ನು ಕೊಡಬಹುದು. ಗಾಡಿಯಲ್ಲಿ ಅಥವಾ ದೋಣಿಯಲ್ಲಿ ಅನೇಕರು ಒಟ್ಟಿಗೆ ಪ್ರಯಾಣ ಮಾಡುವ ವಿಷಯದಲ್ಲಿ ಶ್ರೀರಾಮ ಕೃಷ್ಣರು ಆಕೆಗೆ ಹೇಳುತ್ತಾರೆ: "ನೋಡು, ದೋಣಿಗೆ ಅಥವಾ ಗಾಡಿಗೆ ಹತ್ತುವಾಗ ನೀನು ಎಲ್ಲರಿಗಿಂತ ಮೊದಲು ಹತ್ತಬೇಕು; ಇಳಿಯುವಾಗ, ಎಲ್ಲರೂ ಇಳಿದಮೇಲೆ ಇಳಿಯಬೇಕು" ಎಂದು. ಅಜಾಗರೂಕತೆಯಿಂದಾಗಿ ಯಾವ ಸಾಮಾನೂ, ಒಂದೋ ದಡದಲ್ಲೇ ಇಲ್ಲವೆ ದೋಣಿಯಲ್ಲೇ ಉಳಿಯುವಂತಾಗದಿರಲು ಈ ಎಚ್ಚರಿಕೆಯ ಸೂಚನೆ!

ಅಂತೆಯೇ ಬತ್ತಿಯನ್ನು ಹುರಿಗೊಳಿಸಿ ದೀಪ ಹಚ್ಚುವುದು, ತಾಂಬೂಲ ತಯಾರಿ ಸುವುದು, ಕಡೆಗೆ, ಸಂಬಾರಗಳನ್ನೆಲ್ಲ ಉಚಿತ ಪ್ರಮಾಣದಲ್ಲಿ ಉಪಯೋಗಿಸಿ ಅಡಿಗೆಗೆ ಒಗ್ಗರಣೆ ಕೊಡುವುದು—ಇಂತಹ ಸಣ್ಣ ಪುಟ್ಟ ಕೆಲಸಗಳನ್ನು ಕೂಡ ಅತ್ಯುತ್ತಮ

ರೀತಿಯಿಂದ ನಿರ್ವಹಿಸುವುದು ಹೇಗೆಂಬುದನ್ನು ತೋರಿಸಿಕೊಟ್ಟರು.

ಹೀಗೆ ಅವರ ಪಾಠಪಟ್ಟಿ ತುಂಬ ಅದ್ಭುತವಾಗಿತ್ತು. ಸ್ವತಃ ಸರಳ ಹೃದಯಿಯೂ ಶ್ರದ್ಧಾಭಕ್ತಿಸಂಪನ್ನಳೂ ಆದ ಶಾರದೆ, ಪ್ರಿಯ ಪತಿ ಕಲಿಸಿದ ಪಾಠವನ್ನು ಬಹುಬೇಗ ಕಲಿತು ಹೃದ್ಗತ ಮಾಡಿಕೊಂಡಳು. ಪತಿಯ ಶಿಕ್ಷಣ ಶಾರದೆಯ ಪಾಲಿಗೆ ಅತ್ಯಂತ ಆನಂದದಾಯಕ ಅನುಭವ. ಶ್ರೀರಾಮಕೃಷ್ಣರು ತಮ್ಮ ಪುಟ್ಟ ಪತ್ನಿಯ ಮನವರಿತು, ಅಷ್ಟು ಚೆನ್ನಾಗಿ ತಿಳಿಸಿಕೊಡುತ್ತಿದ್ದರು. ಅಲ್ಲದೆ, ಅವರು ಅಷ್ಟು ಉತ್ಸಾಹದಿಂದ ಹೇಳಿಕೊಡುತ್ತಿದ್ದರೂ ಅದರಲ್ಲಿ ಸ್ವಾರ್ಥಪರತೆಯಾಗಲಿ, ಮೋಹದ ಕಿಲುಬಾಗಲಿ ಇರಲಿಲ್ಲ.

ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಶಿಕ್ಷಣ ಪದ್ಧತಿಯಲ್ಲಿ ಕಾಮ-ಕಾಂಚನ ತ್ಯಾಗವೇ ಮೊದಲ ಮೆಟ್ಟಿಲು. ಆ ದಿಸೆಯಲ್ಲಿ ತಮ್ಮ ಸತಿಯ ಮನಸ್ಸನ್ನು ಸಿದ್ಧಗೊಳಿಸುವ ಯತ್ನವನ್ನು ಮೊದಲಿನಿಂದಲೇ ಪ್ರಾರಂಭಿಸಿದರು. ಇಹಲೋಕದ ನಶ್ವರತೆಯತ್ತ ಹಾಗೂ ಲೌಕಿಕಜೀವನದ ಕಷ್ಟ-ಸಂಕಟಗಳತ್ತ ಆಕೆಯ ಗಮನವನ್ನು ಸೆಳೆಯುತ್ತಿದ್ದರು. ಒಮ್ಮೆ ಮಾತಿನ ಸಂದರ್ಭದಲ್ಲಿ ಅವರೆನ್ನುತ್ತಾರೆ:

"ನೋಡು, ಈ ಜಗತ್ತು ಎಷ್ಟಾದರೂ ಕ್ಷಣಭಂಗುರ; ಈಗುಂಟು-ಈಗಿಲ್ಲ. ಮನುಷ್ಯನ ಜೀವನದಲ್ಲಿ ಭಕ್ತಿ-ವೈರಾಗ್ಯ ಮಾತ್ರವೇ ಮುಖ್ಯ." ಬಳಿಕ ಮುಂದುವರಿಸುತ್ತ ಹೇಳುತ್ತಾರೆ: "ಸುಮ್ಮನೆ ನರಿನಾಯಿಗಳ ತರಹ ಒಂದಿಷ್ಟು ಮಕ್ಕಳನ್ನು ಹಡೆದರೆ ಏನು ಬಂದಹಾಗಾಯಿತು ?"

ಶಾರದೆಯ ತಾಯಿಗೆ ಹಲವಾರು ಮಕ್ಕಳು. ಆ ಮಕ್ಕಳಲ್ಲಿ ಕೆಲವು ಶೈಶವದಲ್ಲೇ ಸತ್ತುಹೋಗಿದ್ದುವು. ಶಾರದೆ ಹಿರಿಯ ಮಗಳಾದ್ದರಿಂದ ಅವಳೂ ಆ ಮಕ್ಕಳನ್ನು ಮಡಿಲಲ್ಲೆತ್ತಿ ಆಡಿಸಿದ್ದಳು, ಲಾಲಿಸಿ ಪಾಲಿಸಿದ್ದಳು. ಆ ಮಕ್ಕಳು ಸತ್ತುಹೋದಾಗ ತನ್ನ ತಂದೆತಾಯಿಯರು ಅತ್ತು ಗೋಳಾಡಿದ್ದನ್ನು ಕಂಡಿದ್ದಳು. ಅಲ್ಲದೆ ಅವಳಿಗೂ ಸಾಕಷ್ಟು ಸಂಕಟವಾಗಿತ್ತು. ಈ ವಿಷಯವನ್ನೆಲ್ಲ ನೆನಪಿಸಿಕೊಡುತ್ತ ಶ್ರೀರಾಮಕೃಷ್ಣರೆಂದರು:

"ನೋಡಿದೆಯಾ, ಇದೆಲ್ಲ ನಿನಗೇ ಸಾಕಷ್ಟು ಅನುಭವವಾಗಿದೆ. ಇವುಗಳಿಂದೆಲ್ಲ ಉಂಟಾಗುವ ಯಾತನೆ ಎಷ್ಟು ಅಸಹನೀಯವೆನ್ನುವುದು ನಿನಗೇ ತಿಳಿದಿದೆ. ಎಂದ ಮೇಲೆ ಈ ಗೋಳೆಲ್ಲ ಏಕೆ ಬೇಕು ಹೇಳು ? ಈ ರಗಳೆಯೇ ಇಲ್ಲದೆಹೋಯಿತೆಂದರೆ, ನೋಡು, ನೀನೇ ನಿನ್ನ ಯಜಮಾನಿ. ಎಂದೆಂದಿಗೂ ನೀನು ಸರ್ವತಂತ್ರಸ್ವತಂತ್ರಳಾಗಿರಬಹುದು."

ಶಾರದೆ ಇದಕ್ಕೆ ಪ್ರತಿಯಾಗಿ ಏನೂ ಹೇಳಲಿಲ್ಲ. ಆದರೆ ಶ್ರೀರಾಮಕೃಷ್ಣರು ಆ ವಿಷಯವನ್ನು ಅಲ್ಲಿಗೇ ಬಿಡಲಿಲ್ಲ. ತಮ್ಮ ಮಾತು ಆಕೆಯ ಮನಮುಟ್ಟುವವರೆಗೂ ಅವರು ಬಿಡುವವರಲ್ಲ. ಮತ್ತೊಂದು ದಿನ ಬೆಳಗ್ಗೆ ಶಾರದೆ ನೆಲಕ್ಕೆ ಸೆಗಣಿ ಹಾಕಿ ಸಾರಿಸುತ್ತಿದ್ದಳು. ಶ್ರೀರಾಮಕೃಷ್ಣರು ಒಳಿಯಲ್ಲೇ ನಿಂತು ತಮಾಷೆಯಾಗಿ ಮಾತನಾಡುತ್ತಿದ್ದರು.

"ನೋಡು, ನೀನು ನಿನ್ನ ಮಗುವಿಗೆ ಅನ್ನಪ್ರಾಶನ ಮಾಡಿಸುವ ದಿನ ಮೈತುಂಬ ಒಡವೆ ಹಾಕಿಕೊಂಡು ಮೆರೆದಾಡಬಹುದು. ಆದರೆ ಮಗು ಸತ್ತಾಗ ಮಾತ್ರ ಹೃದಯ ಹಿಂಡಿದಂತಾಗಿ ಗೋಳಾಡಬೇಕಾಗುತ್ತದೆ !"

ಶ್ರೀರಾಮಕೃಷ್ಣರು ಹೇಳಿದ್ದೇನೋ ತಮಾಷೆಯ ದನಿಯಲ್ಲಿ. ಆದರೆ ಇದೆಂಥ

ತಮಾಷೆ? ಗಂಡ ತನ್ನ ಹೆಂಡತಿಗೆ ಹೇಳಬಹುದಾದ ಮಾತೇನು ಇದು? ಶಾರದೆ ಯೇನೋ ಇಲ್ಲಿಯುವರೆಗೆ ತುಟಿಪಿಟಕ್ಕೆನ್ನದೆ ಅವರಾಡಿದ ಮಾತುಗಳನ್ನೆಲ್ಲ ಕೇಳಿಸಿ ಕೊಳ್ಳುತ್ತಿದ್ದಳು. ಮತ್ತು ಮೌನವಾಗಿ ಆಲೋಚಿಸುತ್ತಿದ್ದಳು. ಆದರೆ ಅವರು ಸಾವಿನ ಮಾತನ್ನೇ ಮತ್ತೆಮತ್ತೆ ಆಡಿದಾಗ ಮೆಲುದನಿಯಲ್ಲಿ ಒಂದು ಮಾತನ್ನು ಅಂದು ಬಿಟ್ಟಳು:

"ಆದರೆ ಹುಟ್ಟಿದ ಮಕ್ಕಳೆಲ್ಲವೂ ಸತ್ತುಹೋಗುತ್ತವೆಯೆ?"

ಶಾರದೆ ಹೀಗೆಂದದ್ದೇ ತಡ, ಶ್ರೀರಾಮಕೃಷ್ಣರು ಗಟ್ಟಿಯಾಗಿ ಹೇಳಿದರು:

"ಅಯ್ಯಬ್ಬ! ನಾನೀಗ ವಿಷಸರ್ಪದ* ಬಾಲವನ್ನು ಮೆಟ್ಟಿದಂತಾಯಿತು! ಎಲ ಎಲಾ! ನಾನೆಂದುಕೊಂಡಿದ್ದೆ, ಇವಳು ಸಾಧು ಸ್ವಭಾವದವಳು, ಏನೂ ಅರಿಯದ ಮುಗ್ಧೆ ಅಂತ. ಈಗ ನೋಡಿದರೆ, ಇವಳಿಗೆ ಬಹಳ ವಿಚಾರ ಗೊತ್ತಿರುವಂತಿದೆಯಲ್ಲ! ಹೇಗೆ ಹೇಳುತ್ತಾಳೆ ನೋಡು, 'ಹುಟ್ಟಿದ ಮಕ್ಕಳೆಲ್ಲ ಸತ್ತುಹೋಗುತ್ತಾರೆಯೆ?' ಅಂತ! ಪರವಾಗಿಲ್ಲೆ!"

ಶ್ರೀರಾಮಕೃಷ್ಣರು ಹೀಗೆ ಗಟ್ಟಿಯಾಗಿ ಅಂದರೋ ಇಲ್ಲವೊ, ಶಾರದೆ ಅಲ್ಲಿಂದೆದ್ದು ಪರಾರಿ!

ಒಂದು ದಿನ ಲಕ್ಷ್ಮಿ ಹಾಗೂ ಮನೆಯ ಮತ್ತೊಬ್ಬ ಸ್ತ್ರೀಯೊಂದಿಗೆ ನೆರೆಗ್ರಾಮದಲ್ಲಿ ನಡೆಯಲಿದ್ದ ಒಂದು ಪೌರಾಣಿಕ ಬಯಲುನಾಟಕಕ್ಕೆ ಹೋಗಲು ಬಯಸಿದಳು ಶಾರದೆ. ಆದರೆ ಶ್ರೀರಾಮಕೃಷ್ಣರಿಗೆ ಇದು ಒಪ್ಪಿಗೆಯಾಗಲಿಲ್ಲ. ಆದ್ದರಿಂದ ನಾಟಕಕ್ಕೆ ಹೋಗುವ ಕಾರ್ಯಕ್ರಮ ನಿಂತುಹೋಯಿತು. ಇದರಿಂದ ಅವರಿಗೆ ನಿರಾಸೆಯಾಗಬಹುದೆಂದು ಭಾವಿಸಿ ಶ್ರೀರಾಮಕೃಷ್ಣರು ಒಂದು ಉಪಾಯ ಮಾಡಿದರು. ಏನದು? ತಾವೇ ಸ್ವತಃ ಆ ನಾಟಕವನ್ನು, ಯಾರ ಸಹಾಯವೂ ಇಲ್ಲದೆ, ಮನೆಯಲ್ಲಿಯೇ ಅಭಿನಯಿಸಿ ತೋರಿಸಿದರು! ಅವರು ಆ ನಾಟಕವನ್ನು ಹಿಂದೆ ಒಮ್ಮೆ ಮಾತ್ರ ನೋಡಿದ್ದರು. ಆದರೆ, ಅವರ ನೆನಪಿನ ಶಕ್ತಿ ಎಷ್ಟು ತೀಕ್ಷ್ಣವೆಂದರೆ, ಆ ಇಡೀ ಪ್ರಸಂಗವನ್ನು ಚಾಚೂ ತಪ್ಪದೆ ಅಭಿನಯಿಸಿದರು! ತಮ್ಮ ಸುಮಧುರ ಕಂಠದಿಂದ ಸುಶ್ರಾವ್ಯವಾಗಿ ಹಾಡಿದರು. ಆ ಅಭಿನಯ, ಸಂವಾದ, ಹಾಡುಗಾರಿಕೆ—ಎಲ್ಲವೂ ಎಷ್ಟು ಸಹಜವಾಗಿ, ಅದ್ಭುತವಾಗಿ ಮೂಡಿಬಂದುವೆಂದರೆ ಮನೆಯುವರೆಲ್ಲ ಎಷ್ಟೋ ಹೊತ್ತು ಮೂಕವಿಸ್ಮಿತರಾಗಿ, ಆನಂದಭರಿತರಾಗಿ ಕುಳಿತಿದ್ದರು.

---

*ಇಲ್ಲಿ ಶ್ರೀರಾಮಕೃಷ್ಣರು 'ವಿಷಸರ್ಪ' ಎಂದಿರುವುದಕ್ಕೆ ಕಾರಣವಿಷ್ಟೆ: ವಿಷಸರ್ಪದ ಬಾಲವನ್ನು ತುಳಿದರೆ ಅದು ತಿರುಗಿಬೀಳುತ್ತದೆ. ಆದರೆ ವಿಷವಿಲ್ಲದ ಹಾವಾದರೆ ತಪ್ಪಿಸಿಕೊಂಡು ಓಡಲು ನೋಡುತ್ತದೆ. ಶಾರದೆ ಪ್ರತ್ಯುತ್ತರ ಕೊಟ್ಟದ್ದರಿಂದ ಅವರು ಹಾಗೆನ್ನುತ್ತಾರೆ.

ಶ್ರೀರಾಮಕೃಷ್ಣರು ತಮ್ಮ ಸತಿಗೆ ಶಿಸ್ತಿನ ಜೀವನಕ್ರಮವನ್ನು ಅಭ್ಯಾಸಮಾಡಿಸುತ್ತಿದ್ದರೂ ಅಲ್ಲೊಂದು ಬಿಗಿಯಾದ ವಾತಾವರಣವಿತ್ತೆಂದು ಅರ್ಥವಲ್ಲ. ಹೊಸ ಸೊಸೆಯಾಗಿ ಮನೆಗೆ ಬಂದ ಶಾರದೆಯಂತೂ ಯಾವ ಭಯ-ಸಂಕೋಚಕ್ಕೂ ಆಸ್ಪದವಿಲ್ಲದೆ ಆನಂದದಿಂದಿದ್ದಳು. ಮುಂದೊಮ್ಮೆ ಶ್ರೀಮಾತೆ ಶಾರದಾದೇವಿಯವರು ಆ ದಿನಗಳ ಬಗ್ಗೆ ಹೇಳುತ್ತಾರೆ: "ಶ್ರೀರಾಮಕೃಷ್ಣರೆಂದೂ ಬೇಸರದ ಮುಖ ಹಾಕಿಕೊಂಡದ್ದನ್ನೇ ನಾನು ನೋಡಲಿಲ್ಲ. ಪ್ರತಿಯೊಬ್ಬನೊಂದಿಗೂ—ಅವನು ಹುಡುಗನಾಗಲಿ, ಮುದುಕನಾಗಲಿ—ಅವರು ಖುಷಿಯಾಗಿರುತ್ತಿದ್ದರು."

ಪ್ರತಿದಿನ ಬೆಳಗಾಗುತ್ತಲೇ ಶ್ರೀರಾಮಕೃಷ್ಣರು, 'ನನಗಿವತ್ತು ಊಟಕ್ಕೆ ಇಂಥ ತರಕಾರಿಯ ಪಲ್ಯ ಆಗಬೇಕು, ದಯವಿಟ್ಟು ಅದನ್ನು ಮಾಡಿ' ಎಂದು ಗಟ್ಟಿಯಾಗಿ ಹೇಳುತ್ತಿದ್ದರು. ಅದನ್ನು ಕೇಳಿ ಶಾರದೆಯೂ ಲಕ್ಷ್ಮಿಯ ತಾಯಿಯೂ* ಸೇರಿಕೊಂಡು ಅದನ್ನೇ ತಯಾರು ಮಾಡುತ್ತಿದ್ದರು. ಆದರೆ ಕೆಲವುದಿನ ಕಳೆದಮೇಲೆ ಶ್ರೀರಾಮಕೃಷ್ಣರೊಮ್ಮೆ ಇದ್ದಕ್ಕಿದ್ದಂತೆ ಹೇಳಿದರು:

"ಅಯ್ಯೋ! ಇದೇನಾಗಿಬಿಟ್ಟಿದೆ ನನಗೆ! ದಿನಬೆಳಗಾಯಿತೆಂದರೆ ಹಾಳಾದ್ದು ಊಟದ್ದೇ ಯೋಚನೆ! ನೋಡು, ಶಾರದಾ, ಇನ್ನು ನನಗೆ ಇಂಥ ಅಡಿಗೆಯೇ ಆಗಬೇಕು, ಅಂಥ ಪಲ್ಯವೇ ಆಗಬೇಕು ಎಂಬ ಯಾವ ಆಸೆಯೂ ಇಲ್ಲ. ನೀನು ಏನು ಅಡಿಗೆ ಮಾಡಿ ಬಡಿಸುತ್ತೀಯೋ ಅದನ್ನೇ ತಿನ್ನುತ್ತೇನೆ."

ತಮಾಷೆ ಮಾಡುವುದೆಂದರೆ ಶ್ರೀರಾಮಕೃಷ್ಣರಿಗೆ ಬಲು ಇಷ್ಟ. ಒಂದು ದಿನ ಅವರು ಊಟಕ್ಕೆ ಕುಳಿತಿದ್ದರು. ಜೊತೆಯಲ್ಲಿ ಹೃದಯನೂ ಇದ್ದ. ಲಕ್ಷ್ಮಿಯ ತಾಯಿಯ ಅಡಿಗೆ ತುಂಬ ರುಚಿ. ಆಕೆ ಮಾಡಿದ ಪಲ್ಯದ ರುಚಿ ನೋಡುತ್ತ ಶ್ರೀರಾಮಕೃಷ್ಣರು ಉದ್ಗರಿಸಿದರು:

"ಓ ಹೃದೆ, ಈ ಪಲ್ಯ ಇದೆ ನೋಡು—ಇದು ವೈದ್ಯ ರಾಮದಾಸ ಪಂಡಿತನ ಲೇಹ್ಯದಂತೆ!" ಬಳಿಕ, ಶಾರದೆ ಮಾಡಿದ ಮತ್ತೊಂದು ಪಲ್ಯವನ್ನು ಬಾಯಿಗೆ ಹಾಕಿಕೊಂಡು ನಗುತ್ತ ಹೇಳಿದರು:

"ಇದನ್ನು ಮಾಡಿದವನು ಆ ಅಳಲೆಕಾಯಿ ಪಂಡಿತ ಶ್ರೀನಾಥ ಸೇನ!"

ಇಲ್ಲಿ, ಲಕ್ಷ್ಮಿಯ ತಾಯಿ ರಾಮದಾಸ ಪಂಡಿತನಂತೆ, ಶಾರದೆ ಅಳಲೆಕಾಯಿ ಪಂಡಿತ ಶ್ರೀನಾಥ ಸೇನನಂತೆ ಎಂಬುದು ಈ ಮಾತಿನ ಅರ್ಥ. ರಾಮದಾಸ ಪಂಡಿತನ ಲೇಹ್ಯ ಒಳ್ಳೇ ರುಚಿಕರವಾದದ್ದು, ಉನ್ನತ ಮಟ್ಟದ್ದು ಎಂದು ಪ್ರಸಿದ್ಧ. ಆದರೆ ಅಳಲೆಕಾಯಿ ಪಂಡಿತನ ಲೇಹ್ಯಕ್ಕೆ ಆ ಗುಣಮಟ್ಟವಿಲ್ಲ; ಎಲ್ಲ ಸಪ್ಪೆಸಪ್ಪೆ. ಹಾಗೆಯೇ ಶಾರದೆಯ ಅಡಿಗೆಯೂ ಕೂಡ ಸಪ್ಪೆಸಪ್ಪೆ ಎಂದು ಶ್ರೀರಾಮಕೃಷ್ಣರು ತಮಾಷೆ

*'ಲಕ್ಷ್ಮಿಯ ತಾಯಿ' ಎಂದರೆ ರಾಮೇಶ್ವರನ ಹೆಂಡತಿ. ಬಂಗಾಳದಲ್ಲಿ ಹೆಂಗಸರನ್ನು ಹೆಸರು ಹಿಡಿದು ಕರೆಯದೆ 'ಇಂಥವರ ತಾಯಿ' ಎಂದು ನಿರ್ದೇಶಿಸುವುದು ವಾಡಿಕೆ.

ಮಾಡುತ್ತಿದ್ದಾರೆ. ಆಗ ಹೃದಯ ಶಾರದೆಯ ಬೆಂಬಲಕ್ಕೆ ಬಂದ:

"ಅದೇನೋ ನಿಜವೇ. ಆದರೆ ಈ ಆಳಲೆಕಾಯಿ ಪಂಡಿತ ನಿಮ್ಮ ಜೊತೆಯಲ್ಲೇ ಸದಾ ಸಿದ್ಧವಾಗಿರುತ್ತಾಳೆ—ಬೇಕೆಂದರೆ ಕಾಲೊತ್ತುವುದಕ್ಕೂ ಕೂಡ. ಸುಮ್ಮನೆ ಒಂದು ಮಾತು ಹೇಳಿಕಳಿಸಿದರೆ ಸಾಕು, ಬಂದುಬಿಡುತ್ತಾಳೆ. ಆದರೆ ಆ ರಾಮದಾಸ ಪಂಡಿತನ ಶುಲ್ಕ ತುಂಬ ದುಬಾರಿ. ಮತ್ತು ಯಾವಾಗೆಂದರೆ ಆವಾಗ ಸಿಗುವವನೂ ಅಲ್ಲ ಅವನು. ಅದೂ ಅಲ್ಲದೆ, ಜನ ಮೊದಲು ಕರೆಯುವುದು ಈ ಆಳಲೆಕಾಯಿ ಪಂಡಿತನನ್ನೇ. ಅವನು, ಕರೆದ ತಕ್ಷಣ ಸೇವೆಗೆ ಸಿದ್ಧ."

ಆಗ ಶ್ರೀರಾಮಕೃಷ್ಣರು ನಗುತ್ತ ಹೇಳಿದರು—"ಅದು ನಿಜ, ಅದು ನಿಜ !"

ಈ ನಡುವೆ ಶ್ರೀರಾಮಕೃಷ್ಣರೊಂದಿಗೆ ಬಂದಿದ್ದ ಭೈರವಿ ಬ್ರಾಹ್ಮಣಿಯ ಸಮಾಚಾರ ಏನಾಯಿತು ? ಅವಳು ಮನೆಯವರೊಂದಿಗೆಲ್ಲ ಚೆನ್ನಾಗಿ ಹೊಂದಿಕೊಂಡು ಇದ್ದಳು. ಶಾರದೆಯ ಜೊತೆಯಲ್ಲಿ ತುಂಬ ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದಳು. ತನ್ನ ಮೆಚ್ಚಿನ ಶಿಷ್ಯನ ಪತ್ನಿ ಎಂಬ ಅಭಿಮಾನ. ಶಾರದೆಯೂ ಬ್ರಾಹ್ಮಣಿಯೊಂದಿಗೆ ತನ್ನ ಅತ್ತೆಯನ್ನು ಕಾಣುವಷ್ಟೇ ಭಕ್ತಿಯಿಂದ ನಡೆದುಕೊಂಡಳು. ಈ ಭಕ್ತಿಯಲ್ಲಿ ಅರ್ಧ ಭಾಗ ಭಯವೂ ಸೇರಿತ್ತು ಎನ್ನಬಹುದು !

ಭೈರವಿ ಬ್ರಾಹ್ಮಣಿ ಕೂಡ ಆಗಾಗ ಅಡಿಗೆ ಕೆಲಸದಲ್ಲಿ ಸೇರಿಕೊಳ್ಳುವುದಿತ್ತು. ಈಕೆ ಪೂರ್ವಬಂಗಾಳದ ಕಡೆಯವಳಾದ್ದರಿಂದ ಇವಳ ಮೆಚ್ಚಿನ 'ತರಕಾರಿ'ಯೆಂದರೆ ಹಸಿ ಮೆಣಸಿನಕಾಯಿ ! ಎಂದರೆ, ಅವಳ ಅಡಿಗೆಯೆಲ್ಲ ಅಷ್ಟು ಖಾರ ! ಒಂದು ದಿನ ಭೈರವಿ ಯಾವುದೋ ಪಲ್ಯ ಮಾಡಿದ್ದಳು. ಅದನ್ನು ಶಾರದಾಮಣಿಗೂ ಲಕ್ಷ್ಮಿಯ ತಾಯಿಗೂ ಬಡಿಸಿ, ಅವರ ಅಭಿಪ್ರಾಯ ಕೇಳಲು ಕಾದುಕುಳಿತಿದ್ದಳು. ಲಕ್ಷ್ಮಿಯ ತಾಯಿ ಪಲ್ಯವನ್ನು ಬಾಯಿಗೆ ಹಾಕಿಕೊಂಡಳೋ ಇಲ್ಲವೋ, "ಅಬ್ಬಬ್ಬಾ! ಉರಿಖಾರ, ಉರಿಖಾರ !" ಎಂದು ಕೂಗಿಕೊಂಡಳು. ಆದರೆ ಶಾರದೆ ಮಾತ್ರ, ಎಲ್ಲಿ ಭೈರವಿಯ ಕೋಪಕ್ಕೆ ಗುರಿಯಾಗಬೇಕಾದೀತೋ ಎಂಬ ಭಯದಿಂದ, "ತುಂಬ ಚೆನ್ನಾಗಿದೆ" ಎಂದೇ ಹೇಳಿದಳು. ಆದರೆ ಹೀಗೆ ಹೇಳುತ್ತಿರುವಾಗ ಮಾತ್ರ ಕಣ್ಣುಗಳಿಂದ ನೀರು ತೊಟ್ಟಿಕ್ಕುತ್ತಿತ್ತು! ಬ್ರಾಹ್ಮಣಿ ಇದನ್ನು ಗಮನಿಸದೆ ಲಕ್ಷ್ಮಿಯ ತಾಯಿಯನ್ನು ಗದರಿದಳು—

"ನೋಡಿದೆಯಾ ? ನನ್ನ ಸೊಸೆ ಎಷ್ಟು ಒಳ್ಳೆಯವಳು ! ಆದರೆ ನೀನಿದ್ದೀಯಲ್ಲ, ನೀನು ! ನಿನಗೆ ಯಾವುದೂ ಚೆನ್ನಾಗಿರುವುದಿಲ್ಲ. ಹೋಗು, ನಾನು ಇನ್ನುಮೇಲೆ ನಿನಗೆ ಪಲ್ಯ ಬಡಿಸುವುದೇ ಇಲ್ಲ!"

ಇನ್ನೊಂದು ದಿನ ಬ್ರಾಹ್ಮಣಿ ಶ್ರೀರಾಮಕೃಷ್ಣರಿಗೆ ಚೈತನ್ಯ ಮಹಾಪ್ರಭುವಿನಂತೆ ಅಲಂಕಾರ ಮಾಡಿ, ಅದನ್ನು ತೋರಿಸಲು ಶಾರದೆಯನ್ನು ಕರೆದಳು. ಆಕೆ ಬರುವ ವೇಳೆಗಾಗಲೇ ಶ್ರೀರಾಮಕೃಷ್ಣರು ದೈವೀಭಾವದಲ್ಲಿ ಮತ್ತರಾಗಿದ್ದರು. ಶಾರದೆಗೋ, ಇಂಥದನ್ನೆಲ್ಲ ಕಂಡು ಅಭ್ಯಾಸವೇ ಇಲ್ಲ; ಸ್ವಲ್ಪ ದಿಗಿಲಾಯಿತು. ಬ್ರಾಹ್ಮಣಿ ಕೇಳಿದಳು, "ಏನು ? ಹೇಗೆ ಕಾಣುತ್ತಾರೆ ಈಗ ?" ಆಗ ಶಾರದೆ, "ಆ ? ಚೆನ್ನಾಗಿದೆ" ಎಂದು ಹೇಳಿ, ಅಲ್ಲಿಂದ ಬೇಗಬೇಗ ನಡೆದುಬಿಟ್ಟಳು. ಮೊದಲೇ ಅವಳು ಸಂಕೋಚ ಪ್ರವೃತ್ತಿಯವಳು. ಮುಖದ ಮೇಲೆ ಸೆರಗೆಳೆದುಕೊಂಡೇ ಮಾತುಕತೆಯೆಲ್ಲ. ಇನ್ನು ಭೈರವಿ ಬ್ರಾಹ್ಮಣಿಯಂತಹ 'ಭದ್ರಮಹಿಳೆ' ಎದುರಿಗಿರುವಾಗ ತಮಾಷೆ ಸಾಧ್ಯವೆ ?

ಶ್ರೀರಾಮಕೃಷ್ಣರು ತಮ್ಮ ಸತಿಯನ್ನು ಸಹಜವಾಗಿ ನಡೆಸಿಕೊಳ್ಳುತ್ತ ಸಾಂಸಾರಿಕ ಜೀವನದಲ್ಲಿ ತೊಡಗಿದ್ದನ್ನು ಕಂಡು ಮನೆಮಂದಿ ಮಾತ್ರವಲ್ಲದೆ ಊರವರೆಲ್ಲ ಸಂತಸ ಪಟ್ಟರು. ಭೈರವಿ ಬ್ರಾಹ್ಮಣಿಯೂ ಶಾರದೆಯನ್ನು ಪ್ರೀತಿಯಿಂದ ಕಂಡು ಸೊಸೆಯೆಂಬಂತೆ ನಡೆಸಿಕೊಂಡುದನ್ನು ಈವರೆಗೆ ನೋಡಿದೆವು. ಆದರೆ ಬ್ರಾಹ್ಮಣಿ ಹೀಗೆ ಸಂತೋಷದಿಂದ ನಗುನಗುತ್ತ ಇದ್ದುದು ಕೆಲಕಾಲ ಮಾತ್ರ. ಆಮೇಲೆ ಅವಳ ಸ್ವಭಾವವೇ ಬದಲಾಗಿಹೋಯಿತು. ಅವಳ ಮನಸ್ಸಿನಲ್ಲಿ ಏನೋ ಸಂಕಟ, ತಳಮಳ. ಯಾವಾಗಲೂ ಏನೋ ಅಸಮಾಧಾನ. ಅದರಲ್ಲೂ ಶಾರದೆಯ ಮೇಲೆ ವಿನಾ ಕಾರಣ ಸಿಟ್ಟು. ಶಾರದೆಯೋ ಇನ್ನೂ ಹದಿನಾಲ್ಕರ ಬಾಲೆ; ಕಪಟವರಿಯದ ಸರಳೆ. ಯಾರಿಗೂ ಅಪಚಾರವನ್ನೆಣಿಸಿದವಳೇ ಅಲ್ಲ. ಆದರೂ ಬ್ರಾಹ್ಮಣಿಗೆ ಮಾತ್ರ ಅವಳು ಮಾಡಿದ್ದೊಂದೂ ಸರಿಬರದು! ಇದೊಂದು ಆಶ್ಚರ್ಯವೇ ಸರಿ. ಮೊದಮೊದಲು ಅವಳೊಡನೆ ಅಷ್ಟು ಚೆನ್ನಾಗಿದ್ದ ಬ್ರಾಹ್ಮಣಿ ಹಾಗೇಕೆ ಬದಲಾದಳು? ಅದಕ್ಕೆ, ಬರಿಗಣ್ಣಿಗೆ ಕಾಣದ ಕಾರಣವೊಂದು ಹಿಂದಿತ್ತು.

ಶ್ರೀರಾಮಕೃಷ್ಣರು ವಿವಾಹಿತರೆಂಬ ವಿಷಯ ಬ್ರಾಹ್ಮಣಿಗೆ ಮೊದಲಿನಿಂದಲೂ ತಿಳಿಯದ್ದೇನಲ್ಲ. ಆದರೂ ಅದನ್ನವಳು ಎಂದೂ ದೋಷವೆಂದು ಪರಿಗಣಿಸಿರಲಿಲ್ಲ. ಆದರೆ ಯಾವಾಗ ಅವರು ತಮ್ಮ ಪತ್ನಿಯೊಡನೆ ಆತ್ಮೀಯವಾಗಿ ಬೆರೆತು ವ್ಯವಹರಿಸಲಾರಂಭಿಸಿದರೋ, ಆಗ ಅವಳ 'ಗುರು'ಬುದ್ಧಿ ಎಚ್ಚತ್ತುಕೊಂಡಿತು. ಶ್ರೀರಾಮಕೃಷ್ಣರಿಗೆ ಆಕೆ ಹೇಳಿದಳು, "ನೋಡು, ನೀನು ಹಾಗೆಲ್ಲ ಅವಳೊಡನೆ ಬೆರೆಯಬೇಡ. ಅಷ್ಟೊಂದು ಸಲಿಗೆಯಿಂದಿದ್ದುಬಿಟ್ಟರೆ ನಿನ್ನ ಬ್ರಹ್ಮಚರ್ಯಕ್ಕೆ ಹಾನಿ ತಟ್ಟುತ್ತದೆ!" ಎಂದು. ಆದರೆ ಅವಳು ಈ ಮಾತನ್ನು ಹೇಳಬೇಕಾದ ಆವಶ್ಯಕತೆಯಿತ್ತೆ? ಹಿಂದೆ ತಂತ್ರಸಾಧನೆಯ ಸಮಯದಲ್ಲಿ ಅತ್ಯಂತ ಕಠಿಣ ಪರೀಕ್ಷೆಗಳಲ್ಲೂ 'ನ ಭೂತೋ ನ ಭವಿಷ್ಯತಿ' ಎಂಬಂತಹ ರೀತಿಯಲ್ಲಿ ಅತ್ಯುನ್ನತ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದವರಲ್ಲವೆ ಶ್ರೀರಾಮಕೃಷ್ಣರು? ಅದನ್ನು ಕಂಡು ಆಗ ಸ್ವತಃ ಅವಳೇ ಆಶ್ಚರ್ಯಚಕಿತಳಾಗಿದ್ದಳು. ನಟಿಯಾಗಲಿ ಅಥವಾ ಸತಿಯಾಗಲಿ, ಯಾವೊಬ್ಬ ಸ್ತ್ರೀಯನ್ನು ಕಂಡರೂ ತಕ್ಷಣ ಮನಸ್ಸಿನಲ್ಲಿ ಜಗನ್ಮಾತೆಯ ಸ್ಮರಣೆಯುಂಟಾಗಿ ಶಿಶುವಿನಂತಾಗಿಬಿಡುತ್ತಿದ್ದವರು ಅವರು. ಇದನ್ನೆಲ್ಲ ಸ್ಪಷ್ಟವಾಗಿ ಅರಿತವಳು ಬ್ರಾಹ್ಮಣಿ. ಅಷ್ಟೇ ಅಲ್ಲ, ತಂತ್ರಸಾಧನೆಯ ವಿಷಯದಲ್ಲಿ ಅವರ ಉನ್ನತ ಮಟ್ಟದ ಪರಿಣತಿಯನ್ನು ಕಂಡು, ತಾನೂ ಆ ಎತ್ತರಕ್ಕೇರಬೇಕೆಂಬ ಹಂಬಲ ಅವಳಲ್ಲುಂಟಾಗಿತ್ತು. ಹಾಗಿರುವಾಗ, ಈಗ ಅವಳು ಸಂಯಮದ ವಿಷಯದಲ್ಲಿ ಅವರಿಗೆ ಎಚ್ಚರಿಕೆ ಹೇಳುವ ಅಗತ್ಯವಿತ್ತೆ?

ಅದರ ಅಗತ್ಯವಿಲ್ಲ ಎನ್ನುವುದು ಸ್ವತಃ ಬ್ರಾಹ್ಮಣಿಗೇ ತಿಳಿಯದ ವಿಷಯವೇನಲ್ಲ. ಹಾಗಿದ್ದರೂ ಅವಳು ಇದ್ದಕ್ಕಿದ್ದಂತೆ ಆ ಬಗ್ಗೆ ಆತಂಕಗೊಂಡುದಕ್ಕೆ ಬೇರೊಂದು ಕಾರಣವಿತ್ತು. ಇದನ್ನು ಶ್ರೀರಾಮಕೃಷ್ಣರು ಅರಿತಿದ್ದರು. ಅದು ಅವರ ಮೇಲಿನ ಸ್ವಾರ್ಥಪ್ರೇಮ; ಅದರಿಂದುದಿಸಿದ ಮತ್ಸರ! ಯಾರ ಬಗ್ಗೆ ಮತ್ಸರ? ಶಾರದೆಯ ಬಗ್ಗೆ!

ಇದು ಬ್ರಾಹ್ಮಣಿಯ ದೌರ್ಬಲ್ಯಗಳಲ್ಲೊಂದು. ಶ್ರೀರಾಮಕೃಷ್ಣರು ಯಾರೊಡನಾದರೂ ಹೆಚ್ಚಾಗಿ ಬೆರೆತರೆ, ಅಥವಾ ಯಾರಾದರೂ ಭಕ್ತರನ್ನು ಮೆಚ್ಚಿಕೊಂಡು ಸನ್ಮಾನಿಸಿದರೆ ಅವಳಿಗಾಗಲೇ ಹೊಟ್ಟೆಕಿಚ್ಚು ಪ್ರಾರಂಭವಾಗುತ್ತಿತ್ತು. ಇದನ್ನರಿತಿದ್ದ ಶ್ರೀರಾಮಕೃಷ್ಣರು ಅವಳ ಮಾತಿಗೆ ಅಗತ್ಯಕ್ಕಿಂತ ಹೆಚ್ಚಿನ ಬೆಲೆ ಕೊಡುತ್ತಿರಲಿಲ್ಲ. ಅಲ್ಲದೆ ಆಧ್ಯಾತ್ಮಿಕ ಸಾಧನೆ-ಸಿದ್ಧಿಗಳ ವಿಷಯದಲ್ಲಿ ಹೇಳಬೇಕೆಂದರೆ, ಅದರಲ್ಲೂ ಅವಳಿಗೆ ಬಹಳ ಇತಿಮಿತಿಗಳಿದ್ದುವು. ಪರಮಹಂಸ ತೋತಾಪುರಿಯು ಶ್ರೀರಾಮಕೃಷ್ಣರ ಯೋಗ್ಯತೆಯನ್ನು ಮನಗಂಡು, ಅವರಿಗೆ ಅದ್ವೈತಸಾಧನೆಯ ಮಾರ್ಗವನ್ನು ಬೋಧಿಸತೊಡಗಿದಾಗಲೂ ಈ ಬ್ರಾಹ್ಮಣಿ ಆತಂಕಗೊಂಡದ್ದನ್ನು ನಾವು ನೋಡಲಿಲ್ಲವೆ ? 'ಅವನ ಸಹವಾಸ ಮಾಡಬೇಡ, ಆತನದು ಶುಷ್ಕಮಾರ್ಗ; ಅವನ ಜೊತೆಯಲ್ಲಿದ್ದರೆ ನಿನ್ನ ಭಕ್ತಿ-ಪ್ರೇಮಗಳೆಲ್ಲ ನಶಿಸಿಹೋಗುತ್ತವೆ' ಎಂದು ಅವಳಾಗ ಎಚ್ಚರಿಸಿದ್ದಳು. ಆದರೆ, ಶುದ್ಧಭಕ್ತಿಯೂ ಶುದ್ಧ ಜ್ಞಾನವೂ ಒಂದೇ ಎಂಬ ಸತ್ಯವನ್ನು ಅವಳು ಕನಸಿನಲ್ಲೂ ಊಹಿಸಲು ಅಸಮರ್ಥಳಾಗಿದ್ದಳು. ಇದನ್ನರಿತಿದ್ದ ಶ್ರೀರಾಮಕೃಷ್ಣರು ಅವಳ ಮಾತಿನಂತೆ ನಡೆಯಲಿಲ್ಲ. ಹಾಗೆಯೇ ಈಗಲೂ, ಅವರು ಪತ್ನಿಯೊಡನೆ ಬೆರೆಯಲು ಅವಳು ಆಕ್ಷೇಪಿಸಿದಾಗ ಅದನ್ನು ಅವರು ಉಪೇಕ್ಷಿಸಿದರು.

ಸಹಜವಾಗಿಯೇ ಇದರಿಂದ ಭೈರವಿಗೆ ಅಸಮಾಧಾನವಾಯಿತು; ಕ್ರಮೇಣ ಅದು ಮತ್ಸರದ ರೂಪ ತಾಳಿತು. ಆದರೆ ಅವಳಂತಹ ಶ್ರೇಷ್ಠಮಟ್ಟದ ಸಾಧಕಿಯಲ್ಲಿ ಮಾತ್ಸರ್ಯ ಉದಿಸಿದ್ದು ಕಲಿಯ ವಿಡಂಬನೆಯೇ ಸರಿ! ಪತ್ನಿಯನ್ನು ಪ್ರೀತಿಯಿಂದ ಕಾಣುವುದು ಲೋಕದಲ್ಲಿ ಸಹಜ ಸಂಗತಿ ಎಂಬುದು ಅವಳಿಗೆ ತಿಳಿದಿರಬೇಡವೆ ? ಅಲ್ಲದೆ, ಶ್ರೀರಾಮಕೃಷ್ಣರು ತನ್ನನ್ನು ಗುರುವಾಗಿ ಸ್ವೀಕರಿಸಿ ಯಾವ ಭಕ್ತಿ-ಶ್ರದ್ಧೆಯನ್ನಿಟ್ಟರೋ ಅದನ್ನು, ಸತ್ಯಸಂಧರಾದ ಅವರು ಎಂದಿಗೂ ಬದಲಾಯಿಸುವವರಲ್ಲ ಎಂಬುದನ್ನು ಅವಳು ಅರಿಯದೆಹೋದಳಲ್ಲ!

ಅಂತೂ ಬ್ರಾಹ್ಮಣಿಗೆ ತಾನು ಮಾಡುತ್ತಿರುವ ತಪ್ಪು ತಿಳಿಯಲೇ ಇಲ್ಲ. ಯಾವುದೋ ಸುಕೃತದಿಂದಾಗಿ ಅವಳಿಗೆ ಶ್ರೀರಾಮಕೃಷ್ಣರ ಗುರುವಾಗುವ ಅವಕಾಶ ಪ್ರಾಪ್ತವಾಗಿತ್ತು. ಆದರೆ ಅವಳು ಮಾತ್ರ ಹಾಗೆ ಭಾವಿಸಲಿಲ್ಲ. ಬದಲಾಗಿ, 'ನಾನು ಎಲ್ಲರಿಗಿಂತ ಹಿರಿಯಳು, ಶ್ರೇಷ್ಠಳು. ಪ್ರತಿಯೊಬ್ಬರೂ ನನ್ನ ಮಾತಿನಂತೆಯೇ ನಡೆಯಬೇಕು. ಇಲ್ಲದಿದ್ದರೆ ಅವರಿಗೆ ಕೇಡು ಕಟ್ಟಿಟ್ಟದ್ದು' ಎಂಬಂತಹ ಧೋರಣೆಯನ್ನು ಬೆಳೆಸಿಕೊಂಡಳು. ಅವಳ ಅಭಿಮಾನಕ್ಕೆ ತಗುಲಿದ ಪೆಟ್ಟು ಅವಳ ವಿವೇಕವನ್ನು ಕುರುಡಾಗಿಸಿತ್ತು. ಅವಳೀಗ ಶ್ರೀರಾಮಕೃಷ್ಣರ ವಿಷಯದಲ್ಲೂ ದರ್ಪದಿಂದ ವರ್ತಿಸತೊಡಗಿದಳು. ಯಾರಾದರೂ ಅವಳೊಂದಿಗೆ ಆಧ್ಯಾತ್ಮಿಕ ವಿಷಯವಾಗಿ ಮಾತನಾಡುತ್ತ, "ಈ ಬಗ್ಗೆ ಶ್ರೀರಾಮಕೃಷ್ಣರೇನೆನ್ನುತ್ತಾರೋ ಕೇಳಬೇಕು" ಎಂದರೆ ಸಾಕು, ಅವಳಿಗೆ ರೇಗಿಹೋಗುತ್ತಿತ್ತು. "ಅವನಿನ್ನೇನು ಹೇಳಿಯಾನು ? ಅವನಿಗೆ ಜ್ಞಾನವನ್ನು ದೊರಕಿಸಿಕೊಟ್ಟವಳೇ ನಾನಲ್ಲವೆ ?" ಎಂದು ಸಿಡುಕುತ್ತಿದ್ದಳು.

'ನನ್ನನ್ನು ಆತ ಕಡೆಗಣಿಸಲು ಇವಳೇ ಕಾರಣ' ಎಂದು ಶಾರದೆಯ ಮೇಲೆ ಬ್ರಾಹ್ಮಣಿಗೆ ಒಳಗೊಳಗೇ ಸಿಟ್ಟು. ಆದರೆ ಶಾರದೆಯ ಯಾವ ವರ್ತನೆಯಲ್ಲೂ ಒಂದು ತಪ್ಪನ್ನೂ ಹುಡುಕಲು ಆಕೆಗೆ ಸಾಧ್ಯವಿರಲಿಲ್ಲ. ಅಲ್ಲದೆ ಆಕೆ ಎಷ್ಟು ಒರಟಾಗಿ ನಡೆದುಕೊಂಡರೂ ಶಾರದೆ ಮಾತ್ರ ಶ್ರೀರಾಮಕೃಷ್ಣರ ಮಾತಿನಂತೆ ಅವಳನ್ನು ಅತ್ತೆಗೆ

ಸಮಾನಳೆಂದು ತಿಳಿದು ಪ್ರೀತಿ-ಭಕ್ತಿಯುತ ಸೇವೆ ಮಾಡಿದಳು. ಅಂತೆಯೇ ಶ್ರೀರಾಮ ಕೃಷ್ಣರೂ ಕೂಡ ಅವಳ ಮೇಲೆ ಮನಸ್ಸಿನಲ್ಲೂ ಅಸಮಾಧಾನ ತಾಳದೆ ಹಿಂದಿನ ಶ್ರದ್ಧಾ ಭಕ್ತಿಯಿಂದಲೇ ಕಾಣುತ್ತಿದ್ದರು.

ಭೈರವಿಯ ಸಿಟ್ಟು ಮಾತ್ರ ನಿಲ್ಲಲೇ ಇಲ್ಲ. ಅವಕಾಶ ಸಿಕ್ಕಿದರೆ ಮನೆಯಲ್ಲಿ ಯಾರ ಮೇಲಾದರೂ ರೇಗುತ್ತಿದ್ದಳು. ಅಷ್ಟೇ ಅಲ್ಲ, ನೆರೆಹೊರೆಯ ಹೆಂಗಸ ರೊಂದಿಗೂ ಸಂಬಂಧ ಕೆಟ್ಟಿತು. ಅವರೆಲ್ಲ 'ಎಷ್ಟಾದರೂ ಈಕೆ ನಮ್ಮ ರಾಮಕೃಷ್ಣರ ಗುರುವಲ್ಲವೆ ?' ಎಂಬ ಅಭಿಮಾನದಿಂದಾಗಿ ಅವಳ ಆಟಾಟೋಪವನ್ನು ಸಹಿಸಿಕೊಂಡಿ ದ್ದರು. ಆದರೆ ಈಗ ಆ ಸಹನೆಯ ಕಟ್ಟೆ ಒಡೆಯಿತು; ಬರಬರುತ್ತ ಅವರಿಗೆ ಅವಳ ಮೇಲಿನ ಗೌರವ ಕಡಮೆಯಾಯಿತು. ಹೃದಯನಿಗಂತೂ ಅವಳನ್ನು ಕಂಡರೇ ಆಗ ದಂತಾಯಿತು. ಒಟ್ಟಿನಲ್ಲಿ ಎಲ್ಲರೂ ಅವಳ ಮೇಲೆ ತಿರುಗಿಬೀಳಲು ಸಿದ್ಧರಾಗುವ ಸ್ಥಿತಿಗೆ ಮುಟ್ಟಿದರು.

ಅಹಂಕಾರ ನೆತ್ತಿಗೇರಿದರೆ ಎಂಥ ಬುದ್ಧಿವಂತನಿಗೂ ಮತಿಗೆಡುತ್ತದೆ ಎಂಬುದು ಸುಳ್ಳಲ್ಲ. ಅದರ ಫಲವಾಗಿ ಅವನು ಹೆಜ್ಜೆಹೆಜ್ಜೆಗೂ ತಿನ್ನುತ್ತಾನೆ ಪೆಟ್ಟು ! ಉಣ್ಣುತ್ತಾನೆ ನೋವು ! ಬಳಿಕ ಹತಾಶೆಯಿಂದ ರೋಸಿಹೋಗುತ್ತಾನೆ. ಆಗಲೂ ಅವನಲ್ಲಿ ಒಂದಿಷ್ಟು ವಿವೇಕವೇನಾದರೂ ಉಳಿದಿದ್ದಲ್ಲಿ, ಅದು ಅವನ ಕಣ್ಣು ತೆರೆಸುತ್ತದೆ, ಅವನ ತಪ್ಪನ್ನು ಅವನಿಗೇ ತೋರಿಸಿಕೊಡುತ್ತದೆ. ಕೊನೆಗವನು ಮೇಲೇಳಲು ಆ ಅನುಭವವೇ ಊರು ಗೋಲಾಗುತ್ತದೆ. ಬ್ರಾಹ್ಮಣಿಯ ವಿಷಯದಲ್ಲೂ ಹಾಗೆಯೇ ಆಯಿತು. ವಿಮೂಢಳಾಗಿ ವಿವೇಚನಾರಹಿತಳಾಗಿದ್ದ ಆಕೆ ತನ್ನ ಅವನತಿಯ ಅಧೋಬಿಂದುವನ್ನು ಬೇಗನೆ ಮುಟ್ಟಿದಳು.

ಕಾಮಾರಪುಕುರದ ಶ್ರೀನಿವಾಸ ಶಾಂಖಾರಿ ಎನ್ನುವವನು ಶ್ರೀರಾಮಕೃಷ್ಣರ ಹಳೆಯ ಪರಿಚಿತ. ಇವನು ಉತ್ತಮ ಜಾತಿಯಲ್ಲಿ ಜನಿಸಿದವನಲ್ಲ; ಆದರೆ ಭಗವದ್ ಭಕ್ತಿಯಲ್ಲಿ, ವಿವೇಕದಲ್ಲಿ ಎಷ್ಟೋ ಬ್ರಾಹ್ಮಣರಿಗಿಂತಲೂ ಶ್ರೇಷ್ಠನಾದವನು. ಮೊದಲಿ ನಿಂದಲೂ ಇವನಿಗೆ ಶ್ರೀರಾಮಕೃಷ್ಣರ ವಿಷಯದಲ್ಲಿ ಅತಿಶಯವಾದ ಭಕ್ತಿ, ವಿಶ್ವಾಸ. ಶ್ರೀರಾಮಕೃಷ್ಣರ ಮನೆಯವರೂ ಇವನೊಂದಿಗೆ ತುಂಬ ಸದ್ಭಾವದಿಂದಿದ್ದರು.

ಒಂದು ದಿನ ಇವನು ಶ್ರೀರಾಮಕೃಷ್ಣರ ದರ್ಶನ ಮಾಡಿಕೊಂಡು ರಘುವೀರ ಸ್ವಾಮಿಯ ಪ್ರಸಾದ ಪಡೆದುಕೊಂಡು ಹೋಗಲು ಬಂದಿದ್ದ. ಈತನನ್ನು ಕಂಡು ಶ್ರೀರಾಮಕೃಷ್ಣರೂ ಅವರ ಮನೆಯವರೂ ಬಹಳ ಸಂತೋಷಪಟ್ಟರು. ಭೈರವಿಯೂ ಕೂಡ ಈತನ ಭಕ್ತಿವಿಶ್ವಾಸಗಳನ್ನು ಕಂಡು ಸಂತುಷ್ಟಳಾಗಿದ್ದಳು. ಅಂದು ಮಧ್ಯಾಹ್ನದ ವರೆಗೂ ಭಗವಚ್ಚಿಂತನೆ-ಭಜನೆ-ಸಂಕೀರ್ತನೆಗಳಲ್ಲಿ ಸಮಯ ಕಳೆಯಿತು. ಶ್ರೀರಘು ವೀರನಿಗೆ ನೈವೇದ್ಯಾದಿಗಳು ಮುಗಿದುವು. ಶ್ರೀನಿವಾಸನನ್ನು ಕುಳ್ಳಿರಿಸಿ ಪ್ರಸಾದವನ್ನು ಬಡಿಸಿದರು.

ಇಲ್ಲಿಯವರೆಗೆ ಎಲ್ಲವೂ ಸರಿ. ಊಟ ಮುಗಿಸಿ ಎದ್ದ ಶ್ರೀನಿವಾಸ, ಪದ್ಧತಿಯಂತೆ ತಾನು ಉಂಡ ಸ್ಥಳವನ್ನು ತಾನೇ ಶುಚಿಗೊಳಿಸಲು ಹೊರಟ. ಬ್ರಾಹ್ಮಣೇತರರ ಎಂಜ ಲನ್ನು ಬ್ರಾಹ್ಮಣರು ಶುಚಿಗೊಳಿಸದಿರುವುದು ಸರ್ವೇಸಾಧಾರಣ ವಿಷಯ. ಇದು ಆಗಿನ ಕಾಲದಲ್ಲಿ ಅತ್ಯಂತ ಕಟ್ಟುನಿಟ್ಟಾಗಿ ಅನುಸರಿಸಲ್ಪಡುತ್ತಿದ್ದ ಶಿಷ್ಟಾಚಾರ. ಯಾರೂ ಇದನ್ನು ಉಲ್ಲಂಘಿಸುವಂತೆಯೇ ಇರಲಿಲ್ಲ. ಹಳ್ಳಿಗಳಲ್ಲಂತೂ ಯಾರಾದರೂ ಇಂಥ ನಿಯಮ

ಗಳನ್ನು ಮುರಿದರೆ ಭಾರೀ ಗಲಾಟೆಗಿಟ್ಟುಕೊಳ್ಳುತ್ತಿತ್ತು. ಹೀಗಿರುವಾಗ ಇದ್ದಕ್ಕಿದ್ದಂತೆ ಬ್ರಾಹ್ಮಣಿ, ''ಇರಲಿ ಬಿಡು. ನಾನೇ ಅದನ್ನು ಶುಚಿಗೊಳಿಸುತ್ತೇನೆ'' ಎಂದು ಅವನನ್ನು ತಡೆದಳು. ಅದಕ್ಕವನು, ''ಛೆ ಛೆ, ಎಲ್ಲಾದರೂ ಉಂಟೆ !'' ಎಂದು ತಾನೇ ಶುಚಿಗೊಳಿಸ ತೊಡಗಿದ. ಆದರೂ ಬ್ರಾಹ್ಮಣಿ ಬಿಡದೆ ಅವನನ್ನು ಮತ್ತೆಮತ್ತೆ ಒತ್ತಾಯಿಸಿದ್ದರಿಂದ, ಗತ್ಯಂತರವಿಲ್ಲದೆ ಕಡೆಗೆ ಹಾಗೆಯೇ ಬಿಟ್ಟೆದ್ದು ಅಲ್ಲಿಂದ ನಿರ್ಗಮಿಸಿದ.

ಈ ವೇಳೆಗೆ ಶ್ರೀರಾಮಕೃಷ್ಣರ ದರ್ಶನಾಕಾಂಕ್ಷಿಗಳಾಗಿ ಅಲ್ಲಿಗೆ ಎಷ್ಟೋ ಬ್ರಾಹ್ಮಣ ಮಹಿಳೆಯರು ಬಂದಿದ್ದರು. ಈಗ ಭೈರವಿ ಎಂಜಲನ್ನು ಶುಚಿಗೊಳಿಸಲು ಹೊರಟದ್ದನ್ನು ಕಂಡು ಅವರೆಲ್ಲ ಬಲವಾಗಿ ಆಕ್ಷೇಪಿಸಿದರು. ಬ್ರಾಹ್ಮಣಸ್ತ್ರೀಯಾದ ಆಕೆ ಹಾಗೆ ಮಾಡು ವಂತಿಲ್ಲ, ಮಾಡಕೂಡದು ಎಂಬುದು ಅವರೆಲ್ಲರ ವಾದ. ಆದರೆ ಭೈರವಿ ಅವರ ಮಾತನ್ನು ಕೇಳಲಿಲ್ಲ. ''ನಿಮಗೆ ಇಷ್ಟವಿಲ್ಲದಿದ್ದರೆ ನೀವು ಸುಮ್ಮನಿರಿ. ನಾನಂತೂ ಮಾಡಿಯೇ ತೀರುವವಳು'' ಎಂದು ಜವಾಬುಕೊಟ್ಟಳು. ಆಗ ಆ ಹೆಂಗಸರು, ''ಇದು ನಿಮ್ಮ ಇಷ್ಟಾನಿಷ್ಟದ ಪ್ರಶ್ನೆಯಲ್ಲ. ಬ್ರಾಹ್ಮಣರೆಂದಮೇಲೆ ನೀವಿದನ್ನು ಶುಚಿಗೊಳಿಸು ವಂತಿಲ್ಲ. ಮಾಡಿದರೆ ಆ ದೋಷ ನಮಗೂ ತಟ್ಟುತ್ತದೆ'' ಎಂದರು. ಈ ವಾಗ್ವಿವಾದ ಹೃದಯರಾಮನ ಕಿವಿಗೆ ಮುಟ್ಟಿತು: ಅವನು ಓಡಿಬಂದ. ಅಲ್ಲಿನ ಪರಿಸ್ಥಿತಿಯನ್ನು ಕಂಡು ಭೈರವಿಯ ಮನವೊಲಿಸಲು ನೋಡಿದ.

ಹೃದಯ: ''ನೋಡಿ, ಇದೊಂದು ಸಣ್ಣ ವಿಷಯ. ಇದನ್ನು ಇಷ್ಟಕ್ಕೇ ಬಿಟ್ಟುಬಿಡಿ. ಅಲ್ಲದೆ ಇಷ್ಟೊಂದು ಜನ ಬೇಡ ಎನ್ನುತ್ತಿರುವಾಗ, ನೀವು ಹಾಗೆ ಮಾಡಿದರೆ ಸುಮ್ಮನೆ ದೊಡ್ಡ ಗಲಾಟೆಗಿಟ್ಟುಕೊಳ್ಳುತ್ತದೆ.''

ಬ್ರಾಹ್ಮಣಿ: ''ಯಾರೇನು ಬೇಕಾದರೂ ಹೇಳಿಕೊಳ್ಳಲಿ. ನನಗೆ ಸರಿ ಎನಿಸಿದ್ದನ್ನು ನಾನು ಮಾಡುವವಳೇ.''

ಹೃದಯ: ''ಆದರೆ ಸಮಾಜದಲ್ಲಿ ಜನ ಏನೆನ್ನುತ್ತಾರೆ ಎಂಬುದನ್ನು ಸ್ವಲ್ಪ ನೋಡಬೇಕಾಗುತ್ತದೆ. ತಿಳಿದವರ ಮಾತನ್ನು ಕೇಳಬೇಕಾಗುತ್ತದೆ.''

ಬ್ರಾಹ್ಮಣಿ: ''ಏನಯ್ಯ ? ಯಾವುದು ಸರಿ ಯಾವುದು ತಪ್ಪು ಎನ್ನುವುದನ್ನು ನಾನು ನಿಮ್ಮಿಂದ ಕಲಿತುಕೊಳ್ಳಬೇಕೋ ?''

ಈಗ ಹೃದಯ ಸ್ವಲ್ಪ ಗಡುಸಾಗಿಯೇ ಎಂದ: ''ನಾನು ಹೇಳುವುದಿಷ್ಟೆ: ನೀವು ಇಷ್ಟು ಜನರ ಮಾತಿಗೆ ಗೌರವ ಕೊಟ್ಟು ಸುಮ್ಮನಿರಬೇಕು. ಇಲ್ಲದೆಹೋದರೆ . . . ನಿಮ್ಮನ್ನು ಇಲ್ಲಿರಲು ಬಿಡುವುದಿಲ್ಲ, ನೋಡಿಕೊಳ್ಳಿ !''

ಈಗ ಬ್ರಾಹ್ಮಣಿ ಕೆಣಕಿದ ಫಣಿಯಾದಳು: ''ಏನೋ ? ನನ್ನನ್ನು ಹೆದರಿಸು ತ್ತೀಯಾ ? ನಾನು ಮುನಿದರೆ ಮಾರಿ, ತಿಳಿದುಕೊ !''

ಪರಿಸ್ಥಿತಿ ವಿಕೋಪಕ್ಕೆ ಹೋಗುತ್ತಿರುವುದನ್ನು ಕಂಡು ಮನೆಯುವರೆಲ್ಲ ಮಧ್ಯ ಸ್ಥಿಕೆಗೆ ಬಂದರು. ನಾನಾ ರೀತಿಯ ಸಾಂತ್ವನದ ಮಾತುಗಳನ್ನಾಡಿ ಬ್ರಾಹ್ಮಣಿಯನ್ನು ಸಮಾಧಾನಗೊಳಿಸಿ, ಆಕೆ ಎಂಜಲನ್ನು ಶುಚಿಗೊಳಿಸದಂತೆ ತಡೆದರು. ಅಂತೂ ಹೇಗೋ ಅಂದಿನ ವಿವಾದ ತೀರಿತು.

ಈ ಘಟನೆ ನಡೆಯುತ್ತಿದ್ದಾಗ ಶ್ರೀರಾಮಕೃಷ್ಣರು ಅಲ್ಲಿದ್ದರಲ್ಲ, ಅವರ ಪ್ರತಿಕ್ರಿಯೆ ಯೇನೂ ಇರಲಿಲ್ಲವೆ ? ತಮ್ಮ ಗುರುವನ್ನು ಹೃದಯರಾಮ ತರಾಟೆಗೆ ತೆಗೆದುಕೊಂಡ ದ್ದನ್ನು ನೋಡಿಯೂ ಸುಮ್ಮನೆ ಕುಳಿತರೆ? ಬ್ರಾಹ್ಮಣಿ ಮಾಡಹೊರಟದ್ದಾದರೂ

ಒಳ್ಳೆಯದನ್ನೇ ಅಲ್ಲವೆ ? ಉಚ್ಚ-ನೀಚವೆಂಬ ಭೇದಬುದ್ಧಿಯನ್ನು ತೊಡೆಯಲೋಸುಗ ಶ್ರೀರಾಮಕೃಷ್ಣರೂ ಅಂತಹ ಕಾರ್ಯವನ್ನು ದಕ್ಷಿಣೇಶ್ವರದಲ್ಲಿ ಮಾಡಿದವರಲ್ಲವೆ ?

ನಿಜ. ಆದರೆ ಶ್ರೀರಾಮಕೃಷ್ಣರು ಯಾವಾಗಲೂ ಬಾಲಭಾವದಲ್ಲಿ ಇರುತ್ತಿದ್ದವರು ಎಂಬುದನ್ನು ನಾವು ನೆನಪಿಸಿಕೊಳ್ಳಬೇಕು. ಪ್ರತಿಯೊಂದು ಕಾರ್ಯವೂ ಭಗವಂತನ ಇಚ್ಛೆಗೆ ಅನುಸಾರವಾಗಿಯೇ ನಡೆಯಲು ಬಿಟ್ಟವರು ಅವರು. ಸ್ವತಃ ತಮಗೇ ಯಾರಿಂದಾದರೂ ತೊಂದರೆಯಾದಾಗಲೂ ಪ್ರತಿರೋಧ ವ್ಯಕ್ತಪಡಿಸದೆ ಜಗನ್ಮಾತೆಯ ಮರೆಹೋಗುತ್ತಿದ್ದವರು ಅವರು. ಅಲ್ಲದೆ ಬ್ರಾಹ್ಮಣಿಯ ದರ್ಪ-ಗರ್ವ ಅವರ ಗಮನಕ್ಕೆ ಬಾರದಿದ್ದುದೇನಲ್ಲ. ಆದರೆ ಆ ಗರ್ವವನ್ನು ಮುರಿಯಲು ತಾವಾಗಿಯೇ ಮುಂದಾಗುವವರೂ ಅಲ್ಲ. ಎಲ್ಲವನ್ನೂ ಜಗನ್ಮಾತೆಯಿಂದಲೇ ಮಾಡಿಸುವ ಜಾಣತನ ಅವರದು. ಹಿಂದೆ ಗುರು ತೋತಾಪುರಿಗೆ ಆಕೆಯ ಮೂಲಕ ಕಲಿಸಿದ ಪಾಠ ಎಷ್ಟು ಪರಿಣಾಮಕಾರಿಯಾಗಿತ್ತು! ಈಗ ಭೈರವಿಯ ಸರದಿ ಬಂದಿದೆ!

ಬ್ರಾಹ್ಮಣಿ ಅಂದು ಸಮಾಧಾನ ತಂದುಕೊಂಡು ಸುಮ್ಮನಾದರೂ ಅವಳ ಅಭಿಮಾನಕ್ಕೆ ಬಲವಾದ ಧಕ್ಕೆ ತಗುಲಿತ್ತು. ಇದರಿಂದಾಗಿ ಮನಶ್ಶಾಂತಿಯನ್ನು ಕಳೆದುಕೊಂಡು ತೊಳಲಾಡಿದಳು. ಆದರೆ ಕೋಪವಿಳಿದು ಮನಸ್ಸು ತಣ್ಣಗಾದಮೇಲೆ ನಿಧಾನವಾಗಿ ಆಲೋಚಿಸಿನೋಡಿದಳು. ಆಗ ಅವಳಿಗೆ ತಾನೆಂಥ ಮೂಢಳಂತೆ ವರ್ತಿಸಿದೆ ಎಂಬುದು ಸ್ಫುಟವಾಗಿ ಕಂಡಿತು. ನಾಚಿಕೆಯಿಂದ ಕುಗ್ಗಿಹೋದಳು. ವಿಚಾರಸಂಪನ್ನನಾದ ಸಾಧಕನು ಆತ್ಮನಿರೀಕ್ಷಣೆಯನ್ನು ಕೈಗೊಂಡಾಗ ಅವನಿಗೆ ತನ್ನ ಮನದ ದೋಷಗಳು ಗೋಚರವಾಗದಿರುವುದಿಲ್ಲ. ಬ್ರಾಹ್ಮಣಿಗೂ ಈಗ ಹಾಗೆಯೇ ಆಯಿತು. ಶ್ರೀರಾಮಕೃಷ್ಣರ ವಿಷಯದಲ್ಲಿ ತನ್ನ ಮನೋಭಾವ ಬದಲಾಗಿರುವುದನ್ನು ಆಕೆ ಗುರುತಿಸಿದಳು. ತನ್ನ ದೋಷವನ್ನು ಸ್ಪಷ್ಟವಾಗಿ ಕಂಡು ಪಶ್ಚಾತ್ತಾಪದಿಂದ ಬೆಂದಳು.

ತನ್ನ ಈ ಎಲ್ಲ ದೋಷ-ದೌರ್ಬಲ್ಯಗಳ ಮೂಲವಾವುದು ಎಂಬುದನ್ನು ಶಾಂತವಾಗಿ ಕುಳಿತು ಧ್ಯಾನಿಸಿದಾಗ ಅವಳು ಕಂಡುಕೊಂಡಳು—ಶ್ರೀರಾಮಕೃಷ್ಣರ ಮೇಲಿನ ತನ್ನ ಕುರುಡುಮೋಹವೇ ಹೊರತು ಬೇರಲ್ಲ ಎಂದು. ಈ ಮೋಹವು ತಾನಾಗಿಯೇ ಬಿಗಿದುಕೊಂಡ ಸಂಕೋಲೆ—ಸುವರ್ಣ ಸಂಕೋಲೆ. ಈಗ ತಾನು ಆ ದೋಷಗಳಿಂದ ದೂರವಾಗಬೇಕಾದರೆ ಈ ಸಂಕೋಲೆಯನ್ನು, ಎದೆ ಗಟ್ಟಿಮಾಡಿಕೊಂಡು, ಕಿತ್ತೊಗೆಯಲೇಬೇಕು ಎಂದು ತೀರ್ಮಾನಿಸಿದಳು.

'ಹರಿಯುವ ನೀರೂ ಸಂಚಾರೀ ಸಾಧುವಿನ ಮನಸ್ಸೂ ಎಂದೂ ಮಲಿನವಾಗದು' ಎಂಬ ಮಾತು ನೆನಪಿಗೆ ಬಂದಿತು. ಆ ಪ್ರಕಾರ ತಾನೀಗ ಶ್ರೀರಾಮಕೃಷ್ಣರ ಸಂಗವನ್ನು ತ್ಯಜಿಸಿ ದೂರವಾಗುವುದೇ ಸರಿ ಎಂದು ಅರಿತಳು. ಅಲ್ಲದೆ ಅವರ ಬಳಿ ಇನ್ನು ತಾನಿರಬೇಕಾದ ಅಗತ್ಯವಿಲ್ಲ, ತನ್ನ ಪಾಲಿನ ಕರ್ತವ್ಯ ಮುಗಿದಿದೆ ಎಂಬುದನ್ನು ಕಂಡುಕೊಂಡಳು.

ಇದಾದ ಕೆಲದಿನಗಳ ನಂತರ ಅವಳು ಕಾಮಾರಪುಕುರದಿಂದ ಹೊರಡಲು ಅಣಿಯಾದಳು. ಬಹಳ ಶ್ರಮವಹಿಸಿ ವಿವಿಧ ಹೂಗಳ ಸುಂದರ ಮಾಲೆಯೊಂದನ್ನು ರಚಿಸಿ ಅದಕ್ಕೆ ಗಂಧವನ್ನು ಪೂಸಿದಳು; ಅದನ್ನು ತಂದು ಅತ್ಯಂತ ಭಕ್ತಿಯಿಂದ ಶ್ರೀರಾಮಕೃಷ್ಣರಿಗೆ ಸಮರ್ಪಿಸಿದಳು. ಅವರನ್ನು ಚೈತನ್ಯ ಮಹಾಪ್ರಭುವಿನಂತೆ ಅಲಂಕರಿಸಿದಳು. ಬಳಿಕ ಅವರಿಗೆ ಪ್ರಣಾಮ ಸಲ್ಲಿಸಿ ಸರ್ವಾಂತಃಕರಣದಿಂದ ಅವರ ಕ್ಷಮೆಯನ್ನು ಬೇಡಿ

ದಳು. ಶ್ರೀರಾಮಕೃಷ್ಣರು ಮಂದಸ್ಮಿತವದನರಾಗಿ ಆಕೆಯ ಭಕ್ತಿನೈವೇದ್ಯವನ್ನು ಸ್ವೀಕರಿಸಿ, ಮೌನವಾಗಿಯೇ ಆಕೆಗೆ ಶುಭವನ್ನು ಹಾರೈಸಿದರು. ಹೀಗೆ, ಗುರುವಾಗಿ ಬಂದ ಬ್ರಾಹ್ಮಣಿ, ಈ ಅಪೂರ್ವ ಶಿಷ್ಯನಲ್ಲಿ ತನ್ನ ಇಷ್ಟದೈವವನ್ನು ಕಂಡು, ಭಕ್ತಳಾಗಿ ಬೀಳ್ಗೊಂಡಳು. ಈಗ ಆಕೆ ಕಾಶೀಧಾಮದೆಡೆಗೆ ನಡೆದಳು.

ಶ್ರೀರಾಮಕೃಷ್ಣರು ಕಾಮಾರಪುಕುರದಲ್ಲಿ ಈ ಏಳು ತಿಂಗಳ ಘಟನಾಮಯ ಅವಧಿಯನ್ನು ಕಳೆದು ೧೮೬೭ರ ಅಂತ್ಯದಲ್ಲಿ ದಕ್ಷಿಣೇಶ್ವರಕ್ಕೆ ಹಿಂದಿರುಗಿದರು. ಈ ವೇಳೆಗೆ ಅವರು ಹಿಂದಿನ ಆರೋಗ್ಯವನ್ನೂ ಶಕ್ತಿಯನ್ನೂ ಮರಳಿ ಗಳಿಸಿಕೊಂಡು, ನವೋಲ್ಲಾಸಭರಿತರಾಗಿದ್ದರು.

ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಮರಳಿದ ಕೆಲದಿನಗಳಲ್ಲೇ, ಮಥುರನಿಗೆ ಕೆಲವು ತೀರ್ಥಕ್ಷೇತ್ರಗಳತ್ತ ಯಾತ್ರೆ ಹೋಗಬೇಕೆಂಬ ಇಚ್ಛೆಯುಂಟಾಯಿತು. ಈ ಇಚ್ಛೆಯ ಹಿಂದೆ ಮತ್ತೊಂದು ಉದ್ದೇಶವಿತ್ತು. ಶ್ರೀರಾಮಕೃಷ್ಣರನ್ನು ತನ್ನೊಂದಿಗೆ ಕರೆದೊಯ್ಯಬೇಕು, ಅವರಿಗೂ ಆ ಸ್ಥಳಗಳನ್ನೆಲ್ಲ ತೋರಿಸಬೇಕು ಮತ್ತು ಆ ಮೂಲಕ ಅವರೊಂದಿಗೆ ಇನ್ನಷ್ಟು ನಿಕಟವಾಗಿ ಇದ್ದು ಇನ್ನಷ್ಟು ಆನಂದವನ್ನು ಸವಿಯುವ ಭಾಗ್ಯ ತನ್ನದಾಗಬೇಕೆಂಬುದೇ ಆ ಉದ್ದೇಶ! ಆದರೆ ಯಾತ್ರೆಗೆ ಬರಲು ಶ್ರೀರಾಮಕೃಷ್ಣರು ಒಪ್ಪಬೇಕು, ಅಷ್ಟೆ. ಮಥುರನೂ ಅವನ ಹೆಂಡತಿ ಜಗದಂಬಾದಾಸಿಯೂ ಬಂದು ಬಹಳವಾಗಿ ಪ್ರಾರ್ಥಿಸಿಕೊಂಡರು. ಶ್ರೀರಾಮಕೃಷ್ಣರು ಅವರೊಂದಿಗೆ ಬರಲು ಒಪ್ಪಿದರು. ಈಗ ದಂಪತಿಗಳಿರ್ವರಿಗೂ ಹಿಡಿಸಲಾರದ ಹಿಗ್ಗು.

ಮಥುರನಂಥ ಶ್ರೀಮಂತ ಏನು ಮಾಡಿದರೂ ಭಾರಿಯಾಗಿಯೇ ಇರಬೇಕಲ್ಲವೆ? ತೀರ್ಥಯಾತ್ರೆಯ ಕಾರ್ಯಕ್ರಮವೂ ಅವನ ಶ್ರೀಮಂತಿಕೆಗೆ ತಕ್ಕಂತೆಯೇ ಇತ್ತು. ಶ್ರೀರಾಮಕೃಷ್ಣರು, ಚಂದ್ರಮಣೀದೇವಿ ಹಾಗೂ ಹೃದಯನಲ್ಲದೆ ಮಥುರನೊಂದಿಗೆ ಅವನ ಸಮಸ್ತ ಕುಟುಂಬವರ್ಗ, ಕೆಲವರು ಆಳುಕಾಳುಗಳು, ಅಡುಗೆಯವರು—ಹೀಗೆ ಎಲ್ಲ ಸೇರಿ ಯಾತ್ರೆಯ ತಂಡದಲ್ಲಿ ಸುಮಾರು ನೂರಿಪ್ಪತ್ತೈದು ಜನ ಇದ್ದರು. ನಾಲ್ಕೈದು ತಿಂಗಳ ಸುದೀರ್ಘ ಯಾತ್ರೆ ಅದು!

ಈ ಯಾತ್ರೆ ಅತ್ಯಂತ ಸಂತಸಕರವಾಗಿ ಯಾವುದಕ್ಕೂ ಕೊರತೆಯಿಲ್ಲದಂತೆ ನೆರವೇರುವುದಕ್ಕಾಗಿ ಮಥುರ ಎಲ್ಲ ವ್ಯವಸ್ಥೆಯನ್ನೂ ಮಾಡಿದ್ದ. ರೈಲಿನಲ್ಲಿ ಪ್ರಯಾಣ. ಎರಡನೇ ದರ್ಜೆಯ ಒಂದು ಬೋಗಿ ಹಾಗೂ ಮೂರನೇ ದರ್ಜೆಯ ಮೂರು ಬೋಗಿಗಳನ್ನು ಮೀಸಲಾಗಿರಿಸಲಾಯಿತು. ಶ್ರೀರಾಮಕೃಷ್ಣರು, ಅವರ ತಾಯಿ, ಹೃದಯ, ಮಥುರ ಹಾಗೂ ಅವನ ಆಪ್ತೇಷ್ಟರಿಗಾಗಿ ಎರಡನೇ ದರ್ಜೆಯ ಬಂಡಿ; ಇತರರಿಗೆ ಉಳಿದ ಮೂರು ಬಂಡಿಗಳು. ಈ ನಾಲ್ಕು ಬಂಡಿಗಳನ್ನು ಕಲ್ಕತ್ತ-ಕಾಶಿಗಳ ನಡುವೆ ತಮಗೆ ಬೇಕಾದ ನಿಲ್ದಾಣದಲ್ಲಿ ಬೇರ್ಪಡಿಸಿ ಅವರು ಅಲ್ಲಿನ ಸುತ್ತಮುತ್ತಲ ಸ್ಥಳಗಳನ್ನೆಲ್ಲ ನೋಡಿಕೊಂಡು, ಪ್ರಯಾಣವನ್ನು ಮುಂದುವರಿಸಲಾಗುವಂತೆ ರೈಲ್ವೆಯವರೊಂದಿಗೆ ಒಪ್ಪಂದವಾಯಿತು.

ಶ್ರೀರಾಮಕೃಷ್ಣರು ಮಥುರನೊಂದಿಗೆ ತೀರ್ಥಯಾತ್ರೆಗೆ ಹೊರಟದ್ದೊಂದು ಗಮನೀಯವಾದ ಸ್ವಾರಸ್ಯಕರ ಪ್ರಸಂಗ. ಶ್ರೀರಾಮಕೃಷ್ಣರು ತೀರ್ಥಯಾತ್ರೆ ಮಾಡಿ ಹೊಸದಾಗಿ ಗಳಿಸಬೇಕಾದ ಪುಣ್ಯವೇನಿದೆ? ಸಾಧಿಸಬೇಕಾದ ಪುರುಷಾರ್ಥವೇನಿದ್ದೀತು?—ಎಂಬ ಪ್ರಶ್ನೆ ಇಲ್ಲಿ ಸಹಜವಾಗಿಯೇ ಏಳುತ್ತದೆ. ಏಕೆಂದರೆ, ಅವರು ಎಲ್ಲರಂತೆ ಒಬ್ಬ ಸಾಮಾನ್ಯ ಮರ್ತ್ಯನಲ್ಲ; ಅಥವಾ ಕೇವಲ ಒಬ್ಬ ಸಾಧಕನೋ, ಸಂತನೋ ಅಲ್ಲ; ಅವರೊಬ್ಬ ಅವತಾರಪುರುಷ. ಈ ಅಂಶ ಹಿಂದೆ ಹಲವು ಬಾರಿ ನಮ್ಮ ಗಮನಕ್ಕೆ ಬಂದಿದೆ. ಮುಂದೆಯೂ ಅಂಥದನ್ನು ನೋಡಲಿದ್ದೇವೆ. ಅಲ್ಲದೆ ತಮ್ಮ ಇರವಿನಿಂದ, ಅಪೂರ್ವ ಸಾಧನೆಗಳಿಂದ ಮತ್ತು ತನ್ಮೂಲಕ ಆ ದಕ್ಷಿಣೇಶ್ವರದ ನೂತನ ದೇಗುಲದಲ್ಲಿ

ದೇವಿಯನ್ನು 'ಜಾಗೃತ'ಗೊಳಿಸುವುದರ ಮೂಲಕ ತಾವಿದ್ದ ಸ್ಥಳವನ್ನೇ ಪುಣ್ಯಕ್ಷೇತ್ರವನ್ನಾಗಿಸಿದವರು ಅವರು. ಹೀಗಿರುವಾಗ, ಯಾವ ಕ್ಷೇತ್ರಕ್ಕೆ ತಾನೆ ಹೋಗಿ ಅವರಿಗೇನಾಗಬೇಕಾಗಿದೆ ?

ಈ ಪ್ರಶ್ನೆಯ ಬಗ್ಗೆ ಸ್ವಾಮಿ ಶಾರದಾನಂದರು 'ಲೀಲಾಪ್ರಸಂಗ'ದಲ್ಲಿ ಸುದೀರ್ಘವಾಗಿ ಸಮಾಲೋಚಿಸಿದ್ದಾರೆ. ಪ್ರತಿಯೊಬ್ಬ ಆಧ್ಯಾತ್ಮಿಕ ಸಾಧಕನೂ ಲೋಕಹಿತದ ದೃಷ್ಟಿಯುಳ್ಳವನಾಗಿರಬೇಕು. ಆದ್ದರಿಂದ ಆತ ಲೋಕಸಂಪರ್ಕದಲ್ಲಿದ್ದು, ಜನರ ನಡೆನುಡಿಗಳನ್ನು ಗಮನಿಸುತ್ತಲೇ ಇರಬೇಕು. ಜನರ ಧಾರ್ಮಿಕ ಸ್ವಭಾವವೆಂಥದು, ಅದು ಯಾವ ಮಟ್ಟದಲ್ಲಿದೆ ಎಂಬುದನ್ನು ತಿಳಿದಿರಬೇಕು. ಧರ್ಮಸಂಸ್ಥಾಪನೆ ಹಾಗೂ ಲೋಕಸಂಗ್ರಹಕ್ಕಾಗಿ ಜನ್ಮವೆತ್ತಿಬರುವ ಅವತಾರಪುರುಷನಿಗೆ ಈ ಮಾತು ವಿಶೇಷವಾಗಿ ಅನ್ವಯವಾಗುತ್ತದೆ. ಆದ್ದರಿಂದ ತೀರ್ಥಯಾತ್ರೆಯ ನೆವದಲ್ಲಿ ರಾಷ್ಟ್ರದ ವಿವಿಧ ಭಾಗಗಳ-ವರ್ಗಗಳ ಜನಜೀವನ ಕ್ರಮವನ್ನು ಅರಿತುಕೊಳ್ಳುವ ಉದ್ದೇಶವೂ ಈಡೇರುತ್ತದೆ. ಶ್ರೀರಾಮಕೃಷ್ಣರ ವಿಷಯದಲ್ಲಿ ಈ ಮಾತು ಬಹುಮಟ್ಟಿಗೆ ನಿಜವಾಯಿತೆಂಬುದರಲ್ಲಿ ಸಂದೇಹವಿಲ್ಲ. ಮಾಯೆಯ ಆವರಣವನ್ನು ಭೇದಿಸಿ, ಅಖಂಡ ಸಚ್ಚಿದಾನಂದದ ದರ್ಶನ ಮಾಡಲು ಶಕ್ತನಾದ ಮನುಷ್ಯನ ಅಂತರ್ದೃಷ್ಟಿಯು ಅತ್ಯಂತ ತೀಕ್ಷ್ಣವೂ ಸೂಕ್ಷ್ಮವೂ ಆಗಿರುತ್ತದೆ. ತತ್ಪರಿಣಾಮವಾಗಿ ಸಾಧಾರಣ ಪ್ರಜ್ಞೆಯಲ್ಲಿರುವಾಗಲೂ ಆತನ ಮನಸ್ಸು ವಿಶೇಷ ಶಕ್ತಿಯಿಂದ ಕೂಡಿರುತ್ತದೆ. ಶ್ರೀರಾಮಕೃಷ್ಣರ ಮನಸ್ಸು ಹೀಗೆಯೇ ಸಿದ್ಧವಾಗಿತ್ತು. ವ್ಯಕ್ತಿಯ ಒಂದೆರಡು ಮಾತುಗಳನ್ನು ಕೇಳಿದರೆ ಸಾಕು, ಆ ಮಾತುಗಳ ಆಂತರ್ಯದ ಭಾವಗಳೆಂಥವು, ಅವನ ಸ್ವಭಾವವೆಂಥದು ಎಂಬುದು ನಿಚ್ಚಳವಾಗಿ ಗೋಚರವಾಗುತ್ತಿತ್ತು. ಹಾಗೆಯೇ ಸಮಾಜಜೀವನದ ವಿಷಯದಲ್ಲೂ ಸಹ. ಸುಮ್ಮನೆ ನಾಲ್ಕಾರು ಘಟನೆಗಳನ್ನು ಈಕ್ಷಿಸಿದರಾಯಿತು; ದೇಶದ ಇಂದಿನ ಪರಿಸ್ಥಿತಿಯೇನು, ಸಮಾಜ ಯಾವ ನಿಟ್ಟಿನಲ್ಲಿ ಸಾಗುತ್ತಿದೆ ಎಂಬುದನ್ನು ಕ್ಷಣಮಾತ್ರದಲ್ಲಿ ಅರಿಯಬಲ್ಲವರಾಗಿದ್ದರು. ಅಲ್ಲದೆ ವ್ಯಕ್ತಿಗಳ ಹಾಗೂ ಸಮಾಜದ ಸಮಸ್ಯೆಗಳ ಪರಿಹಾರವನ್ನೂ ಅವರು ಅಷ್ಟೇ ಬೇಗ ಸೂಚಿಸಬಲ್ಲವರಾಗಿದ್ದರು.

ಶ್ರೀರಾಮಕೃಷ್ಣರು ತೀರ್ಥಯಾತ್ರೆ ಮಾಡಿದುದರ ಮತ್ತೊಂದು ಕಾರಣವನ್ನು ಶಾಸ್ತ್ರದೃಷ್ಟಿಯಿಂದ ನೋಡಿ ತಿಳಿಯಬಹುದು. ಲೋಕದ ಜನರೆಲ್ಲ ತೀರ್ಥಕ್ಷೇತ್ರಗಳಿಗೆ ಹೋಗಿಹೋಗಿ ತಮ್ಮ ಭಾವಕ್ಕೆ ಹಾಗೂ ಯೋಗ್ಯತೆಗೆ ಅನುಸಾರವಾಗಿ ಆಧ್ಯಾತ್ಮಿಕ ಪ್ರಚೋದನೆಯನ್ನು ಪಡೆದುಕೊಳ್ಳುತ್ತಾರೆ, ಪುಣ್ಯಸಂಪಾದನೆ ಮಾಡುತ್ತಾರೆ, ಕ್ಷೇತ್ರದ ಮಹಿಮೆಯೊಂದಿಷ್ಟನ್ನು ಮೈಗೂಡಿಸಿಕೊಳ್ಳುತ್ತಾರೆ. ಆದರೆ ಸಂತರು, ಮಹಾಪುರುಷರು ತೀರ್ಥಕ್ಷೇತ್ರಗಳಿಗೆ ಹೋಗುವುದು ಆ ಕ್ಷೇತ್ರಗಳ ಮಹಿಮೆಯನ್ನೇ ಹೆಚ್ಚಿಸಲು; ತಮ್ಮ ವಿಶೇಷ ಭಗವದ್ಭಾವಗಳನ್ನು ಧಾರೆಯೆರೆಯಲು ! "ತೀರ್ಥೀ ಕುರ್ವಂತಿ ತೀರ್ಥಾನಿ, ಕ್ಷೇತ್ರಂ ಕುರ್ವಂತಿ ಕ್ಷೇತ್ರಾಣಿ" ಎಂಬುದು ಶಾಸ್ತ್ರವಾಕ್ಯ. ಶ್ರೀರಾಮಕೃಷ್ಣರು ಈ ಕುರಿತಾಗಿ ಹೀಗೆ ಹೇಳುತ್ತಿದ್ದರು:

"ಯಾವ ಸ್ಥಳದಲ್ಲಿ ಅನೇಕರು ಭಗವತ್ಸಾಕ್ಷಾತ್ಕಾರಕ್ಕಾಗಿ ಬಹು ದಿನಗಳ ಕಾಲ ಧ್ಯಾನ ಜಪ ತಪ ವ್ರತ ಉಪಾಸನೆಗಳನ್ನು ಮಾಡಿರುತ್ತಾರೋ ಅಲ್ಲಿ ಭಗವಂತನ ಮಹಿಮೆ ಇದ್ದೇ ಇರುತ್ತದೆ ಎಂದು ತಿಳಿ. ಅವರ ಭಕ್ತಿಯಿಂದಾಗಿ ಅಲ್ಲಿ ದೈವತ್ವವು ಘನೀಭವಿಸಿರುತ್ತದೆ. ಆದ್ದರಿಂದ ಅಲ್ಲಿ ಸಹಜವಾಗಿಯೇ ಭಗವದ್ಭಾವದ ಉದ್ದೀಪ

ನೆಯೂ ಭಗವಂತನ ದರ್ಶನವೂ ಆಗುತ್ತದೆ.

"ಯುಗಯುಗಾಂತರಗಳಿಂದಲೂ ಎಷ್ಟೋ ಜನ ಸಾಧುಸಂತರು, ಸಿದ್ಧಪುರುಷರು ಈ ಕ್ಷೇತ್ರಗಳಿಗೆ ಬಂದಿದ್ದರು. ಬೇರೆಲ್ಲ ಕಾಮನೆಗಳನ್ನೂ ತೊರೆದು, ಪಣತೊಟ್ಟು ಭಗವಂತನ ಸ್ಮರಣೆ ಮಾಡಿದ್ದರು. ಆದ್ದರಿಂದ ಭಗವಂತ ಒಂದು ದೃಷ್ಟಿಯಿಂದ ಎಲ್ಲೆಡೆ ವ್ಯಾಪಕನಾಗಿದ್ದರೂ ತೀರ್ಥಕ್ಷೇತ್ರಗಳಲ್ಲಿ ಅವನ ಪ್ರಕಾಶ ಹೆಚ್ಚು. ಹೇಗೆಂದರೆ, ಭೂಮಿಯನ್ನು ಅಗೆದರೆ ಎಲ್ಲ ಕಡೆಯಲ್ಲಿಯೂ ನೀರು ಸಿಗುವುದೇನೋ ನಿಜವೇ; ಆದರೆ ಬಾವಿ, ಕೆರೆ ಅಥವಾ ಸರೋವರ ಇರುವಲ್ಲಿ ನೀರು ಬೇಕೆಂದರೆ ನೆಲ ಅಗೆಯಬೇಕಾಗಿಲ್ಲ. ಅಲ್ಲಿ ನೀರು ಸಿದ್ಧವಾಗಿಯೇ ಇರುತ್ತದೆ."

ಹೀಗಿದೆ ತೀರ್ಥಕ್ಷೇತ್ರಗಳ ಮಹಿಮೆ! ಈಗ ಶ್ರೀರಾಮಕೃಷ್ಣರಿಂದೊಡಗೂಡಿದ ಯಾತ್ರಿಕರ ತಂಡ ಹೌರಾ ನಿಲ್ದಾಣದಿಂದ ಹೊರಟಿತು. ಅಂದು ೧೮೬೮ನೆಯ ಜನವರಿ ೨೭. ಎಲ್ಲರೂ ಅತ್ಯಂತ ಆನಂದದಿಂದಿದ್ದಾರೆ. ಟ್ರೈನಿನಲ್ಲಿ ಪ್ರಯಾಣ ಮಾಡುತ್ತ ಶ್ರೀರಾಮಕೃಷ್ಣರು ಬಾಲಕನಂತೆ ಹಿಗ್ಗುತ್ತಿದ್ದಾರೆ. ದಾರಿಯಲ್ಲಿ ಸಿಗುವ ಹೊಸಹೊಸ ಊರುಗಳನ್ನೂ ನದಿ ಕೆರೆ ಹೊಲಗದ್ದೆಗಳನ್ನೂ ಕುತೂಹಲದಿಂದ, ಕೆಲವೊಮ್ಮೆ ಬೆರಗಿನಿಂದ ನೋಡುತ್ತಿದ್ದಾರೆ. ಅವರ ಮನದಲ್ಲಿ ಹೊಸಹೊಸ ವಿಚಾರಗಳ ಸ್ಫುರಣೆಯಾಗುತ್ತಿದೆ! ಇನ್ನು ಕೆಲವೊಮ್ಮೆ ಅವರು ದಿವ್ಯ ಭಾವವನ್ನು ತಾಳುತ್ತಾರೆ. ಆಗ ಅವರ ಬಾಯಿಂದ ಹೊರಬೀಳುವ ಅಮೂಲ್ಯ ಆಧ್ಯಾತ್ಮಿಕ ವಿಚಾರಗಳನ್ನು ಆಲಿಸಲು ಮಥುರನೂ ಇನ್ನಿತರರೂ ಕಾದಿರುತ್ತಾರೆ. ಆಗಾಗ ಅವರು ಭಾವಸಮಾಧಿಗೇರುವುದೂ ಉಂಟು. ಜೊತೆಗಿರುವವರೆಲ್ಲ ಈ ದಿವ್ಯಪುರುಷನ ಸಹವಾಸದಲ್ಲಿರುವ ತಾವೇ ಧನ್ಯರು ಎಂದು ಭಾವಿಸುತ್ತಾರೆ!

ಯಾತ್ರಿಕತಂಡದ ಮೊದಲ ನಿಲುಗಡೆ ದೇವಘರದಲ್ಲಿ. ಶ್ರೀವೈದ್ಯನಾಥ ಇಲ್ಲಿನ ಮುಖ್ಯ ದೇವತೆಯಾದ್ದರಿಂದ ಇದಕ್ಕೆ ವೈದ್ಯನಾಥ ಧಾಮ ಎಂಬ ಹೆಸರೂ ಇದೆ. ಇಲ್ಲಿ ಅವರೆಲ್ಲ ವೈದ್ಯನಾಥಸ್ವಾಮಿಯ ದರ್ಶನಕ್ಕಾಗಿ ಕೆಲವು ದಿನ ನಿಂತರು. ಈ ಸಮಯದಲ್ಲಿ ಒಂದು ಮಹತ್ವದ ಘಟನೆ ನಡೆಯಿತು.

ಒಂದು ದಿನ ಶ್ರೀರಾಮಕೃಷ್ಣರು ಮಥುರ ಮತ್ತಿತರರೊಂದಿಗೆ ಸಮೀಪದ ಯಾವುದೋ ಗ್ರಾಮದ ಮೂಲಕ ಹೋಗುತ್ತಿದ್ದರು. ಅದಾವುದೊ ದಟ್ಟ ದರಿದ್ರ ಹಳ್ಳಿ. ಎಲ್ಲಿ ನೋಡಿದರಲ್ಲಿ ದರಿದ್ರ ಕಳೆ ಸುರಿಯುತ್ತಿದೆ. ಶ್ರೀರಾಮಕೃಷ್ಣರಿಗೆ ಬಡತನವೇನೂ ಹೊಸದಲ್ಲ. ಆದರೆ ಆ ಜನರನ್ನು ನೋಡಿದಾಗ ಮಾತ್ರ ಅವರ ಹೃದಯ ಕರಗಿ ಕಣ್ಣೀರಾಗಿ ಚಿಮ್ಮಿತು. ಆದರೆ ಆ ಹಳ್ಳಿಗರಿಗೆ ಕೊಡಲು ತಮ್ಮದೆಂಬುದು ಅವರ ಬಳಿ ಏನಿದೆ! ಆದ್ದರಿಂದ ಮಥುರನಿಗೆ ಹೇಳಿದರು:

"ಮಥುರ, ನೋಡಿದೆಯಾ ಇವರ ಅವಸ್ಥೆಯನ್ನು! ಇವರು ತಮ್ಮ ಜನ್ಮದಲ್ಲಿ ಒಂದೇ ಒಂದು ಬಾರಿಯಾದರೂ ಹೊಟ್ಟೆತುಂಬ, ಮನಸ್ತೃಪ್ತಿಯಾಗುವಂತೆ ಉಂಡಿರಲಾರರು. ಇವರ ತಲೆಗೂದಲೆಲ್ಲ ಜಡೆಗಟ್ಟುತ್ತಿದೆ! ಎಣ್ಣೆ-ನೀರು ಕಂಡು ಎಷ್ಟು ವರ್ಷಗಳಾದುವೊ! ಬಟ್ಟೆಯಂತೂ ಚಿಂದಿಚಿಂದಿ. ಇವರಿಗೇನಾದರೂ ಸ್ವಲ್ಪ ಸಹಾಯ ಮಾಡುವುದು ನಿನ್ನ ಧರ್ಮ. ನೀನು ಜಗನ್ಮಾತೆಯ ಪಾರುಪತ್ಯಗಾರ. ನಿನ್ನ ಹಣವಿರುವುದು ಆಕೆಯ ಮಕ್ಕಳ ಸೇವೆಗಾಗಿಯೇ. ಈಗ ನೀನು ಇವರಿಗೆಲ್ಲ ತಲೆಗೆ ಹಚ್ಚಲು ಎಣ್ಣೆ, ಒಂದು ದಿನ ಹೊಟ್ಟೆತುಂಬ ಊಟ, ಹಾಗೂ ಒಬ್ಬೊಬ್ಬರಿಗೆ ಒಂದೊಂದು

ಬಟ್ಟೆ—ಇಷ್ಟನ್ನು ಒದಗಿಸಿಕೊಡು. ನನಗಾಗಿ ಇಷ್ಟನ್ನು ಮಾಡುತ್ತೀಯಾ ?"

ಮಥುರ ಸ್ವಭಾವತಃ ಸ್ವಲ್ಪ ಕೃಪಣ. ಈಗ, ಯಾರೋ ಕಂಡರಿಯದ ಈ ಹಳ್ಳಿಗರಿಗೆ, ಅದೂ ನೂರಾರು ಜನಕ್ಕೆ, ಅಷ್ಟೊಂದು ಹಣ ಖರ್ಚು ಮಾಡಬೇಕೆಂದರೆ ಮನಸ್ಸು ಒಪ್ಪೀತೆ ? ಆದರೆ ಶ್ರೀರಾಮಕೃಷ್ಣರ ಕೋರಿಕೆಯನ್ನು ತಳ್ಳಿಹಾಕುವುದು ಹೇಗೆ ? ಮಥುರ ಹಿಂಜರಿಯುತ್ತಲೇ ಹೇಳಿದ:

"ಅಪ್ಪಾ, ನಮ್ಮ ತೀರ್ಥಯಾತ್ರೆಗೆ ಇನ್ನೂ ಬಹಳ ಖರ್ಚು ತಗುಲುತ್ತದೆ. ಅಲ್ಲದೆ ಇವರೂ ಬಹಳ ಜನರಿದ್ದಾರೆ. ಇವರಿಗೆಲ್ಲ ಊಟ-ಬಟ್ಟೆ ಕೊಡಬೇಕೆಂದರೆ ಅದು ಸಣ್ಣ ಬಾಬತ್ತೇನಲ್ಲ. ಇದರಿಂದ ಮುಂದೆ ಯಾತ್ರೆಗೆ ತೊಂದರೆಯಾಗಬಹುದು. ಆದ್ದರಿಂದ . . . ಈಗ . . . ಏನು ಮಾಡಬೇಕೆನ್ನುತ್ತೀರಿ ?"

ಆಗ ಶ್ರೀರಾಮಕೃಷ್ಣರ ಹೃದಯದಲ್ಲಿ ಒಂದು ಅಪೂರ್ವ ಆವೇಶವುಂಟಾಯಿತು. ಅವರೆಂದರು:

"ಹೋಗೋ ಹುಚ್ಚ, ನಿನ್ನ ಕಾಶೀಯಾತ್ರೆ ಯಾರಿಗೆ ಬೇಕಾಗಿದೆ ! ನಾನು ಇವರ ಜೊತೆಯಲ್ಲಿಯೇ ಇದ್ದುಬಿಡುತ್ತೇನೆ. ಪಾಪ, ಇವರಿಗೆ ಯಾರೂ ದಿಕ್ಕಿಲ್ಲ. ನಾನಿವರನ್ನು ಬಿಟ್ಟುಹೋಗಲಾರೆ !"

ಹೀಗೆನ್ನುತ್ತ, ಬಾಲಕನಂತೆ ಹಟ ಹಿಡಿದು ಆ ಬಡಜನರ ನಡುವೆ ಕುಳಿತು ಬಿಟ್ಟರು. ಮಥುರನಿಗೆ ದಿಕ್ಕೇ ತೋಚದಂತಾಯಿತು. ಅಲ್ಲದೆ ಅವರ ದಯಾರ್ದ್ರತೆ ಯನ್ನು ಕಂಡು ಅವನೂ ಕರಗಿಹೋದ. "ಆಗಲಿ, ಖಂಡಿತ ಹಾಗೆಯೇ ಮಾಡೋಣ, ನೀವೀಗ ದಯವಿಟ್ಟು ಎದ್ದು ಗಾಡಿಗೆ ಬನ್ನಿ" ಎಂದು ಪರಿಪರಿಯಾಗಿ ರಮಿಸಿ ಸಮಾಧಾನಪಡಿಸಿದ. ಮತ್ತು ಕೂಡಲೇ ಆ ಜನರಿಗೆಲ್ಲ ತಲೆಗೆ ಎಣ್ಣೆ ಕೊಟ್ಟು ಹೊಟ್ಟೆ ತುಂಬ ಉಣಬಡಿಸಲು ವ್ಯವಸ್ಥೆ ಮಾಡಿದ. ತನ್ನ ಕಡೆಯವರನ್ನು ಕಳುಹಿಸಿ ಕಲ್ಕತ್ತದಿಂದ ಥಾನುಗಟ್ಟಲೆ ಬಟ್ಟೆಯನ್ನು ತರಿಸಿ ಹಂಚಿದ. ಆ ಬಡಜನರ ಮುಖದಲ್ಲಿ ಮಿನುಗಿದ ಸಂತಸವನ್ನು ಕಂಡು ಶ್ರೀರಾಮಕೃಷ್ಣರು ಆನಂದದಿಂದ ಬೀಗಿದರು. ಅವರ ಆ ಆನಂದವನ್ನು ಕಂಡು ತಾನು ಕೃತಾರ್ಥನಾದೆನೆಂದುಕೊಂಡ ಮಥುರ.

ದೇವಘರ್‌ನಿಂದ ಯಾತ್ರಿಕರ ಪ್ರಯಾಣ ನೇರವಾಗಿ ಕಾಶಿಯೆಡೆಗೆ. ಕಾಶಿಗೆ ಸಮೀಪದ ಒಂದು ನಿಲ್ದಾಣದಲ್ಲಿ ಟ್ರೈನು ಸ್ವಲ್ಪ ನಿಂತಿತ್ತು. ಯಾವುದೋ ಕಾರಣಕ್ಕಾಗಿ ಇಳಿದಿದ್ದ ಶ್ರೀರಾಮಕೃಷ್ಣರೂ ಹೃದಯನೂ ಹಿಂದಿರುಗುವಷ್ಟರಲ್ಲಿ ಅದು ಹೊರಟು ಬಿಟ್ಟಿತು. ಮಥುರ ಆತಂಕಗೊಂಡು ಚಡಪಡಿಸಿದ. ಆದರೆ ಶ್ರೀರಾಮಕೃಷ್ಣರ ಜೊತೆಗೆ ಹೃದಯನಿದ್ದಾನಲ್ಲ ಎಂಬುದೊಂದು ಸಮಾಧಾನ. ಕಾಶೀ ನಿಲ್ದಾಣ ಮುಟ್ಟಿದ ತಕ್ಷಣ ಅವನು ಹಿಂದಿನ ನಿಲ್ದಾಣದ ಸ್ಟೇಷನ್ ಮಾಸ್ಟರನಿಗೆ ತಾರು ಕಳಿಸಿ, ಮುಂದಿನ ರೈಲು ಬಂಡಿಯಲ್ಲಿ ಅವರಿಬ್ಬರನ್ನೂ ಕಳುಹಿಸಿಕೊಡಬೇಕು ಎಂದು ವಿನಂತಿಸಿಕೊಂಡ. ಆದರೆ ಅವರು ಮುಂದಿನ ಬಂಡಿಗಾಗಿ ಕಾಯಬೇಕಾಗಿ ಬರಲಿಲ್ಲ. ಅದೃಷ್ಟವಶಾತ್ ಸ್ವಲ್ಪಹೊತ್ತಿಗೆಲ್ಲ ರಾಜೇಂದ್ರಲಾಲ್ ಬ್ಯಾನರ್ಜಿ ಎಂಬ ರೈಲ್ವೆ ಅಧಿಕಾರಿ ಅಲ್ಲಿಗೆ ಬಂದ. ಅವನು ಯಾವುದೋ ಮೇಲ್ವಿಚಾರಣೆಯ ಕಾರ್ಯದ ಮೇಲೆ ವಿಶೇಷ ಬಂಡಿಯೊಂದರಲ್ಲಿ ಆ ದಿಕ್ಕಿನಲ್ಲೇ ಹೊರಟಿದ್ದ. ಇವರಿಬ್ಬರಿಗೆ ಒದಗಿದ ಕಷ್ಟವನ್ನು ಕಂಡು, ಅವರನ್ನು ತನ್ನ ಬಂಡಿಯಲ್ಲೇ ಹತ್ತಿಸಿಕೊಂಡು ಕಾಶೀ ನಿಲ್ದಾಣದಲ್ಲಿ ಇಳಿಸಿದ. ಅಂತೂ ಮಥುರ ಬಂದಿಳಿದ ಸ್ವಲ್ಪ ಹೊತ್ತಿನಲ್ಲೇ ಶ್ರೀರಾಮಕೃಷ್ಣರೂ ನಿರಾತಂಕವಾಗಿ ಬಂದು ತಲುಪಿದರು.

ಶ್ರೀರಾಮಕೃಷ್ಣರೀಗ ಕಾಶೀಕ್ಷೇತ್ರದ ದಿವ್ಯವಲಯದಲ್ಲಿದ್ದಾರೆ. ವರುಣ ಮತ್ತು ಅಸಿ ಎಂಬ ನದಿಗಳ ದಡದಲ್ಲಿರುವುದರಿಂದ ಕಾಶಿಗೆ ವಾರಾಣಸಿ (ಅಥವಾ ವಾರಣಾಸಿ) ಎಂಬ ಹೆಸರೂ ಇದೆ. ಭಾರತದ ತೀರ್ಥಕ್ಷೇತ್ರಗಳಲ್ಲಿ ಇದಕ್ಕೆ ಅಗ್ರಸ್ಥಾನ. ಇದು ಶಿವನ ಶಾಶ್ವತ ಆವಾಸಸ್ಥಾನವೆಂದು ಪುರಾಣಗಳಲ್ಲಿ ಹೇಳಿದೆ. ಅಲ್ಲದೆ ಮೋಕ್ಷದಾಯಕ ಸಪ್ತ ಕ್ಷೇತ್ರಗಳಲ್ಲಿ ಇದು ಪ್ರಥಮವೆಂದು ಹೇಳುತ್ತಾರೆ. ಶ್ರೀರಾಮಕೃಷ್ಣರಂತೂ ಈ ಕಾಶಿಯನ್ನು ಸಂದರ್ಶಿಸಲು ಬಹಳ ಕಾತರರಾಗಿದ್ದರು.

ಯಾತ್ರಿಕರೆಲ್ಲ ದೋಣಿಯಲ್ಲಿ ಗಂಗಾನದಿಯನ್ನು ದಾಟಿ ಕಾಶಿಯನ್ನು ಪ್ರವೇಶಿಸಿದರು. ಆಗ ಶ್ರೀರಾಮಕೃಷ್ಣರಿಗೆ ಅಲ್ಲೊಂದು ಅದ್ಭುತ ದರ್ಶನವಾಯಿತು. ಶಾಸ್ತ್ರಗಳಲ್ಲಿ ಹೇಳುವಂತೆಯೇ ಆ ಶಿವಪುರಿಯು ನಿಜವಾಗಿಯೂ ಬಂಗಾರದಿಂದ ನಿರ್ಮಿತವಾದಂತೆ ಅವರಿಗೆ ಕಂಡಿತು! ಯುಗಯುಗಾಂತರಗಳಿಂದಲೂ ಅಲ್ಲಿಗೆ ಭೇಟಿ ನೀಡಿ ಸಾಧನೆ ಮಾಡಿದ ಅಸಂಖ್ಯಾತ ಸಾಧುಸತ್ಪುರುಷರ ಅತ್ಯಂತ ಉಜ್ವಲವಾದ ಭಾವರಾಶಿಯು ಹೀಗೆ ಘನೀಭೂತವಾಗಿ ಸುವರ್ಣದಂತೆ ಪ್ರಕಾಶಿಸುವುದನ್ನು ಅವರು ಕಂಡರು. ಪ್ರಕಾಶಿಸುತ್ತಿರುವುದರಿಂದಲೇ ಅದು 'ಕಾಶಿ'.

ಕಾಶೀನಗರದ ಪ್ರಕಾಶವನ್ನು ಕಂಡು ಅನುಭವಿಸಿದ ಶ್ರೀರಾಮಕೃಷ್ಣರು ವಿಸ್ಮಿತರಾದರು. ಈ ದರ್ಶನದಿಂದಾಗಿ ಅವರಿಗೆ ಶಿವಮಹಿಮೆ-ಕಾಶೀಮಹಿಮೆಗಳ ಮೇಲೆ ದೃಢನಂಬಿಕೆಯುಂಟಾಯಿತು. ಎಷ್ಟರಮಟ್ಟಿಗೆಂದರೆ, 'ಇಂತಹ ಪವಿತ್ರವಾದ, ಸುವರ್ಣಮಯವಾದ ಕಾಶಿಯಲ್ಲಿ ಶೌಚಕ್ಕೆ ಹೋದರೆ ಅದನ್ನು ಅಪವಿತ್ರ ಮಾಡಿದಂತಾಗುತ್ತದಲ್ಲ!' ಎಂಬ ಶಂಕೆ ಅವರ ಮನದಲ್ಲುದಿಸಿತು. ಆದ್ದರಿಂದ ಅವರು ಮಥುರನಿಗೆ ಹೇಳಿ ಒಂದು ಪಲ್ಲಕ್ಕಿಯ ಏರ್ಪಾಟು ಮಾಡಿಸಿಕೊಂಡು ಶೌಚಾದಿಗಳಿಗೆ ಅಸಿ

ನದಿಯನ್ನು ದಾಟಿ ಊರಾಚೆಗೆ ಹೋಗಿಬರುತ್ತಿದ್ದರು. ಆದರೆ ಕೆಲವು ದಿನಗಳಲ್ಲೇ ಅವರ ಆ ಭಾವವು ದೂರವಾದ್ದರಿಂದ ಆಮೇಲೆ ಹಾಗೆ ಮಾಡಬೇಕಾಗಲಿಲ್ಲ.

ಕಾಶಿಯ ಅಸಂಖ್ಯಾತ ದೇವಾಲಯಗಳು; ಗಂಗಾತಟದ ಎರಡು ಮೈಲುದ್ದಕ್ಕೂ ತಲೆಯೆತ್ತಿ ನಿಂತಿರುವ ಪುರಾತನ ಕಲ್ಲುಕಟ್ಟಡಗಳು; ವಿಶಾಲ ಸೋಪಾನಗಳುಳ್ಳ ಹಲವಾರು ಸ್ನಾನಘಟ್ಟಗಳು; ರಸ್ತೆಗಳು; ಅಲ್ಲಲ್ಲಿ ಸುಂದರ ಸಾಲಂಕೃತ ಕಮಾನುಗಳು; ಸರೋವರಗಳು, ಕೆರೆಬಾವಿಗಳು; ತೋಟದ ಮನೆಗಳು, ಮಠಗಳು, ಆಶ್ರಮಗಳು; ಅಲ್ಲದೆ ಇವೆಲ್ಲಕ್ಕಿಂತ ಹೆಚ್ಚಾಗಿ ವೇದಾಭ್ಯಾಸಕ್ಕೆ ಬಂದ ವಟುಗಳ, ಸಾಧುಸಜ್ಜನರ, ಬಡಬಗ್ಗರ ಹಾಗೂ ಯಾತ್ರಿಕರ ಸೇವಾರ್ಥವಾಗಿ ಕಟ್ಟಿಸಲ್ಪಟ್ಟ ನೂರಾರು ಅನ್ನಸತ್ರಗಳು, ವಸತಿಗೃಹಗಳು ಹಾಗೂ ಆಸ್ಪತ್ರೆಗಳು—ಇವುಗಳನ್ನೆಲ್ಲ ವೀಕ್ಷಿಸಿದ ಶ್ರೀರಾಮಕೃಷ್ಣರ ಸಂತಸಕ್ಕೆ ಪಾರವೇ ಇಲ್ಲ.

ಮಥುರಾನಾಥ ಕಾಶಿಯಲ್ಲಿ ಕೇದಾರಘಟ್ಟದ ಮೇಲಿನ ಕೆಲವು ಮನೆಗಳನ್ನು ಬಾಡಿಗೆಗೆ ತೆಗೆದುಕೊಂಡ. ಪೂಜೆ, ದಾನ ಮೊದಲಾದವುಗಳಿಗಾಗಿ ಬಿಚ್ಚುಗೈಯಿಂದ ಹಣ ಖರ್ಚುಮಾಡಿದ. ಕಾಶಿಗೆ ಬರುತ್ತಿದ್ದಂತೆಯೇ ಅಲ್ಲಿನ ಪಂಡಿತರನ್ನೆಲ್ಲ ಕರೆಯಿಸಿ ದಕ್ಷಿಣೆ ಸಮೇತ ಫಲತಾಂಬೂಲ ನೀಡಿದ. ಇನ್ನೊಂದು ದಿನ ಅವರನ್ನೆಲ್ಲ ಅವರ ಪತ್ನಿಯರ ಸಮೇತ ಆಹ್ವಾನಿಸಿ ಭೂರಿಭೋಜನವಿತ್ತು ಹೃತ್ಪೂರ್ವಕವಾಗಿ ಉಪಚರಿಸಿದ; ಅಲ್ಲದೆ ಒಬ್ಬೊಬ್ಬರಿಗೆ ಒಂದೊಂದು ವಸ್ತ್ರವನ್ನೂ ಒಂದೊಂದು ರೂಪಾಯಿ ದಕ್ಷಿಣೆಯನ್ನೂ ಕೊಟ್ಟ.

ಮಥುರ ಎಲ್ಲಿಗೇ ಹೋದರೂ ಬೆಳ್ಳಿಯ ಕೊಡೆ, ಅಧಿಕಾರ ದಂಡ ಇತ್ಯಾದಿಗಳನ್ನು ಹಿಡಿದ ಸೇವಕರು ಅವನ ಹಿಂದೆ-ಮುಂದೆ ಹೋಗುತ್ತಿದ್ದರು. ಅವನ ಪ್ರತಿಯೊಂದು ಕಾರ್ಯದಲ್ಲೂ ಈ ವೈಭವ ಎದ್ದುಕಾಣುತ್ತಿತ್ತು. ಇದನ್ನೆಲ್ಲ ಬೆರಗಿನಿಂದ ನೋಡಿದ ಜನರು, ಇವನಾರೋ ರಾಜನಿರಬೇಕೆಂದುಕೊಂಡರು.

ಕಾಶಿಯಲ್ಲಿರುವಷ್ಟು ದಿನವೂ ಶ್ರೀರಾಮಕೃಷ್ಣರು ವಿಶ್ವನಾಥಸ್ವಾಮಿಯ ದರ್ಶನಕ್ಕೆ ಹೋಗುತ್ತಿದ್ದರು. ಇದಲ್ಲದೆ ಅಲ್ಲಿರುವ ಕೇದಾರನಾಥ, ದುರ್ಗಾ, ಅನ್ನಪೂರ್ಣೆ, ಕಾಲಭೈರವ, ಬಿಂದುಮಾಧವ ಮುಂತಾದ ಅನೇಕ ದೇವದೇವಿಯರ ಪ್ರಸಿದ್ಧ ದೇವಾಲಯಗಳಿಗೂ ಅವರು ಹೋಗಿಬಂದರು. ಅವರಿಗೆ ಹೆಚ್ಚು ನಡೆಯಲಾಗುತ್ತಿರಲಿಲ್ಲವಾದ್ದರಿಂದ ಪಲ್ಲಕ್ಕಿಯಲ್ಲೇ ಸಂಚಾರ. ಹೃದಯನೂ ಜೊತೆಯಲ್ಲಿರುತ್ತಿದ್ದ. ದೇವದರ್ಶನಕ್ಕೆ ಹೋಗುವಾಗಲೇ ಶ್ರೀರಾಮಕೃಷ್ಣರು ಭಾವಾವಿಷ್ಟರಾಗುತ್ತಿದ್ದರು. ಇನ್ನು ಆಯಾ ದೇವದೇವಿಯರ ಸನ್ನಿಧಿಯಲ್ಲಂತೂ ಹೇಳಬೇಕಾಗಿಯೇ ಇಲ್ಲ! ಎಲ್ಲ ದೇವಾಲಯಗಳಲ್ಲೂ ಅವರಿಗೆ ಹೀಗೇ ಭಾವಾವೇಶವಾಗುತ್ತಿತ್ತು; ಆದರೆ ಕೇದಾರನಾಥ ಸ್ವಾಮಿಯ ಮಂದಿರದಲ್ಲಿ ಮಾತ್ರ ಅದು ಅತ್ಯಂತ ಗಾಢವಾಗಿರುತ್ತಿತ್ತು.

ಶ್ರೀರಾಮಕೃಷ್ಣರು ಆಗಾಗ ಕಾಶಿಯಲ್ಲಿನ ಪ್ರಸಿದ್ಧ ಸಾಧುಗಳ ದರ್ಶನಕ್ಕೆ ಹೋಗುತ್ತಿದ್ದರು. ಅದರಲ್ಲೂ ಪರಮಹಂಸಾಗ್ರಣಿಯೆಂದು ಖ್ಯಾತರಾಗಿದ್ದ ತ್ರೈಲಿಂಗಸ್ವಾಮಿಗಳನ್ನು ಕಾಣಲು ಅವರು ಹಲವು ಬಾರಿ ಹೋದರು. ಸ್ವಾಮಿಗಳು ಆಗ ಮೌನವ್ರತವನ್ನು ತಾಳಿ ಮಣಿಕರ್ಣಿಕಾ ಘಟ್ಟದ ಬಳಿ ಇರುತ್ತಿದ್ದರು. ಮೊದಲ ದರ್ಶನದ ದಿನ ಅವರು ಸತ್ಕಾರಸೂಚಕವಾಗಿ ತಮ್ಮ ಅಭ್ಯಾಸದಂತೆ ನಶ್ಯದ ಡಬ್ಬಿಯನ್ನು ಶ್ರೀರಾಮಕೃಷ್ಣರ ಮುಂದಿಟ್ಟು ಸ್ವಾಗತವನ್ನೂ ಸನ್ಮಾನವನ್ನೂ ತೋರಿದರು. ಶ್ರೀರಾಮಕೃಷ್ಣರಿಗೆ

ನಶ್ಯದ ಅಭ್ಯಾಸವಿಲ್ಲ, ಗುಡುಗುಡಿಯ ಅಭ್ಯಾಸ. ಸ್ವಾಮಿಗಳಿಗೆ ಗುಡುಗುಡಿಯ ಅಭ್ಯಾಸವಿಲ್ಲ, ನಶ್ಯ. ಸಾಮಾನ್ಯರಾದ ನಮಗೆ ಇವುಗಳೇ ಪ್ರಧಾನವಾಗಿ ಕಾಣುತ್ತವೆ. ಆದರೆ ಅಲ್ಲಿ ಎರಡು ಜ್ಯೋತಿಗಳು ಪರಸ್ಪರ ಕಂಡುಕೊಂಡುದೇ ಬೇರೆ! ಶ್ರೀರಾಮಕೃಷ್ಣರು ಸ್ವಾಮಿಗಳ ಶರೀರದ ಮತ್ತು ಇಂದ್ರಿಯಗಳ ಲಕ್ಷಣಗಳನ್ನೆಲ್ಲ ಪರೀಕ್ಷಿಸಿ ನೋಡಿ ಅತ್ಯಂತ ಸಂತುಷ್ಟರಾದರು. ಹೃದಯನಿಗೆ ಹೇಳಿದರು, "ನೋಡು! ಇವರಲ್ಲಿ ನಿಜವಾದ ಪರಮಹಂಸರ ಲಕ್ಷಣಗಳಿವೆ. ಇವರು ಸಾಕ್ಷಾತ್ ವಿಶ್ವೇಶ್ವರಸ್ವಾಮಿ!"

ತ್ರೈಲಿಂಗಸ್ವಾಮಿಗಳು ಮಣಿಕರ್ಣಿಕಾ ಘಟ್ಟದ ಪಕ್ಕದಲ್ಲಿ ಒಂದು ಹೊಸ ಘಟ್ಟವನ್ನು ಕಟ್ಟಿಸುತ್ತಿದ್ದರು. ಶ್ರೀರಾಮಕೃಷ್ಣರು ಹೃದಯನಿಗೆ ಅಲ್ಲಿಗೆ ಕೆಲವು ಗುದ್ದಲಿ ಮಣ್ಣನ್ನು ಎತ್ತಿಹಾಕುವಂತೆ ಸೂಚಿಸಿದರು; ಹೃದಯ ಅದರಂತೆಯೇ ಮಾಡಿದ. ಸ್ವಾಮಿಗಳಿಗೆ ಇದು ಬಹಳ ಸಂತೋಷ ಕೊಟ್ಟಿತು. ಮತ್ತೊಂದು ದಿನ ಶ್ರೀರಾಮಕೃಷ್ಣರು ಅವರನ್ನು ತಮ್ಮ ಮನೆಗೇ ಕರೆಯಿಸಿಕೊಂಡು ಕೈಯಾರೆ ಬಡಿಸಿ ಉಪಚರಿಸಿದರು. ಆನಂದಮಯರಾದ ಶ್ರೀರಾಮಕೃಷ್ಣರು ಆನಂದವನ್ನೇ ಬಡಿಸಿದರು! ಆನಂದಮಯರಾದ ತ್ರೈಲಿಂಗಸ್ವಾಮಿಗಳು ಆನಂದವನ್ನೇ ಸವಿದರು! ಆ ದಿವ್ಯದೃಶ್ಯವನ್ನು ನೋಡಲು ದೇವತೆಗಳೆಲ್ಲ ಅಲ್ಲಿ ಸೇರಿದ್ದರೆ ಆಶ್ಚರ್ಯವೇನು?

ತ್ರೈಲಿಂಗಸ್ವಾಮಿಗಳ ಬಗ್ಗೆ ಮುಂದೆ ಶ್ರೀರಾಮಕೃಷ್ಣರು ತಮ್ಮ ಶಿಷ್ಯರೆದುರು ಹೀಗೆನ್ನುತ್ತಿದ್ದರು:

"ಸಾಕ್ಷಾತ್ ವಿಶ್ವನಾಥನು ಅವರ ಶರೀರವನ್ನು ಆಶ್ರಯಿಸಿ ಪ್ರಕಾಶಮಾನನಾಗಿರುವುದನ್ನು ಕಂಡೆ! ಅವರಿಂದಾಗಿಯೇ ಕಾಶೀಪುರಿಯು ಉಜ್ವಲವಾಗಿ ತೋರಿತು. ಅತ್ಯುಚ್ಚ ಜ್ಞಾನದ ಅವಸ್ಥೆ ಅವರದು! ಶರೀರಪ್ರಜ್ಞೆಯೇ ಇಲ್ಲ. ಉರಿಬಿಸಿಲಿನಿಂದ ನದೀತಟದ ಮಳಲು ಕಾದುಹೋಗಿದೆ, ಕಾಲನ್ನೇ ಇಡಲಾಗುತ್ತಿಲ್ಲ; ಆ ಮಳಲಿನ ಮೇಲೆಯೇ ಅವರು ಸುಖವಾಗಿ ಮಲಗಿದ್ದಾರೆ! ಒಮ್ಮೆ ಪಾಯಸವನ್ನು ತಯಾರಿಸಿಕೊಂಡು ಹೋಗಿ ತಿನ್ನಿಸಿದೆ. ಆ ಸಮಯದಲ್ಲಿ ಅವರು ಮೌನಿಯಾಗಿದ್ದರು. ನಾನವರನ್ನು ಸನ್ನೆಯಿಂದ 'ಭಗವಂತ ಏಕನೆ ಅಥವಾ ಅನೇಕನೆ?' ಎಂದು ಕೇಳಿದೆ. ಅವರೂ ಸಂಕೇತದಿಂದಲೇ ಉತ್ತರಿಸಿದರು, 'ಸಮಾಧಿಸ್ಥಿತಿಯೊದಗಿದಾಗ ನೋಡಿದರೆ ಭಗವಂತ ಒಬ್ಬನೇ. ಆದರೆ ನಾನು-ನೀನು-ಜೀವಾತ್ಮ-ಜಗತ್ತು ಮೊದಲಾದುವುಗಳ ಬೋಧೆಯಿರುವವರೆಗೆ ಅವನು ಅನೇಕನು' ಎಂದು. ಅವರನ್ನು ತೋರಿಸಿ, 'ಇದನ್ನೇ ಯಥಾರ್ಥ ಪರಮಹಂಸಾವಸ್ಥೆ ಎನ್ನುವುದು' ಎಂದು ಹೃದಯನಿಗೆ ಹೇಳಿದೆ."

ಕಾಶಿಯಲ್ಲಿದ್ದಾಗಲೇ ಒಮ್ಮೆ ಶ್ರೀರಾಮಕೃಷ್ಣರು ನಾನಕ ಪಂಥೀಯರ ಆಶ್ರಮವೊಂದಕ್ಕೆ ಭೇಟಿ ಕೊಟ್ಟರು. ಜೊತೆಗೆ ಮಥುರನೂ ಮತ್ತಿತರರೂ ಇದ್ದರು. ಆ ಜನರ ಪೂಜಾವಿಧಾನಗಳನ್ನು ನೋಡುತ್ತ, ಸುಶ್ರಾವ್ಯ ಭಜನೆಯನ್ನು ಕೇಳುತ್ತ ಶ್ರೀರಾಮಕೃಷ್ಣರು ಬಹಳ ಹೊತ್ತು ಕುಳಿತಿದ್ದರು. ಅವರ ಶ್ರದ್ಧಾಯುತ ಭಕ್ತಿಯನ್ನು ಕಂಡು ಶ್ರೀರಾಮಕೃಷ್ಣರಿಗೆ ಅತ್ಯಾನಂದವಾಯಿತು.

ವಾರಣಾಸಿಯಲ್ಲಿ ಶ್ರೀರಾಮಕೃಷ್ಣರಿಗೆ ಮತ್ತೊಂದು ಅಪೂರ್ವ ದರ್ಶನವಾಯಿತು. ಇಲ್ಲಿ ಮಣಿಕರ್ಣಿಕಾ ತೀರ್ಥ, ದಶಾಶ್ವಮೇಧ ತೀರ್ಥ ಇತ್ಯಾದಿ ಪ್ರಸಿದ್ಧ ಪಂಚತೀರ್ಥಗಳಿವೆ. ಇವುಗಳನ್ನು ನೋಡಲು ಗಂಗಾನದಿಯ ಮೇಲೆ ದೋಣಿಯ ಮೂಲಕವೂ ಹೋಗಬಹುದು. ಒಂದು ದಿನ ಮಥುರ ಶ್ರೀರಾಮಕೃಷ್ಣರನ್ನು ಇಲ್ಲಿಗೆಲ್ಲ

ಕರೆದುಕೊಂಡು ಹೊರಟ. ಮಣಿಕರ್ಣಿಕೆಯ ಪಕ್ಕದಲ್ಲೇ ಕಾಶಿಯ ಪ್ರಮುಖ ಸ್ಮಶಾನ ಭೂಮಿ. ಮಥುರನ ದೋಣಿ ಈ ಸ್ಥಳಕ್ಕೆ ಬಂದಾಗ ಅಲ್ಲಿ ಹಲವಾರು ಶವಗಳನ್ನು ಸುಡುತ್ತಿದ್ದುದು ಕಾಣಿಸುತ್ತಿತ್ತು. ಅವುಗಳಿಂದ ದಟ್ಟವಾದ ಹೊಗೆ ಹೊಮ್ಮುತ್ತಿತ್ತು. ಭಾವಮಯರಾಗಿದ್ದ ಶ್ರೀರಾಮಕೃಷ್ಣರು ಅರೆಬಿರಿದ ನೇತ್ರಗಳಿಂದ ಅತ್ತಲೇ ನೋಡುತ್ತ ದೋಣಿಯಲ್ಲಿ ಶಾಂತವಾಗಿ ಕುಳಿತಿದ್ದರು. ಆದರೆ ಇದ್ದಕ್ಕಿದ್ದಂತೆ ರೋಮಾಂಚಿತರಾಗಿ ಎದ್ದುನಿಂತರು. ಅದ್ಭುತವೇನನ್ನೋ ಕಂಡು ದೋಣಿಯ ತುದಿಗೆ ಓಡಿದರು. ಅಲ್ಲಿ ದೋಣಿಯ ಅಂಚಿನಲ್ಲೇ ನಿಂತು ಸಮಾಧಿಸ್ಥರಾಗಿಬಿಟ್ಟರು! ಅದನ್ನು ನೋಡಿದವರಿಗೆ, ಎಲ್ಲಿ ಅವರು ನದಿಗೆ ಬಿದ್ದು ಪ್ರವಾಹದಲ್ಲಿ ತೇಲಿಹೋಗಿಬಿಡುವರೋ ಎಂದೆನ್ನಿಸಿತು. ತಕ್ಷಣ ಮಥುರನ ಕಡೆಯ ಪುರೋಹಿತರು ಹಾಗೂ ಅಂಬಿಗರು ಅವರನ್ನು ಬೀಳ ಗೊಡದಂತೆ ಹಿಡಿಯಲು ಧಾವಿಸಿದರು. ಆದರೆ ಹಾಗೇನೂ ಮಾಡಬೇಕಾಗಿ ಬರಲಿಲ್ಲ. ಏಕೆಂದರೆ ಶ್ರೀರಾಮಕೃಷ್ಣರು ಅಲ್ಲಾಡದೆ ಸ್ಥಿರವಾಗಿ ನಿಂತಿದ್ದರು! ಅವರ ಮುಖ ಮಂಡಲದಲ್ಲಿ ಅಲೌಕಿಕ ಮಂದಹಾಸವೊಂದು ಲಾಸ್ಯವಾಡುತ್ತಿತ್ತು! ದಿವ್ಯ ಜ್ಯೋತಿ ಯೊಂದು ಪ್ರಕಾಶಿಸುತ್ತಿತ್ತು! ಆ ಜ್ಯೋತಿಯು ಕ್ರಮೇಣ ಸುತ್ತಮುತ್ತಲ ಪ್ರದೇಶವನ್ನೆಲ್ಲ ಬೆಳಗಿ ಪ್ರಕಾಶಮಾನವಾಗಿಸಿತು! ಮಥುರನೂ ಹೃದಯನೂ ಅವರನ್ನೇ ದಿಟ್ಟಿಸುತ್ತ ಬಳಿಯಲ್ಲೇ ನಿಂತಿದ್ದರು. ಅಂಬಿಗರಂತೂ ಶ್ರೀರಾಮಕೃಷ್ಣರ ಈ ಅಪೂರ್ವ ಭಾವವನ್ನು ನೋಡಿ ಬೆರಗಾಗಿ ಭಯಭಕ್ತಿಯಿಂದ ದೂರದಲ್ಲಿ ನಿಂತು ವೀಕ್ಷಿಸತೊಡಗಿದರು. ಸ್ವಲ್ಪ ಹೊತ್ತಿನ ಮೇಲೆ ಅವರ ಈ ದಿವ್ಯಭಾವ ಮರೆಯಾಯಿತು. ಎಲ್ಲರೂ ಸಮಾಧಾನ ಚಿತ್ತರಾಗಿ ಮಣಿಕರ್ಣಿಕೆಯಲ್ಲಿಳಿದು ಸ್ನಾನ ಮುಗಿಸಿ, ಆ ಪುಣ್ಯಕ್ಷೇತ್ರದಲ್ಲಿ ಯಥಾಶಕ್ತಿ ದಾನಾದಿಗಳನ್ನು ಮಾಡಿ ದೋಣಿ ಹತ್ತಿದರು.

ದೋಣಿ ಸಾಗಿತು. ಆಗ ಶ್ರೀರಾಮಕೃಷ್ಣರು ಮಥುರನೇ ಮೊದಲಾದವರಿಗೆ ಅಲ್ಲಿ ತಮಗಾದ ಆ ದಿವ್ಯಾದ್ಭುತ ದರ್ಶನದ ಕುರಿತು ಬಣ್ಣಿಸತೊಡಗಿದರು:

"ಆ ಮಣಿಕರ್ಣಿಕೆಯ ಸ್ಮಶಾನದಲ್ಲಿ ಒಬ್ಬ ದಿವ್ಯ-ಭವ್ಯ ಪುರುಷ! ಕಂದು ಬಣ್ಣದ ಜಟೆ! ದೀರ್ಘಾಕಾರದ ಶ್ವೇತಶರೀರ! ಆತ ತನ್ನ ಗಂಭೀರ ನಡೆಯಿಂದ ಪ್ರತಿಯೊಂದು ಚಿತೆಯ ಬಳಿಗೆ ಬಂದು, ಅಲ್ಲಿ ಮಲಗಿದ್ದ ಮೃತನನ್ನು ಪ್ರಯತ್ನಪೂರ್ವಕವಾಗಿ ಎಬ್ಬಿಸಿ ಕಿವಿಯಲ್ಲಿ ಪವಿತ್ರವಾದ ಬ್ರಹ್ಮಮಂತ್ರವನ್ನು ಉಚ್ಚರಿಸುತ್ತಿದ್ದ. ಆತನ ಜೊತೆಗೆ ಸರ್ವಶಕ್ತಿ ಸಮನ್ವಿತೆಯಾದ ಜಗದಂಬೆ! ಅವಳು ಮಹಾಕಾಳಿಯ ರೂಪದಿಂದ ಜೀವಾತ್ಮನ ಮತ್ತೊಂದು ಪಕ್ಕದಲ್ಲಿ ಚಿತೆಯ ಮೇಲೆ ಕುಳಿತುಕೊಂಡು ಆತನ ಸ್ಥೂಲ-ಸೂಕ್ಷ್ಮ-ಕಾರಣ ಶರೀರಗಳಲ್ಲಿ ಅಂತರ್ಗತವಾದ ಜನ್ಮಾಂತರಗಳ ಸಂಸ್ಕಾರಗಳ ಬಂಧನ ಗಳಿಂದ ಆತನನ್ನು ಮುಕ್ತನನ್ನಾಗಿಸುತ್ತಿದ್ದಳು! ಮತ್ತು ಮೋಕ್ಷದ್ವಾರವನ್ನು ಸ್ವಹಸ್ತ ದಿಂದಲೇ ತೆರೆದು ಅಖಂಡ ಸಚ್ಚಿದಾನಂದದಲ್ಲಿ ಸೇರಿಕೊಳ್ಳುವಂತೆ ಆತನನ್ನು ಪ್ರೇರಿಸುತ್ತಿದ್ದಳು! ಈ ರೀತಿಯಾಗಿ, ಹಲವು ಯುಗಗಳ ಯೋಗದಿಂದ, ತಪಸ್ಸಿನಿಂದ ಮಾತ್ರವೇ ಸಿದ್ಧಿಸಬಹುದಾದ ಅದ್ವೈತಾನುಭವದ ಅಮಿತಾನಂದವನ್ನು ಕಾಶೀ ವಿಶ್ವ ನಾಥನು ಆ ಜೀವಿಗೆ ಕೃಪಾಮಾತ್ರದಿಂದ ಅನುಗ್ರಹಿಸಿ ಆತನನ್ನು ಕೃತಾರ್ಥನನ್ನಾಗಿ ಮಾಡುತ್ತಿದ್ದ! ಇದನ್ನು ನಾನು ಸಾಕ್ಷಾತ್ತಾಗಿ ಕಂಡೆ!"

ಇದನ್ನು ಕೇಳಿದ ಮಥುರನಿಗೆ ತಾನು ಶ್ರೀರಾಮಕೃಷ್ಣರನ್ನು ಕಾಶಿಗೆ ಕರೆತಂದು ಧನ್ಯನಾದೆನೆನಿಸಿತು. ಜೊತೆಗೆ ಬಂದಿದ್ದ ಕೆಲವು ಶಾಸ್ತ್ರಜ್ಞರಾದ ಪಂಡಿತರಂತೂ ಆಶ್ಚರ್ಯ

ದಿಂದ ಶ್ರೀರಾಮಕೃಷ್ಣರಿಗೆ ಹೀಗೆಂದರು:

"ನಿಜಕ್ಕೂ ನಿಮಗಾದ ಅನುಭವ ಪರಮಾದ್ಭುತ ! ಜೀವಾತ್ಮನು ಈ ಕಾಶೀಕ್ಷೇತ್ರ ದಲ್ಲಿ ಸತ್ತರೆ ಶ್ರೀವಿಶ್ವನಾಥಸ್ವಾಮಿಯು ಆತನಿಗೆ ಮೋಕ್ಷವನ್ನು ಕರುಣಿಸುತ್ತಾನೆಂದು ಕಾಶೀಕಾಂಡದಲ್ಲಿ ಹೇಳಲಾಗಿದೆ. ಆದರೆ ಶ್ರೀವಿಶ್ವನಾಥನು ಅದನ್ನು ಹೇಗೆ ಕೊಡುತ್ತಾ ನೆಂಬುದರ ವಿವರ ಅದರಲ್ಲಿಲ್ಲ. ಅದೀಗ ನಿಮಗಾದ ಈ ದಿವ್ಯ ದರ್ಶನದಿಂದ ಸ್ಪಷ್ಟವಾಯಿತು. ಸತ್ಯವಾಗಿಯೂ, ನಿಮಗಾದ ದರ್ಶನವು ಶಾಸ್ತ್ರದಲ್ಲಿ ಬರೆದಿಟ್ಟ ವಿಷಯಕ್ಕಿಂತಲೂ ಅತಿಶಯವಾಗಿದೆ !"

ಶ್ರೀರಾಮಕೃಷ್ಣರು ಕಾಶೀಕ್ಷೇತ್ರದಲ್ಲಿ ಒಂದು ವಾರದ ಕಾಲ ಇದ್ದರು. ಇಲ್ಲಿಂದ ಅವರ ಪ್ರಯಾಣ ಪ್ರಯಾಗ ಕ್ಷೇತ್ರಕ್ಕೆ. ಬ್ರಹ್ಮನು ಇಲ್ಲಿ ಅನೇಕ ಯಾಗಗಳನ್ನು ಮಾಡಿದ್ದ ರಿಂದ ಇದು 'ಪ್ರಯಾಗ'. ಗಂಗಾ-ಯಮುನಾ ನದಿಗಳ ಪರಮ ಪವಿತ್ರ ಸಂಗಮ ಸ್ಥಳ ಈ ಪ್ರಯಾಗ (ಅಲಹಾಬಾದ್). ಗುಪ್ತಗಾಮಿನಿಯಾದ ಸರಸ್ವತಿಯೂ ಇಲ್ಲಿ ಗಂಗೆ-ಯಮುನೆಯರನ್ನು ಕೂಡಿಕೊಳ್ಳುತ್ತಾಳೆ. ಆದ್ದರಿಂದ ಇದಕ್ಕೆ ತ್ರಿವೇಣೀ ಸಂಗಮ ವೆಂದು ಹೆಸರು. ಶ್ರೀರಾಮಕೃಷ್ಣರು ತಮ್ಮ ಯಾತ್ರಿಕ ತಂಡದೊಡನೆ ಈ ಸಂಗಮದಲ್ಲಿ ಸ್ನಾನ ಮಾಡಿದರು. ಈ ಪುಣ್ಯತೀರ್ಥದಲ್ಲಿ ಸ್ನಾನ ಮಾಡಿದ ಯಾತ್ರಿಕರು ತಾವು ಪುನೀತರಾದೆವೆಂದುಕೊಂಡರೆ ಶ್ರೀರಾಮಕೃಷ್ಣರ ಸ್ಪರ್ಶದಿಂದ ತಾನೇ ಪುನೀತಳಾದೆ ಎಂದುಕೊಂಡಿತು ತ್ರಿವೇಣೀ ತೀರ್ಥ ! ಮಥುರ ಮೊದಲಾದವರೆಲ್ಲ ಸಂಪ್ರದಾಯದಂತೆ ಇಲ್ಲಿ ಮುಂಡನ ಮಾಡಿಸಿಕೊಂಡರು. ಆದರೆ ಶ್ರೀರಾಮಕೃಷ್ಣರು "ನನಗದರ ಅಗತ್ಯ ವಿಲ್ಲ" ಎಂದರು.

ಪ್ರಯಾಗದಲ್ಲಿ ಮೂರು ದಿನ ವಾಸ ಮಾಡಿ, ಯಾತ್ರಿಕ ತಂಡ ಕಾಶಿಗೆ ಹಿಂದಿರುಗಿತು.

ಕಾಶಿಯಲ್ಲಿ ಶ್ರೀರಾಮಕೃಷ್ಣರು ಭೈರವಿ ಬ್ರಾಹ್ಮಣಿಯನ್ನು ಪುನಃ ಕಂಡರು. ಅವಳು ಇಲ್ಲಿ ಮೋಕ್ಷದಾ ಎಂಬೊಬ್ಬಳೊಂದಿಗೆ ವಾಸ ಮಾಡುತ್ತ ಧ್ಯಾನ-ಜಪಗಳಲ್ಲಿ ನಿರತ ಳಾಗಿದ್ದಳು. ಆ ಹೆಂಗಸಿನ ಶ್ರದ್ಧಾಭಕ್ತಿಗಳನ್ನು ಕಂಡು ಅವರಿಗೆ ಬಹಳ ಸಂತೋಷ ವಾಯಿತು. 'ಅರವತ್ತನಾಲ್ಕು ಯೋಗಿನಿ' ಎಂಬ ಮೊಹಲ್ಲೆಯಲ್ಲಿದ್ದ ಆಕೆಯ ಮನೆಗೆ ಅವರು ಆಗಾಗ ಹೋಗಿ ಭಗವತ್ಸಂಬಂಧವಾಗಿ ಸತ್ಕಥಾಲಾಪ ಮಾಡುತ್ತಿದ್ದರು.

ಕಾಶಿಯಲ್ಲಿ ಮತ್ತೆರಡು ವಾರಗಳನ್ನು ಕಳೆದ ಯಾತ್ರಿಕರು ಈಗ ಬೃಂದಾವನ ದರ್ಶನಕ್ಕಾಗಿ ಮುಂದುವರಿದರು. ಶ್ರೀರಾಮಕೃಷ್ಣರು ತಮ್ಮೊಡನೆ ಬ್ರಾಹ್ಮಣಿಯನ್ನೂ ಕರೆದೊಯ್ದರು.

ಶ್ರೀಕೃಷ್ಣನು ಅನಂತ ದಿವ್ಯಾದ್ಭುತ ಲೀಲೆಗಳನ್ನಾಡಿ ಪಾವನಗೊಳಿಸಿದ ಪುಣ್ಯಕ್ಷೇತ್ರ ಬೃಂದಾವನ. ಪರಮ ನಿಃಸ್ವಾರ್ಥ ಪ್ರೇಮದ ಪ್ರತೀಕಳಾದ ರಾಧೆಯು ಶ್ರೀಕೃಷ್ಣನಿಗಾಗಿ ಪರಿತಪಿಸಿದ ಪುನೀತ ನೆಲವೇ ಬೃಂದಾವನ. ಜೀವಾತ್ಮನು ಪರಮಾತ್ಮನಿಗಾಗಿ ಪರಿತಪಿಸುವುದು, ಪರಮಾತ್ಮನು ಜೀವಾತ್ಮನನ್ನು ಸಾಕೆಂಬಷ್ಟು ದಣಿಸಿ, ಕಡೆಗೆ ತನ್ನೆಡೆಗೆ ಸೆಳೆದುಕೊಳ್ಳುವುದು—ಇದು ಅನಾದಿಯಿಂದ ನಡೆದುಬಂದ ದಿವ್ಯಲೀಲೆ. ಈ ದಿವ್ಯಲೀಲೆಯನ್ನು ಭಗವಂತ ಶ್ರೀಕೃಷ್ಣ ಇಳೆಯಲ್ಲಿ ಆಡಿ ತೋರಿಸಿದ ದಿವ್ಯಧಾಮ ಈ ಬೃಂದಾವನ.

ಬೃಂದಾವನದ ಸುತ್ತಮುತ್ತಲಿನ ಒಂದೊಂದು ವಸ್ತುವೂ ಒಂದೊಂದು ಸ್ಥಳವೂ ಶ್ರೀಕೃಷ್ಣನ ಒಂದೊಂದು ಲೀಲೆಯಲ್ಲಿ ಭಾಗಿಯಾಗಿದ್ದ ಕತೆಯನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದೆ. ಬೃಂದಾವನದ ಜೀವನದಿಯಾದ ಯಮುನೆ, ಅದಕ್ಕೆ ಸೇರಿದ 'ಕಾಳೀಯದಮನಘಟ್ಟ'ವೇ ಮೊದಲಾದ ಸ್ನಾನಸೋಪಾನಗಳು, ರಾಸಲೀಲೆಯನ್ನು ನೆನಪಿಸುವ ನದೀಕಿನಾರೆ; ಬಾಲ ಗೋಪಾಲಕೃಷ್ಣನನ್ನು ನೆನಪಿಗೆ ತರುವ ಗೊಲ್ಲರು, ಹುಲ್ಲುಗಾವಲು, ದನಕರುಗಳ ಹಿಂಡು; ಅಲ್ಲಲ್ಲಿ ನಲಿದಾಡುವ ಸಾರಂಗ ಮಯೂರಗಳು; ಗೋವಿಂದಜಿ, ಬಾಂಕೇಬಿಹಾರಿ* ಮೊದಲಾದ ಹಲವಾರು ದೇವಾಲಯಗಳು; ದೂರದಲ್ಲಿ ಶ್ರೀಕೃಷ್ಣ ಎತ್ತಿಟ್ಟ ಗೋವರ್ಧನ ಬೆಟ್ಟ; ಶ್ಯಾಮಕುಂಡ-ರಾಧಾಕುಂಡಗಳೆಂಬ ಎರಡು ಪವಿತ್ರ ಸರೋವರಗಳು.

ಇಂಥ ಸುಂದರ ಬೃಂದಾವನಕ್ಕೆ ಆಗಮಿಸಿತು ಯಾತ್ರಿಕ ವೃಂದ. ಇಲ್ಲಿ ವಾಸಕ್ಕಾಗಿ ನಿಧುವನ ಎಂಬಲ್ಲಿ ಒಂದು ಮನೆಯನ್ನು ಗೊತ್ತುಪಡಿಸಿಕೊಳ್ಳಲಾಯಿತು. ಮಥುರ ಈ ಬೃಂದಾವನದಲ್ಲಿಯೂ ರಾಜಯೋಗ್ಯವಾದ ರೀತಿಯಲ್ಲಿ ನಡೆದುಕೊಂಡ. ಕಾಶಿಯಲ್ಲಿ ಮಾಡಿದಂತೆ ಇಲ್ಲಿಯೂ ಧಾರಾಳವಾಗಿ ದಾನಕಾರ್ಯ ಮಾಡಿದ. ತನ್ನ ಹೆಂಡತಿ ಜಗದಂಬಾದಾಸಿಯೊಡನೆ ಅವನು ಅಲ್ಲಿನ ದೇವಾಲಯಗಳನ್ನೆಲ್ಲ ಸಂದರ್ಶಿಸಿದ. ಪ್ರತಿಯೊಂದು ದೇವಾಲಯಕ್ಕೂ ಕೆಲವು ಚಿನ್ನದ ನಾಣ್ಯಗಳನ್ನು ಕಾಣಿಕೆಯಾಗಿ ಸಮರ್ಪಿಸಿದ.

ಮಥುರ ಈ ರೀತಿಯ ದಾನಧರ್ಮದಿಂದ, ವೈಭವ ಪ್ರದರ್ಶನದಿಂದ ತೃಪ್ತಿಪಟ್ಟರೆ, ಶ್ರೀರಾಮಕೃಷ್ಣರದು ಇನ್ನೊಂದು ಬಗೆಯ ಆನಂದ. ಹಿಂದೆ ಮಧುರಭಾವದ ಸಾಧನೆಯ ಪರಾಕಾಷ್ಠೆಯನ್ನು ಮುಟ್ಟಿದ್ದ ಅವರೊಳಗೆ ಈಗ ಆ ಭಾವ ಮತ್ತೊಮ್ಮೆ ಒತ್ತರಿಸಿ ಬಂದಿತು. ಎಲ್ಲಿ ನೋಡಿದರಲ್ಲಿ ಶ್ರೀಕೃಷ್ಣನ ದಿವ್ಯಲೀಲೆ! ಆದರೆ ಆ ಲೀಲಾನಾಟಕದ ಸೂತ್ರಧಾರನೆಲ್ಲಿ? ಎಲ್ಲಿ? ಎಲ್ಲಿ ಆ ಕೃಷ್ಣ?

ತಮ್ಮಲ್ಲುಂಟಾದ ಆ ವಿರಹವೇದನೆಯನ್ನು ಶ್ರೀರಾಮಕೃಷ್ಣರು ಮುಂದೊಮ್ಮೆ

---

*ಬಾಂಕೇಬಿಹಾರಿ ಎಂಬುದರ ಮೂಲ 'ವಂಕವಿಹಾರಿ'. ವಂಕ ಎಂದರೆ ಡೊಂಕು. ಶ್ರೀಕೃಷ್ಣ ನಿಂತು ಕೊಳಲೂದುವ ಚಿತ್ರವನ್ನು ನೋಡಬೇಕು—ಕತ್ತು, ಸೊಂಟ ಮತ್ತು ಒಂದು ಕಾಲು ಬಾಗಿಕೊಂಡಿರುತ್ತದೆ. ಹೀಗೆ ತ್ರಿಭಂಗಿಯಲ್ಲಿ ನಿಂತಿರುವ ಕೃಷ್ಣನಿಗೆ ಬಾಂಕೇಬಿಹಾರಿ ಎಂಬ ಹೆಸರು.

ಹೀಗೆ ಬಣ್ಣಿಸುತ್ತಾರೆ:

"(ದೇವಾಲಯದಲ್ಲಿ) ಬಾಂಕೇಬಿಹಾರಿಯನ್ನು ಕಂಡೊಡನೆಯೇ ನನ್ನೊಳಗೆ ಭಾವಗಳು ಸ್ಫೋಟಗೊಂಡು, ಅವನನ್ನು ಅಪ್ಪಿಕೊಳ್ಳಲು ಧಾವಿಸಿದೆ. ಕಾಳೀಯ ದಮನ ಘಟ್ಟದ ನೋಟಮಾತ್ರದಿಂದಲೇ ಭಾವೋತ್ಕರ್ಷಿತನಾಗುತ್ತಿದ್ದೆ. ಮಗುವಿಗೆ ಸ್ನಾನ ಮಾಡಿಸುವಂತೆ ಹೃದಯ ನನಗೆ ಸ್ನಾನ ಮಾಡಿಸುತ್ತಿದ್ದ. ಸಂಜೆಯ ಹೊತ್ತು ನದಿಯ ಮಳಲ ದಂಡೆಯ ಮೇಲೆ ಒಂದಿಷ್ಟು ಅಡ್ಡಾಡುತ್ತಿದ್ದೆ. ಅಲ್ಲಿ ಬೋರೆ ಹಣ್ಣಿನ ಮರಗಳ ಮಧ್ಯೆ ಸಣ್ಣ ಪರ್ಣಕುಟೀರಗಳಿದ್ದುವು. ಒಂದು ಸಂಜೆ ದನಗಳ ಹಿಂಡೊಂದು ಗೋಮಾಳ ದಿಂದ ಹಿಂದಿರುಗುತ್ತಿರುವುದನ್ನು ಕಂಡೆ. ಗೋವುಗಳೊಂದಿಗೆ ಗೋಪಾಲಕರು ನದಿಯ ಮೂಲಕ ನಡೆದುಬರತೊಡಗಿದರು. ತಕ್ಷಣ ನನಗೆ ಶ್ರೀಕೃಷ್ಣನ ಸ್ಮರಣೆಯಾಯಿತು. ಭಾವೋನ್ಮತ್ತನಾಗಿ ನಾನು, 'ಎಲ್ಲಿರುವನು ಆ ಕೃಷ್ಣ! ಓಹ್, ಎಲ್ಲಿ ನನ್ನ ಕೃಷ್ಣ?' ಎಂದು ಕೂಗುತ್ತ ಓಡಿದೆ.

"ನನಗೆ ಶ್ಯಾಮಕುಂಡ-ರಾಧಾಕುಂಡಗಳನ್ನು ನೋಡುವ ಬಯಕೆಯಾಯಿತು. ಮಥುರ ನನ್ನನ್ನು ಪಲ್ಲಕ್ಕಿಯಲ್ಲಿ ಕಳಿಸಿಕೊಟ್ಟ. ಅದು ದೂರದ ಪಯಣ. ಆದ್ದರಿಂದ ದಾರಿಯಲ್ಲಿ ತಿನ್ನುವುದಕ್ಕಾಗಿ ತಿನಿಸುಗಳನ್ನು ಕಟ್ಟಿಕೊಟ್ಟಿದ್ದರು. ಗೋವರ್ಧನಗಿರಿಯನ್ನು ನೋಡಲು ಪಲ್ಲಕ್ಕಿಯಿಂದ ಇಳಿದೆ. ಅದನ್ನು ನೋಡಿದೆನೊ ಇಲ್ಲವೊ, ಆವೇಶಭರಿತ ನಾಗಿ ಒಂದೇ ಓಟಕ್ಕೆ ತುದಿಯನ್ನು ತಲುಪಿ, ಬಾಹ್ಯಪ್ರಜ್ಞಾಶೂನ್ಯನಾಗಿ ನಿಂತೆ! ಅಲ್ಲಿನ ಜನ ನನ್ನನ್ನು ಕೆಳಕ್ಕೆ ತಂದರು. ಶ್ಯಾಮಕುಂಡ-ರಾಧಾಕುಂಡಕ್ಕೆ ಹೋಗುವ ದಾರಿಯಲ್ಲಿ ನಾನು, ಕೃಷ್ಣಲೀಲೆಗಳ ಸ್ಮರಣೆಗಳೇ ತುಂಬಿರುವ ಹುಲ್ಲುಬಯಲುಗಳನ್ನು, ಹರಿ ದ್ವರ್ಣದ ವನರಾಜಿಯನ್ನು, ಪಕ್ಷಿಗಳನ್ನು, ಜಿಂಕೆಗಳನ್ನು ಕಂಡೆ; ಕಂಡು ತಡೆದುಕೊಳ್ಳ ಲಾರದೆ ಹೋದೆ. ಕಣ್ಣಿನಿಂದ ಅಶ್ರುಧಾರೆ ಹರಿದು ಬಟ್ಟೆಯನ್ನೆಲ್ಲ ತೋಯಿಸಿತು. ನಾನೆಂದುಕೊಂಡೆ, 'ಓ ಕೃಷ್ಣ, ಇಲ್ಲಿ ನಿನ್ನ ಸಂಬಂಧದಿಂದಾಗಿ ಪುನೀತವಾದ ಎಲ್ಲ ವಸ್ತು ಗಳೂ ಇವೆ. ಆದರೆ ನಿನ್ನನ್ನು ಮಾತ್ರ ಕಾಣೆನಲ್ಲ!' ಮನಸ್ಸಿನಲ್ಲಿ ಇಷ್ಟು ತೀವ್ರವಾದ ತುಮುಲವಿದ್ದರೂ ನನ್ನ ಬಾಯಿಂದ ಮಾತ್ರ ಒಂದು ಶಬ್ದವೂ ಹೊರಡಲಿಲ್ಲ! ನಾನಾಗ ಪಲ್ಲಕ್ಕಿಯಲ್ಲಿ ಕುಳಿತಿದ್ದೆ. ಅದನ್ನು ಹೊತ್ತಿದ್ದವರಿಗೆ 'ನಿಲ್ಲಿಸಿ' ಎಂದು ಹೇಳಲೂ ನನ್ನಿಂದಾಗಲಿಲ್ಲ. ಹೃದಯ ಹಿಂದೆಯೇ ಬರುತ್ತಿದ್ದ. 'ಗಮನವಿಟ್ಟು, ಜಾಗ್ರತೆಯಿಂದ ಹೋಗಬೇಕು' ಎಂದು ಪಲ್ಲಕ್ಕಿಯವರಿಗೆ ಎಚ್ಚರಿಕೆ ಕೊಟ್ಟಿದ್ದ. ಶ್ಯಾಮಕುಂಡ-ರಾಧಾ ಕುಂಡಗಳಲ್ಲಿ ಸಾಧುಗಳು ತ್ರಿಕೋನಾಕಾರದ ಪುಟ್ಟ ಕುಟೀರಗಳಲ್ಲಿ ಕುಳಿತು ಧ್ಯಾನ-ಜಪ ಮಾಡುತ್ತಿದ್ದರು. ಅವರು ಹೊರಗಿನ ಜನರು ಕಣ್ಣಿಗೆ ಬೀಳಬಾರದೆಂದು ಬಾಗಿಲಿಗೆ ಬೆನ್ನು ಮಾಡಿ ಕುಳಿತಿದ್ದರು."

ಶ್ರೀರಾಮಕೃಷ್ಣರಿಗೆ ನಿಧುವನ, ಗೋವರ್ಧನ ಮೊದಲಾದ ಕ್ಷೇತ್ರಗಳು ಬೃಂದಾ ವನಕ್ಕಿಂತಲೂ ಹೆಚ್ಚು ಪ್ರಿಯವಾದುವು. ಶ್ರೀಕೃಷ್ಣನನ್ನೂ ರಾಧೆಯನ್ನೂ ನಾನಾ ಭಾವ ಸಾಧನೆಗಳಿಂದ ದರ್ಶನ ಮಾಡಿದ ಅವರಿಗೆ ಈ ಕ್ಷೇತ್ರಗಳಲ್ಲಿ ವಿಶೇಷವಾದ ಪ್ರೇಮ ವುದಿಸಿತ್ತು. ಅವರು ಎಲ್ಲ ಸ್ಥಳಗಳನ್ನೂ ಮನದಣಿಯೆ ನೋಡಲು ಅನುಕೂಲವಾಗು ವಂತೆ ಮಥುರ ಸರ್ವ ವ್ಯವಸ್ಥೆಯನ್ನೂ ಮಾಡಿದ. ದೇವಸ್ಥಾನಗಳಿಗೆ ಕಾಣಿಕೆ ಹಾಕಲು ಹಾಗೂ ಬಡಬಗ್ಗರಿಗೆ ದಾನ ಮಾಡಲು, ಪಲ್ಲಕ್ಕಿಯಲ್ಲಿ ಅವರ ಪಕ್ಕದಲ್ಲೇ ಒಂದು ಬಟ್ಟೆ ಹಾಸಿ ದುಡ್ಡನ್ನು ಸುರಿದು ಕಳಿಸುತ್ತಿದ್ದ. ಎರಡಾಣೆ, ನಾಲ್ಕಾಣೆ, ಎಂಟಾಣೆ, ಒಂದು

ರೂಪಾಯಿ ಮುಂತಾದ ನಾಣ್ಯಗಳನ್ನು ಬೇರೆಬೇರೆಯಾಗಿ ಪೇರಿಸಿರುತ್ತಿತ್ತು. ಆದರೆ ಆ ಸ್ಥಳಗಳಿಗೆ ಹೋಗುತ್ತಲೇ ಶ್ರೀರಾಮಕೃಷ್ಣರು ಆಯಾ ಭಾವದಿಂದ ಉನ್ಮತ್ತರಾಗಿಬಿಡುತ್ತಿದ್ದರು. ಆಗ ಹಣವನ್ನು ಕೈಯಿಂದೆತ್ತಿ ದಾನ ನೀಡಲು ಅವರಿಗೆ ಆಗುತ್ತಲೇ ಇರಲಿಲ್ಲ. ಆದ್ದರಿಂದ ಆ ಬಟ್ಟೆಯ ಅಂಚನ್ನು ಹಿಡಿದು ಭಿಕ್ಷುಕರ ಮುಂದೆ ಅದನ್ನು ಚೆಲ್ಲುತ್ತ ಹೋಗುತ್ತಿದ್ದರು !

ಬೃಂದಾವನದಲ್ಲಿ ಶ್ರೀರಾಮಕೃಷ್ಣರಿಗೆ ಈ ಎಲ್ಲ ಕ್ಷೇತ್ರಗಳಿಗಿಂತಲೂ ಹೆಚ್ಚಿನ ಆನಂದವನ್ನೂ ಸಂತೃಪ್ತಿಯನ್ನೂ ತಂದುಕೊಟ್ಟ ಸಂಗತಿಯೆಂದರೆ ಗಂಗಾಮಾತೆಯ ದರ್ಶನ, ಆಕೆಯ ಮಧುರ ಸಹವಾಸ.

ಗಂಗಾಮಾತೆ—ಈಕೆ ನಿಧುವನದಲ್ಲಿ ನೆಲಸಿದ್ದ ಓರ್ವ ಶ್ರೇಷ್ಠ ತಪಸ್ವಿನಿ, ಮಧುರ ಭಾವ ಸಾಧಕಿ. ವಯಸ್ಸು ಅರವತ್ತಕ್ಕೂ ಮೀರಿತ್ತು. ದೀರ್ಘಕಾಲದವರೆಗೆ ರಾಧಾ-ಕೃಷ್ಣರಲ್ಲಿ ಅತಿಶಯಪ್ರೇಮವಿಟ್ಟು ಅದ್ಭುತವಾದ ಸಾಧನೆ ಮಾಡಿದ್ದಳು. ಅದರ ಪರಿಣಾಮವಾಗಿ ಅವಳ ವ್ಯಕ್ತಿತ್ವವೇ ಸಂಪೂರ್ಣವಾಗಿ ಪರಿವರ್ತನೆಗೊಂಡಿತ್ತು. ದಿವ್ಯಪ್ರೇಮದಲ್ಲೇ ಮಿಂದು, ತಣಿದು, ಹಣ್ಣಾದ ಜೀವ ಅದು. ಇದನ್ನು ಕಂಡ ಜನ, ಈಕೆ ರಾಧೆಯ ಪ್ರಧಾನ ಸಖಿಯಾದ ಲಲಿತೆಯ ಅವತಾರವೆಂದು ನಂಬಿದ್ದರು. ಲೋಕಕ್ಕೆ ಆ ದಿವ್ಯ ಪ್ರೇಮವನ್ನು ಮತ್ತೊಮ್ಮೆ ಬೋಧಿಸಿ ಪ್ರಚುರಗೊಳಿಸುವುದಕ್ಕಾಗಿಯೇ ಗಂಗಾಮಾತೆಯಾಗಿ ಜನ್ಮವೆತ್ತಿದ್ದಾಳೆ ಎಂದು ಮಾತನಾಡಿಕೊಳ್ಳುತ್ತಿದ್ದರು.

ಶ್ರೀರಾಮಕೃಷ್ಣ-ಗಂಗಾಮಾತೆಯರಿಗೆ ಪರಸ್ಪರರ ಮಹಿಮೆ-ಮಹಾತ್ಮೆಗಳನ್ನು ಗುರುತಿಸಲು ಹೆಚ್ಚು ಹೊತ್ತು ಬೇಕಾಗಲಿಲ್ಲ. ಹಿಂದೆ ರಾಧೆಯಲ್ಲಿ ಯಾವ ಅತ್ಯಪೂರ್ವ 'ಮಹಾಭಾವ'ವು ಪ್ರಕಾಶಗೊಂಡಿತ್ತೋ ಅದು ಶ್ರೀರಾಮಕೃಷ್ಣರಲ್ಲಿ ವ್ಯಕ್ತಗೊಂಡಿರುವುದನ್ನು ಗಂಗಾಮಾತೆ ಅವರ ದರ್ಶನಮಾತ್ರದಿಂದಲೇ ಕಂಡುಹಿಡಿದಳು. ಅವಳಿಗೆ ಅದರಿಂದಾದ ಆಶ್ಚರ್ಯ-ಆನಂದ ಅಷ್ಟಿಷ್ಟಲ್ಲ. ಅವಳು ಶ್ರೀರಾಮಕೃಷ್ಣರನ್ನು ಸ್ವಯಂ ರಾಧಾರಾಣಿಯೇ ಎಂದು ನಿರ್ಧರಿಸಿ 'ದುಲಾಲೀ' ಎಂದು ಕರೆಯತೊಡಗಿದಳು. (ದುಲಾಲಿ: ಹಿಂದಿಯಲ್ಲಿ ಸಾಮಾನ್ಯ ಅರ್ಥ ಮಗಳು ಎಂದು; ರಾಧೆಯ ಮುದ್ದಿನ ಹೆಸರು.) ಈ ವಯಸ್ಸಿನಲ್ಲಿ ಇಷ್ಟು ಅನಾಯಾಸವಾಗಿ 'ದುಲಾಲಿ'ಯ ದರ್ಶನವನ್ನು ಪಡೆದ ತಾನೇ ಧನ್ಯಳೆಂದು ಹಿಗ್ಗಿದಳು. ತಾನು ಇಷ್ಟು ದಿನ ಮಾಡಿದ ಸೇವೆ-ಸಾಧನೆಯೆಲ್ಲ ಸಾರ್ಥಕವಾಯಿತೆಂದು ತಿಳಿದು ಅಪೂರ್ವ ಶಾಂತಿಯನ್ನನುಭವಿಸಿದಳು.

ಗಂಗಾಮಾತೆಯ ಭೇಟಿಯಿಂದಾಗಿ ಶ್ರೀರಾಮಕೃಷ್ಣರೂ ಅಷ್ಟೇ ಸಂಪ್ರೀತರಾದರು. ಯಾವ ಸಾಧುಸಜ್ಜನರನ್ನೇ ಭೇಟಿಯಾದಾಗಲೂ, ಅವರು ಯಾವ ಭಾವದ ಸಾಧಕರು, ಆಧ್ಯಾತ್ಮಿಕ ಪಥದಲ್ಲಿ ಎಷ್ಟು ದೂರ ಸಾಗಿದ್ದಾರೆ ಎಂಬುದನ್ನು ಮೊದಲು ಕಂಡುಕೊಳ್ಳುವುದು ಶ್ರೀರಾಮಕೃಷ್ಣರ ಸ್ವಭಾವ. ಅವರು ಹೃದಯನಿಗೆ ಗಂಗಾಮಾತೆಯ ವಿಶೇಷ ದೇಹಲಕ್ಷಣಗಳನ್ನು ತೋರಿಸಿ, "ಇವಳು ಬಹಳ ಉನ್ನತಾವಸ್ಥೆಗೇರಿದವಳು" ಎಂದರು. ಪರಮ ಪ್ರೇಮ-ಭಕ್ತಿಗಳಿಂದಾಗಿ ಅವಳ ಸುತ್ತ ಮಾಧುರ್ಯದ ವಾತಾವರಣವೊಂದು ನಿರ್ಮಾಣಗೊಂಡಿತ್ತು. ಈ ಮಾಧುರ್ಯದ ಪರಿಮಳಕ್ಕೆ ಶ್ರೀರಾಮಕೃಷ್ಣರು ಮನಸೋತು ಮುಗ್ಧರಾದರು. ಅವಳು ತಮಗೆ ಚಿರಪರಿಚಿತಳೋ ಎಂಬಂತೆ ಎಲ್ಲವನ್ನೂ ಮರೆತು ಅವಳ ಆಶ್ರಮದಲ್ಲೇ ಇರತೊಡಗಿದರು. ಅವರಿಗೆ ಆಕೆಯ ಸಾನ್ನಿಧ್ಯ ಎಷ್ಟು ಆನಂದವಿತ್ತಿತೆಂದರೆ, ತಾವಿನ್ನು ಈ ಸ್ಥಳವನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ

ಎಂದು ನಿಶ್ಚಯಿಸಿಬಿಟ್ಟರು!

ಶ್ರೀರಾಮಕೃಷ್ಣರ ಈ ಭಾವವನ್ನು ಕಂಡು ಮಥುರನಿಗೆ ಹೇಗೆನ್ನಿಸಿರಬೇಡ! ಇವರಿನ್ನು ದಕ್ಷಿಣೇಶ್ವರಕ್ಕೆ ಬರಲಾರರು ಎಂದು ಅನ್ನಿಸಿದಾಗ ಅವನು ತಲ್ಲಣಿಸಿದ. ಪಾಪ, ಅದು ಸಹಜವೇ. ಆದರೆ ಅವನು ಆ ಬಗ್ಗೆ ಹೆಚ್ಚು ಚಿಂತಿಸಬೇಕಾಗಿಬರಲಿಲ್ಲ. ಕೆಲದಿನಗಳಲ್ಲೇ ಶ್ರೀರಾಮಕೃಷ್ಣರು, ಎಲ್ಲರೂ ಚಕಿತರಾಗುವಂತೆ, ತಮ್ಮ ನಿರ್ಧಾರವನ್ನು ಬದಲಿಸಿಬಿಟ್ಟರು.

ನಿಜಕ್ಕೂ ಅವರಿಗೆ ಬೃಂದಾವನದ ಮೇಲಿನ ಆಕರ್ಷಣೆ ಎಷ್ಟು ಪ್ರಬಲವಾಗಿತ್ತೆಂದರೆ, ದಕ್ಷಿಣೇಶ್ವರದ ಯಾವ ಆಕರ್ಷಣೆಯೂ ಅದರ ಮುಂದೆ ನಿಲ್ಲಲಿಲ್ಲ. ಆದರೆ ಒಂದು ದಿನ ಇದ್ದಕ್ಕಿದ್ದಂತೆ ಅವರಿಗನ್ನಿಸಿತು—ತಾವಿಲ್ಲೇ ಉಳಿದುಕೊಂಡು ಬಿಟ್ಟರೆ, ತಮ್ಮ ತಾಯಿಯ ಗತಿಯೇನು? ಕಡೆಗಾಲದಲ್ಲಿ ರಾಮಾ-ಕೃಷ್ಣಾ ಎನ್ನುತ್ತ ಗಂಗಾತೀರದಲ್ಲಿ ನಿಶ್ಚಿಂತೆಯಾಗಿ ಪ್ರಾಣಬಿಡಲು ದಕ್ಷಿಣೇಶ್ವರಕ್ಕೆ ಬಂದವಳಲ್ಲವೆ ಅವಳು! ಈಗ ಅವಳ ಆಸೆ ಈಡೇರುವ ಬಗೆ ಹೇಗೆ? ಈ ಯೋಚನೆ ಬಂದ ಕೂಡಲೇ ಅವರ ಮನಸ್ಸು ಕರಗಿಹೋಯಿತು, ನಿರ್ಧಾರ ಬದಲಾಯಿತು!

ಬೃಂದಾವನದಲ್ಲಿ ಎರಡು ವಾರಗಳನ್ನು ಕಳೆದ ಬಳಿಕ ಶ್ರೀರಾಮಕೃಷ್ಣರು ಪುನಃ ಕಾಶಿಗೆ ಹೊರಡಲು ಅನುವಾದರು. ಆದರೆ ಗಂಗಾಮಾತೆ ಬಿಟ್ಟುಕೊಡಬೇಕಲ್ಲ! ಹೇಗೋ ಬಹಳ ಕಷ್ಟದಿಂದ ಆಕೆಯ ಸಮ್ಮತಿಯನ್ನು ಪಡೆದುಕೊಂಡು ಸಹಯಾತ್ರಿಕರೊಡನೆ ಕಾಶಿಗೆ ಹೊರಟರು.

ಬೃಂದಾವನದಿಂದ ನಿರ್ಗಮಿಸುವ ಮುನ್ನ ಶ್ರೀರಾಮಕೃಷ್ಣರು ಭೈರವಿ ಬ್ರಾಹ್ಮಣಿಯನ್ನು ಕಂಡು ಮಾತನಾಡಿದರು. ಕೊನೆಯುವರೆಗೂ ಬೃಂದಾವನದಲ್ಲೇ ಇದ್ದುಕೊಂಡು ಸಾಧನೆಯನ್ನು ಮುಂದುವರಿಸುವಂತೆ ಆಕೆಗೆ ಹೇಳಿದರು. ಅದರಂತೆಯೇ ಆಕೆ ಅಲ್ಲಿಯೇ ಇದ್ದುಬಿಟ್ಟಳು. ಮುಂದೆ ಕೆಲಕಾಲದಲ್ಲೇ ಆಕೆ ಶ್ರೀಕೃಷ್ಣನ ಪಾದ ಸೇರಿದಳೆಂಬ ಸುದ್ದಿ ದಕ್ಷಿಣೇಶ್ವರಕ್ಕೆ ಮುಟ್ಟಿತು.

ಬೃಂದಾವನದಲ್ಲಿದ್ದಾಗ ಶ್ರೀರಾಮಕೃಷ್ಣರಿಗೆ ವೀಣಾವಾದನವನ್ನು ಕೇಳಬೇಕೆಂಬ ಇಚ್ಛೆಯುಂಟಾಯಿತು. ಆದರೆ ಆಗ ಅಲ್ಲಿ ವೈಣಿಕರು ಯಾರೂ ಇಲ್ಲದ್ದರಿಂದ ಅವರ ಇಚ್ಛೆ ಪೂರೈಸಲಿಲ್ಲ. ಕಾಶಿಗೆ ಮರಳಿದ ಮೇಲೆ ಪುನಃ ಅವರಲ್ಲಿ ಆ ಇಚ್ಛೆ ಕಾಣಿಸಿಕೊಂಡಿತು. ಕಾಶೀ ನಗರದ ಮದನಪುರ ಎಂಬಲ್ಲಿ ಮಹೇಶಚಂದ್ರ ಸರ್ಕಾರ ಎನ್ನುವ ಪ್ರಸಿದ್ಧ ವೈಣಿಕನಿದ್ದಾನೆಂದು ಅವರಿಗೆ ತಿಳಿದುಬಂದಿತು. ಕೂಡಲೇ ಹೃದಯುನೊಂದಿಗೆ ಅವನ ಮನೆಗೆ ಹೋಗಿ, ದಯವಿಟ್ಟು ತಮಗಾಗಿ ವೀಣೆ ನುಡಿಸುವಂತೆ ಅವನನ್ನು ಕೇಳಿಕೊಂಡರು. ಅದು ತನ್ನ ಪಾಲಿನ ಸೌಭಾಗ್ಯವೆನ್ನುತ್ತ ಮಹೇಶಚಂದ್ರ ವೀಣೆ ನುಡಿಸಲಾರಂಭಿಸಿದ. ವೀಣೆಯ ಮಧುರ-ಗಂಭೀರ ಝುಂಕಾರವನ್ನು ಕೇಳಿದೊಡನೆಯೇ ಶ್ರೀರಾಮಕೃಷ್ಣರು ಭಾವಾವಿಷ್ಟರಾದರು. ಮನಸ್ಸು ಇನ್ನೇನು ಭಾವಸಮಾಧಿಗೇರಬೇಕು, ಅಷ್ಟರಲ್ಲೇ ಅವರು "ತಾಯಿ, ಓ ತಾಯಿ, ಸಮಾಧಿಸ್ಥನಾಗಿಬಿಟ್ಟರೆ ಸಂಗೀತ ಕೇಳುವುದು ಹೇಗಮ್ಮಾ! ನನ್ನ ಮನಸ್ಸನ್ನೊಂದಿಷ್ಟು ಶಾಂತವಾಗಿರಿಸಮ್ಮಾ! ನಾನು ವೀಣಾನಾದವನ್ನು ಸರಿಯಾಗಿ ಆಲಿಸಬೇಕು" ಎಂದು ಬೇಡಿಕೊಂಡರು. ಆ ಬಳಿಕವೇ ಅವರು ಬಾಹ್ಯಪ್ರಜ್ಞೆಯಲ್ಲಿ ಉಳಿಯಲು ಸಮರ್ಥರಾದದ್ದು. ಅಲ್ಲದೆ ವೀಣಾವಾದನವನ್ನು ಆಲಿಸುತ್ತ, ನಡುನಡುವೆ ತಮ್ಮ ಸ್ವರವನ್ನೂ ಸೇರಿಸಿ ಗುನುಗಿದರು. ಆ ವೈಣಿಕನಿಗೆ

ಇಂತಹ ದಿವ್ಯ ಶ್ರೋತೃವೊಬ್ಬನ ಮುಂದೆ ನುಡಿಸುವುದಕ್ಕಿಂತ ಹೆಚ್ಚಿನ ಮನ್ನಣೆ ಮತ್ತೇನು ಬೇಕು? ಮಹೇಶಚಂದ್ರ ಅಂದು ಸಂಜೆ ಐದು ಗಂಟೆಯಿಂದ ಎಂಟು ಗಂಟೆಯವರೆಗೂ ವೀಣೆ ನುಡಿಸಿದ. ಆಮೇಲೆ ಶ್ರೀರಾಮಕೃಷ್ಣರು ಅವನ ಕೋರಿಕೆ ಯಂತೆ ಸ್ವಲ್ಪ ಉಪಾಹಾರವನ್ನು ಸ್ವೀಕರಿಸಿ ಮರಳಿದರು. ಅಂದಿನಿಂದ ಅವನು ಅವರ ದರ್ಶನಕ್ಕಾಗಿ ತಾನೇ ಪ್ರತಿದಿನವೂ ಬರುತ್ತಿದ್ದ. ಅವನು ವೀಣೆಯನ್ನು ನುಡಿಸುತ್ತ ನುಡಿ ಸುತ್ತ ತಾನೇ ಮೈಮರೆಯುತ್ತಿದ್ದ.

ಯಾತ್ರೆಯ ಮುಂದಿನ ಅಂಗವಾಗಿ ವಾರಾಣಸಿಯಿಂದ ಗಯಾಕ್ಷೇತ್ರಕ್ಕೆ ಹೋಗು ವುದೆಂದು ಮಥುರ ಆಲೋಚಿಸಿದ್ದ. ಗದಾಧರನ ದರ್ಶನ ಮಾಡಲು ಠಾಕೂರರೂ ಸಂತಸದಿಂದ ಕೂಡಲೇ ಒಪ್ಪುವರೆಂದು ಅವನು ಭಾವಿಸಿದ್ದ. ಆದರೆ ಶ್ರೀರಾಮಕೃಷ್ಣರು ತಾವು ಗಯೆಗೆ ಬರಲಾರೆವೆಂದು ಹೇಳಿಬಿಟ್ಟರು. ಅದಕ್ಕೆ ಅವರು ನೀಡಿದ ಕಾರಣವನ್ನು ಕೇಳಿದಾಗ ಮಾತ್ರ ಮಥುರ ಚಕಿತನಾದ. ಹಿಂದೆ ತಮ್ಮ ತಂದೆ ಕ್ಷುದೀರಾಮ ಇದೇ ಕ್ಷೇತ್ರಕ್ಕೆ ಹೋಗಿದ್ದಾಗ ಅವನಿಗಾದ ಅದ್ಭುತ ದರ್ಶನ; ಬಳಿಕ ತಮ್ಮ ಜನನಕ್ಕೆ ಮೊದಲೂ ಅನಂತರವೂ ತಮ್ಮ ತಾಯ್ತಂದೆಯರಿಗಾಗಿದ್ದ ಹಲವಾರು ವಿಚಿತ್ರ ಅನುಭವಗಳು—ಇವನ್ನೆಲ್ಲ ಶ್ರೀರಾಮಕೃಷ್ಣರು ಕೇಳಿತಿಳಿದಿದ್ದರು. ತಮಗೆ ಗದಾಧರನೆಂದು ಹೆಸರಿಡಲೂ ಅದೇ ಕಾರಣವೆಂಬುದೂ ಅವರಿಗೆ ಗೊತ್ತಿತ್ತು. ಆದ್ದರಿಂದ ತಾವೇನಾದರೂ ಗಯೆಗೆ ಹೋಗಿ ಗದಾಧರನ ದರ್ಶನ ಮಾಡಿದರೆ ತಮ್ಮ ಮನಸ್ಸು ಇನ್ನು ಹಿಂದಿರುಗಲಾರದಷ್ಟು ಆಳವಾದ ಸಮಾಧಿಸ್ಥಿತಿಗೇರಿಬಿಡುತ್ತದೆ—ಅರ್ಥಾತ್, ತಮ್ಮ ಶರೀರವಿನ್ನು ಉಳಿಯ ಲಾರದು ಎಂಬುದು ಅವರಿಗೆ ಗೋಚರವಾಗಿತ್ತು.

ತಮ್ಮ ಶರೀರ ಮನಸ್ಸುಗಳ ಉಗಮಸ್ಥಾನವಾದ ಗಯಾಕ್ಷೇತ್ರದ ವಿಷಯದಲ್ಲಿ ಮಾತ್ರವಲ್ಲ, ಬೇರೆಬೇರೆ ಅವತಾರಪುರುಷರು ದೇಹತ್ಯಾಗ ಮಾಡಿದ ಇತರ ಯಾವುದೇ ಕ್ಷೇತ್ರದ ದರ್ಶನ ಮಾಡುವ ಪ್ರಸ್ತಾಪ ಬಂದಾಗಲೂ ಅವರ ಮನಸ್ಸಿನಲ್ಲಿ ಯಾವುದೋ ಒಂದು ಅವ್ಯಕ್ತವಾದ ಭಾವಸಂಚಾರವಾಗುವುದನ್ನು ಕಾಣಬಹು ದಾಗಿತ್ತು. ಚೈತನ್ಯಮಹಾಪ್ರಭುವಿನ ದೇಹಾವಸಾನವಾದ ನೀಲಾಚಲ (ಪುರಿ) ಕ್ಷೇತ್ರಕ್ಕೆ ತಾವು ಹೋಗುವ ವಿಷಯದಲ್ಲೂ ಅವರು ಹೀಗೆಯೇ ಹೇಳುತ್ತಿದ್ದರು. ಅವರು ಹೀಗೆನ್ನುತ್ತಿದ್ದುದು ಕೇವಲ ತಮ್ಮ ಬಗ್ಗೆ ಮಾತ್ರವಲ್ಲ; ಮುಂದೆ ಅವರು, ತಮ್ಮ ಬಳಿಗೆ ಬರುತ್ತಿದ್ದ ಭಕ್ತರನ್ನು-ಶಿಷ್ಯರನ್ನು ಭಾವದೃಷ್ಟಿಯಿಂದ ನೋಡಿ ಅವರಲ್ಲಿ ಕೆಲವರನ್ನು 'ಇವನು ಇಂತಹ ದೇವತೆಯ ಅಂಶಸಂಭೂತನಾದವನು' ಎಂದು ಗುರುತಿಸುತ್ತಿದ್ದರು, ಮತ್ತು ಅಂಥವರಿಗೆ, ಆಯಾ ದೇವತೆಗಳಿಗೆ ಸಂಬಂಧಿಸಿದ ವಿಶೇಷ ಕ್ಷೇತ್ರಗಳಿಗೆ ಹೋಗದಂತೆ ಇದೇ ಕಾರಣಕ್ಕಾಗಿ ನಿಷೇಧಿಸುತ್ತಿದ್ದರು.

ಇದೊಂದು ಸೋಜಿಗದ ಸಂಗತಿಯೇ ಸೈ. ಇದಕ್ಕೆ ಪೂರಕವಾಗಿ ಅವರೇ ಇನ್ನೊಂದು ಮಾತನ್ನು ಹೇಳುತ್ತಾರೆ: ಯಾವುದೇ ಸ್ಥಳದಿಂದ, ವಸ್ತುವಿನಿಂದ ಅಥವಾ ವ್ಯಕ್ತಿಯಿಂದ ದಿವ್ಯತೆಯ ಪ್ರಕಾಶವೊಂದು ಮೂಡಿಬಂದಿದ್ದರೆ ಆ ಪ್ರಕಾಶವೊಂದು ತನ್ನ ಮೂಲಸ್ಥಾನವನ್ನು ಪುನಃ ಸಮೀಪಿಸಿದಾಗ ಅದರಲ್ಲಿಯೇ ಲಯಹೊಂದುತ್ತದೆ, ಎಂದು. ಉಪನಿಷತ್ತು ಹೇಳುತ್ತದೆ, ಜೀವಾತ್ಮನ ಉಗಮ ಪರಮಾತ್ಮನಿಂದಲೇ; ಅದೇ ಜೀವಾತ್ಮನು ಸಾಧನೆ ಮಾಡುತ್ತ ಪರಮಾತ್ಮನನ್ನು ಸಮೀಪಿಸಿದಾಗ ಅವನಲ್ಲೇ ವಿಲೀನ ಗೊಳ್ಳುತ್ತಾನೆ, ಎಂದು. ಈ ಮಾತು ಶ್ರೀರಾಮಕೃಷ್ಣರ ಹೇಳಿಕೆಗೆ ಪುಷ್ಟಿಕೊಡುತ್ತದೆ.

ಈ ವಿವರಣೆಗಳೇನೇ ಇರಲಿ; ತಾವು ಗಯೆಗೆ ಹೋದರೆ ಮರಳಿ ಬರುವುದು ಅಸಾಧ್ಯ ಎಂಬ ಅವರ ಮಾತನ್ನು ಮಥುರ ಎಷ್ಟರಮಟ್ಟಿಗೆ ಅರ್ಥ ಮಾಡಿಕೊಂಡನೋ ಗೊತ್ತಿಲ್ಲ. ಆದರೆ ಗಯಾ ಯಾತ್ರೆಯ ಯೋಜನೆಯನ್ನು ಮಾತ್ರ ಕೂಡಲೇ ರದ್ದು ಗೊಳಿಸಿದ.

ಇದಾದ ಮೇಲೆ ಅವನು ಶ್ರೀರಾಮಕೃಷ್ಣರೊಡನೆ ಕಾಶಿಯಲ್ಲೇ ಒಂದೆರಡು ತಿಂಗಳನ್ನು ಕಳೆದ. ದೀಪಾವಳಿಯ ಸಮಯದಲ್ಲಿ ಶ್ರೀವಿಶ್ವನಾಥಸ್ವಾಮಿ ಹಾಗೂ ಅನ್ನ ಪೂರ್ಣಾದೇವಿಗೆ ವಿಶೇಷ ಅಲಂಕಾರ ಮಾಡಿದಾಗ ಅದನ್ನು ನೋಡಬೇಕೆಂದು ಶ್ರೀರಾಮಕೃಷ್ಣರು ಆಸೆಪಟ್ಟಿದ್ದರು. ಅವರು ಅಷ್ಟು ದಿನ ಕಾದದ್ದು ಸಾರ್ಥಕವಾಯಿತು. ದೀಪಾವಳಿಯ ಅಮಾವಾಸ್ಯೆಯ ದಿನ ಅನ್ನಪೂರ್ಣೆಯ ಚಿನ್ನದ ವಿಗ್ರಹವನ್ನು ನೋಡಿ ಶ್ರೀರಾಮಕೃಷ್ಣರು ಆನಂದಪರವಶರಾದರು.

೧೮೬೮ರ ನವೆಂಬರ್‌ನ ವೇಳೆಗೆ ಯಾತ್ರಿಕತಂಡ ದಕ್ಷಿಣೇಶ್ವರಕ್ಕೆ ಮರಳಿತು. ಬೃಂದಾವನದ ರಾಧಾಕುಂಡ ಮತ್ತು ಶ್ಯಾಮಕುಂಡದಿಂದ ಶ್ರೀರಾಮಕೃಷ್ಣರು ಒಂದಿಷ್ಟು ಮೃತ್ತಿಕೆಯನ್ನು ತಂದಿದ್ದರು. ದಕ್ಷಿಣೇಶ್ವರಕ್ಕೆ ಬಂದೊಡನೆ ಅದರ ಸ್ವಲ್ಪ ಭಾಗವನ್ನು ಪಂಚವಟಿಯ ಸುತ್ತಮುತ್ತಲೂ ಚೆಲ್ಲಿದರು. ಉಳಿದುದನ್ನು ತಮ್ಮ ಸಾಧನಾ ಕುಟೀರ ದಲ್ಲಿ ಕೈಯಾರೆ ಹುಗಿದಿಟ್ಟು "ಇಂದಿನಿಂದ ಈ ಸ್ಥಳವು ಬೃಂದಾವನದಂತೆಯೇ ಪುಣ್ಯಕ್ಷೇತ್ರವಾಯಿತು" ಎಂದರು.

ಕೆಲವು ದಿನಗಳ ಮೇಲೆ ಶ್ರೀರಾಮಕೃಷ್ಣರು ಮಥುರನಿಗೆ ಹೇಳಿ, ಸಂಪ್ರದಾಯ ದಂತೆ ಯಾತ್ರೆಯ ಸಮಾಪ್ತಿಸೂಚಕವಾಗಿ ಒಂದು ಸಮಾರಾಧನೆಯನ್ನು ಏರ್ಪಡಿ ಸಿದರು. ನಾನಾ ಸ್ಥಳಗಳಿಂದ ವೈಷ್ಣವ ಗೋಸ್ವಾಮಿಗಳನ್ನೂ ಭಕ್ತರನ್ನೂ ಆಮಂತ್ರಿಸಿ ಪಂಚವಟಿಯ ಬಳಿ ಭೋಜನವನ್ನು ನೀಡಿದರು. ಮಥುರನು ಪ್ರತಿಯೊಬ್ಬ ಗೋಸ್ವಾಮಿಗೆ ಹದಿನಾರು ರೂಪಾಯಿಗಳಂತೆಯೂ, ಭಕ್ತಾದಿಗಳಿಗೆ ಒಂದು ರೂಪಾಯಿ ಯಂತೆಯೂ ದಕ್ಷಿಣೆ ನೀಡಿದ.

ಶ್ರೀರಾಮಕೃಷ್ಣರ ಲೀಲಾಮಯ ಜೀವನದಲ್ಲಿ ತೀರ್ಥಯಾತ್ರೆಗೊಂದು ಮಹತ್ವದ ಸ್ಥಾನ. ಈ ಕಾಲದಲ್ಲಿ ಅವರಿಗಾದ ಅನುಭವಗಳು, ಅವರ ಜೀವನದ ಉದ್ದೇಶ ಸಾಧನೆಯಲ್ಲಿ ಅಮೂಲ್ಯವಾಗಿದ್ದುವು. ಲೋಕದ ಜನರ ರೀತಿನೀತಿಗಳನ್ನು ಗಮನಿಸಿ, ಹಾಗೂ ತಮ್ಮ ಸ್ವಂತ ಅನುಭವಗಳ ಆಧಾರದ ಮೇಲೆ ಅವರು ತೀರ್ಥಯಾತ್ರೆಯ ಕುರಿತಾಗಿ ಹಲವಾರು ಮಾತುಗಳನ್ನು ಹೇಳಿದ್ದಾರೆ. ಅವರ ಅನುಭವಗಳನ್ನು ಮತ್ತು ಆ ಮಾತುಗಳನ್ನು ಈ ಸಂದರ್ಭದಲ್ಲೇ ಪರ್ಯಾಲೋಚಿಸುವುದು ಸೂಕ್ತ ಹಾಗೂ ಸ್ವಾರಸ್ಯಕರ.

ತೀರ್ಥಕ್ಷೇತ್ರಗಳಲ್ಲಿ ಋಷಿಮುನಿಗಳು ದೀರ್ಘಕಾಲ ತಪಶ್ಚರ್ಯೆಗೈದಿರುವುದರಿಂದ ಹಾಗೂ ಕಾಲಕಾಲಕ್ಕೆ ಉದಿಸಿದ ಸಿದ್ಧರೂ ಸಾಧು-ಸಂತರೂ ಅಲ್ಲಿಗೆ ಆಗಮಿಸಿ ತಮ್ಮ ಮಹೋನ್ನತ ಆಧ್ಯಾತ್ಮಿಕ ಶಕ್ತಿಯನ್ನು ಸಿಂಪಡಿಸಿರುವುದರಿಂದ ಅಲ್ಲಿ ದೈವೀಭಾವಗಳು ಘನೀಭೂತವಾದಂತಿರುತ್ತವೆ; ಆದ್ದರಿಂದ ಆ ಸ್ಥಳಗಳಿಗೆ ಭೇಟಿಯಿತ್ತ ಯಾತ್ರಿಕರಲ್ಲೂ ಆ ಭಾವಗಳು ಸುಲಭವಾಗಿ ಉದ್ದೀಪನಗೊಳ್ಳುತ್ತವೆ ಎಂಬುದು ಶ್ರೀರಾಮಕೃಷ್ಣರು ಪದೇಪದೇ ಹೇಳುತ್ತಿದ್ದ ಮಾತು. 'ಆದರೆ ತೀರ್ಥಯಾತ್ರೆಗೆ ಹೋದವರಲ್ಲೆಲ್ಲ ಆ ಭಾವಗಳು ಉಂಟಾಗಲು ಸಾಧ್ಯವೆ? ಹಾಗಾದದ್ದು ಎಲ್ಲಾದರೂ ಕಂಡುಬಂದಿದೆಯೆ? ಲಕ್ಷಾಂತರ ಜನ ಹೀಗೆ ನೂರಾರು ಕ್ಷೇತ್ರಗಳನ್ನು ಸುತ್ತಿಸುತ್ತಿ ಬರುತ್ತಲೇ ಇರುತ್ತಾರಲ್ಲ, ಅವರಲ್ಲಿ ತೃಣಮಾತ್ರವಾದರೂ ಬದಲಾವಣೆಯಾದದ್ದು ಕಾಣುವುದಿಲ್ಲವಲ್ಲ?' ಎಂಬ ಪ್ರಶ್ನೆಗಳನ್ನು ಕೇಳುವವರಿದ್ದಾರೆ.

ಈ ಪ್ರಶ್ನೆಗಳಿಗೆಲ್ಲ ಅನೇಕ ಸಾಧು-ಸಂತರು ಈ ಹಿಂದೆಯೇ ಉತ್ತರಿಸಿದ್ದಾರೆ. ಶ್ರೀರಾಮಕೃಷ್ಣರು ಈ ವಿಷಯವಾಗಿ ಹೇಳುವ ಮಾತೂ ಆ ಉತ್ತರಗಳಿಗೆ ಪೂರಕವಾಗಿಯೇ ಇದೆ. ತೀರ್ಥಕ್ಷೇತ್ರಗಳಿಗೆ 'ಸುಮ್ಮನೆ' ಹೋದರೆ, ಅರ್ಥಾತ್, ಭಗವದ್ಭಾವವನ್ನು ಮೊದಲೇ ಹೃದಯದಲ್ಲಿ ತುಂಬಿಕೊಳ್ಳದೆ ಕೇವಲ ಪ್ರವಾಸರೂಪವಾಗಿ ಹೋದರೆ ಅಂಥವರಿಗೆ ಯಾವ ಆಧ್ಯಾತ್ಮಿಕ ಲಾಭವೂ ಆಗಲಾರದು. ಮುಂದೆ ಅವರ ಶಿಷ್ಯರು ಯಾರಾದರೂ ತೀರ್ಥಯಾತ್ರೆ ಹೋಗುವ ಇಚ್ಛೆಯನ್ನು ಅವರ ಮುಂದೆ ವ್ಯಕ್ತಪಡಿಸಿದರೆ, ಅವರೆನ್ನುತ್ತಿದ್ದರು: "ಯಾರಿಗೆ (ಹೃದಯವನ್ನು ತೋರಿಸಿ) ಇಲ್ಲಿದೆಯೋ ಅವರಿಗೆ ಅಲ್ಲಿಯೂ ಇದೆ; ಯಾರಿಗೆ ಇಲ್ಲಿಲ್ಲವೋ ಅವರಿಗೆ ಅಲ್ಲಿಯೂ ಇಲ್ಲ!"

ಒಮ್ಮೆ ಒಬ್ಬ ಭಕ್ತ ಯಾತ್ರೆಗೆ ಹೋಗುವ ಉತ್ಸಾಹ ತೋರಿದಾಗ ಅವರೆನ್ನುತ್ತಾರೆ:

"ನೋಡು, ಯಾರ ಅಂತರ್ಯದಲ್ಲಿ ಭಕ್ತಿಭಾವವಿದೆಯೊ, ಆತನಿಗೆ ಪುಣ್ಯಕ್ಷೇತ್ರಗಳಲ್ಲಿ ಅದು ಉದ್ದೀಪನಗೊಂಡು ಮತ್ತಷ್ಟು ಹೆಚ್ಚುತ್ತದೆ. ಯಾರ ಅಂತರ್ಯದಲ್ಲಿ ಆ ಭಾವವಿಲ್ಲವೋ ಅವನಿಗೆ ಹೆಚ್ಚಾಗುವುದಕ್ಕೇನಿದೆ?

"ಕೆಲವೊಮ್ಮೆ ನಾವು ಕೇಳುತ್ತಿರುತ್ತೇವೆ: ಇಂಥವನ ಮಗ ಕಾಶಿಗೋ ಪ್ರಯಾಗಕ್ಕೋ ಪಲಾಯನ ಮಾಡಿದ ಎಂದು. ಅವನೆಲ್ಲೋ ವೈರಾಗ್ಯ ತಾಳಿ ಸಾಧನೆ ಮಾಡಲು

ಹೋಗಿರಬೇಕು ಎಂದುಕೊಳ್ಳುತ್ತೇವೆ. ಆದರೆ, ಕೆಲವು ದಿನಗಳ ಮೇಲೆ ಅವನಿಂದ ಒಂದು ಪತ್ರ ಬರುತ್ತದೆ—'ನನ್ನ ಬಗ್ಗೆ ನೀವೇನೂ ಚಿಂತೆ ಮಾಡಬೇಡಿ; ನಾನಿಲ್ಲಿ ಒಂದು ಒಳ್ಳೇ ಕೆಲಸಕ್ಕೆ ಸೇರಿಕೊಂಡಿದ್ದೇನೆ . .' ಎಂದು ! ಜೊತೆಗೆ ಅವನು ಸ್ವಲ್ಪ ಹಣವನ್ನೂ ಕಳಿಸಿರುತ್ತಾನೆ ! ಹೀಗೆ ಜನ ತೀರ್ಥಕ್ಷೇತ್ರಗಳಲ್ಲಿ ವಾಸ ಮಾಡಲು ಹೋಗಿ ನೌಕರಿ-ವ್ಯಾಪಾರಗಳ ಬಂಧನದಲ್ಲಿ ಬೀಳುತ್ತಾರೆ !"

ಸ್ವತಃ ಶ್ರೀರಾಮಕೃಷ್ಣರು ತೀರ್ಥಯಾತ್ರೆ ಹೊರಟಾಗ ಪುಣ್ಯಕ್ಷೇತ್ರಗಳ ವಿಷಯದಲ್ಲಿ ಅವರು ಯಾವ ಭಾವ ತಾಳಿದ್ದರು, ಅವರ ಮನಃಸ್ಥಿತಿ ಹೇಗಿತ್ತು ಎಂಬುದೇ ಒಂದು ಅದ್ಭುತ. ಅವರು ಹೇಳುತ್ತಿದ್ದರು:

"ಕಾಶಿಯಲ್ಲಿ ಎಲ್ಲರೂ ಇಪ್ಪತ್ನಾಲ್ಕು ಗಂಟೆಯೂ ಧ್ಯಾನಮಗ್ನರಾಗಿ ಸಮಾಧಿಸ್ಥರಾಗಿರುತ್ತಾರೆ, ಬೃಂದಾವನದ ಜನರೆಲ್ಲ ಗೋವಿಂದನ ಭಕ್ತಿಪ್ರೇಮದಿಂದ ಪರವಶರಾಗಿರುತ್ತಾರೆ ಎಂದು ನಾನು ಭಾವಿಸಿದ್ದೆ. ಆ ಅದ್ಭುತ ದೃಶ್ಯವನ್ನು ಯಾವಾಗ ಕಾಣುವೆನೊ ಎಂದು ಚಡಪಡಿಸುತ್ತಿದ್ದೆ. ಆದರೆ ಅಲ್ಲಿಗೆ ಹೋಗಿ ನೋಡುತ್ತೇನೆ—ಎಲ್ಲವೂ ತದ್ವಿರುದ್ಧ !"

ತಮ್ಮಂತೆಯೇ ಪರರು ಎಂದು ಬಗೆದರು ಶ್ರೀರಾಮಕೃಷ್ಣರು ! ಇದು ಸಹಜವೇ. ಭಗವದ್ಭಾವದಲ್ಲೇ ಬಹಳ ಕಾಲ ಕಳೆದ ಅವರಿಗೆ ಜಗತ್ತಿನ ರೀತಿನೀತಿಗಳು, ಅದರಲ್ಲೂ ಈ ಪುಣ್ಯಕ್ಷೇತ್ರಗಳ ಸಮಾಚಾರಗಳು ಒಂದಿಷ್ಟು ಅನುಭವಕ್ಕೆ ಬರಬೇಕಾದ್ದಿತ್ತು. ಯಾತ್ರೆ ಮಾಡಿ ಪುಣ್ಯಕ್ಷೇತ್ರಗಳ ಒಳಹೊಕ್ಕು ನೋಡಿದ ಬಹಳ ಜನ ತಮ್ಮ ಅನುಭವವನ್ನು ಹೀಗೆ ಹೇಳಿಕೊಂಡಿದ್ದಾರೆ—'ಕ್ಷೇತ್ರವಾಸೀ ಮಹಾಪಾಪೀ' ಎಂದು. ಶ್ರೀರಾಮಕೃಷ್ಣರು ಕಾಶಿಗೆ ಬಂದಾಗ ಅವರ ಕಣ್ತೆರೆಸಿದ ಒಂದು ಅನುಭವ ಹೀಗಿದೆ:

ಕಾಶಿಯು ಪಂಡಿತರಿಂದ ತುಂಬಿದ ಪ್ರದೇಶವೆಂದು ಪ್ರಖ್ಯಾತ. ಅದರಲ್ಲೂ ಅವರೆಲ್ಲ ಪುಣ್ಯಕ್ಷೇತ್ರದ ಪಂಡಿತರೆಂಬ ಕಾರಣದಿಂದ ಅವರನ್ನು ಸತ್ಕರಿಸಲೆಂದು ಶ್ರೀರಾಮಕೃಷ್ಣರು ಮಥುರನ ಮೂಲಕ ಅವರಿಗೆಲ್ಲ ವಸ್ತ್ರಾದಿಗಳನ್ನು ಯಥೇಚ್ಛವಾಗಿ ಕೊಡಿಸಿದರು. ಆದರೆ ಈ ಪಂಡಿತರು ಅವುಗಳನ್ನು ಅಷ್ಟೇ ಗಂಭೀರಭಾವದಿಂದ ಸ್ವೀಕರಿಸುವುದು ಬೇಡವೆ ? 'ತಮ್ಮ ಪಾಲಿಗೆ ಅದು ಸಿಗಬೇಕು, ತಮ್ಮ ಪಾಲಿಗೆ ಇದು ಬರಬೇಕು' ಎನ್ನುತ್ತ ಅವರವರೊಳಗೇ ಜಗಳ ಹತ್ತಿಕೊಂಡು ಹೊಡೆದಾಟವೂ ಆಯಿತು ! ಶ್ರೀರಾಮಕೃಷ್ಣರು ಇದನ್ನು ಕಣ್ಣಾರೆ ಕಂಡರು. ಅವರ ಮನಸ್ಸಿಗೆ ಅಪಾರ ಜುಗುಪ್ಸೆಯುಂಟಾಯಿತು. 'ಕಾಶಿಯ ಜನರೂ ಇತರ ಸ್ಥಳದವರಂತೆ ಕಾಮಕಾಂಚನಾಸಕ್ತರಾಗಿರುವರಲ್ಲ!' ಎಂದು ಖಿನ್ನರಾಗಿ, ಕಣ್ಣೀರ್ಗರೆಯುತ್ತ ಜಗನ್ಮಾತೆಯಲ್ಲಿ ಮೊರೆಯಿಟ್ಟರು: "ಅಮ್ಮಾ, ನೀನು ನನ್ನನ್ನು ಇಲ್ಲಿಗೇಕೆ ಕರೆತಂದೆ ? ಇಲ್ಲಿಗೆ ಬರುವುದಕ್ಕಿಂತ ದಕ್ಷಿಣೇಶ್ವರದಲ್ಲೇ ಇದ್ದಿದ್ದರೆ ಚೆನ್ನಾಗಿತ್ತು !"

ಅವರಿಗೆ ತೀರ್ಥಕ್ಷೇತ್ರಗಳಲ್ಲಿ ಈ ಬಗೆಯ ನಿರಾಶಾಸ್ಥಿತಿ ಅನೇಕ ಬಾರಿ ಉಂಟಾಯಿತು. ಕಾಶಿಯಲ್ಲೇ ಒಮ್ಮೆ ಮಥುರ ಅಲ್ಲಿನ ಒಬ್ಬ ಶ್ರೀಮಂತಜಮೀನ್ದಾರನನ್ನು ನೋಡಲು ಹೋಗಿದ್ದ. ಶ್ರೀರಾಮಕೃಷ್ಣರೂ ಜೊತೆಯಲ್ಲೇ ಇದ್ದರು. ಬಹುಶಃ ಮಥುರ ಶ್ರೀರಾಮಕೃಷ್ಣರ ಸತ್ಸಂಗಲಾಭವನ್ನು ಆ ಜಮೀನ್ದಾರನಿಗೂ ದೊರಕಿಸಿಕೊಡೋಣ ಎಂದುಕೊಂಡನೋ ಏನೊ ! ಅವನ ಮನೆಯಲ್ಲಿ ಇವರಿಗೆಲ್ಲ ಭರ್ಜರಿ ಸ್ವಾಗತವೇನೊ ದೊರೆಯಿತು. ಆದರೆ, ಭೋಜನದ ಬಳಿಕ ಈ ಇಬ್ಬರು ಸಾಹುಕಾರರೂ ಅವರ

ಬಂಧುವರ್ಗದವರೂ ದಿವಾನ್ ಖಾನೆಯಲ್ಲಿ ಸೇರಿ ಹರಟಲಾರಂಭಿಸಿದರು. ಯಾರಿಗೆಷ್ಟು ಲಾಭವಾಯಿತು, ಯಾರ ಮಗನಿಗೆ ಮದುವೆಯಾಯಿತು, ಯಾವ ಮೋಸ ಮಾಡಬೇಕಾಯಿತು—ಎಂಬಿಂಥದೇ ವಿಷಯಗಳು! ಮತ್ತಿನ್ನೇನಿದ್ದೀತು? ಶ್ರೀರಾಮಕೃಷ್ಣರಿಗೋ ಕಾದ ಮಳಲ ಮೇಲೆ ನಿಂತಂಥ ಅನುಭವ! ಅವರು ಜಗನ್ಮಾತೆಯ ಮೇಲೆಯೇ ಮುನಿಸಿಕೊಂಡು ಕೇಳಿದರು, "ಇದೇನಮ್ಮ, ನನ್ನನ್ನು ಯಾಕಾದರೂ ಇಲ್ಲಿಗೆ ಬರಮಾಡಿದೆ? ದಕ್ಷಿಣೇಶ್ವರದಲ್ಲಿ ನಾನು ಎಷ್ಟೋ ಸಂತೋಷವಾಗಿದ್ದೆ. ಅಲ್ಲಿ ಅಧ್ಯಾತ್ಮ ಸಂಬಂಧವಾದ ಮಾತುಕತೆಯಷ್ಟೇ ಇರುತ್ತಿತ್ತು. ಇಲ್ಲಿ ನೋಡಿದರೆ ನಾನು ಈ ಪ್ರಾಪಂಚಿಕ ಮಾತುಕತೆಯನ್ನೆಲ್ಲ ಕೇಳಬೇಕಾಗಿದೆ!"

ಮುಂದೊಮ್ಮೆ ಶ್ರೀರಾಮಕೃಷ್ಣರು ಸಾಂದರ್ಭಿಕವಾಗಿ ತಮ್ಮ ಭಕ್ತರೊಡನೆ ಹೇಳುತ್ತಾರೆ: "ಮಥುರನೊಂದಿಗೆ ಪಶ್ಚಿಮ ಭಾರತದತ್ತ ಹೋಗಿದ್ದೆ. ಅಲ್ಲಿ ನೋಡಿದೆ—ಇಲ್ಲಿ ಏನಿದೆಯೋ ಅಲ್ಲಿಯೂ ಅದೇ! ಇಲ್ಲಿ ಮಾವಿನ ಮರ, ಹುಣಸೆ ಮರ, ಬಿದಿರುಮೆಳೆ ಹೇಗಿದೆಯೋ ಅಲ್ಲಿಯೂ ಅವು ಹಾಗೆಯೇ ಇವೆ! ಅದನ್ನು ಕಂಡು ಹೃದಯನಿಗೆ ಹೇಳಿದೆ, 'ಹೃದೂ, ಹಾಗಾದರೆ ನಾವಿಲ್ಲಿಗೆ ಬಂದದ್ದು ಏನನ್ನು ನೋಡುವುದಕ್ಕೆ? ಅಲ್ಲಿರುವುದೇ ಇಲ್ಲಿಯೂ ಇದೆ, ಅಷ್ಟೆ!' ಎಂದು."

ಆದರೆ ಲೋಕದ ಜನರಿಗೆಲ್ಲ ಎಷ್ಟೋ ವಿಷಯಗಳ ಬಗ್ಗೆ ಉಂಟಾಗುವ ನಿರಾಶೆಯಂತಲ್ಲ ಇದು ಎಂಬುದನ್ನು ನೆನಪಿಡಬೇಕು ನಾವು. ಶ್ರೀರಾಮಕೃಷ್ಣರ ಮನಸ್ಸು ಎಂತಹದೆಂದರೆ ಅದು ಎಲ್ಲ ವಿಷಯಗಳನ್ನೂ ಐದು ವರ್ಷದ ಬಾಲಕನಂತೆ ಸರಳ ಭಾವದಿಂದ ಅಂಗೀಕರಿಸುತ್ತಿತ್ತು, ಸಂದೇಹ ಪಡದೆ ನಂಬುತ್ತಿತ್ತು. ನಾವಾದರೋ ಹುಟ್ಟಿದಾರಭ್ಯ ಎಲ್ಲ ವಸ್ತುಗಳನ್ನೂ ಸಂದೇಹದೃಷ್ಟಿಯಿಂದಲೇ ನೋಡುವುದನ್ನು ಕಲಿತಿದ್ದೇವೆ. ನಮ್ಮ ವಿಕೃತ ಮನಸ್ಸಿನಲ್ಲಿ ಅಂತಹ ಸರಳ ವಿಶ್ವಾಸ ಹುಟ್ಟುವುದಾದರೂ ಹೇಗೆ? ಒಂದು ವಿಷಯವನ್ನು ಯಾರಾದರೂ ಸರಳಭಾವದಿಂದ ನಂಬುವುದನ್ನು ಕಂಡರೆ, 'ಅವನೊಬ್ಬ ಮಂಕ, ಬುದ್ಧಿಗೇಡಿ' ಎಂದು ಆಡಿಕೊಂಡು ನಗುತ್ತೇವೆ. ಶ್ರೀರಾಮಕೃಷ್ಣರು ಹೇಳುತ್ತಾರೆ:

"ತಪಸ್ಸು ಸಾಧನೆಗಳನ್ನು ಬಹಳ ಕಾಲ ಮಾಡಿಕೊಂಡು ಬಂದದ್ದೇ ಆದರೆ ಮನುಷ್ಯ ಸಹಜವಾಗಿಯೇ ಸರಳನಾಗುತ್ತಾನೆ, ಉದಾರನಾಗುತ್ತಾನೆ. ಮತ್ತು ಹಾಗೆ ಸರಳನಾಗದಿದ್ದರೆ ಅವನಿಗೆ ಭಗವತ್ಸಾಕ್ಷಾತ್ಕಾರವಾಗುವುದಿಲ್ಲ."

ಆದರೆ ಸರಳನಾಗಿದ್ದ ಮಾತ್ರಕ್ಕೆ ಮನುಷ್ಯನು ಬುದ್ಧಿಗೇಡಿಯೆಂಬ ಹೀಯಾಳಿಕೆಗೆ ಗುರಿಯಾಗಬೇಕಿಲ್ಲ ಎಂಬುದು ಬೇರೆ ವಿಚಾರ. ಆ ಕುರಿತಾಗಿಯೂ ಶ್ರೀರಾಮಕೃಷ್ಣರು ಸಾಕಷ್ಟು ಹೇಳಿದ್ದಾರೆ. ಅವರು ಕೆಲವೊಮ್ಮೆ ಹೀಗೆ ಹೇಳುತ್ತಿದ್ದರು: "ಭಕ್ತನಾಗಬೇಕೆಂದಾಕ್ಷಣ ಮಂಕನಾಗಬೇಕೆ? ಸದಾ ಮನಸ್ಸಿನಲ್ಲಿಯೇ ವಿಚಾರ ಮಾಡುತ್ತಿರಬೇಕು—ಸತ್ಯ ಯಾವುದು, ಅಸತ್ಯ ಯಾವುದು; ನಿತ್ಯ ಯಾವುದು, ಅನಿತ್ಯ ಯಾವುದು ಎಂದು." ಸ್ವತಃ ಶ್ರೀರಾಮಕೃಷ್ಣರು ಇಂತಹ ಅಭೂತಪೂರ್ವ ಸರಳತೆಯೊಂದಿಗೆ ಅದ್ಭುತ ವಿಚಾರ ಶೀಲತೆಯನ್ನು ಮೈಗೂಡಿಸಿಕೊಂಡಿದ್ದರು.

ತೀರ್ಥಕ್ಷೇತ್ರಗಳಿಗೆ 'ಸುಮ್ಮನೆ' ಹೋಗಿಬಂದರೆ ಏನೂ ಉಪಯೋಗವಾಗಲಾರದು ಎಂಬುದನ್ನು ಶ್ರೀರಾಮಕೃಷ್ಣರು ಒಂದು ಸಂದರ್ಭದಲ್ಲಿ ತಮಾಷೆಯಾಗಿ ವಿವರಿಸುತ್ತಾರೆ. 'ಗಂಗಾಸ್ನಾನ ಮಾಡಿದೊಡನೆ ಪಾಪಗಳೆಲ್ಲ ಪರಿಹಾರವಾಗಬೇಕಲ್ಲವೆ?'

ಎಂಬ ಪ್ರಶ್ನೆಗೆ ಉತ್ತರವಾಗಿ ಅವರೆನ್ನುತ್ತಾರೆ:

"ಹೌದು, ಗಂಗೆಗೆ ಇಳಿಯಲು ಹೋದೊಡನೆಯೇ ಮನುಷ್ಯನಲ್ಲಿರುವ ಪಾಪಗಳೆಲ್ಲ ಹೊರಬಂದುಬಿಡುತ್ತವೆ. ಆದರೆ ಅವು ಅಲ್ಲೇ ದಡದ ಮೇಲಿನ ಮರಗಳನ್ನೇರಿ ಕುಳಿತಿರುತ್ತವೆ; ಮನುಷ್ಯ ಸ್ನಾನ ಮಾಡಿಕೊಂಡು ಬಂದೊಡನೆಯೇ ಮತ್ತೆ ಅವನ ಹೆಗಲೇರಿ ಕುಳಿತುಬಿಡುತ್ತವೆ!"

ತೀರ್ಥಕ್ಷೇತ್ರಗಳಿಗೆ ಹೋಗುವಾಗ ಹೃದಯದಲ್ಲಿ ಭಗವದ್ಭಾವವನ್ನು ಮೊದಲೇ ಚೆನ್ನಾಗಿ ಪೋಷಿಸಿಕೊಂಡು ಹೋಗಬೇಕು ಎಂಬ ಮಾತಿಗೆ ಪೂರಕವಾಗಿ ಅವರು ಇನ್ನೊಂದು ಮಾತನ್ನು ಹೇಳುತ್ತಾರೆ:

"ಹಸು ಹೊಟ್ಟೆತುಂಬ ಹುಲ್ಲು ಮೇಯ್ದು ಬಳಿಕ ಒಂದೆಡೆ ನಿಶ್ಚಿಂತೆಯಿಂದ ಮಲಗಿಕೊಳ್ಳುತ್ತದೆ. ಮತ್ತು ಆ ಮೇವನ್ನು ಪುನಃ ಬಾಯಿಗೆ ತಂದುಕೊಂಡು ಚೆನ್ನಾಗಿ ಮೆಲುಕು ಹಾಕುತ್ತ ಆಸ್ವಾದಿಸುತ್ತದೆ. ಹಾಗೆಯೇ ನಾವು ಕೂಡ ದೇವಾಲಯಗಳನ್ನೂ ತೀರ್ಥಕ್ಷೇತ್ರಗಳನ್ನೂ ಕಂಡಾಗ ನಮ್ಮ ಮನದಲ್ಲಿ ಮೂಡುವ ಪವಿತ್ರ ಭಾವನೆಗಳನ್ನೆಲ್ಲ, ಅಲ್ಲಿಂದ ಮರಳಿದ ಮೇಲೆ, ಮತ್ತೊಮ್ಮೆ ಏಕಾಂತದಲ್ಲಿ ಕುಳಿತು ಮೆಲುಕು ಹಾಕಬೇಕು; ಅವುಗಳಲ್ಲೇ ಮಗ್ನವಾಗಬೇಕು. ಹೀಗೆ ಮಾಡುವುದರಿಂದ ಮಾತ್ರ ತೀರ್ಥಕ್ಷೇತ್ರ ಮಹಿಮೆ ನಮ್ಮ ಮನದ ಮೇಲೆ ಸ್ಥಿರವಾದ ಪರಿಣಾಮವನ್ನುಂಟುಮಾಡಬಲ್ಲುದು."

ತೀರ್ಥಯಾತ್ರೆಯ ಪರಿಕಲ್ಪನೆ ಅನಾದಿಕಾಲದ್ದು. ಅದರಿಂದ ಯಾರಿಗೆ ಎಷ್ಟು ಪ್ರಯೋಜನವಾಯಿತೆಂಬುದರ ಸ್ಪಷ್ಟ ಉದಾಹರಣೆ ಕೊಡುವುದು ಕಷ್ಟ. ಆದರೆ ಎಷ್ಟೇ ಪ್ರಯಾಸವಾದರೂ ಪ್ರಯಾಣ ಮಾಡಿ ತೀರ್ಥಕ್ಷೇತ್ರಗಳಿಗೆ ಹೋಗಿಬರುವ ಸಂಪ್ರದಾಯ ಮಾತ್ರ ಎಂದೂ ನಿಲ್ಲಲಿಲ್ಲ. ಇದೊಂದು ಗಮನೀಯ ಅಂಶ. 'ಪ್ರಯೋಜನಂ ಅನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ' ('ಒಂದು ಕೆಲಸದಿಂದ ಪ್ರಯೋಜನವೇನೂ ಇಲ್ಲ ಎನ್ನುವುದಾದರೆ ಮೂರ್ಖನೂ ಅದನ್ನು ಕೈಗೊಳ್ಳುವುದಿಲ್ಲ.') ಎಂಬ ಮಾತಿನಂತೆ ತೀರ್ಥಕ್ಷೇತ್ರಗಳಲ್ಲಿ ಯಾವುದೋ ಒಂದು ಅಪೂರ್ವ-ಅನಿರ್ವಚನೀಯ ಉಪಯೋಗವಾಗುತ್ತಿರುವುದರಿಂದಲೇ ಬೇರಾವ ಅನನುಕೂಲತೆಗಳನ್ನೂ ಲೆಕ್ಕಿಸದೆ ತೀರ್ಥಾಟನೆ ಇನ್ನಷ್ಟು ಮತ್ತಷ್ಟು ಜನಪ್ರಿಯವಾಗುತ್ತಲೇ ಹೋಗುತ್ತಿದೆ. ಭಗವಂತನ ಬಳಿಗೆ ಹೋಗಬೇಕು, ಆತನ ಶುಭದರ್ಶನ ಮಾಡಬೇಕು ಎಂಬ ಅವ್ಯಕ್ತ ಪ್ರೇರಣೆಯೇ ಮನುಷ್ಯನನ್ನು ಯಾತ್ರಾಭಿಮುಖವಾಗಿಸುತ್ತದೆ. ಹೊರಮುಖವಾಗಿಯೇ ನೋಡುವ ಮನುಷ್ಯ ತನ್ನ ಹೃದಯದ ಒಳಗಿರುವ ದೇವರತ್ತ ಹೋಗಲಾರ. ಆದ್ದರಿಂದ ಕ್ಷೇತ್ರಗಳಲ್ಲಿರುವ ದೇವರತ್ತ ಹೋಗುತ್ತಾನೆ. ಈ ತೀರ್ಥಕ್ಷೇತ್ರಗಳಾದರೂ, ನಾವು ಹಿಂದೆಯೇ ನೋಡಿದಂತೆ, ಪೌರಾಣಿಕ ಹಿನ್ನೆಲೆಯುಳ್ಳವುಗಳು, ಸಾಧು-ಸಂತರ, ಋಷಿ-ಮುನಿಗಳ ತಪಸ್ಸು ಹಾಗೂ ಸಾನ್ನಿಧ್ಯದಿಂದ ಪುನೀತವಾದವುಗಳು. ಆದ್ದರಿಂದ ಅಲ್ಲಿನ ಪವಿತ್ರ ತರಂಗಗಳು ವ್ಯಕ್ತವಾಗಿಯೋ ಅವ್ಯಕ್ತವಾಗಿಯೋ -ಯಾತ್ರಿಕನ ಮೇಲೆ ಪ್ರಭಾವ ಬೀರುವುದು ಖಂಡಿತ. ತೀರ್ಥಾಟನೆಯಿಂದಾಗಿ ಲೋಕಾನುಭವ ಹೆಚ್ಚುತ್ತದೆ, ಮನಸ್ಸಿನ ಬೇಸರ ಕಳೆಯುತ್ತದೆ, ಹೊಸತನದ ಹುರುಪು ಹುಟ್ಟಿಕೊಳ್ಳುತ್ತದೆ ಎಂಬ ಈ ವಿಚಾರಗಳೆಲ್ಲ ಗೌಣ; ಮೋಕ್ಷಮಾರ್ಗಕ್ಕೆ ಬೇಕಾದ ಪವಿತ್ರತೆ ಹಾಗೂ ಪಾತ್ರತೆಯನ್ನು ಗಳಿಸಿಕೊಳ್ಳುವುದೇ ಪ್ರಧಾನ. ಹೀಗೆ ತೀರ್ಥಕ್ಷೇತ್ರಗಳಿಂದ ಯಾತ್ರಿಕರಿಗೆ ಪ್ರಯೋಜನವಾದರೆ ಶ್ರೀರಾಮಕೃಷ್ಣರಿಂದ ತೀರ್ಥಕ್ಷೇತ್ರಗಳಿಗೇ ಪ್ರಯೋಜನ ಎಂಬುದು ಮತ್ತೊಂದು

ಪ್ರಧಾನ ಅಂಶ.

ಕಾಶಿ-ಬೃಂದಾವನಗಳಿಗೆ ಭೇಟಿಯಿತ್ತ ಶ್ರೀರಾಮಕೃಷ್ಣರಿಂದ ಅಲ್ಲಿನ ಸಾಧು-ಸಂತರಿಗಾದ ಪ್ರಯೋಜನವನ್ನು ಪ್ರತ್ಯೇಕವಾಗಿಯೇ ಭಾವಿಸಿ ನೋಡಬೇಕು! ಶ್ರೀರಾಮಕೃಷ್ಣರೆಂದರೆ ಪರಿಪೂರ್ಣವಾಗಿ ಅರಳಿನಿಂತ ಪದ್ಮಪುಷ್ಪ! ಪದ್ಮಕ್ಕೂ ಭ್ರಮರಕ್ಕೂ ಅನಾದಿಯ ಸಂಬಂಧ. ಶ್ರೀರಾಮಕೃಷ್ಣರೆಂಬ ಪದ್ಮದ ಭಗವತ್ಪ್ರೇಮವೆಂಬ ಮಕರಂದವನ್ನು ಹೀರಲು ಭ್ರಮರದಂಥ ಸಾಧುಸಂತರು ಸಹಜವಾಗಿಯೇ ಆಕರ್ಷಿತರಾದರು. ಅವರ ಮಧುರ ವ್ಯಕ್ತಿತ್ವ, ಮಧುರ ಭಾವ, ಮಧುರ ವಾಣಿ—ಇವುಗಳಿಂದ ಆ ಸಾಧುಸಂತರು ಸದಾನಂದಭರಿತರಾದರು! ಅವರ ದೀರ್ಘಕಾಲದ ತಪಶ್ಚರ್ಯೆಗಳಿಗೆ ಫಲಸ್ವರೂಪವಾಗಿ ಅವರಿಗೆ ಶ್ರೀರಾಮಕೃಷ್ಣದರ್ಶನವಾಯಿತು, ಶ್ರೀರಾಮಕೃಷ್ಣಾನುಭವವೇ ಆಯಿತು. ಹೀಗೆ ಅವರ ಸಾಧುಜೀವನ ಸಾರ್ಥಕವಾಯಿತು.

## ಹೃದಯುನ ಹಗರಣ ೨೭

ಶ್ರೀರಾಮಕೃಷ್ಣರೊಂದಿಗೆ ಅವರ ನೆಚ್ಚಿನ ಬಂಟ, ಸೋದರಳಿಯ ಹೃದಯ ರಾಮನೂ ತೀರ್ಥಕ್ಷೇತ್ರಗಳನ್ನೆಲ್ಲ ದರ್ಶನ ಮಾಡಿಕೊಂಡು ಬಂದ. ಇವನು ದಕ್ಷಿಣೇಶ್ವರಕ್ಕೆ ಕಾಲಿಟ್ಟಾಗಿನಿಂದ ಇಷ್ಟು ವರ್ಷವೂ ಶ್ರೀರಾಮಕೃಷ್ಣರ ಸೇವೆಯುನ್ನು ಎಡೆಬಿಡದೆ ಮಾಡಿದ್ದಾನೆ. ಅವರು ಹೋದಲ್ಲೆಲ್ಲ ನೆರಳಿನಂತೆ ಹಿಂಬಾಲಿಸಿದ್ದಾನೆ.

ಆದರೆ ಅವನದು ಒಂದು ಬಗೆಯ ಗಡುಸು ಸ್ವಭಾವ. ಸೂಕ್ಷ್ಮವಾದ, ನಯವಾದ ಭಾವನೆಗಳಿಗೆಲ್ಲ ಅವನಲ್ಲಿ ಎಡೆಯಿಲ್ಲ. ಯಾವ ಕಾರಣಕ್ಕೂ ತನ್ನ ಸುಖಕ್ಕೆ ತೊಂದರೆ ತಂದುಕೊಳ್ಳುವವನಲ್ಲ. ಇಂಥವನು ಶ್ರೀರಾಮಕೃಷ್ಣರ ಸಹವಾಸವನ್ನು ಬಯಸಿ ಅವರೊಂದಿಗಿದ್ದುದು ಒಂದು ದೊಡ್ಡ ಆಶ್ಚರ್ಯವೇ.

ಈ ನಡುವೆ ಅವನಿಗೆ ವಿವಾಹವೂ ಆಗಿತ್ತು. ಹೆಂಡತಿಯನ್ನು ಊರಿನಲ್ಲೇ ಬಿಟ್ಟಿದ್ದ. ಅಲ್ಲಿ ಅವನಿಗೆ ಸ್ವಲ್ಪ ಭೂಮಿಕಾಣಿ ಇತ್ತು. ತನ್ನ ಪುಟ್ಟ ಸಂಸಾರವನ್ನು ಅಭಿವೃದ್ಧಿಗೆ ತರುವುದು, ಸಾಧ್ಯವಾದಷ್ಟು ಮಟ್ಟಿಗೆ ಸುಖವನ್ನು ಅನುಭವಿಸುವುದು—ಇದು ಅವನ ಏಕಮಾತ್ರ ಆದರ್ಶ. 'ಶ್ರೀರಾಮಕೃಷ್ಣರಂತಹ ತಪಸ್ವಿಗಳ ಜೊತೆಯಲ್ಲಿಯೇ ಇದ್ದೂ, ಅವರು ಸವಿಯುತ್ತಿದ್ದ ಭಗವದಾನಂದವನ್ನು ಕಂಡೂ ಅದರಿಂದ ಅವನ ಮೇಲೆ ಕಿಂಚಿತ್ತೂ ಪರಿಣಾಮವಾಗಲಿಲ್ಲವೆ?' ಎಂದರೆ, ಇಲ್ಲವೆಂದೇ ಹೇಳಬೇಕಾಗುತ್ತದೆ. ಆಗಾಗ ಶ್ರೀರಾಮಕೃಷ್ಣರ ಭಾವವೊಂದಿಷ್ಟು ಸಾಂಕ್ರಾಮಿಕವಾಗಿ ಅವನಿಗೆ ತಗುಲುತ್ತಿತ್ತು; ಆದರೆ ಅವನದು 'ಗಟ್ಟಿ' ಮನಸ್ಸಾದ್ದರಿಂದ ಆಳವಾಗಿ ನಾಟುತ್ತಿರಲಿಲ್ಲ. 'ಏನು ಮಾಡಿದರೆ ತನ್ನ ಸುಖ ಹೆಚ್ಚೀತು?' ಎಂದು ಮರ್ಕಟನಂತೆ ಸದಾ ಅತ್ತಿತ್ತ ಕಣ್ಣು ಹಾಯಿಸುತ್ತಲೇ ಇರುತ್ತಿದ್ದ. ಅಂತಹ ಒಂದು ಅವಕಾಶ ಸಿಕ್ಕಿದರೆ ಸಾಕು, ಅತ್ತ ಓಡುತ್ತಿದ್ದ. ಆಗ ಮನಸ್ಸಿಗೆ ಸ್ವಲ್ಪ ಅಂಟಿಕೊಂಡಿದ್ದ ಭಗವದ್ಭಾವಗಳೂ ಉದುರಿಹೋಗುತ್ತಿದ್ದುವು. ಅಲ್ಲದೆ ಶ್ರೀರಾಮಕೃಷ್ಣರಲ್ಲಿ ದೈವೀಶಕ್ತಿಗಳ ಆವಿರ್ಭಾವವನ್ನು ಪ್ರತ್ಯಕ್ಷ ಕಂಡದ್ದರಿಂದಲೂ, ಅವರ ಮಹಿಮೆಯ ಬಗ್ಗೆ ಪ್ರಸಿದ್ಧ ಸಾಧಕರೆಲ್ಲ ಹೇಳಿದ್ದನ್ನು ಕೇಳಿಯೂ ಅವನಿಗೆ ಏನೋ ಒಂದು ಶಕ್ತಿ ಬಂದಂತಾಗಿತ್ತು. 'ಮಾವ ನನ್ನ ಮೇಲೆ ಬಹಳವಾದ ಪ್ರೀತಿ ವಿಶ್ವಾಸ ಇಟ್ಟಿದ್ದಾನೆ; ನನ್ನ ಸೇವೆಯ ಮೂಲಕ ನಾನು ಆತನ ಕೃಪಾವಿಶೇಷಕ್ಕೆ ಪಾತ್ರನಾಗಿರುವಾಗ ಆಧ್ಯಾತ್ಮಿಕರಾಜ್ಯದ ಅನುಭವಗಳೆಲ್ಲ, ಒಂದು ರೀತಿಯಲ್ಲಿ, ಈಗಾಗಲೇ ನನ್ನ ಕೈಸೇರಿವೆ. ಯಾವಾಗ ನನಗೆ ಅವುಗಳನ್ನೆಲ್ಲ ಪಡೆದುಕೊಳ್ಳುವ ಮನಸ್ಸಾಗುವುದೋ, ಆ ಕ್ಷಣವೇ ಅವನು ತನ್ನ ದಿವ್ಯ ಶಕ್ತಿಯಿಂದ ನನಗವನ್ನು ಕೊಡಿಸುತ್ತಾನೆ. ಆದ್ದರಿಂದ ನಾನೇನೂ ತಲೆಕೆಡಿಸಿಕೊಳ್ಳಬೇಕಿಲ್ಲ' ಎಂದು ನಂಬಿದ್ದ. 'ಇಷ್ಟರ ಮೇಲೆ, ವಯಸ್ಸಾಗುತ್ತ ಆಗುತ್ತ ಹೇಗಿದ್ದರೂ ನನ್ನ ಸಂಸಾರವೂ ಒಂದು ಹದಕ್ಕೆ ಬಂದಿರುತ್ತದೆ; ಈ ಆಸೆಗಳೂ ಕಡಿಮೆಯಾಗಿರುತ್ತವೆ. ಆಗ ಧ್ಯಾನ-ಗೀನಕ್ಕೆಲ್ಲ ಬೇಕಾದಷ್ಟು ಸಮಯವಿರುತ್ತದೆ. ಆಗ ನೋಡಿಕೊಂಡರಾಯಿತು' ಎಂದು ಸಮಾಧಾನ ಹೇಳಿಕೊಂಡು ನಿಶ್ಚಿಂತನಾಗಿದ್ದ.

ಅವನ ಜೀವನ ಹೀಗೆ ಲಯಬದ್ಧವಾಗಿ ಸಾಗುತ್ತಿದ್ದರೆ, ಇದ್ದಕ್ಕಿದ್ದಂತೆ ಅದಕ್ಕೊಂದು ದೊಡ್ಡ ಆಘಾತ ತಗುಲಿತು. ಅವನು ತೀರ್ಥಯಾತ್ರೆ ಮುಗಿಸಿ ಬಂದ ಕೆಲದಿನಗಳಲ್ಲೇ ಅವನ ಹೆಂಡತಿ ಆಕಸ್ಮಿಕವಾಗಿ ತೀರಿಹೋದಳು. ಹೃದಯರಾಮನಿಗೆ ಹೃದಯಾಘಾತವೇ ಆದಂತಾಯಿತು. ಜೀವನದಲ್ಲಿ ಆಸಕ್ತಿ ಕರಗಿ ಜುಗುಪ್ಸೆ ಮೂಡಿತು; ಮೆಲ್ಲನೆ ವೈರಾಗ್ಯಕ್ಕೆ ತಿರುಗಿತು. ಮನಸ್ಸು ಭಗವಂತನತ್ತ ಹರಿಯಿತು. ಈಗ ತನಗೆ 'ಸಕಾಲ' ಒದಗಿಬಂದಿದೆಯೆಂದು ಭಾವಿಸಿದ. ಮೊದಲಿಗಿಂತ ಹೆಚ್ಚಾಗಿ ದೇವಿಯ ಪೂಜೆಯಲ್ಲಿ ನಿರತನಾದ. ಶ್ರೀರಾಮಕೃಷ್ಣರು ಮಾಡುತ್ತಿದ್ದ ಸಾಧನೆಗಳನ್ನೆಲ್ಲ ನೆನಪಿಸಿಕೊಂಡ. 'ನಾನು ಅವರಂತೆಯೇ ಮಾಡಿದರೆ ನನಗೂ ಆ ಸಿದ್ಧಿಗಳೆಲ್ಲ ಏಕೆ ಲಭಿಸಬಾರದು?' ಎಂದು ಆಲೋಚಿಸಿದ. ಸರಿ, ಅವರಂತೆ ತಾನೂ ಮೈಮೇಲಿನ ಬಟ್ಟೆಗಳನ್ನೂ ಜನಿವಾರವನ್ನೂ ತೆಗೆದಿಟ್ಟು ಧ್ಯಾನ ಮಾಡತೊಡಗಿದ!

ಶ್ರೀರಾಮಕೃಷ್ಣರು ಇದನ್ನೆಲ್ಲ ಗಮನಿಸಿದರು; ಮನದಲ್ಲೇ ನಕ್ಕರು. ಆದರೆ ಹೃದಯ ಅಷ್ಟಕ್ಕೇ ಸುಮ್ಮನಾಗಲಿಲ್ಲ. ಮಾವನ ಬಳಿಗೆ ಬಂದು ಕಾಡತೊಡಗಿದ:

"ಮಾವ, ನಾನು ಎಷ್ಟು ವರ್ಷಗಳಿಂದ ನಿನ್ನ ಜೊತೆಯಲ್ಲೇ ಇದ್ದೇನೆ! ನಾನು ನೋಡುತ್ತಲೇ ಇದ್ದೇನೆ, ನಿನ್ನಷ್ಟಕ್ಕೆ ನೀನು ಆಧ್ಯಾತ್ಮಿಕ ಆನಂದದಲ್ಲಿ ಮುಳುಗಿರುತ್ತೀಯೆ. ಎಂತೆಂಥದೋ ಅದ್ಭುತ ದರ್ಶನಗಳನ್ನೆಲ್ಲ ಪಡೆದುಕೊಳ್ಳುತ್ತೀಯೆ. ಅಲ್ಲದೆ ಇನ್ನು ಯಾರುಯಾರಿಗೋ ಅಂತಹ ಅನುಭವಗಳನ್ನೆಲ್ಲ ಮಾಡಿಸಿಕೊಡುತ್ತೀಯೆ. ಆದರೆ ನನಗೆ ಮಾತ್ರ ನೀನು ಒಮ್ಮೆಯೂ ಅಂಥದೇನನ್ನೂ ಕೊಡಲೇ ಇಲ್ಲ."

"ಅಲ್ಲವೋ ಹೃದೂ, ನಿನಗೇನು ಕಡಮೆಯಾಗಿದೆಯೆಂದು ಹೀಗೆ ಹೇಳುತ್ತಿದ್ದೀಯೆ? ಈಗ ನಿನಗೇನು ಬೇಕು ಹೇಳು?"

"ನಾನೂ ನಿನ್ನ ಹಾಗೆ ಸಮಾಧಿಸ್ಥಿತಿಗೇರಬೇಕು. ಈ ಲೋಕದ ಪರಿವೆಯನ್ನೇ ಮರೆತು ನಿನ್ನಂತೆ ಆನಂದದಲ್ಲಿ ತಲ್ಲೀನನಾಗಿಬಿಡಬೇಕು. ನನಗೆ ಅಂತಹ ಸ್ಥಿತಿಯನ್ನು ಕೊಡಿಸು!"

"ಏನು, ಸಮಾಧಿಯೆ! . . . ಹೃದೂ, ನನ್ನ ಮಾತು ಕೇಳುತ್ತೀಯಾ? ಸುಮ್ಮನೆ ಆ ಸಮಾಧಿ-ಗಿಮಾಧಿಯನ್ನೆಲ್ಲ ಮರೆತು, ಈಗಿರುವಂತೆಯೇ ಇರಪ್ಪ ನೀನು. ಇಷ್ಟು ದಿನದಂತೆಯೇ ನನಗೆ ಬೆಂಗಾವಲಾಗಿ ಇದ್ದುಬಿಟ್ಟರೆ ನಿನಗೆ ಆಧ್ಯಾತ್ಮಿಕ ಶ್ರೇಯಸ್ಸು ತಾನಾಗಿಯೇ ಆಗುತ್ತದೆ. ಅದೇ ನಿನಗೆ ದೊಡ್ಡ ಸಾಧನೆ."

"ನಾನದನ್ನೆಲ್ಲ ಒಪ್ಪಲಾರೆ. ಅದೆಲ್ಲ ಎಂಥ ಸಾಧನೆ? ಅದರಿಂದೆಲ್ಲ ಏನಾದೀತು? ನೀನು ನನಗೆ ಸಮಾಧಿಸ್ಥಿತಿಯನ್ನು ಕೊಡಿಸಲೇಬೇಕು."

"ಅಲ್ಲಪ್ಪ, ನೀನೇ ನೋಡುತ್ತಿದ್ದೀಯಲ್ಲ ನನ್ನ ಅವಸ್ಥೆ ಏನಾಗಿದೆ ಅಂತ? ಊಟ ನಿದ್ರೆ ಹಾಗಿರಲಿ, ಮೈಮೇಲಿನ ಬಟ್ಟೆಯ ಬಗ್ಗೆಯೂ ಎಚ್ಚರವಿರುವುದಿಲ್ಲ! ಏನೋ, ನೀನು ಜೊತೆಯಲ್ಲಿಯೇ ಇರುವುದರಿಂದ ಪರವಾಗಿಲ್ಲ. ಈಗ ನನಗೂ ನಿನಗೂ ಇಬ್ಬರಿಗೂ ಆ ಅವಸ್ಥೆ ಬಂದುಬಿಟ್ಟರೆ ಆಮೇಲೆ ನಮ್ಮನ್ನು ನೋಡಿಕೊಳ್ಳುವವರು ಯಾರಪ್ಪ?"

"ಅದೆಲ್ಲ ನನಗೆ ಗೊತ್ತಿಲ್ಲ. ನೀನು ಏನಾದರೂ ಉಪಾಯ ಮಾಡಿ ತಪ್ಪಿಸಿಕೊಳ್ಳಲು ನೋಡುತ್ತಿದ್ದೀಯ. ನೀನೇನಾದರೂ ಸಾಧ್ಯವಿಲ್ಲವೆಂದರೆ, ಇದೊ ನೋಡು, ನಾನು ನಿನ್ನ ಪಾದಗಳನ್ನು ಬಿಡುವುದೇ ಇಲ್ಲ." ಹೀಗೆಂದವನೇ ಅವರ ಪಾದಗಳನ್ನು

ಬಲವಾಗಿ ಹಿಡಿದುಕೊಂಡುಬಿಟ್ಟ!

ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತು ಸುಮ್ಮನಿದ್ದು, ಬಳಿಕ ಭಾವದಿಂದ ನುಡಿದರು:

"ಇನ್ನೇನು ಹೇಳಲಿ ನಾನು? ಸರಿ . . . ತಾಯಿಯ ಇಚ್ಛೆಯಂತಾಗಲಿ. ನನ್ನ ಇಚ್ಛೆಯಿಂದೇನಾದೀತು? ನನ್ನ ಬುದ್ಧಿಯನ್ನು ಪರಿವರ್ತಿಸಿ, ನನ್ನನ್ನು ಈ ಅವಸ್ಥೆಗೆ ತಂದವಳು ಅವಳೇ. ನನಗೆ ಅದ್ಭುತವಾದ ದರ್ಶನಗಳನ್ನೆಲ್ಲ ಮಾಡಿಸಿಕೊಟ್ಟವಳೂ ಅವಳೇ. ಅವಳು ಇಷ್ಟಪಟ್ಟರೆ ನಿನಗೂ ಹಾಗಾಗುತ್ತದೆ ಹೋಗು."

ಹೃದಯನಿಗೆ ಇದೀಗ ಸಂತೋಷವಾಯಿತು. ಮತ್ತೊಮ್ಮೆ ನಮಸ್ಕರಿಸಿ ಎದ್ದ.

ಅಂದಿನಿಂದ ಅವನು ಪೂಜೆ-ಧ್ಯಾನ ಮಾಡುತ್ತ ಕುಳಿತರೆ ಏನೇನೋ ಅಲೌಕಿಕ ಅನುಭವಗಳಾಗತೊಡಗಿದುವು. ಜ್ಯೋತಿರ್ಮಯರಾದ ದೇವದೇವಿಯರ ದರ್ಶನ! ಅರ್ಧಬಾಹ್ಯಾವಸ್ಥೆ! ಮಥುರಬಾಬು ಅವನ ವಿಚಿತ್ರ ವರ್ತನೆಯನ್ನೆಲ್ಲ ನೋಡಿದ. 'ಎಲಾ, ಇವನಿಗೇನು ಬಂತು?' ಎಂದುಕೊಂಡ. 'ನಾಟಕವಾಡುತ್ತಿರಬಹುದೆ?' ಎಂದೂ ಅನ್ನಿಸಿತು. ಶ್ರೀರಾಮಕೃಷ್ಣರನ್ನು ಕೇಳಿಯೂಬಿಟ್ಟ:

"ಅಪ್ಪಾ, ಹೃದಯನಿಗೆ ಇದೇನಾಗಿಬಿಟ್ಟಿದೆ? ಇದ್ದಕ್ಕಿದ್ದಂತೆ ಹೇಗೆಹೇಗೋ ಆಡುತ್ತಿದ್ದಾನಲ್ಲ!"

"ಅದೇ? ಅದು ತೋರಾಣಿಕೆಗೆ ಮಾಡುತ್ತಿರುವುದಲ್ಲ; ನಿಜವಾದ ಅನುಭವಗಳೇ. ಅವನು ಅದಕ್ಕಾಗಿ ತಾಯಿಯನ್ನು ಅತ್ತುಕರೆದು ಕೇಳಿಕೊಂಡಿದ್ದ. ಆದ್ದರಿಂದಲೇ ಹಾಗಾಗುತ್ತಿದೆ. ತಾಯಿ ಅವನಿಗೆ ಹೀಗೆ ದರ್ಶನಗಳನ್ನು ಕೊಟ್ಟು ಸಮಾಧಾನ ಮಾಡಿ ಪುನಃ ಅವನನ್ನು ಯಥಾಸ್ಥಿತಿಗೆ ತರುತ್ತಾಳೆ."

"ಅಪ್ಪಾ, ನನಗೆ ತಿಳಿಯದೇ, ಇದೆಲ್ಲ ನಿಮ್ಮದೇ ಲೀಲೆ ಎಂದು! ಅವನಿಗೆ ನೀವೇ ಆ ಸ್ಥಿತಿಯನ್ನು ತಂದುಕೊಟ್ಟಿದ್ದೀರಿ. ಈಗ ನೀವೇ ಅವನನ್ನು ಶಾಂತಗೊಳಿಸಬೇಕು. ನಾವಿಬ್ಬರೂ ನಂದಿ-ಭೃಂಗಿಯರಂತೆ ನಿಮ್ಮ ಸೇವೆ ಮಾಡಿಕೊಂಡು ಜೊತೆಯಲ್ಲಿರುತ್ತೇವೆ. ಈ ದರ್ಶನ-ಸಮಾಧಿಗಳೆಲ್ಲ ನಮಗೇಕಪ್ಪ?"

ಶ್ರೀರಾಮಕೃಷ್ಣರು ಸುಮ್ಮನೆ ನಕ್ಕರು.

ಇದಾಗಿ ಕೆಲದಿನಗಳಾದುವು. ಒಂದು ರಾತ್ರಿ ಶ್ರೀರಾಮಕೃಷ್ಣರು ನಿದ್ರೆಯಿಂದೆದ್ದು ಪಂಚವಟಿಯತ್ತ ಹೊರಟರು. ಹೃದಯ ಇದನ್ನು ಕಂಡ. ಅವರಿಗಾಗಿ ಒಂದು ಚೊಂಬು ನೀರನ್ನೂ ಚೌಕವನ್ನೂ ತೆಗೆದುಕೊಂಡು ಹಿಂಬಾಲಿಸಿದ. ಹೋಗುತ್ತ ಹೋಗುತ್ತ ನೋಡುತ್ತಾನೆ—ಅತ್ಯಂತ ವಿಚಿತ್ರವಾದ ದೃಶ್ಯವೊಂದು ಕಾಣುತ್ತಿದೆ! ಶ್ರೀರಾಮಕೃಷ್ಣರು ಸ್ಥೂಲದೇಹಧಾರಿಯಾದ ಮನುಷ್ಯರಲ್ಲ! ಅವರ ದೇಹದಿಂದ ಅಪೂರ್ವವಾದ ಜ್ಯೋತಿಯೊಂದು ಹೊರಸೂಸುತ್ತಿದೆ! ಅದರಿಂದಾಗಿ ಪಂಚವಟಿಯ ಪ್ರದೇಶವೆಲ್ಲ ಪ್ರಕಾಶಿತವಾಗಿದೆ! ಅವರು ನಡೆಯುವಾಗ, ಅವರ ಜ್ಯೋತಿರ್ಮಯವಾದ ಪಾದಗಳು ನೆಲವನ್ನು ಸೋಂಕದೆ ಗಾಳಿಯಲ್ಲಿಯೇ ಮುನ್ನಡೆಯುತ್ತಿದೆ!

ಮೊದಲಿಗೆ, ಇದೇನೋ ತನ್ನ ಕಣ್ಣಿನ ದೋಷವಿರಬೇಕೆಂದು ಭಾವಿಸಿದ ಆತ. ಅಲ್ಲಿಯೇ ನಿಂತು ಕಣ್ಣುಗಳನ್ನು ಮತ್ತೆಮತ್ತೆ ಉಜ್ಜಿಕೊಂಡ. ರೆಪ್ಪೆಗಳನ್ನು ಮಿಟುಕಿಸಿದ. ಅತ್ತಿತ್ತ ನೋಡಿದ. ಅತ್ತ ಗಂಗಾನದಿ ಎಂದಿನಂತೆ ಜುಳಜುಳನೆ ಹರಿಯುತ್ತಿದೆ. ಮರಗಿಡಗಳು ಗಾಳಿಗೆ ಮೆಲ್ಲನೆ ತೂಗುತ್ತಿವೆ. ಸುತ್ತಲಿನ ಕಲ್ಲು-ಮಣ್ಣುಗಳೆಲ್ಲ ಹಾಗೆ ಹಾಗೇ ಇವೆ. ಆದರೆ ಎದುರಿಗೆ ಶ್ರೀರಾಮಕೃಷ್ಣರನ್ನು ನೋಡಿದರೆ . . . ಮತ್ತದೇ ದೃಶ್ಯ!

'ಅರೆರೆ, ಇದೇನಿದು ? . . . ಅಥವಾ . . . ನನ್ನಲ್ಲೇ ಏನಾದರೂ ಬದಲಾವಣೆ ಆಗಿದೆಯೆ ?' ಎಂದುಕೊಂಡು ಹೃದಯ ತನ್ನನ್ನೇ ನೋಡಿಕೊಳ್ಳುತ್ತಾನೆ—

ನೋಡಿದರೇꣳꣳ ತಾನೂ ಸಹ ದಿವ್ಯದೇಹಧಾರಿಯಾದ, ಜ್ಯೋತಿರ್ಮಯನಾದ ದೇವಪುರುಷನೇ ಆಗಿದ್ದಾನೆ ! ನಿರಂತರವೂ ಭಗವಂತನ ಸಹವಾಸದಲ್ಲಿದ್ದು ಆತನ ಸೇವೆ ಮಾಡುತ್ತಿರುವ ಸಂಗಾತಿ ತಾನು ! ಅಷ್ಟೇ ಅಲ್ಲ, ಆತನ ಅಂಶವಿಶೇಷನೇ ತಾನು ! ಆದರೆ ಈಗ ಆತನ ಸೇವೆ ಮಾಡುವ ಉದ್ದೇಶದಿಂದಲೇ ತಾನು ಆತನಿಂದ ಬೇರೆಯಾಗಿ, ಮತ್ತೊಂದು ಶರೀರವನ್ನು ಧರಿಸಿ ಬಂದಿದ್ದಾನೆ !

ಈ ದೃಶ್ಯವನ್ನು ಕಂಡಾಗ, ತನ್ನ ಜೀವನದ ರಹಸ್ಯ ಅರಿವಾದಾಗ, ಹೃದಯನ ಲ್ಲೊಂದು ಆನಂದದ ಪ್ರವಾಹವುಕ್ಕಿತು. ಅವನು ತನ್ನನ್ನೇ ಮರೆತ ! ಜಗತ್ತನ್ನೇ ಮರೆತ ! ಜನ ಏನೆನ್ನುತ್ತಾರೆಂಬುದನ್ನೂ ಮರೆತ ! ಅರ್ಧಬಾಹ್ಯಾವಸ್ಥೆಯಲ್ಲಿ, ಕೈಗಳನ್ನು ಮೇಲೆತ್ತಿ ಹುಚ್ಚನಂತೆ ಬೊಬ್ಬೆಹಾಕಿದ:

"ಓ ರಾಮಕೃಷ್ಣಾ ! ಓ ರಾಮಕೃಷ್ಣಾ ! ಹಹ್ಹಾ ! ನಾವು ಮನುಷ್ಯರಲ್ಲ ! ನಾವು ಇಲ್ಲೇಕಿರಬೇಕು ? ಬಾ, ದೇಶದೇಶಾಂತರಕ್ಕೆ ಹೋಗಿ ಜೀವರನ್ನೆಲ್ಲ ಉದ್ಧಾರ ಮಾಡೋಣ ! ನೀನೇನಾಗಿದ್ದೀಯೋ ನಾನೂ ಅದೇ ಆಗಿದ್ದೇನೆ." ಹೀಗೆ ಮತ್ತೆಮತ್ತೆ ಕೂಗಿದ.

ಇವನ ಅರಚುವಿಕೆಯನ್ನು ಕೇಳಿದ ಶ್ರೀರಾಮಕೃಷ್ಣರು ಗದರಿಸಿದರು:

"ಶ್, ಸಾಕು ನಿಲ್ಲಿಸೊ ! ಏಕೆ ಹಾಗೆ ಅರಚಿಕೊಳ್ಳುತ್ತಿದ್ದೀಯ ? ಈ ಅಪರಾತ್ರಿ ಯಲ್ಲಿ ಇದೇನು ಗಲಭೆ ಎಂದು ಸುತ್ತಮುತ್ತಲಿನ ಜನರೆಲ್ಲ ಓಡಿಬರುತ್ತಾರೆ !"

ಆದರೆ ಹೃದಯ ಸುಮ್ಮನಾಗುತ್ತಾನೆಯೆ ? ಅವನಿಗೆ ಅಷ್ಟು ಸಂತೋಷ ಉದ್ರೇಕ ಆಗಿಬಿಟ್ಟಿದೆ ! ಮತ್ತೂ ಜೋರಾಗಿ ಕೂಗಿದ. ಆಗ ಶ್ರೀರಾಮಕೃಷ್ಣರು ಹತ್ತಿರ ಬಂದು, ಅವನ ಎದೆಯನ್ನು ಸವರುತ್ತ, "ತಾಯಿ, ಈ ದಡ್ಡನನ್ನು ಮತ್ತೆ ಜಡವಾಗಿರಿಸು" ಎಂದರು.

ಹೃದಯ, ಬುಡಕಡಿದ ತೆಂಗಿನ ಮರದಂತೆ, ಆ ಉನ್ನತಾವಸ್ಥೆಯಿಂದ ಸಾಧಾರಣ ಪ್ರಜ್ಞೆಗೆ ಧೊಪ್ಪನೆ ಬಿದ್ದ. ಅವನ ದರ್ಶನ, ಆನಂದ, ಉದ್ರೇಕ ಎಲ್ಲವೂ ಕ್ಷಣಮಾತ್ರದಲ್ಲಿ ಮಾಯವಾದುವು. ಮತ್ತೆ ಅವನು ಮೊದಲಿನ ಒರಟು ಹೃದಯನೇ ಆದ. ಮಗುವಿನ ಕೈಗೆ ಸಿಹಿ ತಿನಿಸನ್ನು ಕೊಟ್ಟು ಮರುಕ್ಷಣವೇ ಕಿತ್ತುಕೊಂಡರೆ ಎಷ್ಟು ಸಂಕಟವಾಗುತ್ತದೆ ! ಅದಕ್ಕಿಂತ ಹೆಚ್ಚು ಸಂಕಟ-ಆಕ್ರೋಶಗಳಿಂದ ಹೃದಯ ಬಿಕ್ಕಿಬಿಕ್ಕಿ ಅಳುತ್ತ ನುಡಿದ:

"ಅಯ್ಯೋ ! ಮಾವಯ್ಯ, ಇದೇನು ಮಾಡಿಬಿಟ್ಟೆ ನೀನು ? ನನ್ನನ್ನು ಜಡ ವಾಗಿಸುವಂತೆ ತಾಯಿಗೆ ಯಾಕೆ ಹೇಳಿದೆ ? ನಾನು ಎಂಥ ಆನಂದವನ್ನು ಅನುಭವಿಸು ತ್ತಿದ್ದೆ ! ಎಂಥ ಅದ್ಭುತವನ್ನು ಕಂಡೆ ! ಅಯ್ಯೋ, ನನಗಿನ್ನು ಅದು ಮತ್ತೆಲ್ಲಿ ಸಿಕ್ಕೀತು ?"

"ಹೃದೂ, ಅಷ್ಟೊಂದು ದುಃಖಿಸುವಂಥದು ಏನಾಯಿತೀಗ ? ನೀನು ಯಾವಾ ಗಲೂ ಪೂರ್ತಿ ಜಡವಾಗಿರು ಎಂದೇನೂ ಹೇಳಲಿಲ್ಲ ನಾನು. ಸದ್ಯಕ್ಕೆ ಸ್ವಲ್ಪ ಶಾಂತನಾಗಿರು ಎಂದೆ ಅಷ್ಟೆ. ಅಲ್ಲಪ್ಪಾ, ಒಂದು ಸಾಮಾನ್ಯವಾದ ದರ್ಶನವನ್ನು ಕಂಡೇ ನೀನು ಇಷ್ಟೆಲ್ಲ ಗಲಾಟೆಯೆಬ್ಬಿಸಿಬಿಟ್ಟೆಯಲ್ಲ ! ಆದಕ್ಕೇ ನಾನು ಹಾಗೆ ಹೇಳಬೇಕಾಯಿತು. ನಾನು ಇಪ್ಪತ್ತನಾಲ್ಕು ಗಂಟೆಯೂ ಅಂತಹ ಎಷ್ಟೋ ದರ್ಶನಗಳನ್ನು ಕಾಣುತ್ತಿರುತ್ತೇನೆ. ನಾನೂ ಹಾಗೆಯೇ ಕೂಗಾಡುತ್ತೇನೆಯೆ ? ನೋಡು, ಅಂತಹ ಅನುಭವಗಳನ್ನೆಲ್ಲ

ಪಡೆಯಲು ನಿನಗೆ ಸರಿಯಾದ ಸಮಯವಿನ್ನೂ ಒದಗಿಬಂದಿಲ್ಲ. ಆದ್ದರಿಂದಲೇ ನಾನು ಅಂದು 'ಇವೆಲ್ಲ ಬೇಡಪ್ಪ' ಎಂದು ಹೇಳಿದ್ದು. ನೀನೀಗ ಶಾಂತನಾಗಿರು. ಒಳ್ಳೆಯ ಸಂದರ್ಭ ಒದಗಿದಾಗ ಅಂಥದನ್ನೆಲ್ಲ ಕಾಣುವೆಯಂತೆ."

ಹೃದಯ ಮರುಮಾತನಾಡಲಿಲ್ಲ. ಆದರೆ ನಿರಾಸೆ, ದುಃಖ ಒಳಗೇ ಕೊರೆಯುತ್ತಿತ್ತು. ಆ ಕ್ಷಣಕ್ಕೆ ಸುಮ್ಮನಾದರೂ ಮತ್ತೆ ಅವನಲ್ಲಿ ಅಹಂಕಾರ ತಲೆಯೆತ್ತಿತು. 'ಅದೇಕೆ ಸಾಧ್ಯವಿಲ್ಲವೊ ನೋಡೇಬಿಡೋಣ' ಎನ್ನಿಸಿತು. ಜಪ-ಧ್ಯಾನಗಳನ್ನು ಹೆಚ್ಚುಹೆಚ್ಚು ಮಾಡುತ್ತಬಂದ. ಮತ್ತೊಂದು ಆಲೋಚನೆ ಹೊಳೆಯಿತು. 'ಶ್ರೀರಾಮಕೃಷ್ಣರು ಸಾಧನೆ ಮಾಡಿ ಸಿದ್ಧಿಗಳನ್ನೆಲ್ಲ ಗಳಿಸಿದ್ದು ಪಂಚವಟಿಯ ಬುಡದಲ್ಲಿ ಅಲ್ಲವೆ ? ಸರಿ, ನಾನೂ ಹಾಗೆಯೇ ಮಾಡುತ್ತೇನೆ.'

ಒಂದು ದಿನ ಗಾಢ ರಾತ್ರಿಯಲ್ಲಿ ಹಾಸಿಗೆಯನ್ನು ಬಿಟ್ಟೆದ್ದು ಪಂಚವಟಿಗೆ ಹೋದ. ಅಲ್ಲಿ ಶ್ರೀರಾಮಕೃಷ್ಣರ ಆಸನದಲ್ಲಿ ಧ್ಯಾನಕ್ಕೆ ಕುಳಿತ. ಆಶ್ಚರ್ಯವೆಂಬಂತೆ, ಶ್ರೀರಾಮಕೃಷ್ಣರಿಗೂ ಅದೇ ವೇಳೆಗೆ ಅತ್ತ ಹೋಗುವ ಮನಸ್ಸಾಯಿತು. ಅವರಿನ್ನೂ ಪಂಚವಟಿಯ ಹತ್ತಿರ ಬಂದಿಲ್ಲ, ಅಷ್ಟರಲ್ಲೇ ಹೃದಯನ ಕರುಣಾಜನಕವಾದ ಕೂಗು ಕೇಳಿಸಿತು:

"ಮಾವಯ್ಯಾ ! ಸುಟ್ಟುಹೋಗುತ್ತಿದ್ದೇನೆ, ಕಾಪಾಡಿ ! ಕಾಪಾಡಿ !"

ಶ್ರೀರಾಮಕೃಷ್ಣರು ಬೇಗಬೇಗ ಹೆಜ್ಜೆ ಹಾಕಿದರು. ಹೋಗಿ ನೋಡಿದರೆ, ಹೃದಯ ಕುಳಿತಲ್ಲಿಂದ ಮೇಲೇಳಲೂ ಆಗದೆ ಚಡಪಡಿಸುತ್ತಿದ್ದಾನೆ. ಅವರನ್ನು ಕಂಡೊಡನೆ ಹೃದಯನೆಂದ:

"ಮಾವಯ್ಯ ! ನಾನು ಇಲ್ಲಿ ಧ್ಯಾನ ಮಾಡಲು ಕುಳಿತ ಕೂಡಲೇ ಯಾರೋ ನನ್ನ ಮೇಲೆ ಕೆಂಡವನ್ನು ಸುರಿದಂತಾಯಿತು. ಅಬ್ಬಾ, ತಡೆಯಲಾರದ ಉರಿ, ದಾಹ ! ಕಾಪಾಡು ನನ್ನನ್ನು !"

ಶ್ರೀರಾಮಕೃಷ್ಣರು ಅವನ ಮೈಯನ್ನು ನೇವರಿಸಿ, "ನಿನ್ನ ದಾಹ-ವೇದನೆ ಶಾಂತವಾಗಲಿ" ಎಂದರು. ಆ ಶೀತಲ ಅಮೃತಸ್ಪರ್ಶವಾದೊಡನೆ ಹೃದಯನ ಯಾತನೆಯೆಲ್ಲ ದೂರವಾಯಿತು. ಆತ ಅಲ್ಲಿಂದೆದ್ದು ನಿಂತ. ಆಗ ಅವರೆಂದರು:

"ಹೃದೂ, ನೀನೇಕೆ ಹೀಗೆ ಮಾಡುವುದು ? ನನ್ನ ಸೇವೆಯನ್ನು ಮಾಡಿಕೊಂಡಿದ್ದರೆ ನಿನಗೆಲ್ಲವೂ ಸಿದ್ಧಿಸುತ್ತದೆ ಎಂದು ನಾನು ಹೇಳಲಿಲ್ಲವೇನಪ್ಪ ?"

ಹೃದಯ ತಲೆತಗ್ಗಿಸಿ ನಿಂತ. ಮಾವನ ಮಾತನ್ನು ಮೀರಿದರೆ ತನಗೆ ಒಳಿತಿಲ್ಲವೆಂದು ಮನದಟ್ಟಾಯಿತು. ಅಂದಿನಿಂದ ಅವನು ಪಂಚವಟಿಯಲ್ಲಿ ಧ್ಯಾನ ಮಾಡುವುದನ್ನು ಬಿಟ್ಟುಬಿಟ್ಟ.

ಶ್ರೀರಾಮಕೃಷ್ಣರ ಹಿತವಚನದಿಂದ ಅವನು ಎಷ್ಟೋ ಸಮಾಧಾನ ತಂದುಕೊಂಡ. ಆದರೆ ಅವನಿಗೀಗ ದೇವಸ್ಥಾನದ ಕೆಲಸಕಾರ್ಯಗಳು ಹಿಂದಿನಂತೆ ರುಚಿಸಲಿಲ್ಲ. ಅವನ ಮನಸ್ಸು ಏನಾದರೂ ಹೊಸ ಕೆಲಸವನ್ನು ಮಾಡಿ ಹೊಸ ಉಲ್ಲಾಸವನ್ನು ಕಂಡುಕೊಳ್ಳಲು ಉದ್ಯುಕ್ತವಾಯಿತು.

ಆಗ ಶರತ್ಕಾಲ ಸಮೀಪಿಸುತ್ತಿತ್ತು. ಅದನ್ನು ನೆನಪಿಸಿಕೊಂಡಾಗ ಅವನಿಗೊಂದು ಆಲೋಚನೆ ಬಂದಿತು—'ನಾನೇಕೆ ಈ ವರ್ಷ ನಮ್ಮ ಮನೆಯಲ್ಲಿ ದುರ್ಗಾಪೂಜೆಯನ್ನು ಮಾಡಬಾರದು ?'

ಬಂಗಾಳದಲ್ಲಿ ದುರ್ಗಾಪೂಜೆ ಬಹು ದೊಡ್ಡ ಉತ್ಸವ. ಮನೆಯಲ್ಲಿ ಅದನ್ನು

ಆಚರಿಸಬೇಕೆಂದರೆ ಸುಲಭದ ಮಾತಲ್ಲ. ಪೂಜಾ ವಿಧಾನ ಬಹಳ ಕ್ಲಿಷ್ಟವಾದುದು; ಜೊತೆಗೆ ತುಂಬ ಖರ್ಚು ತಗುಲುವಂಥದು. ಮಾಡಿದರೆ, ಸರಿಯಾಗಿ ಶಾಸ್ತ್ರೋಕ್ತವಾಗಿಯೇ ಮಾಡಬೇಕು. ಹೃದಯನಿಗೆ ಈ ದುರ್ಗಾಪೂಜೆಯ ಆಲೋಚನೆ ಬಂದುದಕ್ಕೆ ಒಂದು ಕಾರಣವೂ ಇತ್ತು. ಅವನ ಮನೆಯವರು ಮೊದಲಿನಿಂದಲೂ ಬಡವರು. ಆದರೆ ಈಗ್ಗೆ ಕೆಲ ವರ್ಷಗಳ ಹಿಂದೆ, ದೇವಿಯ ಕೃಪೆಯಿಂದ ಮನೆಯ ಒಂದಿಬ್ಬರು ದುಡಿದು ನಾಲ್ಕು ಕಾಸು ಸಂಪಾದಿಸುವಂತಾಯಿತು. ಆಗ ಅವರಿಗೆ ದೇವಿಯನ್ನು ಆರಾಧಿಸುವ ಮನಸ್ಸಾಯಿತು. ಹೊಸ ಚಂಡೀಮಂಟಪವನ್ನು ಸಿದ್ಧಪಡಿಸಿದರು. ಹೃದಯನ ಬಲ ಅಣ್ಣ ಗಂಗಾನಾರಾಯಣ, ಮನೆಯ ಮಂಟಪದಲ್ಲಿ ಶ್ರೀದುರ್ಗೆಯನ್ನು ಕುಳ್ಳಿರಿಸಿ ಪೂಜೆ ಮಾಡಬೇಕೆಂದು ಬಯಸಿದ್ದ. ಆದರೆ ಆತನ ಇಚ್ಛೆ ಕೈಗೂಡಲಿಲ್ಲ. ಮರಣಾಂತಿಕ ಕಾಯಿಲೆಗೆ ಗುರಿಯಾಗಿ ಸ್ವರ್ಗಸ್ಥನಾದ. ಇದೆಲ್ಲ ನಡೆದು ಒಂದೆರಡು ವರ್ಷವಾಗಿತ್ತು. ಇದೀಗ ದುರ್ಗಾಪೂಜೆಗೆ ಕಾಲ ಕೂಡಿಬಂದಿದೆ ಎಂದು ಭಾವಿಸಿದ, ಹೃದಯ.

ಶ್ರೀರಾಮಕೃಷ್ಣರಿಗೆ ಈ ವಿಷಯ ತಿಳಿದಾಗ ಅವರೇನೂ ಬೇಡವೆನ್ನಲಿಲ್ಲ. ರಾಜಸಿಕ ಮೂರ್ತಿಯಾದ ಈತನಿಗೆ ಆ ಕೆಲಸಕಾರ್ಯಗಳಲ್ಲೆಲ್ಲ ಸ್ವಲ್ಪ ಶಾಂತಿ ಸಿಗುತ್ತದೆಂದು ಊಹಿಸಿ ಅದಕ್ಕೆ ಸಮ್ಮತಿಸಿದರು. ಅಲ್ಲದೆ ಮಥುರನಿಗೆ ಹೇಳಿ ಪೂಜಾಕಾರ್ಯಕ್ಕೆ ಧನಸಹಾಯ ಕೊಡಿಸಿದರು. ಆದರೆ ಹೃದಯನಿಗೆ ಬೇಕಾಗಿದ್ದುದು ಅದಕ್ಕಿಂತ ಅಮೂಲ್ಯವಾದ ಮತ್ತೊಂದು ವಸ್ತು—ಸ್ವಯಂ ಶ್ರೀರಾಮಕೃಷ್ಣರು! ಪೂಜಾ ವೇಳೆಯಲ್ಲಿ ಅವರು ತನ್ನೊಂದಿಗಿರಬೇಕು ಎಂಬುದು ಅವನ ಉತ್ಕಟೇಚ್ಛೆ. ಇದಕ್ಕೆ ಮಾತ್ರ ಮಥುರ ಕಡ್ಡಿ ಮುರಿದಂತೆ ಹೇಳಿಬಿಟ್ಟ:

"ಏನು? ಠಾಕೂರರನ್ನು ಕಳಿಸಿಕೊಡಬೇಕೆ? ಸಾಧ್ಯವೇ ಇಲ್ಲ! ಅವರನ್ನು ಅಲ್ಲಿಗೆ ಕಳಿಸಿಬಿಟ್ಟರೆ ನಾವೆಲ್ಲ ಇಷ್ಟೊಂದು ಜನ ಏನು ಮಾಡಬೇಕು? ಇಲ್ಲಿ ದುರ್ಗಾಪೂಜೆ ಮಾಡಬೇಡವೆ?"

ಮಥುರನ ಮಾತಿಗೆ ಎದುರುಂಟೆ? ಹೃದಯ ಬೇರೆ ದಾರಿಗಾಣದೆ ಒಬ್ಬನೇ ಊರಿಗೆ ಹೋಗಲಣಿಯಾದ. ಶ್ರೀರಾಮಕೃಷ್ಣರಿಗೆ ಇಬ್ಬರೂ ಬೇಕಾದವರೇ. ಹೃದಯ ಮಾಡಿದ ಸೇವೆಯೇನೂ ಸಾಮಾನ್ಯವಲ್ಲ. ಮಥುರ ತೋರಿದ ವಿಶ್ವಾಸವೂ ಸ್ವಲ್ಪವಲ್ಲ. ಅವರೀಗ ಯಾರ ಮಾತು ಕೇಳಬೇಕು? ಉಭಯಸಂಕಟವೆಂದರೆ ಇದೇ ಅಲ್ಲವೆ? ಕೊನೆಗೂ ಅವರು ಮಥುರನ ಕಡೆಯೇ ಇರಬೇಕಾಯಿತು. ಆದರೆ ಅವರ ಮನಸ್ಸು, ದುಃಖದಿಂದ ಹೊರಟುನಿಂತ ಹೃದಯನೊಂದಿಗೇ ಹೊರಟಿತು. ಅವನ ಬಳಿಸಾರಿ ವಾತ್ಸಲ್ಯದಿಂದ ನುಡಿದರು:

"ಹೃದೂ, ಏಕೆ ದುಃಖಿಸುತ್ತಿದ್ದೀಯೆ? ನಾನು ಬರುವುದಿಲ್ಲವೆಂದೆ? ನಿನಗೊಂದು ಮಾತು ಹೇಳುತ್ತೇನೆ ಕೇಳು; ನಾನು ನಿನ್ನ ಪೂಜೆಯ ವೇಳೆಗೆ ಅಲ್ಲಿಗೆ ಬರುತ್ತೇನೆ! ಆದರೆ ಈ ಶರೀರದಿಂದಲ್ಲ, ಸೂಕ್ಷ್ಮಶರೀರದಿಂದ. ಅರ್ಥವಾಯಿತೆ? ನೀನು ಮಾತ್ರ ನನ್ನನ್ನು ನೋಡಬಹುದು. ನಿನ್ನನ್ನು ಬಿಟ್ಟು ಬೇರೆ ಯಾರಿಗೂ ನಾನು ಕಾಣಿಸಿಕೊಳ್ಳುವುದಿಲ್ಲ. ಇನ್ನೊಂದು ವಿಷಯ: ಮಂತ್ರಗಳನ್ನು ಹೇಳಲು ಒಬ್ಬ ಪುರೋಹಿತನನ್ನು ನೇಮಿಸಿಕೊ; ಪೂಜೆಯನ್ನು ನೀನೇ ನಿನ್ನಿಷ್ಟದಂತೆ ಮಾಡು. ಸಂಪೂರ್ಣ ಉಪವಾಸ ಮಾಡಬೇಡ. ಮಧ್ಯಾಹ್ನಕ್ಕೆ ಹಾಲು, ಕಲ್ಲುಸಕ್ಕರೆ ಪಾನಕ,

ಗಂಗಾಜಲ ಇವುಗಳನ್ನು ಕುಡಿ. ನಿನ್ನ ಪೂಜೆಯನ್ನು ಜಗನ್ಮಾತೆ ಖಂಡಿತ ಸ್ವೀಕರಿಸುತ್ತಾಳೆ."

ಈ ಸಲಹೆಗಳಲ್ಲದೆ, ದುರ್ಗೆಯ ವಿಗ್ರಹವನ್ನು ಯಾರ ಕೈಯಿಂದ ಮಾಡಿಸಬೇಕು, ಮಂತ್ರಗಳನ್ನು ಓದಲು ಯಾರನ್ನು ನೇಮಿಸಬೇಕು, ಇವೇ ಮುಂತಾದ ಅನೇಕ ವಿಚಾರಗಳನ್ನು ಅವರು ವಿವರವಾಗಿ ತಿಳಿಸಿಕೊಟ್ಟರು. ಈಗ ಹೃದಯುನಿಗೆ ಸಂಪೂರ್ಣ ತೃಪ್ತಿಯಾಯಿತು. ತನ್ನ ಭಾಗ್ಯಕ್ಕೆ ಎಣೆಯೇ ಇಲ್ಲವೆಂದು ಹಿಗ್ಗುತ್ತ ಊರಿಗೆ ಹೊರಟ.

ಸ್ವಗ್ರಾಮವಾದ ಸಿಹೋರಿಗೆ ಬಂದ ಹೃದಯ ಶ್ರೀರಾಮಕೃಷ್ಣರು ಹೇಳಿದಂತೆಯೇ ಎಲ್ಲವನ್ನೂ ನಡೆಸಿದ. ಷಷ್ಠಿಯ ದಿನದಂದು ಪ್ರತಿಮೆಯ ಪ್ರತಿಷ್ಠಾಪನೆ, ದೇವಿಯನ್ನು ಜಾಗೃತಗೊಳಿಸುವ ವಿಧಿಗಳು ಮೊದಲಾದುವನ್ನು ನೆರವೇರಿಸಿ ಪೂಜೆಯನ್ನು ಪ್ರಾರಂಭಿಸಿದ. ಸಪ್ತಮಿಯ ದಿನ ಪೂಜೆಗಳೆಲ್ಲ ಸಾಂಗವಾಗಿ ಸಾಗಿದುವು. ಅಂದು ರಾತ್ರಿ ದೇವಿಗೆ ಆರತಿ ಮಾಡುವಾಗ ಅವನು ಪ್ರತಿಮೆಯ ಪಕ್ಕದಲ್ಲಿ ಶ್ರೀರಾಮಕೃಷ್ಣರನ್ನು ಕಂಡ! ಅವರು ಜ್ಯೋತಿರ್ಮಯವಾದ ಶರೀರವನ್ನು ತಳೆದು ಭಾವಾವಿಷ್ಟರಾಗಿ ನಿಂತಿದ್ದರು! ಹೃದಯುನ ಉತ್ಸಾಹ, ಆನಂದ ಸಹಸ್ರಮಡಿಯಾಯಿತು! ಉತ್ಸವದ ಉಳಿದ ಮೂರು ದಿನಗಳಂದೂ ಅದೇ ಸಮಯಕ್ಕೆ, ಮತ್ತು ಸಂಧಿಪೂಜೆಯ* ಸಮಯದಲ್ಲಿ ಅವನು ಶ್ರೀರಾಮಕೃಷ್ಣರನ್ನು ಆ ದಿವ್ಯರೂಪದಲ್ಲಿ ಕಂಡ!

ದುರ್ಗಾಪೂಜೆಯನ್ನು ಮುಗಿಸಿಕೊಂಡು, ಕೆಲದಿನಗಳ ಬಳಿಕ ಸಂತೃಪ್ತಿಯಿಂದ ದಕ್ಷಿಣೇಶ್ವರಕ್ಕೆ ಮರಳಿದ. ಶ್ರೀರಾಮಕೃಷ್ಣರಿಗೆ ನಮಸ್ಕರಿಸಿ ಪೂಜೆಯ ಸಂಗತಿಯನ್ನೆಲ್ಲ ತಿಳಿಸಿದ. ಆಗ ಅವರೆಂದರು:

"ಹೌದು. ಆರತಿ, ಸಂಧಿಪೂಜೆಯ ಸಮಯಗಳಿಗೆ ಸರಿಯಾಗಿ, ನಿನ್ನ ಪೂಜೆಯನ್ನು ನೋಡಬೇಕೆಂಬ ಆಸಕ್ತಿ ನನಗುಂಟಾಗಿ ನಾನು ಭಾವಾವಿಷ್ಟನಾಗಿದ್ದೆ. ಜ್ಯೋತಿರ್ಮಯ ಶರೀರದಿಂದ ಜ್ಯೋತಿರ್ಮಾರ್ಗವಾಗಿ ನಿನ್ನ ಚಂಡೀ ಮಂಟಪಕ್ಕೆ ಬಂದಿದ್ದೆ. ನಿನ್ನ ಪೂಜೆಯನ್ನು ಕಂಡು ಸಂತುಷ್ಟನಾದೆ."

ಒಮ್ಮೆ ಶ್ರೀರಾಮಕೃಷ್ಣರು ಭಾವಾವಸ್ಥೆಯಲ್ಲಿದ್ದಾಗ, "ನೀನು ಮೂರು ಬಾರಿ ದುರ್ಗಾಪೂಜೆ ಮಾಡುವೆ" ಎಂದು ಹೃದಯುನಿಗೆ ಹೇಳಿದ್ದರು. ನಿಜಕ್ಕೂ ಹಾಗೆಯೇ ಆಯಿತು. ಅವನು ಈ ಮಾತನ್ನು ಅಲಕ್ಷಿಸಿ ನಾಲ್ಕನೆಯ ಬಾರಿಯೂ ಪೂಜೆಯ ಸಿದ್ಧತೆ ಮಾಡಿದ. ಆದರೆ ಆಗ ಎಷ್ಟರ ಮಟ್ಟಿಗೆ ವಿಘ್ನಪರಂಪರೆಯುಂಟಾಯಿತೆಂದರೆ, ಕಡೆಗವನು ಗತ್ಯಂತರವಿಲ್ಲದೆ ಅದನ್ನು ನಿಲ್ಲಿಸಬೇಕಾಯಿತು.

---

* ಅಷ್ಟಮಿ ಹಾಗೂ ನವಮಿ ತಿಥಿಗಳು ಸಂಧಿಸುವ ಸಮಯದಲ್ಲಿ ನಡೆಸಲಾಗುವ ಪೂಜೆ. ಚಾಮುಂಡೇಶ್ವರಿಯು ಮಹಿಷಾಸುರನನ್ನು ಕೊಂದ ಪ್ರಶಸ್ತ ಘಳಿಗೆ ಇದು.

ದಕ್ಷಿಣೇಶ್ವರ ಲೀಲಾಕ್ಷೇತ್ರದಲ್ಲಿ ಈಗ ಹೃದಯರಾಮನಲ್ಲದೆ ಶ್ರೀರಾಮಕೃಷ್ಣರ ಮತ್ತೊಬ್ಬ ಸಮೀಪಬಂಧುವಿದ್ದಾನೆ—ಅವರ ಹಿರಿಯಣ್ಣ ರಾಮಕುಮಾರನ ಏಕ ಮಾತ್ರ ಪುತ್ರನಾದ ಅಕ್ಷಯರಾಮ. ಈತ ದಕ್ಷಿಣೇಶ್ವರಕ್ಕೆ ಬಂದುದು ಮೂರ್ನಾಲ್ಕು ವರ್ಷಗಳ ಕೆಳಗೆ, ತೋತಾಪುರಿ ಬಂದ ಕೆಲಕಾಲದ ಮೇಲೆ (೧೮೬೫ರಲ್ಲಿ). ಈ ಅವಧಿಯಲ್ಲೇ ಹಲಧಾರಿ ಅಲ್ಲಿಂದ ನಿರ್ಗಮಿಸಿದ್ದು. ಆಗ ಅಕ್ಷಯನಿಗೆ ವಿಷ್ಣುದೇವಾಲಯದ ಅರ್ಚಕಸ್ಥಾನ ದೊರೆಯಿತು. ಅವನಿನ್ನೂ ಆಗ ಹದಿನೇಳು ವರ್ಷದ ತರುಣ.

ರಾಮಕುಮಾರನಿಗೆ ಬಹಳ ವರ್ಷಗಳ ಬಳಿಕ ಜನಿಸಿದವನು ಅಕ್ಷಯ. ಅವನ ಭವಿಷ್ಯವಚನದಂತೆಯೇ, ಮಗುವಿನ ಜನನದೊಂದಿಗೆ ಜನನಿಯ ಮರಣ ಸಂಭವಿಸಿ ಮನೆಯೊಂದು ದುಃಖದ ಮಡುವಾಗಿತ್ತು. ಆದರೆ ಸುಂದರವಾದ ಮಗು ಎಲ್ಲರನ್ನೂ ತನ್ನತ್ತ ಸೆಳೆದು ಬಹಳ ಬೇಗ ಆ ದುಃಖವನ್ನು ಶಮನಗೊಳಿಸಿತು. ತಾಯಿಯಿಲ್ಲದ ತಬ್ಬಲಿ ಎಂಬ ಕರುಣೆಯೊಂದಿಗೆ, ಕಣ್ತುಂಬ ನೋಡುತ್ತಿರಬೇಕೆಂಬ ಮನೆಮಂದಿಯ ಹಂಬಲವೂ ಸೇರಿ ಮಗು ಮನೆಯ ಮಾಣಿಕ್ಯವಾಯಿತು! ಅಕ್ಷಯರಾಮ ಎಲ್ಲರ ಆನಂದವನ್ನೂ ಅಕ್ಷಯಗೊಳಿಸಿದ. ಶ್ರೀರಾಮಕೃಷ್ಣರಿಗೆ ಆಗ ಹದಿಮೂರು ವರ್ಷ. ಮೊದಲೇ ಹೆಂಗರುಳು ಅವರದು. ಈಗ ಇಂಥಾ ಸುಂದರ ಶಿಶುವಿನ ಸಾಂಗತ್ಯ ದೊರೆತಾಗ ಅವರ ಆನಂದವನ್ನು ಬಣ್ಣಿಸಲುಂಟೆ? ತಾಯಿಗೆ ಬದಲು ತಾಯಿಯಾಗಿ ನಿಂತರು. ದಕ್ಷಿಣೇಶ್ವರಕ್ಕೆ ಹೊರಡುವವರೆಗೂ, ಎಂದರೆ, ಸುಮಾರು ಮೂರು-ನಾಲ್ಕು ವರ್ಷ, ಅವನ ಮೇಲೆ ವಾತ್ಸಲ್ಯದ ಧಾರೆಯನ್ನೇ ಸುರಿಸಿದರು.

ಸುಂದರ ರೂಪ, ರೂಪಕ್ಕೆ ತಕ್ಕ ಗುಣ—ಇಷ್ಟಿದ್ದರೆ ಜನಮನ ಗೆಲ್ಲಲು ಇನ್ನೇನು ಬೇಕು? ಅಕ್ಷಯನನ್ನು ಕಂಡರೆ ಎಲ್ಲರಿಗೂ ಅಕ್ಕರೆ. ಅವನು ಇತರರರಿಗೇ ಅಷ್ಟು ಸಂತಸ ಕೊಟ್ಟಾಗ ಸ್ವಂತ ತಂದೆಗೆ ಇನ್ನೆಷ್ಟು ಸಂತಸ ತಂದಿರಬೇಡ! ಆದರೆ, ಇಲ್ಲಿ ಅದು ವಿಪರ್ಯಾಸವಾಗಿತ್ತು. ರಾಮಕುಮಾರ ಒಂದು ದಿನವಾದರೂ ಮಗನನ್ನು ಮಡಿಲಲ್ಲೆತ್ತಿ ಮುದ್ದಿಸಲಿಲ್ಲ, ಲಾಲಿಸಿ ಸುಖಿಸಲಿಲ್ಲ, ಆಲಿಸಿ ಆನಂದಿಸಲಿಲ್ಲ. ಮಗನನ್ನು ಸುಮ್ಮನೆ ದಿಟ್ಟಿಸುತ್ತಾನೆ, ನಿಟ್ಟುಸಿರೆಳೆಯುತ್ತಾನೆ.

"ಇದೇಕೆ ಹೀಗೆ ಮಾಡುತ್ತೀಯೋ! ಒಮ್ಮೆಯಾದರೂ ಮಗನನ್ನು ಎತ್ತಿಕೊಳ್ಳಬಾರದೆ?" ಎಂದು ತಾಯಿಯೋ ಬಂಧುಗಳೋ ಕೇಳಿದರೆ ರಾಮಕುಮಾರ ಹೇಳುತ್ತಾನೆ: "ಇವನ ಮೇಲೆ ಪ್ರೀತಿಯಿಡುವುದರಿಂದ ಏನು ಪ್ರಯೋಜನ? ಇವನು ಹೆಚ್ಚು ದಿನ ಬದುಕುವವನಲ್ಲ!"

ಇದನ್ನು ಕೇಳಿದವರು ಸ್ತಬ್ಧರಾಗಬೇಕು!

"ಏನಪ್ಪಾ ಇದು! ಹೆತ್ತ ತಂದೆಯಾಗಿ ಈ ರೀತಿ ಅಪಶಕುನದ ಮಾತನ್ನಾಡುತ್ತೀಯಲ್ಲ! ಛೆ, ಹಾಗೆನ್ನಬಾರದಪ್ಪ!" ಎಂದು ಅವರೆಂದರೆ, "ನಾನು ತಾನೆ ಯಾಕೆ ಸುಳ್ಳು ಹೇಳಲಿ? ಅವನ ಜಾತಕವೇ ಹಾಗೆ ಹೇಳುತ್ತಿದೆ. ಇವನು ಅಲ್ಪಾಯುಷಿ ಎನ್ನುವುದು ನನಗೆ ಸ್ಪಷ್ಟವಾಗಿ ಗೋಚರವಾಗಿದೆ. ಈಗ ಇವನನ್ನು ಮುದ್ದು ಮಾಡಿ, ನಾಳೆ ದಿನ

ನನ್ನ ಕಣ್ಣೆದುರಿಗೇ ತೀರಿಹೋದರೆ ಆ ದುಃಖವನ್ನು ಹೇಗೆ ತಡೆದುಕೊಳ್ಳಲಿ?" ಎನ್ನುತ್ತಾನೆ ರಾಮಕುಮಾರ.

ರಾಮಕುಮಾರ ಜಾತಕ ನೋಡುವುದನ್ನು ಕಲಿತು, ಮಗುವನ್ನು ಮುದ್ದಿಸದೆ ದಡ್ಡನಾದನೋ? ಅಥವಾ ಮುಂಬರಲಿರುವ ಚಿಂತಾಗ್ನಿಯಿಂದ ತಪ್ಪಿಸಿಕೊಂಡ ಬುದ್ಧಿವಂತನಾದನೊ? ಅಂತೂ ರಾಮಕುಮಾರನ ಆ ಮಾತಿಗೆ ಯಾರೇನು ಹೇಳಿಯಾರು? ಇದೆಲ್ಲ ಅವನ ಊಹಾಪೋಹ ಎಂದು ತಳ್ಳಿಹಾಕುವಂತೆಯೂ ಇಲ್ಲ. ಏಕೆಂದರೆ, ತನ್ನ ಹೆಂಡತಿಯ ವಿಷಯವಾಗಿಯೇ ಅವನಾಡಿದ ಮಾತು ಅಪ್ರಿಯವಾದರೂ ಸತ್ಯವಾಗಿ ಪರಿಣಮಿಸಿತಲ್ಲ! ಆದ್ದರಿಂದ ಈಗ, 'ರಘುವೀರ ಮಾಡಿಸಿದಂತಾಗಲಿ' ಎಂದುಕೊಳ್ಳುವುದೊಂದೇ ಅವರ ಪಾಲಿಗಿದ್ದದ್ದು.

ಆದರೆ ಒಂದು ದೃಷ್ಟಿಯಲ್ಲಿ ರಾಮಕುಮಾರನ ಈ ಮುನ್ನೆಚ್ಚರಿಕೆಯೆಲ್ಲ ವ್ಯರ್ಥವಾಯಿತೆನ್ನಬೇಕು. ಏಕೆಂದರೆ ಅಕ್ಷಯನಿಗಿಂತ ಮೊದಲೇ, ಅವನಿಗಿನ್ನೂ ಏಳು ವರ್ಷವಾಗಿರುವಾಗಲೇ, ರಾಮಕುಮಾರ ತೀರಿಹೋದ!!

ಈ ನಡುವೆ ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹೋಗಿ ಅರ್ಚಕರಾಗಿ ನೇಮಕಗೊಂಡು ಸಾಧನೆಗಳೆಂಬ ಚಂಡಮಾರುತದಲ್ಲಿ ಸಿಲುಕಿ ತಮ್ಮನ್ನೇ ತಾವು ಮರೆತಿದ್ದಾಗ ಇತ್ತ ಅಕ್ಷಯನು ಬಾಲಗಂಧರ್ವನಂತೆ ಬೆಳೆದ; ಬಿದಿಗೆ ಚಂದ್ರನಂತೆ ಅವನ ಸೌಂದರ್ಯವೂ ವರ್ಧಿಸಿತು. ಉಜ್ವಲ ದೇಹಕಾಂತಿ; ಅದಕ್ಕೊಪ್ಪುವ ಮಾಟವಾದ ಅವಯವಗಳು. ನೋಡಿದರೆ ಸಾಕ್ಷಾತ್ ಮನ್ಮಥನೇ! ಅವನ ಬಾಹ್ಯ ಸೌಂದರ್ಯವನ್ನು ಮೀರಿಸುವಂಥದು ಅವನ ಅಂತಸ್ಸೌಂದರ್ಯ. ಬಾಲ್ಯದಿಂದಲೂ ಆತ ಭಕ್ತಿಪರಾಯಣ. ಶ್ರೀರಾಮಚಂದ್ರನಲ್ಲಿ ಅತಿಶಯ ಅನುರಾಗ. ರಘುವೀರಸ್ವಾಮಿಯ ಪೂಜೆಗೆ ಕುಳಿತುಬಿಟ್ಟನೆಂದರೆ ಸಮಯ ಸರಿದುದರ ಪರಿವೆಯೇ ಇರುತ್ತಿರಲಿಲ್ಲ.

ಯಾವುದನ್ನು ಮನುಷ್ಯ ಸ್ವಪ್ರೇರಣೆಯಿಂದ, ಸ್ವಪ್ರೀತಿಯಿಂದ ಮಾಡುತ್ತಾನೋ ಅದು ಅವನಿಗೆ ಕೇವಲ 'ಕರ್ತವ್ಯ'ವೆನಿಸುವುದಿಲ್ಲ, ಅಲ್ಲವೆ? ಪೂಜಾ'ಕಾರ್ಯ'ವೇ ಅಕ್ಷಯನ ಸಹಜ ಸ್ವಭಾವವಾದುದರಿಂದ, ಅವನೂ ತನ್ನ ಅಪ್ಪ-ಚಿಕ್ಕಪ್ಪಂದಿರ ವೃತ್ತಿಯನ್ನೇ, ಎಂದರೆ ಅರ್ಚಕವೃತ್ತಿಯನ್ನೇ ಕೈಗೊಂಡ. ದಕ್ಷಿಣೇಶ್ವರಕ್ಕೆ ಬಂದೊಡನೆ, ಅವನಿಗಾಗಿಯೇ ಮೀಸಲಾಗಿತ್ತೋ ಎಂಬಂತೆ ರಾಧಾಕಾಂತ ದೇವಾಲಯದಲ್ಲಿ ಅರ್ಚಕಸ್ಥಾನ ದೊರೆಯಿತು. ಅಕ್ಷಯ ಪರಮ ಸಂತೋಷದಿಂದ—ಬಹುಶಃ, ಹಿಂದೆ ಶ್ರೀರಾಮಕೃಷ್ಣರು ಇದೇ ದಕ್ಷಿಣೇಶ್ವರದಲ್ಲಿ ಯಾವ ಬಗೆಯ ಉತ್ಸಾಹ-ಶ್ರದ್ಧೆಗಳಿಂದ ತಮ್ಮ ಅರ್ಚಕ ಜೀವನವನ್ನು ಪ್ರಾರಂಭಿಸಿದರೋ ಅಂಥದೇ ರಭಸದಿಂದ—ಕಾರ್ಯಾರಂಭ ಮಾಡಿದ. ಅದನ್ನು ಕಂಡು ಶ್ರೀರಾಮಕೃಷ್ಣರ ಹೃದಯಕ್ಕೆ ಅದೆಷ್ಟು ಸಂತೋಷವಾಯಿತೋ! "ಶ್ರೀರಾಧಾಗೋವಿಂದ ಸ್ವಾಮಿಯ ಪೂಜೆಗೆ ಕುಳಿತಾಗ ಅಕ್ಷಯನು ಧ್ಯಾನದಲ್ಲಿ ಎಷ್ಟರಮಟ್ಟಿಗೆ ತನ್ಮಯನಾಗುತ್ತಿದ್ದನೆಂದರೆ, ದೇವಾಲಯದಲ್ಲಿ ಎಷ್ಟೋ ಜನ ಸೇರಿದ್ದರೂ ಅವನಿಗೆ ಅದರ ಅರಿವೇ ಇರುತ್ತಿರಲಿಲ್ಲ. ಎರಡು ಗಂಟೆ ಹೀಗೆ ಕಳೆದ ಮೇಲೆ ಅವನಿಗೆ ಬಾಹ್ಯಬೋಧೆಯುಂಟಾಗುತ್ತಿತ್ತು" ಎಂದು ಅವರು ಆಗಾಗ ನೆನಪಿಸಿಕೊಳ್ಳುತ್ತಿದ್ದರು.

ಮಂದಿರದಲ್ಲಿ ತನ್ನ ಪೂಜಾಕಾರ್ಯಗಳನ್ನು ಮುಗಿಸಿದ ಬಳಿಕ ಅವನು ಪಂಚವಟಿಗೆ ಹೋಗಿ ಬಹಳ ಹೊತ್ತು ಶಿವನ ಪೂಜೆ ಮಾಡುತ್ತಿದ್ದ. ಅನಂತರ ಕೈಯಾರೆ

ಅಡಿಗೆ ಮಾಡಿಕೊಂಡು ಊಟ ಮಾಡಿ, ಭಾಗವತವಾಚನದಲ್ಲಿ ಮಗ್ನನಾಗುತ್ತಿದ್ದ. ಇವುಗಳಲ್ಲದೆ, ಅಧ್ಯಾತ್ಮಸಾಧನೆಗೆ ಪೂರಕವಾಗಿ ಶ್ವಾಸ-ಪ್ರಾಣಾಯಾಮಗಳನ್ನು ಅಭ್ಯಾಸ ಮಾಡುತ್ತಿದ್ದ. ಕೆಲವೊಮ್ಮೆ ಅವುಗಳ ತೀವ್ರತೆ ಎಷ್ಟಿರುತ್ತಿತ್ತೆಂದರೆ ಅವನ ಕಂಠ ಉಬ್ಬಿಹೋಗಿ ರಕ್ತಸ್ರಾವವಾಗುತ್ತಿತ್ತು! ಈ ಬಗೆಯ ಭಕ್ತಿ-ಸಾಧನೆಗಳಿಂದಾಗಿ ಅವನು ಶ್ರೀರಾಮಕೃಷ್ಣರಿಗೆ ಅತ್ಯಂತ ಪ್ರಿಯನಾಗಿದ್ದ.

ಹೀಗೆ ಮೂರ್ನಾಲ್ಕು ವರ್ಷಗಳು ಕಳೆದುವು. ಅಕ್ಷಯನೀಗ ಪ್ರಾಪ್ತವಯಸ್ಕನಾದುದನ್ನು ಕಂಡ ರಾಮೇಶ್ವರ ಅವನಿಗಾಗಿ ವಧುವಿನ ಅನ್ವೇಷಣೆಯಲ್ಲಿ ತೊಡಗಿದ. ಕಾಮಾರಪುಕುರಕ್ಕೆ ಸಮೀಪದಲ್ಲಿಯೇ ಇರುವ ಕುಚಿಕೋಲ ಎಂಬಲ್ಲಿ ಒಬ್ಬಳು ಹುಡುಗಿ ದೊರೆತಳು. ಸರಿ, ಅಕ್ಷಯನನ್ನು ಊರಿಗೆ ಕರೆದೊಯ್ಯಲು ಅವನು ದಕ್ಷಿಣೇಶ್ವರಕ್ಕೆ ಬಂದ. ಆಗ ಚೈತ್ರಮಾಸ. ಈ ಮಾಸದಲ್ಲಿ ಪ್ರಯಾಣ ನಿಷಿದ್ಧ ಎಂದು ಅಲ್ಲಿನ ಕೆಲವು ಹಿರಿಯರು ಆಕ್ಷೇಪಿಸಿದರು. 'ಆದರೆ ಪರಸ್ಥಳದಿಂದ ಸ್ವಸ್ಥಳಕ್ಕೆ ಹೋಗುವಾಗ ಈ ನಿಯಮ ಅನ್ವಯವಾಗುವುದಿಲ್ಲ' ಎಂಗು ರಾಮೇಶ್ವರ ಅಕ್ಷಯನೊಂದಿಗೆ ಹೊರಟೇಬಿಟ್ಟ. ಕೆಲ ದಿನಗಳಲ್ಲೇ, ಎಂದರೆ ೧೮೬೯ ರ ಮೇ ತಿಂಗಳಲ್ಲಿ ವಿವಾಹ ನೆರವೇರಿತು.

ವಿವಾಹವಾದ ಬಳಿಕ ಅಕ್ಷಯ ತನ್ನ ಮಾವನ ಮನೆಗೆ ಹೋದ. ಹೋದವನು ಒಂದೆರಡು ತಿಂಗಳು ಅಲ್ಲಿಯೇ ಉಳಿದ. ಆದರೆ ಈ ವೇಳೆಗೆ ಅವನು ಇದ್ದಕ್ಕಿದ್ದಂತೆ ಕಾಯಿಲೆ ಬಿದ್ದ. ಕಾಯಿಲೆ ತೀರ ಉಗ್ರವಾದದ್ದೇ. ಸುದ್ದಿ ತಿಳಿದ ರಾಮೇಶ್ವರ ಅವನನ್ನು ಚಿಕಿತ್ಸೆಗಾಗಿ ಕಾಮಾರಪುಕುರಕ್ಕೆ ಕರೆತಂದ. ಶ್ರೀರಾಮಕೃಷ್ಣರಿಗೆ ಈ ಸಮಾಚಾರವೆಲ್ಲ ತಲುಪಿದಾಗ ಅವರು ಖಿನ್ನರಾಗಿ ಉದ್ಗರಿಸಿದರು:

"ಹೃದೂ, ಇದು ಬಹಳ ಕೆಟ್ಟ ಲಕ್ಷಣ. ರಾಕ್ಷಸಗಣಕ್ಕೆ ಸೇರಿದ ಯಾವುದೋ ಹೆಣ್ಣಿನೊಡನೆ ಆತನ ವಿವಾಹವಾಗಿದೆ. ಅವನಿನ್ನು ಬದುಕಲಾರನೆಂದು ಕಾಣುತ್ತದೆ."

ಆದರೆ ಚೆನ್ನಾಗಿ ಚಿಕಿತ್ಸೆ, ಶುಶ್ರೂಷೆ ಮಾಡಿದ ನಂತರ ಅಕ್ಷಯ ಸ್ವಲ್ಪ ಮಟ್ಟಿಗೆ ಚೇತರಿಸಿಕೊಂಡ. ಅಲ್ಲದೆ ದಕ್ಷಿಣೇಶ್ವರಕ್ಕೆ ಮರಳಿ ಬಂದು ಪೂಜಾಕಾರ್ಯದಲ್ಲಿ ನಿರತನಾದ. ಈಗ ಅವನ ಮುಖ ಹಿಂದಿನಂತೆಯೇ ಕಾಂತಿಯುತವಾಯಿತು; ಆರೋಗ್ಯ ಸುಧಾರಿಸಿದಂತೆ ಕಂಡಿತು. ಆದರೆ ಅಷ್ಟರಲ್ಲೇ ಹಠಾತ್ತಾಗಿ ಒಂದು ದಿನ ಅವನಿಗೆ ಮತ್ತೆ ಜ್ವರ ಬಂದಿತು. ಡಾಕ್ಟರು ಬಂದು ಪರೀಕ್ಷೆ ಮಾಡಿದರು. "ಇದು ಸಾಧಾರಣ ಜ್ವರವಷ್ಟೆ. ಏನೂ ಚಿಂತೆಯಿಲ್ಲ. ಬೇಗನೆ ಬಿಟ್ಟುಹೋಗುತ್ತದೆ" ಎಂದರು.

ಮೂರ್ನಾಲ್ಕು ದಿನಗಳಾದರೂ ಜ್ವರ ಬಿಡಲೇ ಇಲ್ಲ. ಶ್ರೀರಾಮಕೃಷ್ಣರು ಇದನ್ನು ಗಮನಿಸುತ್ತಲೇ ಇದ್ದರು. ಹೃದಯನನ್ನು ಕರೆದು ಅಂತರ್ಮುಖರಾಗಿ ನುಡಿದರು:

"ನೋಡಿದೆಯಾ ಹೃದೂ, ಇದು ಎಂಥ ಕಾಯಿಲೆಯೆಂದೇ ವೈದ್ಯರಿಗಿನ್ನೂ ಪತ್ತೆ ಮಾಡಲು ಸಾಧ್ಯವಾಗಿಲ್ಲ. ಆದರೆ ಅವರು ಹೇಳಿದಂತೆ ಇದು ಸಾಮಾನ್ಯ ಕಾಯಿಲೆಯಲ್ಲ. ಬಹು ಕಠಿಣವಾದದ್ದೇ. ಅಕ್ಷಯನಿಗೆ ಸನ್ನಿಯುಂಟಾಗಿದೆ . . . ಹೂಂ, ಬೇಕಾದರೆ, ಬೇರೆ ಯಾರಾದರೂ ಒಳ್ಳೆಯ ವೈದ್ಯರನ್ನು ಕರೆಸು. ನಿನಗೆ ತೃಪ್ತಿಯಾಗುವಂತೆ ಚಿಕಿತ್ಸೆ ಮಾಡಿಸು . . . ಆದರೆ, ಹುಡುಗ ಮಾತ್ರ ಇನ್ನು ಜೀವಿಸಲಾರ."

ಹೃದಯ ದಿಙ್ಮೂಢನಾಗಿ ನಿಂತ. ಶ್ರೀರಾಮಕೃಷ್ಣರ ಬಾಯಿಂದ ಬಂದ ಮಾತು ಹೇಗಾದರೂ ನಡೆದೇ ನಡೆಯುವುದೆಂದು ಅವನು ಬಲ್ಲ. ಕಳವಳ ಪಡುತ್ತ ಕೇಳಿದ:

"ಛೇ, ಮಾವಯ್ಯ, ಇದೆಂಥ ಮಾತನ್ನಾಡಿಬಿಟ್ಟೆ ನೀನು ! ನಿನ್ನ ಬಾಯಿಂದ ಇಂಥ ಮಾತು ಬರಬಹುದೆ ?"

ತಮ್ಮ ಮಾತು ಸುಳ್ಳಾಗಲಾರದೆಂದು ಸ್ವತಃ ಅವರಿಗೂ ತಿಳಿದಿತ್ತು. ಆದ್ದರಿಂದ ಅವರು ವಿಷಾದದಿಂದ ಹೇಳಿದರು:

"ಅಪ್ಪಾ, ನಾನೇನು ನನ್ನ ಇಚ್ಛೆಯಿಂದ ಹಾಗೆ ಹೇಳಿದೆನೆ ? ತಾಯಿಯೇ ನನ್ನಿಂದ ಆ ಮಾತನ್ನು ಆಡಿಸಿದಳು. ನನಗೆ ಇಷ್ಟವಿಲ್ಲದಿದ್ದರೂ ನಾನು ಹಾಗೆ ಹೇಳಬೇಕಾಯಿತು. ಅಕ್ಷಯ ಸಾಯಲಿ ಎಂದು ನಾನು ಬಯಸುತ್ತೇನೆಯೆ ?"

ಕಣ್ಣಂಚಿನಲ್ಲಿ ಜಿನುಗಿದ ಹನಿಯನ್ನು ಒರಸಿಕೊಳ್ಳುತ್ತ ಹೃದಯ ಅಲ್ಲಿಂದ ನಿರ್ಗಮಿಸಿದ. 'ಏನಾದರಾಗಲಿ, ನಾನಂತೂ ನನ್ನ ಕೈಲಾದುದನ್ನೆಲ್ಲ ಮಾಡಿಬಿಡುತ್ತೇನೆ' ಎಂದು ಮನಸ್ಸು ಮಾಡಿದ. ಮಥುರನ ನೆರವಿನಿಂದ ಒಳ್ಳೆಯ ವೈದ್ಯನನ್ನು ಕರೆಯಿಸಿ ಔಷಧೋಪಚಾರ ಮಾಡಿಸಿದ. ತಾನೂ ಪಕ್ಕದಲ್ಲೇ ನಿಂತು ಶುಶ್ರೂಷೆ ಮಾಡಿದ. ಆದರೆ ರೋಗ ಮಾತ್ರ ವೃದ್ಧಿಯಾಗುತ್ತಲೇ ಹೋಯಿತು.

ಅಕ್ಷಯ ಹೀಗೆ ಒಂದು ತಿಂಗಳ ಕಾಲ ನರಳಿದ. ಈಗ ಅವನ ಅಂತಿಮ ಕಾಲ ಸನ್ನಿಹಿತವಾಯಿತೆಂದು ಶ್ರೀರಾಮಕೃಷ್ಣರು ಅರಿತರು. ಶಾಂತಭಾವದಿಂದ ಅವನ ಪಕ್ಕಕ್ಕೆ ಬಂದು ನಿಂತರು. ಅವನು ಕಣ್ತೆರೆದು ಅವರತ್ತ ನೋಡಿದ. ಶ್ರೀರಾಮಕೃಷ್ಣರೆಂದರು:

"ಅಕ್ಷಯ, 'ಗಂಗಾ ನಾರಾಯಣ ಓಂ ರಾಮ' ಎಂದು ಉಚ್ಚರಿಸು."

ಅಕ್ಷಯ ನಿಧಾನವಾಗಿ ಮೂರು ಬಾರಿ ಆ ಮಂತ್ರವನ್ನು ಉಚ್ಚರಿಸಿದ; ಮರುಕ್ಷಣವೇ ಆತನ ಪ್ರಾಣವಾಯು ಹಾರಿಹೋಯಿತು.

ಇದನ್ನು ಕಂಡು ಶ್ರೀರಾಮಕೃಷ್ಣರು ಭಾವಸಮಾಧಿಗೇರಿದರು. ಅವರ ಮುಖದಲ್ಲೊಂದು ಕಿರುನಗೆ ಮೂಡಿತು. ಇತ್ತ ಹೃದಯ, ಶೋಕವನ್ನು ತಾಳಲಾರದೆ ಗಟ್ಟಿಯಾಗಿ ಅಳಲಾರಂಭಿಸಿದ; ಶ್ರೀರಾಮಕೃಷ್ಣರು ನಗತೊಡಗಿದರು ! ಹೃದಯ ಬಿಕ್ಕಿ ಬಿಕ್ಕಿ ಅತ್ತರೆ ಅವರು ಬಿದ್ದುಬಿದ್ದು ನಕ್ಕರು ! ಉನ್ಮತ್ತರಂತೆ ನಕ್ಕರು ! ಇವನೆಷ್ಟು ಅತ್ತನೋ ಅವರಷ್ಟು ನಕ್ಕರು !

ಎದೆಯೊಂದಿಷ್ಟು ಹಗುರವಾದ ಮೇಲೆ ಹೃದಯ ಸುಮ್ಮನಾಗಿ ಕುಳಿತ. ಶ್ರೀರಾಮಕೃಷ್ಣರು ಅಂದೇನೋ ಹಾಗೆ ನಕ್ಕರು; ಆದರೆ ಮರುದಿನ ಅವರು ತಮ್ಮ ದಿವ್ಯಭಾವದಿಂದಿಳಿದು ಸಾಧಾರಣಪ್ರಜ್ಞೆಗೆ ಇಳಿದುಬಂದಂತೆಲ್ಲ ತಮ್ಮ ಅಂತರ್ಯದಲ್ಲಿ ಅಸಹನೀಯ ದುಃಖವನ್ನು ಅನುಭವಿಸಿದರು. ಬ್ರಹ್ಮಜ್ಞಾನಿಗೆ ದುಃಖವೆ ? ಸರ್ವಸಂಗ ಪರಿತ್ಯಾಗ ಮಾಡಿದ ಸಂನ್ಯಾಸಿಗೆ ಸಂಕಟವೆ ? ಈ ಘಟನೆಯನ್ನು ನೆನಪಿಸಿಕೊಂಡು ಮುಂದೆ ಶ್ರೀರಾಮಕೃಷ್ಣರು ಆಗಾಗ ಹೇಳುತ್ತಿದ್ದರು:

"...ಅಕ್ಷಯ ಸತ್ತುಹೋದ. ಆಗ ನನಗೇನೂ ಅನ್ನಿಸಲಿಲ್ಲ. ಮನುಷ್ಯ ಹೇಗೆ ಸಾಯುತ್ತಾನೆ, ನೋಡೋಣ, ಎಂದು ಬಳಿಯಲ್ಲೇ ನಿಂತು ಗಮನಿಸುತ್ತಿದ್ದೆ. ಕೋಶದಿಂದ ಖಡ್ಗವನ್ನು ಸೆಳೆದಂತಾಯಿತು. ಖಡ್ಗಕ್ಕೇನೂ ಆಗಲಿಲ್ಲ; ಅದು ಹೇಗಿತ್ತೋ ಹಾಗೆಯೇ ಉಳಿಯಿತು. ಆದರೆ ಕೋಶ ಬಿದ್ದುಹೋಯಿತು ! ಅದನ್ನು ಕಂಡು ಬಹಳ ಆನಂದವಾಯಿತು. ಚೆನ್ನಾಗಿ ನಕ್ಕು ಹಾಡಿ ಕುಣಿದಾಡಿದೆ !

"ಆತನ ಶವವನ್ನು ದಹನ ಮಾಡಿ ಬಂದರು. ಮರುದಿನ, ಅಗೋ ಅಲ್ಲಿ (ದೇವಾಲಯದ ಮುಂಭಾಗದಲ್ಲಿ) ನಿಂತಿದ್ದೆ. ಆಗ ನನಗೇನಾಯಿತು ಗೊತ್ತೆ? ಒದ್ದೆ

ಬಟ್ಟೆಯನ್ನು ಹಿಂಡುವ ರೀತಿಯಲ್ಲಿ ಯಾರೋ ನನ್ನ ಹೃದಯವನ್ನೇ ಹಿಂಡಿದಂತಾಯಿತು! ಅಕ್ಷಯನಿಗಾಗಿ ನಾನು ಅಷ್ಟು ಸಂಕಟಪಟ್ಟೆ, ಅತ್ತು ಗೋಳಾಡಿದೆ. ಬಳಿಕ ನನ್ನ ಅವಸ್ಥೆಯನ್ನು ಕಂಡು ನನಗೇ ನಾಚಿಕೆಯಾಯಿತು. 'ಅಮ್ಮಾ, ನನಗೆ ಮೈಮೇಲಿನ ಬಟ್ಟೆಯ ಪರಿವೆಯೂ ಇರುವುದಿಲ್ಲ. ಅಂಥದರಲ್ಲಿ, ಅಣ್ಣನ ಮಗನ ಮೇಲೆ ನನಗೇಕಿಷ್ಟು ವ್ಯಾಮೋಹ? ಅವನು ಸತ್ತದ್ದರಿಂದ ನನಗೇ ಇಷ್ಟು ದುಃಖವಾದರೆ ಇನ್ನು ಇತರರಿಗೆ, ಗೃಹಸ್ಥರಿಗೆ, ತಮ್ಮವರು ಸತ್ತಾಗ ಇನ್ನೆಷ್ಟು ದುಃಖವಾಗಲಿಕ್ಕಿಲ್ಲ! ಅದನ್ನು ನನಗೆ ತೋರಿಸಿಕೊಡಲೆಂದೇ ಈ ದುಃಖವನ್ನು ತಂದೊಡ್ಡಿದೆ, ಅಲ್ಲವೇನಮ್ಮ?' ಎಂದು ಕೇಳಿದೆ."

ಅಂತೂ ಬಂಧುಬಳಗವನ್ನೆಲ್ಲ ದುಃಖಸಾಗರದಲ್ಲಿ ಮುಳುಗಿಸಿ, ಅಕ್ಷಯ ಹೊರಟೇಬಿಟ್ಟ. ಇದನ್ನು ನೋಡುವ ಪಾಡು ತಮಗೆ ಬರದಿರಲೆಂದು ಅವನ ಅಪ್ಪ-ಅಮ್ಮಂದಿರು ಮೊದಲೇ ನಿರ್ಗಮಿಸಿಬಿಟ್ಟಿದ್ದರಲ್ಲ! ಆದರೆ ಅಜ್ಜಿ ಚಂದ್ರಮಣಿಗೆ ಇದೊಂದು ದೊಡ್ಡ ಆಘಾತ. ಪಾಪ, ಇದನ್ನಾಕೆ ಹೇಗೆ ಸಹಿಸಿಕೊಂಡಳೋ ಏನೋ. ಶ್ರೀರಾಮಕೃಷ್ಣರ ಮನಸ್ಸಿನಲ್ಲಂತೂ ಈ ದುಃಖ ಆಳವಾಗಿ ನಿಂತುಬಿಟ್ಟಿತು. ಅದು ಉಪಶಮನವಾಗುವುದಕ್ಕೆ ಬಹಳ ದಿನಗಳೇ ಹಿಡಿದುವು. ಅಕ್ಷಯ ಕೊನೆಯುಸಿರೆಳೆದದ್ದು ಮಥುರನ ಮನೆಯ ದಿವಾನಖಾನೆಯಲ್ಲಿ. ಆದ್ದರಿಂದ ಅವರಿಗೆ ಮುಂದೆಂದೂ ಆ ಮನೆಗೆ ಹೋಗಿ ಇರಲು ಸಾಧ್ಯವಾಗಲಿಲ್ಲ. ಚಂದ್ರಮಣಿಯೂ ಅಲ್ಲಿಯವರೆಗೆ ಅದೇ ಕಟ್ಟಡದಲ್ಲಿ ವಾಸವಾಗಿದ್ದಳು. ಇನ್ನು ಅಲ್ಲಿರಲಾರದೆ ಅವಳು ಶ್ರೀರಾಮಕೃಷ್ಣರ ಕೋಣೆಗೆ ಸಮೀಪದಲ್ಲೇ ಇದ್ದ ನಹಬತ್‌ಖಾನೆಗೆ ಬಂದು ಇಳಿದುಕೊಂಡಳು.

ಅಕ್ಷಯ ತೀರಿಹೋದಮೇಲೆ ರಾಧಾಗೋವಿಂದಸ್ವಾಮಿಯ ಪೂಜಾಕಾರ್ಯ ರಾಮೇಶ್ವರನ ಪಾಲಿಗೆ ಬಂದಿತು. ಆದರೆ ಸಂಸಾರದ ಸಮಸ್ತ ಕಾರ್ಯಭಾರವೂ ಅವನ ತಲೆಯ ಮೇಲಿದೆ. ಅತ್ತ ಊರಿನಲ್ಲಿ ಜಮೀನಿನ ಕೆಲಸವನ್ನೂ, ಹೆಂಡತಿ-ಮಕ್ಕಳ ಯೋಗಕ್ಷೇಮವನ್ನೂ ನೋಡಿಕೊಳ್ಳಬೇಕಾಗಿದೆ. ಆದ್ದರಿಂದ ಅವನಿಗೆ ದಕ್ಷಿಣೇಶ್ವರದಲ್ಲೇ ಇದ್ದುಬಿಡಲು ಸಾಧ್ಯವಿರಲಿಲ್ಲ. ಆಗಾಗ ಊರಿಗೆ ಹೋಗಿ ಕೆಲದಿನ ಇದ್ದು ಬರುತ್ತಿದ್ದ. ತಾನಿಲ್ಲದಾಗ ಪೂಜಾದಿಗಳನ್ನು ಮಾಡಲು ನಂಬಿಗಸ್ಥರನ್ನು ಬಿಟ್ಟುಹೋಗುತ್ತಿದ್ದ.

ಬಹಳ ದಿನಗಳವರೆಗೂ ಅಕ್ಷಯನ ನೆನಪು ಶ್ರೀರಾಮಕೃಷ್ಣರನ್ನು ಕೊರೆಯುತ್ತಲೇ ಇತ್ತು. ಅವರನ್ನು ಸಮಾಧಾನಗೊಳಿಸಲು ಮಥುರ ಬಹಳವಾಗಿ ಶ್ರಮಿಸಿದ. ಒಂದು ದೃಷ್ಟಿಯಿಂದ ಅವನು ಅವರನ್ನು ಸಾಕ್ಷಾತ್ ದೇವಿಯೆಂದೆಣಿಸಿ ಅವರಲ್ಲಿ ಸಂಪೂರ್ಣವಾಗಿ ಶರಣಾಗಿದ್ದ; ಆದರೆ ಮತ್ತೊಂದು ದೃಷ್ಟಿಯಿಂದ ಅವರೊಬ್ಬ ಮುಗ್ಧ ಬಾಲಕನೆಂಬಂತೆ ಕಾಣುತ್ತ ಅವರ ರಕ್ಷಣೆಯ ಭಾರವನ್ನು ತಾನೇ ವಹಿಸಿಕೊಂಡಿದ್ದ. ಈಗ ಕೆಲಕಾಲ ಸ್ಥಳಬದಲಾವಣೆಯಾದರೆ ಅವರಿಗೆ ಸ್ವಲ್ಪ ಮೇಲಾಗಬಹುದೆಂದು ಊಹಿಸಿದ. ಈ ವೇಳೆಗೆ ಅವನು ಕಾರ್ಯನಿಮಿತ್ತವಾಗಿ ತನ್ನ ಸ್ವಗ್ರಾಮಕ್ಕೆ ಹೋಗಬೇಕಾಯಿತು. ಸರಿ, ಶ್ರೀರಾಮಕೃಷ್ಣರನ್ನೂ ಅಲ್ಲಿಗೆ ಕರೆದುಕೊಂಡು ಹೊರಟ.

ಮಥುರನ ಪಿತ್ರಾರ್ಜಿತ ಮನೆಯಿದ್ದುದು ಖುಲ್ನಾ ಜಿಲ್ಲೆಯ ಸೊನಾಬೆಡೆ ಎಂಬ ಗ್ರಾಮದಲ್ಲಿ. ಅದರ ನೆರೆಹೊರೆಯ ಗ್ರಾಮಗಳೆಲ್ಲ ಆಗ ಮಥುರನ ಆಸ್ತಿಗೆ ಸೇರಿದ್ದುವು. ಶ್ರೀರಾಮಕೃಷ್ಣರು ಮಥುರನೊಂದಿಗೆ ಆತನ ಸ್ವಗ್ರಾಮಕ್ಕೆ ಹೊರಟರು. ದೋಣಿಯಲ್ಲಿ ಪ್ರಯಾಣ. ದೋಣಿ ಕಾಲುವೆಯೊಂದರ ಮೂಲಕ ಸಾಗುತ್ತಿತ್ತು. ಆಗ ಶ್ರೀರಾಮಕೃಷ್ಣರು

ದಾರಿಯಲ್ಲಿ ಅತ್ಯಂತ ದೀನಾವಸ್ಥೆಯಲ್ಲಿದ್ದ ಗ್ರಾಮವೊಂದನ್ನು ಕಂಡರು. ಅಲ್ಲಿನ ಜನರ ದಾರಿದ್ರ್ಯವನ್ನು ಕಂಡು ಅವರ ಹೃದಯ ಮಮ್ಮಲ ಮರುಗಿತು. ಉಳಿದ ಚಿಂತೆಗಳೆಲ್ಲ ಅವರ ಮನದಿಂದ ಮಾಯವಾದುವು. ಕಣ್ಣಿನಿಂದ ನೀರು ಅಪ್ರಯತ್ನವಾಗಿ ಹರಿಯಿತು. "ಮಥುರ, ಇವರಿಗಾಗಿ ನೀನು ಏನಾದರೂ ಮಾಡಿದ ಹೊರತು ನಾನಿಲ್ಲಿಂದ ಕದಲಲಾರೆ" ಎಂದು ಹಟ ಹಿಡಿದರು. ಆಗ ಮಥುರ, ಹಿಂದೆ ವೈದ್ಯನಾಥದಲ್ಲಿ ಮಾಡಿದ್ದಂತೆಯೇ ಇಲ್ಲಿಯೂ ಹಳ್ಳಿಯ ಜನರಿಗೆಲ್ಲ ತಲೆಗೆ ಎಣ್ಣೆ, ಹೊಟ್ಟೆತುಂಬ ಊಟ ಮತ್ತು ಒಂದೊಂದು ಹೊಸ ಬಟ್ಟೆಯನ್ನು ನೀಡಿದ. ಬಡ ಜನರ ಮುಖದಲ್ಲಿ ತೃಪ್ತಿಯ ನಗೆ ಬೆಳಗಿತು. "ದೇವರು ನಿಮ್ಮನ್ನು ನೂರು ವರ್ಷ ಚೆನ್ನಾಗಿಟ್ಟಿರಲಪ್ಪ!" ಎಂದು ಮನದುಂಬಿ ಹರಸಿದರು. ಶ್ರೀರಾಮಕೃಷ್ಣರು ಸಂತೃಪ್ತರಾಗಿ ಮುನ್ನಡೆದರು.

ಸೊನಾಬೆಡೆಯಿಂದ ಅನತಿದೂರದಲ್ಲೇ ಮಥುರನ ಕುಲಗುರುಗಳ ಊರು; ತಾಲಾಮಾಗ್ರೊ ಎಂದು ಹೆಸರು. ಈ ಗುರುವಂಶದವರಿಗೂ ಸಾಕಷ್ಟು ಆಸ್ತಿಪಾಸ್ತಿಯಿತ್ತು. ಇದನ್ನು ಹಂಚಿಕೊಳ್ಳುವ ವಿಚಾರದಲ್ಲಿ ಈಗ ಅವರಲ್ಲೇ ವಿವಾದವುಂಟಾಗಿತ್ತು. ಅದನ್ನು ಬಗೆಹರಿಸಿಕೊಡಬೇಕೆಂದು ಅವರು ಮಥುರನನ್ನು ಕರೆಸಿದ್ದರು. ಮಥುರ ತಾನು ಒಂದು ಆನೆಯನ್ನೇರಿ ಹೊರಟ; ಶ್ರೀರಾಮಕೃಷ್ಣರಿಗೂ ಹೃದಯನಿಗೂ ಪಲ್ಲಕ್ಕಿ. ಪ್ರಯಾಣದ ದಾರಿ ತೀರಾ ಹಳ್ಳದಿಣ್ಣೆಗಳಿಂದ ಕೂಡಿದ್ದರಿಂದ, ಶ್ರೀರಾಮಕೃಷ್ಣರಿಗೆ ಆಯಾಸವಾಗಬಾರದೆಂದು ಈ ಏರ್ಪಾಡು. ಆದರೆ ಶ್ರೀರಾಮಕೃಷ್ಣರಿಗೂ ಆನೆಸವಾರಿ ಮಾಡುವ ಆಸೆ! ಆದ್ದರಿಂದ ಹಳ್ಳಿಯನ್ನು ತಲುಪಿದ ಮೇಲೆ ಮಥುರ ಅವರಿಗೆ ಸ್ವಲ್ಪಹೊತ್ತು ಆನೆಸವಾರಿ ಮಾಡಿಸಿ, ಅವರ ಕುತೂಹಲವನ್ನು ತಣಿಸಿದ.

ಮಥುರನ ಕುಲಗುರುಗಳ ಮಕ್ಕಳು ಶ್ರೀರಾಮಕೃಷ್ಣರನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸಿದರು. ಅಲ್ಲಿ ಅವರು ಕೆಲದಿನಗಳನ್ನು ಆನಂದದಿಂದ ಕಳೆದು ದಕ್ಷಿಣೇಶ್ವರಕ್ಕೆ ಮರಳಿದರು.

ಹರಿಸಭೆ ಎಂಬುದು ಅಂದಿನ ಬಂಗಾಳದಲ್ಲಿ ವೈಷ್ಣವಭಕ್ತರ ಒಂದು ಪ್ರಸಿದ್ಧ ಸಂಘಟನೆ. ಈ ಭಕ್ತರು ಹಲವೆಡೆಗಳಲ್ಲಿ ಸಭೆ ಸೇರಿ ಭಜನೆ-ಕೀರ್ತನೆ-ಹರಿಕಥೆಗಳನ್ನು ಮಾಡುವುದಿತ್ತು. ಕಲ್ಕತ್ತದ ಕಲುಟೋಲೆ ಎಂಬ ಮೊಹಲ್ಲೆಯಲ್ಲಿ ಇವರು ಆಗಾಗ ಸೇರುತ್ತಿದ್ದರು. ಇವರಲ್ಲನೇಕರು ಶ್ರೀರಾಮಕೃಷ್ಣರು ದೊಡ್ಡ ಭಗವದ್ಭಕ್ತರು ಎಂದು ಕೇಳಿ ತಿಳಿದಿದ್ದರು. ಆದ್ದರಿಂದ ಅವರ ವಿಷಯದಲ್ಲಿ ಬಹಳ ಭಕ್ತಿ-ಶ್ರದ್ಧೆಗಳನ್ನಿಟ್ಟಿದ್ದರು.

ಒಮ್ಮೆ "ನಮ್ಮ ಸಭೆಗೊಂದು ದಿನ ಬಂದು ಶ್ರೀಮದ್ಭಾಗವತವಾಚನದ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಬೇಕು" ಎಂದು ಶ್ರೀರಾಮಕೃಷ್ಣರಿಗೆ ಇವರಿಂದ ಕರೆ ಬಂದಿತು. ಶ್ರೀರಾಮಕೃಷ್ಣರು ಹೃದಯುನನ್ನು ಜೊತೆ ಮಾಡಿಕೊಂಡು ಸಂತೋಷದಿಂದ ಹೊರಟರು. ಅವರು ಅಲ್ಲಿಗೆ ಬಂದಾಗ ಕಾರ್ಯಕ್ರಮ ಆರಂಭವಾಗಿತ್ತು. ಹರಿಕಥಾಕಾರ ಒಳ್ಳೇ ರಸವತ್ತಾಗಿ ಶ್ರೀಕೃಷ್ಣಲೀಲೆಯನ್ನು ಬಣ್ಣಿಸುತ್ತಿದ್ದಾನೆ; ಶ್ರೋತೃಗಳೆಲ್ಲ ತನ್ಮಯಚಿತ್ತರಾಗಿ ಅದನ್ನು ಕೇಳುತ್ತಿದ್ದಾರೆ. ಸರ್ವರೂ ಹರಿಕಥಾಮೃತ ಪಾನಮಾಡುತ್ತ ಮೈಮರೆತಿದ್ದಾರೆ. ಆ ಶಬ್ದಗಳು ಕಿವಿಗೆ ಬೀಳುತ್ತಲೇ, ಆ ಭಕ್ತವೃಂದವನ್ನು ನೋಡುತ್ತಲೇ, ಶ್ರೀರಾಮಕೃಷ್ಣರು ಪುಳಕಗೊಂಡು ಮೆಲ್ಲನೆ ಒಳಗಡಿಯಿರಿಸಿದರು. ಅವರ ಆಗಮನದಿಂದ ಶ್ರೋತೃವೃಂದದ ಉಲ್ಲಾಸವೂ ಭಕ್ತಿಭಾವವೂ ಮತ್ತಷ್ಟು ಉಕ್ಕಿ ಹರಿಯಿತು. ಶ್ರೀರಾಮಕೃಷ್ಣರು ವಿನಮ್ರರಾಗಿ ಕಥಾಕಾರನಿಗೆ ನಮಸ್ಕರಿಸಿ ಭಕ್ತರ ನಡುವೆ ಕುಳಿತರು.

ಈ ಹರಿಸಭೆಯ ಸದಸ್ಯರು ಶ್ರೀಚೈತನ್ಯದೇವನಲ್ಲಿ ಅಪಾರ ಭಕ್ತಿಶ್ರದ್ಧೆಗಳನ್ನಿಟ್ಟವರು. ಆತನ ಜೀವಂತ ಸಾನ್ನಿಧ್ಯವನ್ನು ಅನುಭವಿಸುವಂತಾಗಬೇಕೆಂಬ ಉದ್ದೇಶದಿಂದ ಅವರು ಆ ಹಜಾರದಲ್ಲಿ ಒಂದು ಆಸನವನ್ನು ಇರಿಸಿದ್ದರು. ಅದು ಶ್ರೀಚೈತನ್ಯನಿಗೆ ಮೀಸಲು. ಅದನ್ನು 'ಚೈತನ್ಯದೇವನ ಆಸನ' ಅಥವಾ 'ಚೈತನ್ಯಾಸನ' ಎಂದೇ ಕರೆಯುತ್ತಿದ್ದರು. ಪ್ರತಿದಿನವೂ ಅದನ್ನು ಹೂಮಾಲೆಯಿಂದ ಅಲಂಕರಿಸಿಡುತ್ತಿದ್ದರು. ಅದರ ಮೇಲೆ ಯಾರೂ ಕುಳಿತುಕೊಳ್ಳುತ್ತಿರಲಿಲ್ಲ. ಪೂಜೆ ಪಾರಾಯಣಗಳೆಲ್ಲವೂ ಅದರ ಸಮ್ಮುಖದಲ್ಲಿಯೇ ನೆರವೇರುತ್ತಿದ್ದುವು. ಎಲ್ಲರೂ ಅದಕ್ಕೆ ಸಾಷ್ಟಾಂಗ ಪ್ರಣಾಮ ಸಲ್ಲಿಸುತ್ತಿದ್ದರು. ಭಾಗವತವಾಚಕರು ಶ್ರೀಚೈತನ್ಯನಿಗೆ ಕೇಳಿಸುವ ರೀತಿಯಲ್ಲಿ ಭಕ್ತಿಪೂರ್ವಕವಾಗಿ ವಾಚನ ಮಾಡುತ್ತಿದ್ದರು.

ಅಮೃತೋಪಮವಾದ ಶ್ರೀಕೃಷ್ಣಲೀಲೆಯನ್ನು ಕೇಳುತ್ತಕೇಳುತ್ತ ಶ್ರೀರಾಮಕೃಷ್ಣರು ಭಾವಪರವಶರಾದರು, ರೋಮಾಂಚಿತರಾಗಿ ಎದ್ದುನಿಂತರು. ಬಳಿಕ ಅರ್ಧಭಾವಾವಸ್ಥೆಯಲ್ಲಿ ಇದ್ದಕ್ಕಿದ್ದಂತೆ ಧಾವಿಸಿ ಬಂದು, 'ಚೈತನ್ಯಾಸನ'ದ ಮೇಲೆ ನಿಂತು, ಅತಿ ಗಾಢ ಸಮಾಧಿಯಲ್ಲಿ ಲೀನರಾದರು! ಚೈತನ್ಯದೇವನ ಚಿತ್ರದಲ್ಲಿ ಕಾಣುವಂತೆ ಅವರ ಕೈಗಳೆರಡೂ ಮೇಲಕ್ಕೆತ್ತಿವೆ; ದೃಷ್ಟಿ ನಾಸಾಗ್ರದಲ್ಲಿ ನೆಟ್ಟಿದೆ. ಅವರ ಜ್ಯೋತಿರ್ಮಯವಾದ ಮುಖದಲ್ಲಿ ಅಭೂತಪೂರ್ವ ಪ್ರೇಮವನ್ನು ಸೂಸುವ ಮಂದಹಾಸವೊಂದು ಮಿನುಗುತ್ತಿದೆ! ಆದರೆ ಶರೀರ ನಿಃಸ್ಪಂದಿತವಾಗಿದೆ; ಅಲ್ಲಿ ಪ್ರಾಣಸಂಚಾರದ ಕುರುಹೇ ಇಲ್ಲ! ಚೈತನ್ಯಭಾವದಲ್ಲಿ ಮುಳುಗಿಹೋದ ಶ್ರೀರಾಮಕೃಷ್ಣರು ತಾವೇ ಆತನಾಗಿದ್ದಾರೆ!

'ಇದೇನು, ಸ್ವಯಂ ಚೈತನ್ಯದೇವನೇ ಈ ರೂಪ ಧರಿಸಿ ನಿಂತನೇ!' ಎಂದು ಭಕ್ತವೃಂದ ಬೆರಗಾಗಿ ದಿಟ್ಟಿಸಿತು. ಶ್ರೀರಾಮಕೃಷ್ಣರತ್ತ ತಿರುಗಿನೋಡಿದ ಭಾಗವತವಾಚಕರು ವಾಚನ ಮಾಡುವುದನ್ನು ಮರೆತು ಕಣ್ಣು ಬಾಯಿಗಳನ್ನು ತೆರೆದುಕೊಂಡು ಕುಳಿತುಬಿಟ್ಟರು. ಶ್ರೀರಾಮಕೃಷ್ಣರ ಭಾವವನ್ನು ಅರಿಯಲಾಗದವರು ಕೂಡ ಅವ್ಯಕ್ತವಾದ ಭಯವಿಸ್ಮಯಗಳಿಂದ ಮೂಕರಾಗಿ ಕುಳಿತರು. ಯಾರಿಗೂ ಏನು ಹೇಳಲೂ ತೋಚಲಿಲ್ಲ. ಅಷ್ಟೊಂದು ಜನ ನೆರೆದಿದ್ದರೂ ಉಸಿರಿನ ಸದ್ದೂ ಕೇಳಿಬರಲಿಲ್ಲ. ಎಲ್ಲರೂ ಅವರ ಆ ಪ್ರಬಲ ಭಾವಪ್ರವಾಹದಲ್ಲಿ ಬಿದ್ದು ಯಾವುದೋ ಅಲೌಕಿಕ ರಾಜ್ಯದತ್ತ ತೇಲಿಹೋಗುತ್ತಿರುವಂತೆ ತೋರುತ್ತಿತ್ತು.

ಮುಹೂರ್ತಕಾಲ ಇಂತಹದೊಂದು ಅನಿರ್ವಚನೀಯ ಆನಂದವನ್ನನುಭವಿಸಿ ಅಲ್ಲಿದ್ದವರೆಲ್ಲ ಮೋಡಿಗೊಳಗಾದಂತೆ ಕುಳಿತುಬಿಟ್ಟರು. ತರುವಾಯ ಆ ಅವ್ಯಕ್ತಭಾವದಿಂದ ಪ್ರೇರಿತರಾಗಿ ಎಲ್ಲರೂ ಒಕ್ಕೊರಲಿನಿಂದ ಹರಿನಾಮ ಸಂಕೀರ್ತನೆ ಮಾಡತೊಡಗಿದರು. 'ಹರಿಬೋಲ್, ಹರಿಬೋಲ್' ಎಂದು ತಾರಸ್ವರದಲ್ಲಿ ಹಾಡಿದರು.

ಭಗವನ್ನಾಮ ಸಂಕೀರ್ತನೆಯನ್ನು ಕೇಳುತ್ತ ಶ್ರೀರಾಮಕೃಷ್ಣರ ಮನಸ್ಸು ಭಾವಸಮಾಧಿಗೇರುತ್ತಿದ್ದಂತೆ, ಅದೇ ಭಗವನ್ನಾಮೋಚ್ಚಾರ ಶ್ರವಣದಿಂದಲೇ ಆ ಮನಸ್ಸು ಬಹಿರ್ಮುಖವಾಗುತ್ತಿದ್ದುದು ಕ್ರಮ. ಅಂತೆಯೇ ಈಗಲೂ ಹರಿನಾಮವನ್ನು ಕೇಳುತ್ತ ಅವರಿಗೆ ಮೆಲ್ಲನೆ ಬಾಹ್ಯಪ್ರಜ್ಞೆ ಅಲ್ಪಸ್ವಲ್ಪವಾಗಿ ಮರಳಿತು. ಭಾವ-ಪ್ರೇಮವಶರಾಗಿ ತಾವೂ ಸಂಕೀರ್ತನೆಯೊಂದಿಗೆ ದನಿಗೂಡಿಸಿದರು; ಚಪ್ಪಾಳೆ ತಟ್ಟುತ್ತ ಮಧುರ ನೃತ್ಯ ಮಾಡಲಾರಂಭಿಸಿದರು. ಮಧ್ಯೆಮಧ್ಯೆ ಭಾವಾತಿಶಯದಿಂದ ಸಮಾಧಿಮಗ್ನರಾಗಿ ಸ್ಥಿರವಾಗಿ ನಿಲ್ಲತೊಡಗಿದರು. ಇದನ್ನು ಕಂಡು ಭಕ್ತ ಪ್ರೇಕ್ಷಕರ ಉತ್ಸಾಹ ನೂರ್ಮಡಿಗೊಂಡಿತು; ಎಲ್ಲರೂ ಮೈಮರೆತು ಕೀರ್ತನಾನಂದದಲ್ಲಿ ಮಗ್ನರಾದರು!

ಈ ರೀತಿಯಾಗಿ ಬಹಳ ಹೊತ್ತು ಅನಿರ್ಬಂಧಿತವಾದ ತಾಂಡವದಲ್ಲಿ ತೊಡಗಿ ಶ್ರೀಹರಿಯ ಮತ್ತು ಶ್ರೀಚೈತನ್ಯದೇವನ ಕೀರ್ತನೆಯನ್ನು ಮಾಡಿದ ಬಳಿಕ ಜಯಘೋಷದೊಂದಿಗೆ ಅಂದಿನ ಆ ದಿವ್ಯಾಭಿನಯವನ್ನು ಮುಗಿಸಿದರು. ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹಿಂದಿರುಗಿದರು.

ಶ್ರೀರಾಮಕೃಷ್ಣರು ಅತ್ತ ಹೊರಟರೋ ಇಲ್ಲವೋ, ಇತ್ತ ಹರಿಸಭೆಯ ಸದಸ್ಯರನ್ನು ಯಾವ ಶಕ್ತಿಯು ಮೇಲೆತ್ತಿ ಆಕಾಶದಲ್ಲಿ ತೇಲಾಡಿಸುತ್ತಿತ್ತೋ ಅದು ಕೂಡ ಹೊರಟು ಹೋದಂತಾಯಿತು. ಭಾವಲೋಕದಲ್ಲಿ ಶ್ರೀಕೃಷ್ಣನೊಂದಿಗೆ, ಚೈತನ್ಯನೊಂದಿಗೆ ವಿಹರಿಸುತ್ತಿದ್ದ ಭಕ್ತರು ಇದ್ದಕ್ಕಿದ್ದಂತೆ ಮರ್ತ್ಯಲೋಕಕ್ಕೆ ಮರಳಿ ಇಳಿದರು. ಮತ್ತೆ ಅವರೆಲ್ಲ ತಂತಮ್ಮ ಹಿಂದಿನ ಪ್ರಕೃತಿಯ ಹಾಗೂ ಸಂಸ್ಕಾರಗಳ ವಶರಾಗಿ ವರ್ತಿಸತೊಡಗಿದರು. ಆದರೆ ಇದರಲ್ಲಿ ಅವರ ತಪ್ಪಾದರೂ ಏನಿದೆ? ಮನುಷ್ಯನ ಸ್ವಭಾವವೇ ಅಂಥದು. ಉಬ್ಬರವಾದ ಮೇಲೆ ಇಳಿತ! ಈಗ ಆ ಜನರಿಗೆ, ಶ್ರೀರಾಮಕೃಷ್ಣರು ಪರಮ ಪವಿತ್ರವಾದ ಚೈತನ್ಯಾಸನದ ಮೇಲೆ ನಿಂತುಕೊಂಡ ವಿಷಯ ನೆನಪಿಗೆ ಬಂದಿತು. ತಕ್ಷಣ ಅವರವರಲ್ಲೇ ಆ ಬಗ್ಗೆ ಚರ್ಚೆ ಪ್ರಾರಂಭವಾಯಿತು.

"ಅಲ್ಲಪ್ಪಾ, ಅವರು ಚೈತನ್ಯಾಸನದ ಮೇಲೆ ನಿಂತುಬಿಟ್ಟರಲ್ಲ! ಅದು ಹೇಗೆ ನೀವೆಲ್ಲ ಸುಮ್ಮನಿದ್ದಿರಿ?"

"ನೀವೂ ಇಲ್ಲಿಯೇ ಇದ್ದಿರಲ್ಲ, ನೀವೇನು ಮಾಡುತ್ತಿದ್ದಿರಿ?"

"ಏನು ಮಾಡುತ್ತಿದ್ದೆವೆ ? ನಮಗಂತೂ ಆಗ ಸರಿ-ತಪ್ಪು, ನ್ಯಾಯ-ಅನ್ಯಾಯ ಒಂದೂ ತೋಚಲೇ ಇಲ್ಲ. ಯಾವುದೋ ಬೇರೆಯೇ ಲೋಕಕ್ಕೆ ಹೋದಂತಿತ್ತು."

"ಸರಿ ಮತ್ತೆ, ಸುಮ್ಮನಿರಿ. ನಮಗೂ ಹಾಗೆಯೇ ಆಗಿತ್ತು!"

"ಅಲ್ಲಾ, ಏನಾಗಿಹೋಯಿತೆಂದು ನೀವು ಹೀಗೆಲ್ಲ ಮಾತನಾಡುತ್ತಿದ್ದೀರಿ ? ಪರಮಹಂಸರು ಚೈತನ್ಯಾಸನದ ಮೇಲೆ ನಿಂತದ್ದು ತಪ್ಪೆ ?"

"ಮತ್ತಿನ್ನೇನು ? ನಾವು ಸುಮ್ಮನಿದ್ದೆವು ಅಂದ ಮಾತ್ರಕ್ಕೆ ಅವರು ಅಂಥ ಅನಾಚಾರ ಮಾಡಬಹುದೆ ?"

"ನಿಮಗೆ ಬುದ್ಧಿ ನೆಟ್ಟಗಿದೆಯೇನ್ರಿ ? ನೀವೆಲ್ಲ ಪರಮಹಂಸರೆಂದರೆ ಯಾರೆಂದು ಭಾವಿಸಿದಿರಿ ? ಅವರು ಸಾಕ್ಷಾತ್ ಶ್ರೀಚೈತನ್ಯರೇ ! ನಮಗಂತೂ ಇವತ್ತು ಹಾಗೆಯೇ ಕಾಣಿಸಿತು ! ಆಹಾ, ಎಂಥಾ ದಿವ್ಯಾನುಭವವನ್ನು ಮಾಡಿಸಿಕೊಟ್ಟುಹೋದರು !"

"ಪರಮಹಂಸರೋ ಎಂಥಾ ಹಂಸರೋ ! ಚೈತನ್ಯಾಸನ ಎಂದಮೇಲೆ ಯಾರೂ ಅದನ್ನು ಮುಟ್ಟುವಂತಿಲ್ಲ, ಅಷ್ಟೆ."

ಬರಬರುತ್ತ ವಾದವಿವಾದ ಜೋರಾಯಿತು. ಒಂದು ಗುಂಪು ಶ್ರೀರಾಮಕೃಷ್ಣರ ವರ್ತನೆಯನ್ನು ಬಲವಾಗಿ ಖಂಡಿಸಿತು; ಇನ್ನೊಂದು ಗುಂಪು ಅಷ್ಟೇ ಜೋರಾಗಿ ಸಮರ್ಥಿಸಿತು. ಎರಡು ಗುಂಪುಗಳ ನಡುವೆ ಬಹಳಷ್ಟು ಚರ್ಚೆ-ವಾಗ್ವಾದ, ಖಂಡನ-ಮಂಡನ ನಡೆದರೂ ಯಾವ ತೀರ್ಮಾನಕ್ಕೂ ಬರಲಾಗಲಿಲ್ಲ. ವಿವಾದ ಹಾಗೆಯೇ ಉಳಿದುಕೊಂಡಿತು.

ಈ ವಿಷಯ ಒಬ್ಬರಿಂದೊಬ್ಬರಿಗೆ ತಲುಪಿ ವೈಷ್ಣವಸಮಾಜದಲ್ಲಿ ಎಲ್ಲೆಡೆಯೂ ಪ್ರಚಾರವಾಯಿತು. ಕ್ರಮೇಣ ಇದು, ವೈಷ್ಣವಜನರಿಗೆ ಪರಮಪೂಜನೀಯರೂ ಗುರುಸ್ವರೂಪರೂ ಆದ ಭಗವಾನ್ ದಾಸ್ ಬಾಬಾಜಿಯ ಕಿವಿಯನ್ನೂ ಮುಟ್ಟಿತು.

ಭಗವಾನ್ ದಾಸ್ ಬಾಬಾಜಿ—ಇವರು ಆ ಕಾಲದ ಪ್ರಸಿದ್ಧ ವೈಷ್ಣವ ಸಂತ, ತಪಸ್ವಿ; ವಯೋವೃದ್ಧ, ಜ್ಞಾನವೃದ್ಧ. ಇವರಿದ್ದದ್ದು ಕಲ್ಕತ್ತದಿಂದ ಎಂಬತ್ತು ಮೈಲಿ ವಾಯುವ್ಯಕ್ಕಿರುವ ಬರ್ದ್ವಾನ್ ಜಿಲ್ಲೆಯ ಕಾಲ್ನಾ ಎಂಬಲ್ಲಿ. ಇದು ಶ್ರೀಚೈತನ್ಯದೇವನ ಪಾದಸ್ಪರ್ಶದಿಂದ ಪುನೀತವಾದ ಒಂದು ಕ್ಷೇತ್ರ; ಗಂಗಾತೀರದಲ್ಲಿದೆ. ವರ್ಧಮಾನ ರಾಜವಂಶದವರು ಕಟ್ಟಿಸಿದ ನೂರ ಎಂಟು ಶಿವದೇವಾಲಯಗಳಿಗೆ ಈ ಕಾಲ್ನಾ ಪ್ರಸಿದ್ಧ.

ಬಾಬಾಜಿಯವರ ವಯಸ್ಸು ಆಗ ಎಂಬತ್ತಕ್ಕೂ ಮೀರಿತ್ತು. ಅವರ ತ್ಯಾಗ, ವೈರಾಗ್ಯ, ಭಗವದ್ಭಕ್ತಿ—ಇವು ವಂಗದೇಶದಲ್ಲಿ ಮನೆಮಾತಾಗಿದ್ದುವು. ನೋಡಿದವರೆದೆಯಲ್ಲಿ ಭಕ್ತಿ-ಗೌರವವನ್ನು ಪ್ರಚೋದಿಸುವ ಪ್ರಸನ್ನ-ಗಂಭೀರ ಮುಖಮುದ್ರೆ; ಶಿಖೆಯನ್ನು ಬಿಟ್ಟು ಮುಂಡನ ಮಾಡಿದ ತಲೆ, ಗೌರವರ್ಣ. ಒಂದೇ ಆಸನದಲ್ಲಿ ಕುಳಿತು ಸುದೀರ್ಘ ಕಾಲ ಜಪ ತಪ ಧ್ಯಾನ ಧಾರಣಾದಿಗಳನ್ನು ಮಾಡಿದ್ದರಿಂದ ವೃದ್ಧಾಪ್ಯದಲ್ಲಿ ಅವರ ಕಾಲುಗಳೆರಡೂ ಮರಗಟ್ಟಿಹೋಗಿದ್ದುವು; ಎದ್ದುನಿಲ್ಲುವುದಕ್ಕೇ ಕಷ್ಟ. ಜತೆಗೆ ವಯೋಧರ್ಮಕ್ಕನುಗುಣವಾಗಿ ದೇಹಶಕ್ತಿ ಕುಂದಿತ್ತು. ಹೀಗಿದ್ದರೂ ಅವರಿಗೆ ಹರಿನಾಮಸ್ಮರಣೆಯಲ್ಲಿ ಅಪರಿಮಿತ ಉತ್ಸಾಹ. ಹರಿಭಜನೆಯನ್ನು ಕೇಳುತ್ತ ಮೈಮರೆತು ತಾವೂ ಆ ಗಾಯನ-ನರ್ತನದಲ್ಲಿ ಸೇರಿಕೊಳ್ಳುತ್ತಿದ್ದರು ! ವರ್ಷಗಳು ಕಳೆದಂತೆ ಅವರ ಈ ಭಕ್ತಿಭಾವದ ತೀವ್ರತೆ ಕಡಿಮೆಯಾಗುವ ಮಾತಿರಲಿ, ಇನ್ನಷ್ಟು ಮತ್ತಷ್ಟು ಹೆಚ್ಚಾಗುತ್ತ ಬಂದಿತ್ತು. ಆದರೆ ಅವರು ಅತಿಯಾದ ಭಕ್ತಿಪ್ರದರ್ಶನವನ್ನು ಸಹಿಸುತ್ತಿರ

ಲಿಲ್ಲ. ಭಕ್ತರ ಹಾವಭಾವಗಳು ಅತಿರೇಕಕ್ಕೆ ಹೋಗದಂತೆ ಎಚ್ಚರಿಸುತ್ತಿದ್ದರು.

ಭಗವಾನ್ ದಾಸರಂತಹ ಶ್ರೇಷ್ಠ ಸಾಧಕರ ನೇತೃತ್ವ ದೊರೆತುದು ಅಲ್ಲಿನ ವೈಷ್ಣವಸಮಾಜದ ಸುಕೃತವೆನ್ನಬೇಕು. ಅವರ ಉಜ್ವಲ ಆದರ್ಶ-ಉಪದೇಶಗಳ ಬೆಳಕಿನಲ್ಲಿ ತ್ಯಾಗಿಗಳಾದ ಸಾಧುಗಳನೇಕರು ತಮ್ಮ ಜೀವನವನ್ನು ರೂಪಿಸಿಕೊಂಡು ಅಧ್ಯಾತ್ಮ ಪಥದಲ್ಲಿ ಮುನ್ನಡೆಯುತ್ತಿದ್ದರು. ಅವರ ದರ್ಶನಕ್ಕೆ ಯಾರೇ ಹೋದರೂ ಅವರ ಭಕ್ತಿ, ಪವಿತ್ರತೆಗಳ ಪ್ರಭಾವದಿಂದಾಗಿ ಒಂದು ಅಪೂರ್ವ ಆನಂದಾನುಭವವನ್ನು ಪಡೆದು ಹಿಂದಿರುಗುತ್ತಿದ್ದರು. ತಮ್ಮ ವೈಷ್ಣವಧರ್ಮಕ್ಕೆ ಸಂಬಂಧಿಸಿದಂತೆ ಯಾವುದೇ ವಿವಾದವುಂಟಾದಲ್ಲಿ ಜನರು ಬಾಬಾಜಿಯ ಅಭಿಪ್ರಾಯವನ್ನು ಅಂತಿಮವೆಂದು ಪರಿಗಣಿಸಿ ಅದರಂತೆ ನಡೆಯುತ್ತಿದ್ದರು. ಬಾಬಾಜಿಯವರು ಕೇವಲ ತಮ್ಮ ವೈಯಕ್ತಿಕ ಸಾಧನೆಯಲ್ಲಿ ನಿರತರಾದವರಲ್ಲ. ಸಮಸ್ತ ವೈಷ್ಣವ ಸಮಾಜಕ್ಕೇ ಹೇಗೆ ಮಂಗಳ ವಾದೀತು, ತ್ಯಾಗಿಗಳಾದ ಸಾಧಕರ ಶ್ರೇಯಸ್ಸಿಗಾಗಿ ಏನು ಮಾಡಬಹುದು, ಇತರ ಸಾಂಸಾರಿಕ ಜನರು ಶ್ರೀಚೈತನ್ಯನ ಮಾರ್ಗವನ್ನನುಸರಿಸಿ ಶಾಂತಿ ಗಳಿಸುವಂತೆ ಮಾಡುವುದೆಂತು—ಈ ಬಗೆಯ ಆಲೋಚನೆಯಲ್ಲೇ ಸದಾ ತೊಡಗಿರುತ್ತಿದ್ದರು.

ಬಾಬಾಜಿಯವರ ಭಕ್ತಿ ಹಾಗೂ ಅವರ ದಿವ್ಯಶಕ್ತಿಗಳ ಕುರಿತಾಗಿ ಒಂದು ಕಥೆ ಪ್ರಚಲಿತವಾಗಿತ್ತು. ಒಮ್ಮೆ ಅವರು ಕೈಯಲ್ಲಿ ಜಪಮಾಲೆಯನ್ನು ಹಿಡಿದು ಹರಿನಾಮ ವನ್ನು ಜಪಿಸುತ್ತ ಕುಳಿತಿದ್ದಾರೆ; ಹೊರಪ್ರಪಂಚದ ಪರಿವೆಯೇ ಇದ್ದಂತಿಲ್ಲ. ಆ ವೇಳೆಗೆ ಅವರ ದರ್ಶನಕ್ಕಾಗಿ ವರ್ಧಮಾನದ ಮಹಾರಾಜ ಅಲ್ಲಿಗೆ ಬಂದ. ಇನ್ನೇನು ಆತ ನಮಸ್ಕರಿಸಬೇಕು; ಆಗ ಬಾಬಾಜಿ, "ಹೇಯ್ ! ನಡಿ, ನಡಿ !" ಎಂದು ಗಟ್ಟಿಯಾಗಿ ಗದರಿಬಿಟ್ಟರು. ಮಹಾರಾಜ ತಬ್ಬಿಬ್ಬಾಗಿ ಅಲ್ಲಿಂದ ಓಟ ಕಿತ್ತ.

ಇಂಥ ಸ್ವಾಗತ ಸಿಕ್ಕರೆ ಯಾರಿಗಾದರೂ ಸಿಟ್ಟು ಬರದಿರುತ್ತದೆಯೆ ? ಅದರಲ್ಲೂ ಮಹಾರಾಜನಿಗೆ ! ಆದರೂ ಅವನು ಅವಸರದಲ್ಲಿ ಏನೂ ಮಾಡಹೋಗಲಿಲ್ಲ. ವಿಷಯವೇನೆಂದು ತಿಳಿದುಕೊಂಡು ಬರಲು ದೂತರನ್ನು ಕಳುಹಿಸಿದ. ಅವರು ಬಂದು ಕೇಳಿದಾಗ ಬಾಬಾಜಿ, "ನಾನು ನಿಮ್ಮ ಮಹಾರಾಜರನ್ನು ನೋಡಲೇ ಇಲ್ಲವಲ್ಲ !" ಎಂದುಬಿಟ್ಟರು. ಆದರೆ ಅವನು ಬಂದದ್ದು ತಾವು ಜಪನಿರತರಾಗಿದ್ದಾಗ ಎಂದು ತಿಳಿದಾಗ ಬಾಬಾಜಿಗೆ ಎಲ್ಲವೂ ನೆನಪಾಯಿತು. "ಓ, ಅದೇ ! ಬೃಂದಾವನದಲ್ಲಿ ಒಂದು ಮೇಕೆ ತುಳಸೀಗಿಡಕ್ಕೆ ಬಾಯಿ ಹಾಕಿದ್ದನ್ನು ಕಂಡೆ. ಅದನ್ನು ನಾನು ಓಡಿಸಿದೆನೇ ಹೊರತು ಇನ್ನಾರನ್ನೂ ಅಲ್ಲ" ಎಂದರು. ಈ ವಿಷಯ ತಿಳಿದಾಗ ರಾಜನಿಗೆ ಇನ್ನೂ ಆಶ್ಚರ್ಯ, ಜತೆಗೆ ಸಂದೇಹ. ಇಲ್ಲಿ ಕುಳಿತು ಬೃಂದಾವನದಲ್ಲಿ ಆಗುವುದನ್ನು ಕಾಣಲು ಸಾಧ್ಯ ಎಂದರೆ ? ವಿಚಾರಣೆ ಮಾಡಿ ನೋಡಿದಾಗ ಅದು ಸತ್ಯ ಎಂದು ತಿಳಿದುಬಂತು. ಅಂದಿನಿಂದ ಜನ ಅವರನ್ನು 'ಸಿದ್ಧಪುರುಷ' ಎಂದು ಗೌರವಿಸಲಾರಂಭಿಸಿದರು.

ಬಾಬಾಜಿಯವರು ಇಡೀ ವೈಷ್ಣವ ಸಮಾಜವನ್ನು ಶಿಸ್ತಿನ ಕಟ್ಟಳೆಗೆ ಒಳಪಡಿಸಿ ಇಟ್ಟುಕೊಂಡಿದ್ದರು. ತಮ್ಮ ಸಮಾಜದಲ್ಲಿ ಎಲ್ಲಿ ಏನಾಗುತ್ತಿದೆ; ಯಾವ ಸಾಧು ಅಹಿತವಾಗಿ ವರ್ತಿಸಿದ ಅಥವಾ ಸತ್ಕಾರ್ಯವನ್ನೆಸಗಿದ ಎಂಬೀ ವಿವರಗಳೆಲ್ಲ ಅವರಿಗೆ ಜನರ ಮೂಲಕ ಬಂದು ತಲುಪುತ್ತಿದ್ದುವು. ಅವರು ಅದನ್ನೆಲ್ಲ ಕೇಳಿ ಯಾವ ಯಾವ ವಿಷಯದಲ್ಲಿ ಏನೇನು ಮಾಡತಕ್ಕದ್ದು ಎಂದು ನಿರ್ದೇಶಿಸುತ್ತಿದ್ದರು. ಯಾರೂ ಆ ಮಾತುಗಳನ್ನು ಮೀರದೆ, ಸ್ವಪ್ರೇರಣೆಯಿಂದ, ಪೂರ್ಣಶ್ರದ್ಧೆಯಿಂದ ಅದರಂತೆ

ನಡೆಯುತ್ತಿದ್ದರು. ಹೀಗೆ, ಯಾವ ಗೂಢಚಾರರ ಅಗತ್ಯವೂ ಇಲ್ಲದೆ, ವೈಷ್ಣವ ಸಮಾಜದ ಆಗುಹೋಗುಗಳೆಲ್ಲವೂ ಬಾಬಾಜಿಯ ತೀಕ್ಷ್ಣದೃಷ್ಟಿಗೆ ಬೀಳುತ್ತಿದ್ದುವು. ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಅವರ ಪ್ರಭಾವವನ್ನು ಅನುಭವಿಸುತ್ತಿದ್ದ. ಅವರ ಕೃಪಾದೃಷ್ಟಿಯ ಬಲದಲ್ಲಿ ನಂಬಿಕೆಯಿಟ್ಟ ಸಜ್ಜನರ ಉತ್ಸಾಹವು ದಿನೇದಿನೇ ವರ್ಧಿಸುತ್ತಿದ್ದರೆ ಕಪಟಾಚಾರಿಗಳು ಅವರ ಭೀತಿಯಿಂದಾಗಿ ತಮ್ಮ ಸ್ವಭಾವವನ್ನು ಬದಲಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು.

ಕಲುಟೋಲೆಯ ಹರಿಸಭೆಯಲ್ಲಿ ನಡೆದ ಅಭೂತಪೂರ್ವ ಘಟನೆಯ ವಿಷಯ ಜನರ ಮೂಲಕ ಬಾಬಾಜಿಯ ಕಿವಿಯನ್ನು ಮುಟ್ಟಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಆ ಘಟನೆಯಾದ ಕೆಲದಿನಗಳ ಬಳಿಕ, ಈ ಬಗ್ಗೆ ಬಾಬಾಜಿಯವರ ಅಭಿಪ್ರಾಯ ವೇನೆಂದು ತಿಳಿದುಕೊಳ್ಳಲು ಹರಿಸಭೆಯ ಸದಸ್ಯರೇ ಕೆಲವರು ಹೊರಟುಬಂದರು.

ತಮ್ಮ ಇಷ್ಟದೇವತೆಯ ಪವಿತ್ರ ಆಸನವನ್ನು ಯಾರೋ ರಾಮಕೃಷ್ಣನೆಂಬ ಅಪರಿಚಿತ ವ್ಯಕ್ತಿ ಆಕ್ರಮಿಸಿದ ಎಂಬ ಸುದ್ದಿಯನ್ನು ಕೇಳಿದಾಗಲೇ ಬಾಬಾಜಿ ಸಿಟ್ಟಿನಿಂದ ಕೆಂಡವಾಗಿದ್ದರು. "ಅವನಾರೋ ಠಕ್ಕ, ಧೂರ್ತ" ಎಂದೆಲ್ಲ ಕಟುವಾಕ್ಯಗಳಿಂದ ದೂಷಿಸಿದ್ದರು. ಈಗ ಹರಿಸಭೆಯ ಸದಸ್ಯರನ್ನು ಕಂಡಾಗ ಅವರ ಜುಗುಪ್ಸೆ, ಸಿಟ್ಟು ಇಮ್ಮಡಿಯಾಯಿತು. "ಇಂಥ ಅನಾಚಾರ ನಡೆಯಲು ನೀವೇಕೆ ಬಿಟ್ಟಿರಿ? ಅದನ್ನು ನೋಡಿಕೊಂಡು ಹೇಗೆ ಸುಮ್ಮನಿದ್ದಿರಿ? ಕೈಲಾಗದ ಹೇಡಿಗಳಿರಾ!" ಎಂದು ನಿಂದಿಸಿದರು. "ಹಾಗೆ ಸುಮ್ಮನಿದ್ದುದರಿಂದ ನೀವೂ ಅಪರಾಧಿಗಳೇ ಆದಿರಿ" ಎಂದು ಚುಚ್ಚಿ ನುಡಿದರು. ಕೋಪವು ಶಾಂತವಾದ ಮೇಲೆ, "ಇನ್ನು ಮುಂದೆಂದೂ ಹಾಗಾಗದಂತೆ ನೋಡಿಕೊಳ್ಳಿ!" ಎಂದು ಎಚ್ಚರಿಸಿದರಲ್ಲದೆ ಕೆಲವು ನಿರ್ದಿಷ್ಟವಾದ ಸಲಹೆಗಳನ್ನು ಕೊಟ್ಟು ಕಳಿಸಿದರು.

ಇಷ್ಟೆಲ್ಲ ಆದರೂ ಶ್ರೀರಾಮಕೃಷ್ಣರಿಗೆ ಮಾತ್ರ, ತಾವು ಕಲುಟೋಲೆಯಿಂದ ಹೊರಟ ಮೇಲೆ ಹರಿಸಭೆಯಲ್ಲಿ ನಡೆದ ಗಲಭೆಯ ವಿಷಯವಾಗಲಿ, ಅದರಿಂದ ವೈಷ್ಣವ ಸಮಾಜದಲ್ಲೆದ್ದ ಗುಲ್ಲಾಗಲಿ, ಅದು ಬಾಬಾಜಿಯುವರೆಗೂ ಹೋಗಿ ಅವರಿಂದ ಹೊರಟ ಪ್ರತಿಕ್ರಿಯೆಯ ಸುದ್ದಿಯಾಗಲಿ ತಿಳಿಯಲೇ ಇಲ್ಲ! ಇದಾಗಿ ನಾಲ್ಕಾರು ವಾರಗಳು ಕಳೆದಿರಬಹುದು. ಶ್ರೀರಾಮಕೃಷ್ಣರಿಗೆ ಚೈತನ್ಯ ಮಹಾಪ್ರಭುವಿನ ಜನ್ಮಸ್ಥಾನವಾದ ನವದ್ವೀಪ ಪಟ್ಟಣವನ್ನು ಹಾಗೂ ಕಾಲ್ನಾ ಕ್ಷೇತ್ರವನ್ನು ಸಂದರ್ಶಿಸಬೇಕೆಂಬ ಇಚ್ಛೆಯಾಯಿತು. ಮಥುರ ಕೂಡಲೇ ಅದಕ್ಕೆ ವ್ಯವಸ್ಥೆ ಮಾಡಿದ. ಶ್ರೀರಾಮಕೃಷ್ಣರೊಂದಿಗೆ ಮಥುರ ಹೃದಯರಲ್ಲದೆ ಇನ್ನೊಂದಿಬ್ಬರು ಮೂವರು ಹೊರಟರು. ದೋಣಿಯಲ್ಲಿ ಪ್ರಯಾಣ. ದೋಣಿ ಕಾಲ್ನಾ ಕ್ಷೇತ್ರವನ್ನು ತಲುಪಿದಾಗ ಬೆಳಗಿನ ಜಾವ. ಅಲ್ಲಿ ವಸತಿಯ ಏರ್ಪಾಟನ್ನು ಮೊದಲೇ ಮಾಡಿಕೊಂಡಿರಲಿಲ್ಲ. ಆದ್ದರಿಂದ ಮಥುರ ಅದಕ್ಕೆ ವ್ಯವಸ್ಥೆ ಮಾಡುವ ಭರಾಟೆಯಲ್ಲಿದ್ದ. ಅಷ್ಟರಲ್ಲಿ ಶ್ರೀರಾಮಕೃಷ್ಣರು ಹೃದಯನನ್ನು ಕರೆದುಕೊಂಡು ಹೊರಟರು.

ಕಾಲ್ನಾದಲ್ಲಿ ಪ್ರಸಿದ್ಧವಾದ ನೂರೆಂಟು ಶಿವದೇವಾಲಯಗಳೂ ಇನ್ನಿತರ ದೇವಾಲಯಗಳೂ ಇವೆ. ಆದರೆ ಶ್ರೀರಾಮಕೃಷ್ಣರು ನೋಡಹೊರಟದ್ದು ಅವುಗಳನ್ನಲ್ಲ, ಭಗವಾನ್ ದಾಸ್ ಬಾಬಾಜಿಯುವರನ್ನು. ಬಾಬಾಜಿ ಓರ್ವ ಶ್ರೇಷ್ಠ ಸಾಧಕ, ಸಂತ ಎಂದು ಅವರು ಕೇಳಿತಿಳಿದಿದ್ದರು. ಅವರು ಇಲ್ಲಿಗೆ ಬಂದಿದ್ದರ ಮುಖ್ಯ ಉದ್ದೇಶವೇ ಬಾಬಾಜಿಯುವರನ್ನು ಕಾಣುವುದು. ಆದ್ದರಿಂದಲೇ ಅವರು ಒಂದು ನಿಮಿಷವೂ ತಡಮಾಡದೆ ಹಾಗೆ ಹೊರಟದ್ದು.

ಜನರನ್ನು ವಿಚಾರಿಸಿ ಬಾಬಾಜಿಯುವರ ವಿಳಾಸವನ್ನು ತಿಳಿದುಕೊಂಡು ಅಲ್ಲಿಗೆ ಬಂದರು. ಆ ಸ್ಥಳಕ್ಕೆ "ಶ್ರೀ ನಾಮಬ್ರಹ್ಮ ಆಶ್ರಮ" ಎಂದು ಹೆಸರು. ಅಲ್ಲಿ ರಾಧಾಗೋವಿಂದನ ಹಾಗೂ ಶ್ರೀಚೈತನ್ಯನ ದೇವಾಲಯ; ಹಿಂಭಾಗದಲ್ಲಿ ಬಾಬಾಜಿಯ ವಾಸ. ಇವರು ಅಲ್ಲಿಗೆ ಹೋದಾಗ ಒಂದು ಸಭೆ ನಡೆಯುತ್ತಿತ್ತು.

ಶ್ರೀರಾಮಕೃಷ್ಣರ ಮಾತಿನಲ್ಲಿ ಎಂಥವರನ್ನಾದರೂ ಮೋಡಿ ಮಾಡಬಲ್ಲ ಶಕ್ತಿ; ಅವರ ವ್ಯಕ್ತಿತ್ವದಲ್ಲೇ ಒಂದು ವಿಶೇಷ ಆಕರ್ಷಣೆ. ಹಾಗಿದ್ದರೂ, ಯಾರಾದರೂ ಹೊಸಬರನ್ನು ಭೇಟಿ ಮಾಡಲು ಹೋಗಬೇಕೆಂದರೆ, ಅವರ ಮನಸ್ಸಿನಲ್ಲಿ ಏನೋ ಒಂದು ಅಂಜಿಕೆ—ಬಾಲಕನಂತೆ! ತಮ್ಮಿಂದ ಎಲ್ಲಿ ಏನಾದರೂ ತಪ್ಪಾಗಿಬಿಡುವುದೋ, ತಮ್ಮ ವರ್ತನೆಯನ್ನು ಕಂಡು ಯಾರು ಏನೆಂದುಕೊಳ್ಳುವರೋ ಎಂದು ಭಯಪಟ್ಟು ಕೊಂಡೇ ಹೋಗುತ್ತಿದ್ದರು. ಹೃದಯನಿಗೆ ಮುಂದೆ ಹೋಗಲು ತಿಳಿಸಿ, ತಾವು ಮೆಲ್ಲನೆ ಹಿಂದಿನಿಂದ ನಡೆದರು. ಹೃದಯ ಬೆಲೆಬಾಳುವ ಶಾಲನ್ನು ಹೊದ್ದಿದ್ದ. ಶ್ರೀರಾಮಕೃಷ್ಣರು ಒಂದು ಕೆಂಪು ಧೋತರವನ್ನು ಹೊದ್ದು ಅದರಿಂದಲೇ ತಮ್ಮ ತಲೆಯನ್ನೂ ಮುಖವನ್ನೂ ಮರೆಮಾಡಿಕೊಂಡಿದ್ದರು.

ಬಾಬಾಜಿ ಕೈಯಲ್ಲಿ ಜಪಮಾಲೆ ಹಿಡಿದು ಎದುರಿಗೆ ಕುಳಿತವರೊಡನೆ

ಸಂಭಾಷಿಸುತ್ತಿದ್ದರು. ಹೃದಯ ಮುಂದಾಗಿ ಹೋಗಿ ಅವರಿಗೆ ನಮಸ್ಕರಿಸಿದ. ಅಷ್ಟರಲ್ಲೇ ಅವರ ಅಂತರ್ದೃಷ್ಟಿಗೆ ಏನೋ ಗೋಚರವಾಯಿತು. ಇದ್ದಕ್ಕಿದ್ದಂತೆ, "ಆಶ್ರಮಕ್ಕೆ ಯಾರೋ ಮಹಾಪುರುಷರು ಬಂದಂತಿದೆ!" ಎಂದು ಉದ್ಗರಿಸಿ ಅತ್ತಿತ್ತ ನೋಡ ಲಾರಂಭಿಸಿದರು. ಆದರೆ ಹೃದಯನಲ್ಲದೆ ಬೇರಾರೂ ಅವರ ಕಣ್ಣಿಗೆ ಬೀಳಲಿಲ್ಲ. ತಾವು ನಿರೀಕ್ಷಿಸಿದ ವ್ಯಕ್ತಿ ಈತನಲ್ಲ ಎಂದು ಒಂದೇ ನೋಟದಲ್ಲಿ ಗ್ರಹಿಸಿದರು. ಬಳಿಕ ಸೌಜನ್ಯಕ್ಕಾಗಿ ಅವನನ್ನು ಕೇಳಿದರು:

"ಎಲ್ಲಿಂದ ಆಗಮನ?"

"ಕಲ್ಕತ್ತದಿಂದ ಸ್ವಾಮಿ."

"ಹುಂ . . . ಕಲ್ಕತ್ತದಿಂದ ಬಂದವರು ಸಾಮಾನ್ಯವಾಗಿ ಈ ಆಶ್ರಮಕ್ಕೊಮ್ಮೆ ಬಂದುಹೋಗುತ್ತಾರೆ."

"ಅಲ್ಲವೆ ಮತ್ತೆ? ತಮ್ಮಂಥ ಮಹಾತ್ಮರ ದರ್ಶನ ಮಾಡದೆ ಯಾರೂ ಹೋಗಲೇ ಬಾರದು."

ಬಾಬಾಜಿಯ ಮುಖದಲ್ಲೊಂದು ಮಂದಹಾಸ ತೇಲಿಹೋಯಿತು. ಈಗ ಅವರು ತಮ್ಮೆದುರು ಕುಳಿತವರನ್ನುದ್ದೇಶಿಸಿ, ಹಿಂದಿನ ವಿಷಯವನ್ನೇ ಎತ್ತಿ ಮಾತನಾಡ ತೊಡಗಿದರು. ಒಬ್ಬ ಸಾಧು ಏನೋ ಒಂದು ತಪ್ಪುಕೆಲಸ ಮಾಡಿದ್ದ. ಆ ತಪ್ಪಿಗೆ ಪ್ರಾಯಶ್ಚಿತ್ತವೇನು, ಅವನಿಗೀಗ ಯಾವ ಶಿಕ್ಷೆ ವಿಧಿಸಬೇಕು ಎಂಬ ಬಗ್ಗೆ ವಿಚಾರಣೆ ನಡೆಯುತ್ತಿತ್ತು. ಬಾಬಾಜಿ ಅವನನ್ನೇ ನೋಡುತ್ತ ಕೋಪದಿಂದ ಗುಡುಗಿದರು:

"ದುಷ್ಟಾ! ನಿನ್ನ ಸೊಕ್ಕು ತಲೆಗೇರಿಬಿಟ್ಟಿದೆ. ನಾನು ನಿನ್ನ ಜಪಮಾಲೆಯನ್ನು ಕಸಿದುಕೊಂಡು ಸಮಾಜದಿಂದ ಬಹಿಷ್ಕಾರ ಹಾಕಿಬಿಡುತ್ತೇನೆ, ನೋಡು!"

ಆ ಹೊತ್ತಿಗೆ ಸರಿಯಾಗಿ ಶ್ರೀರಾಮಕೃಷ್ಣರು ಒಳ ಬಂದು ಹೃದಯನ ಬಳಿಯಲ್ಲಿ ನಮ್ರತೆಯಿಂದ ಕುಳಿತರು. ಮೈಯೆಲ್ಲ ಬಟ್ಟೆಯಿಂದ ಮುಚ್ಚಿದ್ದರಿಂದ ಮುಖ ಸರಿಯಾಗಿ ಕಾಣುತ್ತಿರಲಿಲ್ಲ. ಬಾಬಾಜಿ ಸ್ವಲ್ಪ ಶಾಂತರಾದುದನ್ನು ಕಂಡು ಈಗ ಹೃದಯ ಹೇಳಿದ:

"ಸ್ವಾಮಿ, ಇವರು ನನ್ನ ಸೋದರಮಾವಂದಿರು. ಭಗವಂತನ ಸ್ಮರಣೆಮಾತ್ರ ದಿಂದಲೇ ಭಾವಪರವಶರಾಗುತ್ತಾರೆ. ಬಹಳ ದಿನಗಳಿಂದಲೂ ಇದೇ ಸ್ಥಿತಿ. ಇಂದು ನಿಮ್ಮ ದರ್ಶನಕ್ಕಾಗಿ ಬಂದಿದ್ದಾರೆ."

ಬಾಬಾಜಿಯ ಮುಖ ಸ್ವಲ್ಪ ಪ್ರಸನ್ನವಾಯಿತು. ಶಾಂತವಾಗಿ ಕುಳಿತು ಜಪಮಾಲೆ ಯನ್ನು ತಿರುಗಿಸಲಾರಂಭಿಸಿದರು. ಅದನ್ನು ಕಂಡು ಹೃದಯ ಕೇಳಿದ:

"ಸ್ವಾಮಿ, ನನಗೊಂದು ಸಂದೇಹ . . . ನೀವು ಸಿದ್ಧಪುರುಷರು, ಗುರು ವರೇಣ್ಯರು. ಹಾಗಿದ್ದರೂ ನೀವಿನ್ನೂ ಜಪಮಾಲೆಯನ್ನು ಇಟ್ಟುಕೊಂಡಿದ್ದೀರಲ್ಲ! ನಿಮಗೆ ಅದರ ಅಗತ್ಯವೇನೂ ಇರಲಾರದು, ಅಲ್ಲವೆ?"

ಸದಾ ಶ್ರೀರಾಮಕೃಷ್ಣರ ಸಂಗದಲ್ಲೇ ಇದ್ದು, ಅವರೊಂದಿಗೆ ಸಮಾಜದ ವಿವಿಧ ಸ್ತರಗಳ ಜನರೊಂದಿಗೆ ಬೆರೆತು ಅನುಭವವಿದ್ದುದರಿಂದ ಹೃದಯನಿಗೆ, ಯಾರೊಂದಿಗೆ ಎಲ್ಲೆಲ್ಲಿ ಹೇಗೆಹೇಗೆ ಮಾತನಾಡಬೇಕು ಎಂಬ ಸೂಕ್ಷ್ಮ ತಿಳಿದಿತ್ತು.

ಬಾಬಾಜಿ ನಸುನಕ್ಕು ಹೇಳಿದರು:

"ಹಾಗೇನಿಲ್ಲ . . . ಆದರೂ ನೀನು ಹೇಳುವಂತೆ, ನನಗೆ ಇದರಿಂದ ಅಂಥಾ ಪ್ರಯೋಜನವೇನೂ ಇಲ್ಲವೆನ್ನಬೇಕು. ಆದರೆ ಜನಗಳಿಗೆ ದಾರಿ ತೋರಬೇಕಲ್ಲ?

ಅವರಿಗಾಗಿ ಇದನ್ನೆಲ್ಲ ಮಾಡಬೇಕಾಗಿದೆ. ನಾನು ಮಾಡಲಿಲ್ಲ ಅಂದರೆ, ಜನರೂ ಹಾಗೆಯೇ ಮಾಡಿ ದಾರಿತಪ್ಪುತ್ತಾರೆ. 'ಹೀಗೆಹೀಗೆ ಮಾಡಬೇಕು' ಎಂದು ಜನರಿಗೆ ಅರ್ಥ ಪಡಿಸಲು ನಾನು ಮಾಡಿತೋರಿಸುತ್ತೇನೆ."

ಸರಿಯೆ ! ಬಾಬಾಜಿಯ ಮಾತಿನಲ್ಲಿ ತಪ್ಪೇನಿದೆ ? ಯಾರಾದರೂ ಒಪ್ಪಬೇಕಾದ ಮಾತೇ. ಆದರೆ ರಾಮಕೃಷ್ಣರಲ್ಲ ! ಅವರು ಮೊದಲಿನಿಂದಲೂ ಎಲ್ಲ ವಿಷಯಗಳಲ್ಲೂ ಜಗನ್ಮಾತೆಯನ್ನೇ ಆಶ್ರಯಿಸಿಕೊಂಡು ಬಂದವರು. ಅವರು ಅವಳ ಮೇಲಿಟ್ಟ ಭರವಸೆ ಎಂಥದೆಂಬುದು ಅವರ ಸ್ವಭಾವದಲ್ಲೇ ಎದ್ದುಕಾಣುತ್ತಿತ್ತು. 'ನಾನಿದನ್ನು ಮಾಡುತ್ತೇನೆ' ಎಂಬ ಅಹಂಕಾರಬುದ್ಧಿಯಿಂದ ಯಾವುದಾದರೊಂದು ಕೆಲಸವನ್ನು ಅವರು ಮಾಡು ವುದಿರಲಿ, ಬೇರೆ ಯಾರಾದರೂ ಹಾಗೆ ಮಾಡುವುದನ್ನು ಕಂಡರೂ ಅಥವಾ ಕೇಳಿದರೂ ಅವರ ಮನಸ್ಸಿಗೆ ಅಪಾರ ಯಾತನೆಯಾಗುತ್ತಿತ್ತು. 'ನಾನು' ಎಂಬ ಶಬ್ದ ಅವರ ಬಾಯಿಂದ ಸಾಮಾನ್ಯವಾಗಿ ಬರುತ್ತಲೇ ಇರಲಿಲ್ಲ. ಎಲ್ಲೋ ತೀರಾ ವಿರಳವಾಗಿ ಭಗವಂತನ ದಾಸ ತಾವೆಂಬ ಭಾವದಿಂದ ಹಾಗೆನ್ನುತ್ತಿದ್ದರು, ಅಷ್ಟೆ. ಎಂಥ ಸರಳ ವಿಷಯವಾದರೂ ಸರಿ, ಅದನ್ನು 'ನಾನು ಮಾಡಿಬಿಡುತ್ತೇನೆ' ಎಂದು ಯಾರಾದರೂ ಅವರೆದುರಿಗೆ ಹೇಳಿದರೆ ಸಾಕು, ಅವರಿಗೆ ಅತ್ಯಂತ ಜುಗುಪ್ಸೆಯಾಗುತ್ತಿತ್ತು. ಆಗ ಅವರ ಆ ಬಗೆಯ ಪ್ರತಿಕ್ರಿಯೆಯನ್ನು ಕಂಡವರು, 'ಈಗ ಅಂಥ ಅಪರಾಧವೇನಾಯಿತು ?' ಎಂದು ಆಶ್ಚರ್ಯಪಡಬೇಕು.

ಹಾಗಿರುವಲ್ಲಿ ಈಗ ಬಾಬಾಜಿಯವರು, 'ನಾನು ಬಹಿಷ್ಕಾರ ಹಾಕುತ್ತೇನೆ, ನಾನು ಜನರಿಗೆ ದಾರಿ ತೋರಬೇಕಾಗಿದೆ, ಇತರರಿಗಾಗಿ ಜಪಮಾಲೆ ಹಿಡಿಯುತ್ತೇನೆ' ಎಂಬಂಥ ಮಾತುಗಳನ್ನಾಡಿದುದನ್ನು ಕೇಳಿದಾಗ, ಶ್ರೀರಾಮಕೃಷ್ಣರಿಗೆ ಅದೆಷ್ಟು ಹಿಂಸೆಯಾಗಿರ ಬೇಕು ! ಅದೆಷ್ಟು ಜುಗುಪ್ಸೆಯಾಗಿರಬೇಕು ! ಆದರೆ ಸರಳ ಸ್ವಭಾವದ ಅವರಿಗೆ ನಮ್ಮನಿಮ್ಮಂತೆ ಮನಸ್ಸಿನ ಭಾವನೆಯನ್ನು ಅಡಗಿಸಿಟ್ಟುಕೊಂಡು ಸಭ್ಯತೆಯ ಪ್ರದರ್ಶನ ಮಾಡಲು ಸಾಧ್ಯವಾಗಲಿಲ್ಲ. ಬಾಬಾಜಿ ತಮ್ಮ ಮಾತನ್ನು ಮುಗಿಸುವಷ್ಟರಲ್ಲಿ ಇದ್ದಕ್ಕಿ ದ್ದಂತೆ ಎದ್ದುನಿಂತು ತಡೆಬಡೆಯಿಲ್ಲದೆ ಕೂಗಿದರು:

"ಏನು, ಏನೆಂದಿರಿ ? ಈಗಲೂ ಅಷ್ಟು ಅಹಂಕಾರವೆ ನಿಮಗೆ ! ನೀವು ಬಹಿಷ್ಕಾರ ಹಾಕುವವರೋ ? ಜನರಿಗೆ ಮಾರ್ಗದರ್ಶನ ಮಾಡುವವರೋ ? ಅದನ್ನು ಮಾಡಲು ನೀವ್ಯಾರು ? ಈ ಜಗತ್ತು ಯಾವಾತನದೋ ಅವನು ಜನರಿಗೆ ಶಿಕ್ಷಣ ಕೊಡದಿದ್ದರೆ ಅದನ್ನು ನೀವು ಕೊಡಲು ಸಾಧ್ಯವೆ ?"

ಶ್ರೀರಾಮಕೃಷ್ಣರ ಮುಖದ ಮೇಲಿನ ಹೊದಿಕೆ ಬಿದ್ದುಹೋಗಿದೆ; ಉಟ್ಟ ಬಟ್ಟೆಯೂ ಜಾರಿ ಹೆಚ್ಚುಕಡಮೆ ಬತ್ತಲಾಗಿ ನಿಂತಿದ್ದಾರೆ ! ತಾವು ಯಾರಿಗೆ ಏನು ಹೇಳುತ್ತಿದ್ದೇವೆಂಬ ಲಕ್ಷ್ಯವೇ ಅವರಿಗಿದ್ದಂತಿಲ್ಲ ! ಮುಖಮಂಡಲ ಒಂದು ಅಪೂರ್ವ ತೇಜಸ್ಸಿನಿಂದ ದೇದೀಪ್ಯಮಾನವಾಗಿದೆ ! ಇಷ್ಟು ಮಾತುಗಳನ್ನಾಡುವುದರಲ್ಲಿ ಅವರು, ಭಾವಾತಿಶಯದಿಂದ ಬಾಯಿಕಟ್ಟಿದಂತಾಗಿ ಸಮಾಧಿಸ್ಥರಾದರು.

ಬಾಬಾಜಿಗೆ ಯಾರೋ ಕಪಾಳಕ್ಕೆ ಬಾರಿಸಿದಂತಾಯಿತು. 'ಇದೇನು, ಈ ಅಪರಿಚಿತ ವ್ಯಕ್ತಿ ಹೀಗೆಲ್ಲ ಅಂದುಬಿಟ್ಟನಲ್ಲ ! ಅದೂ ತನಗೆ, ಇಷ್ಟು ಜನರೆದುರಿನಲ್ಲಿ !' ಎಂದು ಆಶ್ಚರ್ಯದಿಂದಲೂ ನಾಚಿಕೆಯಿಂದಲೂ ಸ್ತಬ್ಧರಾಗಿಬಿಟ್ಟರು.

ಬಾಬಾಜಿಯ ಮಾತಿಗೆ ಪ್ರತಿಹೇಳುವ, ಇಲ್ಲವೆ ಅವರಲ್ಲಿ ತಪ್ಪು ಕಂಡುಹಿಡಿ

ಯುವ ಸಾಹಸವಾಗಲಿ ಸಾಮರ್ಥ್ಯವಾಗಲಿ ಯಾರಿಗೂ ಇರಲಿಲ್ಲ. ಇಂತಹ ಅನುಭವ ಬಾಬಾಜಿಯವರಿಗೆ ಇದೇ ಮೊದಲು. ವಯಸ್ಸಿನಲ್ಲೋ, ಅವರು ಶ್ರೀರಾಮಕೃಷ್ಣರಿಗಿಂತ ಐವತ್ತು ವರ್ಷ ಹಿರಿಯರು ! ಸಾಮಾನ್ಯರ್ಯಾರಾದರೂ ಆಗಿದ್ದರೆ, ಇಂಥ ಪರಿಸ್ಥಿತಿಯಲ್ಲಿ ಕ್ರೋಧದಿಂದ ವೈಮರೆತು ಪ್ರತೀಕಾರ ಮಾಡಹೊರಡುತ್ತಿದ್ದರು. ಆದರೆ ತಪಸ್ವಿಗಳಾದ ಬಾಬಾಜಿಯ ಮನಸ್ಸಿನಲ್ಲಿ ಅಂಥ ಆಲೋಚನೆ ಸುಳಿಯಲಿಲ್ಲ. ತಪಸ್ಸಿನಿಂದುದಿಸಿದ ಸರಳತೆಯೇ ಈಗ ಅವರ ನೆರವಿಗೆ ಬಂದಿತು. ಶ್ರೀರಾಮಕೃಷ್ಣರ ಮಾತಿನ ಸತ್ಯತೆ ಅವರಿಗೆ ಗೋಚರಿಸಿತು. ತಾವು ಎಲ್ಲಿ ಎಡವಿದೆವೆಂದು ತಿಳಿಯಿತು. ಅಹಂಕಾರದ ಕಾರ್ಮೋಡದಿಂದ ಮುಚ್ಚಿಹೋಗಿದ್ದ ಅವರ ಅಂತರ್ದೃಷ್ಟಿಯೀಗ ತೆರೆದುಕೊಂಡಿತು. ತನ್ನ ಕಣ್ಣು ತೆರೆಸಿದ ಈ ವ್ಯಕ್ತಿ ಯಾರಿರಬಹುದು ? ಎಂದು ಆಶ್ಚರ್ಯಪಡುತ್ತ ಶ್ರೀರಾಮಕೃಷ್ಣರನ್ನೇ ದಿಟ್ಟಿಸಿ ನೋಡಿದರು.

ಶ್ರೀರಾಮಕೃಷ್ಣರು ನಿಃಸ್ಪಂದಿತರಾಗಿ ನಿಂತಿದ್ದಾರೆ ! ಅವರ ಆಂತರ್ಯದ ದಿವ್ಯಾನಂದವನ್ನು ಮುಖಮಂಡಲ ಪ್ರತಿಫಲಿಸುತ್ತಿದೆ ! ತಕ್ಷಣ ಬಾಬಾಜಿಗೆ ತಿಳಿದುಹೋಯಿತು—ತಾವು ಶಾಸ್ತ್ರಗ್ರಂಥಗಳಲ್ಲಿ ಓದಿತಿಳಿದ 'ಭಾವಸಮಾಧಿ' ಇದೇ ಎಂದು. ಆ ಮನಮೋಹಕ ಆಕೃತಿಯನ್ನು ನೋಡುತ್ತಿದ್ದಂತೆ ಶ್ರೀಚೈತನ್ಯನ ರೂಪವೇ ಮನಸ್ಸಿಗೆ ಬಂದು ನಿಂತಿತು. ವಿಸ್ಮಿತರಾಗಿ ಉದ್ಗರಿಸಿದರು:

"ಇವರು . . . .ಇವರು ಯಾರು ?"

ಆಗ ಅಲ್ಲಿದ್ದವರೊಬ್ಬರು ಹೇಳಿದರು:

"ಇವರೇ ರಾಮಕೃಷ್ಣರು; ಹರಿಸಭೆಯಲ್ಲಿ ಚೈತನ್ಯಾಸನದ ಮೇಲೆ ನಿಂತವರು !"

ಇದು ಬಾಬಾಜಿಗೆ ಮತ್ತೊಂದು ಆಘಾತ. ರಾಮಕೃಷ್ಣರೆಂದರೆ ಯಾರೆಂದು ತಿಳಿಯದೆ ತಾವು ಅವರನ್ನು ಹೀನಾಮಾನ ಬೈದದ್ದು ನೆನಪಾಗಿ ಪಶ್ಚಾತ್ತಾಪವುಕ್ಕಿತು. ಜೊತೆಗೇ ಭಯವೂ ಒತ್ತರಿಸಿ ಬಂದಿತು. ಹೃದಯನತ್ತ ತಿರುಗಿ ಹೇಳಿದರು:

"ಅಪ್ಪಾ, ನಾನೊಂದು ಪಾಪಕಾರ್ಯವನ್ನು ಎಸಗಿಬಿಟ್ಟೆ. ಈ ಮಹಾತ್ಮರನ್ನು ಗುರುತಿಸಲಾರದೆ ನಾನು ಏನೇನೋ ಗಳಹಿಬಿಟ್ಟೆ. ಅಪಚಾರವಾಗಿಹೋಯಿತು ! ಈಗ ಇವರು ನನ್ನನ್ನು ಕ್ಷಮಿಸದಿದ್ದರೆ ಏನು ಗತಿಯಪ್ಪ ? ಶ್ರೀಚೈತನ್ಯನೇ ಅವತಾರವೆತ್ತಿ ಬಂದು ಹರಿಸಭೆಯಲ್ಲಿ ತನ್ನ ಆಸನದ ಮೇಲೆ ನಿಂತನೆಂದು ನನಗೆ ತಿಳಿಯದೆಹೋಯಿತಲ್ಲ ! ಅಯ್ಯಾ,ಈಗ ಏನು ಮಾಡಿದರೆ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವಾಗುವುದೋ ದಯವಿಟ್ಟು ತಿಳಿಸಪ್ಪ."

"ಬಾಬಾಜಿ, ನೀವು ಆ ಬಗ್ಗೆ ಚಿಂತಿಸಬೇಕಾದ ಪ್ರಮೇಯವೇ ಇಲ್ಲ. ಇವರು ಪರಮ ಕೃಪಾಳುಗಳು, ದಯಾಸ್ವರೂಪಿಗಳು. ಯಾವುದನ್ನೂ ಮನಸ್ಸಿನಲ್ಲಿ ಇಟ್ಟುಕೊಳ್ಳುವವರೇ ಅಲ್ಲ."

ಇದೀಗ ಬಾಬಾಜಿಗೆ ಸ್ವಲ್ಪ ಸಮಾಧಾನವಾಯಿತು. ಶ್ರೀರಾಮಕೃಷ್ಣರ ಬಳಿಗೆ ಬಂದು ಅಂಜಲಿಬದ್ಧರಾಗಿ ನಿಂತು, ಅಶ್ರುಪೂರಿತ ಕಂಗಳಿಂದ ದಿಟ್ಟಿಸಿದರು. ಬಳಿಕ ಅವರ ಸುತ್ತ ಏಳು ಬಾರಿ ಪ್ರದಕ್ಷಿಣೆ ಬಂದು ಸಾಷ್ಟಾಂಗ ಪ್ರಣಾಮ ಮಾಡಿದರು. ಶ್ರೀರಾಮಕೃಷ್ಣರಿನ್ನೂ ಸಮಾಧಿಸ್ಥಿತಿಯಲ್ಲೇ ನಿಶ್ಚಲರಾಗಿ ನಿಂತಿದ್ದಾರೆ ! ಹೃದಯು ಅವರ ಕಿವಿಯಲ್ಲಿ "ಹರಿಃ ಓಂ, ಹರಿಃ ಓಂ" ಎಂದು ನಾಲ್ಕಾರು ಬಾರಿ ಉಚ್ಚರಿಸಿದ. ಈಗ ಅವರಿಗೆ ಮೆಲ್ಲನೆ ಬಾಹ್ಯಪ್ರಜ್ಞೆ ಮರಳಿತು. ಕಣ್ಣುಗಳನ್ನು ಅರೆತೆರೆದು ಪಿಸುಗುಟ್ಟಿದರು:

"ನಾನೆಲ್ಲಿದ್ದೇನೆ ಈಗ ?"

ಹೃದಯ ಅವರ ಕಿವಿಯಲ್ಲಿ ಹೇಳಿದ: "ನೀನು ಭಗವಾನ್‌ದಾಸ್ ಬಾಬಾಜಿಯವರನ್ನು ಕಾಣಲು ಬಂದಿರುವೆ. ಇದು ಅವರ ಆಶ್ರಮ."

ಈಗ ಶ್ರೀರಾಮಕೃಷ್ಣರು ಬಾಬಾಜಿಯತ್ತ ತಿರುಗಿನೋಡಿ ಕೇಳಿದರು:

"ಭಗವಾನ್ ದಾಸರು . . . ನೀವೇ ಏನು ?"

ಬಾಬಾಜಿ: "ನಾನು ತಮ್ಮ ದಾಸ, ಸ್ವಾಮಿ !"

ಹೃದಯ ತಾನು ಹೊದ್ದಿದ್ದ ಶಾಲನ್ನು ಬಿಚ್ಚಿ ನೆಲದ ಮೇಲೆ ಹಾಸಿದ. ಶ್ರೀರಾಮಕೃಷ್ಣರು ಅದರ ಮೇಲೆ ಕುಳಿತರು. ಸ್ವಭಾವತಃ ವಿನೀತರಾದ ಬಾಬಾಜಿ, ತಮ್ಮ ಅಹಂಕಾರದ ವರ್ತನೆಗಾಗಿ ಮತ್ತೆಮತ್ತೆ ಕ್ಷಮೆ ಕೋರಿದರು. ಆದರೆ ಶ್ರೀರಾಮಕೃಷ್ಣರಾಗಲೇ ಅದನ್ನು ಮರೆತಾಗಿತ್ತು. ಈಗ ಬಾಬಾಜಿ ಅವರಿಗಾಗಿ ಸಿಹಿತಿನಿಸುಗಳನ್ನು ತರಿಸಿಕೊಟ್ಟರು. ಬಳಿಕ ಇಬ್ಬರೂ ಆಧ್ಯಾತ್ಮಿಕ ವಿಚಾರಗಳ ಬಗ್ಗೆ ಬಹಳ ಹೊತ್ತು ಸಂಭಾಷಿಸುತ್ತ ಕುಳಿತರು. ಭಗವತ್ಪ್ರಸಂಗದಿಂದ ಅಲ್ಲಿ ಅಪೂರ್ವ ದಿವ್ಯಾನಂದದ ಪ್ರವಾಹವೇ ಹರಿಯಿತು. ಶ್ರೀರಾಮಕೃಷ್ಣರು ಬಾರಿಬಾರಿಗೂ ಭಾವಾವಸ್ಥೆಗೇರಿ ಆನಂದವನ್ನು ಸವಿಯುವ ಪರಿಯನ್ನು ಕಂಡ ಬಾಬಾಜಿ ಮುಗ್ಧರಾದರು. 'ಮಹಾಭಾವ'ದ ಅನುಭವವನ್ನು ಸ್ವತಃ ಪಡೆದುಕೊಳ್ಳದಿದ್ದರೂ ಅದರ ಶಾಸ್ತ್ರೀಯ ಅಧ್ಯಯನ-ಚಿಂತನಗಳಲ್ಲೇ ಬಹು ದೀರ್ಘ ಕಾಲ ನಿರತರಾಗಿದ್ದವರು ಅವರು. ಆ ಮಹಾಭಾವವೇ ಶ್ರೀರಾಮಕೃಷ್ಣರಲ್ಲಿ ನಿರಂತರ ಪ್ರಕಾಶಿಸುತ್ತಲಿದೆ ಎಂಬುದನ್ನು ಕಂಡು ಅವರ ಶ್ರದ್ಧಾಭಕ್ತಿಗಳು ಮತ್ತಷ್ಟು ಗಾಢವಾದುವು.

ಬೆಳಗ್ಗೆ ಸುಮಾರು ಹತ್ತು ಗಂಟೆಯ ವೇಳೆಗೆ ಶ್ರೀರಾಮಕೃಷ್ಣರು ಬಾಬಾಜಿಯವರಿಂದ ಬೀಳ್ಕೊಂಡು ದೋಣಿಗೆ ಹಿಂದಿರುಗಿದರು. ಅಷ್ಟು ಹೊತ್ತಿಗೆ ಮಥುರ ಅವರನ್ನು ಹುಡುಕಿಕೊಂಡು ಆಶ್ರಮಕ್ಕೆ ಬಂದ; ಅವರು ಅಲ್ಲಿಂದ ಆದಾಗಲೇ ಹೊರಟುಹೋದುದು ಗೊತ್ತಾಯಿತು. ಆತ ಶ್ರೀರಾಮಕೃಷ್ಣರೊಂದಿಗೆ ಬಂದವನೆಂದು ತಿಳಿದಾಗ ಬಾಬಾಜಿ ಅವನಿಗೆಂದರು: "ಅಯ್ಯಾ, ಅವರು ಒಬ್ಬ ಮಹಾಪುರುಷರಷ್ಟೇ ಅಲ್ಲ; ಅವರು ಸಾಕ್ಷಾತ್ ಶ್ರೀಚೈತನ್ಯನ ಅವತಾರ ! ಏನೋ ನನ್ನ ಸೌಭಾಗ್ಯ, ಇಂದು ನಾನು ಅವರನ್ನು ಭೇಟಿ ಮಾಡಿದೆ." ಮಥುರ ಬಾಬಾಜಿಗೆ ನಮಸ್ಕರಿಸಿ ಹತ್ತು ರೂಪಾಯಿ ಕಾಣಿಕೆಯಿತ್ತು ಅಲ್ಲಿಂದ ನಿರ್ಗಮಿಸಿದ.

ಶ್ರೀರಾಮಕೃಷ್ಣರು ಮಥುರನನ್ನು ಕಂಡೊಡನೆ, ಬಾಬಾಜಿಯ ವಿಷಯವಾಗಿ ಬಹಳ ಉತ್ಸಾಹದಿಂದ ಹೇಳತೊಡಗಿದರು. ಅವರ ಉನ್ನತ ಆಧ್ಯಾತ್ಮಿಕ ಸ್ಥಿತಿಯನ್ನು, ಅವರ ವಿನಯವನ್ನು ಕೊಂಡಾಡಿದರು. ಅದನ್ನು ಕೇಳಿ ಮಥುರ ಬಹಳ ಸಂತೋಷಪಟ್ಟ. ಬಾಬಾಜಿಯವರ ಆಶ್ರಮದಲ್ಲಿ ಒಂದು ದಿನದ ಪೂಜೆ-ಉತ್ಸವ-ಪ್ರಸಾದಗಳಿಗಾಗಿ ಧಾರಾಳವಾಗಿ ಕಾಣಿಕೆ ನೀಡಿದ.

* * *

ಕಾಲ್ನಾದಿಂದ ಯಾತ್ರಿಕರು ಶ್ರೀಚೈತನ್ಯನ ಜನ್ಮಸ್ಥಳವಾದ ನವದ್ವೀಪಕ್ಕೆ ಹೊರಟರು. ಮತ್ತೆ ನದೀ ಮಾರ್ಗವಾಗಿ ಪ್ರಯಾಣ. ಶ್ರೀರಾಮಕೃಷ್ಣರು ಮನಸ್ಸಿನಲ್ಲಿ ಒಂದು ವಿಶೇಷವಾದ ಉದ್ದೇಶವಿಟ್ಟುಕೊಂಡು ಈ ಕ್ಷೇತ್ರಕ್ಕೆ ಹೊರಟಿದ್ದರು. ಚೈತನ್ಯ ಮಹಾಪ್ರಭುವಿನ ವಿಷಯವನ್ನು, ಆತನ ಮಹಿಮೆಯನ್ನು ಅವರು ಆದಾಗಲೇ ಸಾಕಷ್ಟು

ಕೇಳಿ ತಿಳಿದಿದ್ದರು; ತಾವೂ ಅನುಭವಿಸಿದ್ದರು. ಅಲ್ಲದೆ ಅವರ ಮೂಲಕವೇ ಇನ್ನೆಷ್ಟೋ ಜನರು ಶ್ರೀಚೈತನ್ಯನ ಮಾಹಾತ್ಮ್ಯವನ್ನು ತಿಳಿಯಲು ಸಮರ್ಥರಾಗಿದ್ದರು. ಭೈರವಿ ಬ್ರಾಹ್ಮಣಿಯಂತೂ ಅವರನ್ನು ಶ್ರೀಚೈತನ್ಯನ ಅವತಾರವೆಂದೇ ಪರಿಗಣಿಸಿ ಪೂಜಿಸಿದ್ದಳು. ಇಷ್ಟೆಲ್ಲ ಆದರೂ ಶ್ರೀರಾಮಕೃಷ್ಣರ ಮನಸ್ಸಿನಲ್ಲೇ ಒಂದು ಸಂದೇಹ ಉಳಿದಿತ್ತು. ಈ ಯಾತ್ರೆಯ ಸಂದರ್ಭದಲ್ಲಿ ಅದು ಪರಿಹಾರವಾಗಬೇಕೆಂದು ಅವರು ಸಂಕಲ್ಪಿಸಿದ್ದರು. ಅವರ ಆ ಸಂದೇಹವಾವುದು? ಅದಕ್ಕೆ ಸೂಕ್ತ ಉತ್ತರ ದೊರಕಿತೆ? ಆ ಯಾತ್ರೆಯಲ್ಲಿ ಅವರಿಗೆ ಎಂತಹ ಅನುಭವಗಳಾದುವು? ಎಂಬೀ ಪ್ರಶ್ನೆಗಳಿಗೆಲ್ಲ ಮುಂದೊಮ್ಮೆ ಅವರೇ ಅತ್ಯಂತ ಸ್ವಾರಸ್ಯಕರವಾದ ಉತ್ತರ ಕೊಡುತ್ತಾರೆ:

"ಆಗಾಗ ನನ್ನ ಮನಸ್ಸಿನಲ್ಲೊಂದು ಯೋಚನೆ ಬರುತ್ತಿತ್ತು—'ಅಲ್ಲ, ಚೈತನ್ಯ ದೇವನು ಹೇಗೆ ಒಬ್ಬ ಅವತಾರಪುರುಷನಾಗಲು ಸಾಧ್ಯ? ಪುರಾಣ ಭಾಗವತಾದಿ ಯಾವ ಗ್ರಂಥದಲ್ಲಿಯೂ ಆತನ ಹೆಸರೇ ಇಲ್ಲವಲ್ಲ! ಅವನಲ್ಲಿ ನಿಜಕ್ಕೂ ಅಂಥ ಮಹಿಮೆಯಿತ್ತೆ?' ಎಂದು. ಯೋಚಿಸಿ ಯೋಚಿಸಿ ಸಾಕಾಯಿತು. ಏನು ಮಾಡಿದರೂ ಅವನೊಬ್ಬ ಅವತಾರಪುರುಷನೆಂದು ನಂಬಿಕೆ ಹುಟ್ಟುತ್ತಲೇ ಇರಲಿಲ್ಲ. ಎಲ್ಲೋ ಈ ವೈಷ್ಣವ ಜೋಗಿ-ಜೋಗಿತಿಯರೆಲ್ಲ ಸೇರಿ ಹಾಗೊಂದು ಕಥೆಯನ್ನು ಹುಟ್ಟಿಸಿದ್ದಾರೆ ಅಷ್ಟೆ, ಎನ್ನಿಸಿತ್ತು.

"ಮಥುರನ ಜೊತೆಗೆ ನವದ್ವೀಪಕ್ಕೆ ಹೋದೆ. ಚೈತನ್ಯನು ಅವತಾರಪುರುಷನೇ ಹೌದಾದಲ್ಲಿ ಅವನ ಮಹಿಮೆಯ ಪ್ರಭಾವವೇನಾದರೂ ಅಲ್ಲಿ ಇರಲೇಬೇಕು, ಅದನ್ನು ಸಾಕ್ಷಾತ್ತಾಗಿ ಅನುಭವಿಸಿದರೆ ಗೊತ್ತಾಗುತ್ತದೆ ಎಂದು ಆಲೋಚಿಸಿದೆ. ಆತನ ದೈವತ್ವದ ಪ್ರಕಾಶವನ್ನು ಕಾಣಬೇಕೆಂದು ಅಲ್ಲಿನ ದೊಡ್ಡ ಗೋಸಾಯಿಗಳ ಮಠಕ್ಕೆ, ಚಿಕ್ಕ ಗೋಸಾಯಿಗಳ ಮಠಕ್ಕೆ, ಅತ್ತ-ಇತ್ತ ಎಲ್ಲ ಕಡೆಗೂ ಹೋದೆ. ಅಲ್ಲಿನ ವಿಗ್ರಹಗಳನ್ನು ನೋಡುತ್ತ ಅಲೆದಾಡಿದೆ. ಎಲ್ಲೂ ಎಂಥದೂ ಕಾಣಲಿಲ್ಲ. ಎಲ್ಲ ಕಡೆಯೂ ಒಂದೊಂದು ಮರದ ಮೂರ್ತಿ ಕೈಯೆತ್ತಿಕೊಂಡು ನಿಂತಿರುವುದನ್ನು ಕಂಡೆ! ನೋಡಿನೋಡಿ ಬೇಸರವಾಯಿತು. ನಾನಿಲ್ಲಿಗೆ ಏತಕ್ಕಾದರೂ ಬಂದೆನೊ ಎಂದು ಭಾವಿಸಿದೆ.

"ತರುವಾಯ, ಅಲ್ಲಿಂದ ಹಿಂದಿರುಗಿ ಬರಲು ದೋಣಿ ಹತ್ತಿದೆ. ಸ್ವಲ್ಪ ದೂರ ಹೋಗಿರಬಹುದು. ನದಿಯ ಪಕ್ಕದಲ್ಲಿ ಮರಳ ದಿಬ್ಬಗಳಿವೆ. ಅದರ ಹಿಂಬದಿಯಿಂದ ಹಾದುಹೋಗುವಾಗ ಇದ್ದಕ್ಕಿದ್ದಂತೆ ಒಂದು ಅದ್ಭುತವಾದ ದರ್ಶನವಾಯಿತು. ಇಬ್ಬರು ಚೆಲುವ ಬಾಲಕರು—ಅಂತಹ ರೂಪವನ್ನು ನಾನೆಂದೂ ಕಂಡಿರಲಿಲ್ಲ—ಕರಗಿದ ಬಂಗಾರದಂತೆ ಅವರ ಮೈಬಣ್ಣ; ತಲೆಯ ಸುತ್ತಲೂ ಒಂದು ಜ್ಯೋತಿರ್ಮಂಡಲವಿದೆ; ಕೈಗಳನ್ನು ಮೇಲೆತ್ತಿ ನನ್ನತ್ತ ನೋಡುತ್ತ ನಗುನಗುತ್ತ ಆಕಾಶಮಾರ್ಗದಿಂದ ಬರುತ್ತಿದ್ದಾರೆ!* ಅದನ್ನು ಕಂಡು ನಾನು, 'ಬಂದರು, ಬಂದರು' ಎಂದು ಗಟ್ಟಿಯಾಗಿ ಕೂಗಿದೆ. ಅಷ್ಟರಲ್ಲಿ ಅವರು ಹತ್ತಿರ ಬಂದು ಇದನ್ನು (ತಮ್ಮ ಶರೀರವನ್ನು) ಪ್ರವೇಶಿಸಿದರು. ನಾನು ಪ್ರಜ್ಞೆತಪ್ಪಿ ಬಿದ್ದುಬಿಟ್ಟೆ. ಇನ್ನೇನು ನೀರಿಗೆ ಬೀಳಬೇಕು, ಅಷ್ಟರಲ್ಲಿ, ಬಳಿಯಲ್ಲಿದ್ದ ಹೃದಯ ಹಿಡಿದುಕೊಂಡ.

"ಹೀಗೆ ಎಷ್ಟೋ ದರ್ಶನಗಳ ಮೂಲಕ ಶ್ರೀಚೈತನ್ಯನು ತನ್ನ ನಿಜಸ್ವರೂಪವನ್ನು

---

* ಶ್ರೀಚೈತನ್ಯ ಹಾಗೂ ನಿತ್ಯಾನಂದರೇ ಆ ಬಾಲಕರೆಂಬುದು ಶ್ರೀರಾಮಕೃಷ್ಣರ ಇಂಗಿತಾರ್ಥ.

ತೋರಿಸಿಕೊಟ್ಟಿದ್ದಾನೆ. ನಿಜವಾಗಿಯೂ ಅವನೊಬ್ಬ ಅವತಾರಪುರುಷನೇ! ದಿವ್ಯ ಶಕ್ತಿಯ ವಿಕಾಸಸ್ವರೂಪನವನು!"

ಶ್ರೀರಾಮಕೃಷ್ಣರ ಈ ಭಾವಾವಸ್ಥೆಯನ್ನು ಕಂಡ ಮಥುರನಿಗೆ ಆಶ್ಚರ್ಯ—'ಅಷ್ಟೆಲ್ಲ ದೇವಸ್ಥಾನಗಳನ್ನು ನೋಡುತ್ತ ಓಡಾಡಿದಾಗಲೂ ಠಾಕೂರರಿಗೆ ಏನೂ ಅನ್ನಿಸಲಿಲ್ಲ; ಆ ಸ್ಥಳವನ್ನು ಬಿಟ್ಟು ಇಷ್ಟು ದೂರ ಬಂದಾದ ಮೇಲೆ ಇದ್ದಕ್ಕಿದ್ದಂತೆ ಹೀಗೆ ಭಾವಾವೇಶವುಂಟಾಯಿತಲ್ಲ! ಇದಕ್ಕೆ ಕಾರಣವೇನು?' ಎಂದು. ಅದಕ್ಕೆ ಶ್ರೀರಾಮಕೃಷ್ಣರೆಂದರು, "ಗೌರಾಂಗನ ನಿಜವಾದ ಜನ್ಮಸ್ಥಳ ಹಿಂದಿನ ನದಿಯಾ ಪಟ್ಟಣ. ಈಗ ಅದು ನದಿಯಿಂದ ಮುಚ್ಚಿಹೋಗಿದೆ. ಈ ಮಳಲ ದಿಬ್ಬಗಳೇ ಆ ಮೂಲಸ್ಥಳ. ಆದ್ದರಿಂದಲೇ ನಾನು ಅಲ್ಲಿಗೆ ಬರುತ್ತಲೇ ಹಾಗೆ ಇದ್ದಕ್ಕಿದ್ದಂತೆ ನನಗೆ ಭಾವಪ್ರಚೋದನೆಯಾದದ್ದು."*

ನವದ್ವೀಪ ಸಂದರ್ಶನದೊಂದಿಗೆ ಈ ಮಹತ್ತ್ವಪೂರ್ಣ ತೀರ್ಥಯಾತ್ರೆ ಮುಕ್ತಾಯಗೊಂಡಿತು. ಭಗವಾನ್ ದಾಸ್ ಬಾಬಾಜಿಯವರ ಭೇಟಿ, ಶ್ರೀಚೈತನ್ಯನ ಜನ್ಮಸ್ಥಳ ವೀಕ್ಷಣೆ, ಎಲ್ಲಕ್ಕಿಂತ ಹೆಚ್ಚಾಗಿ ನವದ್ವೀಪದಲ್ಲಾದ ಅಪೂರ್ವ ದರ್ಶನ—ಇವೆಲ್ಲವುಗಳ ಮಧುರ ಸ್ಮೃತಿಗಳನ್ನು ಹೊತ್ತು ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹಿಂದಿರುಗಿದರು.

---

*ಮುಂದೆ ನಡೆದ ಉತ್ಖನನ-ಸಂಶೋಧನೆಗಳು ಶ್ರೀರಾಮಕೃಷ್ಣರ ಈ ಮಾತನ್ನು ಪುಷ್ಟೀಕರಿಸಿವೆ.

ಮಥುರ ಹಾಗೂ ಶ್ರೀರಾಮಕೃಷ್ಣರ ನಡುವಣ ಸಂಬಂಧ—ಅದೊಂದು ಅದ್ಭುತ ಸಂಗತಿ. ಅದೇ ಒಂದು ಕಥೆ. ನಾವೀಗಾಗಲೇ ಕಂಡಂತೆ, ಮಥುರ ಭಾರೀ ಶ್ರೀಮಂತ, ಜೊತೆಗೆ ಉದಾರ ಹೃದಯಿ. ಲೌಕಿಕ ವಿಷಯದಲ್ಲಿ ಆಸಕ್ತ; ಜೊತೆಗೆ ಭಗವದ್ಭಕ್ತ. ಸ್ಥಿರ-ಚರ ವಸ್ತುಗಳ ನಡುವಿನ ಭೇದವನ್ನರಿಯಬಲ್ಲ ವಿವೇಕಿ, ಆದರೂ ಭೋಗಲೋಲುಪ. ಕೋಪಿಷ್ಠನಾದರೂ ತಾಳ್ಮೆ ಹಾಗೂ ಸ್ಥಿರಬುದ್ಧಿಯುಳ್ಳವನು. ಅವನು ಕಾಲೇಜು ಮೆಟ್ಟಿಲು ಹತ್ತಿದವನು; ಆಂಗ್ಲ ಶಿಕ್ಷಣ ಪಡೆದವನು. ಸಾಕಷ್ಟು ಲೋಕಜ್ಞಾನವಿದ್ದವನು. ಜೊತೆಗೆ ವಾದದಲ್ಲಿ ಬಲು ಗಟ್ಟಿಗ. ಇಷ್ಟಾದರೂ ಕೂಡ, ಯಾರಾದರೂ ಒಂದು ವಿಷಯದ ಬಗ್ಗೆ, 'ಅದು ಹಾಗಲ್ಲ, ಹೀಗೆ' ಎಂದು ತಿಳಿಯಹೇಳಿದರೆ ಅದನ್ನು ಒಪ್ಪಿಕೊಳ್ಳಬಲ್ಲ ವಿನಯವಂತ. ಅವನು ದೈವಭೀರು ಎಂಬುದೇನೋ ನಿಜ. ಆದರೆ ಧರ್ಮದ ವಿಷಯವಾಗಿ ಮತ್ತೊಬ್ಬರು ಹೇಳಿದ ಮಾತನ್ನು ಮಾತ್ರ—ಅವರು ಅವನ ಕುಲಗುರುಗಳೇ ಆಗಲಿ, ಕಡೆಗೆ ಅವನ ಆಧ್ಯಾತ್ಮಿಕ ಗುರುವಾದ ಶ್ರೀರಾಮಕೃಷ್ಣರೇ ಆಗಲಿ—ಕಣ್ಮುಚ್ಚಿಕೊಂಡು, ವಿಚಾರಮಾಡದೆ ಒಪ್ಪುವವನು ಅವನಲ್ಲ. ಸ್ವಭಾವತಃ ಭಾರಾಳಿಯಾದರೂ ವ್ಯವಹಾರದಲ್ಲಾಗಲಿ ಇನ್ನಾವುದೇ ವಿಷಯದಲ್ಲಾಗಲಿ ಎಂದೂ ಮಂಕನಂತೆ ಮೋಸಹೋಗುವವನಲ್ಲ. ಹಾಗೆ ನೋಡಿದರೆ, ಹೆಚ್ಚಿನ ಸಂಖ್ಯೆಯ ಜಮೀನ್ದಾರರು, ರಾಜಕಾರಣಿಗಳು ತಮ್ಮ ಸ್ವಾರ್ಥಕ್ಕಾಗಿ ಯಾವಯಾವ ದುರಾಲೋಚನೆ, ಕಪಟ, ವಂಚನೆಗಳನ್ನು ಮಾಡುವರೋ ಅಂಥದರಲ್ಲೆಲ್ಲ ಅವನು ಒಳ್ಳೇ ನಿಸ್ಸೀಮನೇ. ರಾಣಿ ರಾಸಮಣಿಗೆ ಮಥುರನಲ್ಲದೆ ಇನ್ನೂ ಇಬ್ಬರು ಅಳಿಯಂದಿರು; ಇಬ್ಬರೂ ಅವನಿಗಿಂತ ದೊಡ್ಡವರು. ಆದರೂ ಆಕೆಯ ವ್ಯವಹಾರದ ಉಸ್ತುವಾರಿಯಲ್ಲಿ ಮಥುರನೇ ಆಕೆಯ ಬಲಗೈ ಬಂಟನಾಗಿದ್ದ ಎಂಬುದೇ ಆತನ ಚಾಲಾಕಿತನವನ್ನು, ವ್ಯವಹಾರಕುಶಲತೆಯನ್ನು ತೋರಿಸುತ್ತದೆ.

ಮಥುರನ ಈ ಎಲ್ಲ ಗುಣಾವಗುಣಗಳ ಪರಿಚಯ ನಮಗಿದ್ದರೆ ಅವನ ಹಾಗೂ ಶ್ರೀರಾಮಕೃಷ್ಣರ ನಡುವಣ ಸಂಬಂಧ ಹೇಗೆ ಬೆಳೆದುಬಂದಿತು ಎಂಬುದನ್ನು ಅರ್ಥಮಾಡಿಕೊಳ್ಳಲು ಸುಲಭವಾಗುತ್ತದೆ. ತನ್ಮೂಲಕ ಶ್ರೀರಾಮಕೃಷ್ಣರ ಮಹಿಮೆ ಮತ್ತಷ್ಟು ನಿಚ್ಚಳವಾಗುತ್ತದೆ.

ಇನ್ನೊಂದು ವಿಷಯ: ಮಥುರನು ಬರಬರುತ್ತ ಶ್ರೀರಾಮಕೃಷ್ಣರಲ್ಲಿ ಎಂಥ ಗಾಢ ಭಕ್ತಿಯನ್ನೂ ವಿಶ್ವಾಸವನ್ನೂ ತಳೆದ ಎಂಬುದನ್ನು ಕೆಲಮಟ್ಟಿಗೆ ಈಗಾಗಲೇ ನೋಡಿದ್ದೇವೆ. ಆದರೆ ಅವನ ಭಕ್ತಿಯ ಮೂಲವು ಮೌಢ್ಯವೋ ಭೀತಿಯೋ ಆಗಿರಬಹುದೆಂಬ ಅನುಮಾನವೂ ಕೆಲವರಲ್ಲಿ ಉದಿಸಬಹುದು. 'ಅವನೊಬ್ಬ ಮಂಕನಾಗಿಲ್ಲದಿದ್ದಲ್ಲಿ ಮತ್ತೊಬ್ಬ ಮನುಷ್ಯಮಾತ್ರನನ್ನು—ಶ್ರೀರಾಮಕೃಷ್ಣರನ್ನು—ಅಷ್ಟೊಂದು ಗಾಢವಾಗಿ ನಂಬಲು ಸಾಧ್ಯವಿತ್ತೆ? ಅವನಲ್ಲದೆ ಬೇರೆ ಯಾರಾದರೂ ಆಗಿದ್ದರೆ ಖಂಡಿತವಾಗಿಯೂ ಕಥೆಯೇ ಬೇರೆಯಾಗುತ್ತಿತ್ತು' ಎಂದು ಅವರೆನ್ನಬಹುದು. ಆದರೆ ವಸ್ತುಸಂಗತಿ ಅದಲ್ಲ. ಬುದ್ಧಿ ಉಪಯೋಗಿಸುವುದರಲ್ಲಾಗಲಿ, ಸಂಶಯ ಪಡುವುದರಲ್ಲಾಗಲಿ ಮಥುರ

ಯಾರಿಗೇನೂ ಕಡಿಮೆಯಾಗಿರಲಿಲ್ಲ. ಶ್ರೀರಾಮಕೃಷ್ಣರ 'ಅಸಹಜ' 'ಅಲೌಕಿಕ' ಸ್ವಭಾವ-ವರ್ತನೆಗಳನ್ನು ಕಂಡು ಮೊದಮೊದಲಿಗೆ ಅವನು ಅವರನ್ನು ಪ್ರತಿ ಹೆಜ್ಜೆಯಲ್ಲೂ ಪರೀಕ್ಷೆ ಮಾಡದೆ ಬಿಡಲಿಲ್ಲ. ಆದರೆ ಏನು ಮಾಡಿದರೇನು! ಮನುಕುಲದ ಇತಿಹಾಸದಲ್ಲೇ ಕಂಡುಬಂದಿರದ, ಜ್ಞಾನವೆಂಬ ಅಬ್ಬರದಿಂದಲೂ ಭಕ್ತಿಯೆಂಬ ಅಲೆಗಳಿಂದಲೂ ಕೂಡಿದ, ಶ್ರೀರಾಮಕೃಷ್ಣರೆಂಬ ಭಾವಗಂಗೆಯ ಮಹಾಪೂರವನ್ನು ಮಥುರನ ಸಂದೇಹವೆಂಬ ಐರಾವತವು ಎಷ್ಟು ಹೊತ್ತು ಎದುರಿಸಬಲ್ಲುದು? ಸ್ವಲ್ಪ ಹೊತ್ತಿನಲ್ಲೇ ಅದು ಕೊಸರಿ ಸುತ್ತಾಡಿ ಬಿದ್ದು ಎಲ್ಲಿಯೋ ಕೊಚ್ಚಿಹೋಯಿತು. ಸಂಪೂರ್ಣ ಪರಾಜಿತನಾದ ಮಥುರ ಮತ್ತೇನು ಮಾಡಬಲ್ಲ? 'ಅನ್ಯಥಾ ಶರಣಂ ನಾಸ್ತಿ' ಎಂದು ಶ್ರೀರಾಮಕೃಷ್ಣರ ಚರಣಗಳಲ್ಲಿ ಶರಣಾದ.

ಶ್ರೀರಾಮಕೃಷ್ಣರ ಬಾಲಕಸಹಜ ಸರಳ ಸ್ವಭಾವ, ಮಾತಿನ ಮಾಧುರ್ಯ, ಕಣ್ತಣಿಸುವ ರೂಪ—ಇವುಗಳಿಂದಾಗಿ ಪ್ರಥಮ ದರ್ಶನದಿಂದಲೇ ಮಥುರ ಅವರಿಗೆ ಮನಸೋತಿದ್ದ. ಕೆಲದಿನಗಳಲ್ಲೇ ಅವರ ವಿಚಿತ್ರ ವರ್ತನೆಯ ಬಗ್ಗೆ, ಹುಚ್ಚು ಪೂಜೆಯ ಬಗ್ಗೆ ದೂರುಗಳು ಬಂದುವು. ಆದರೂ ಅವನು ಉದ್ವೇಗಗೊಳ್ಳಲಿಲ್ಲ. 'ಈಗಾಗಲೇ ಯಾರನ್ನು ನಾನು ಸರಳ ಸ್ವಭಾವದವನು, ದೈವಭಕ್ತ ಎಂದು ತಿಳಿದು ವಿಶ್ವಾಸವಿರಿಸಿದ್ದೇನೋ ಅಂಥವನ ವಿರುದ್ಧವಾದ ಯಾವ ಮಾತನ್ನೂ ಸ್ವತಃ ಪರೀಕ್ಷಿಸದೆ ನಂಬಬಾರದು' ಎಂದು, ನ್ಯಾಯಪರನಾದ ಆತನ ಮನಸ್ಸಿಗೆ ತೋರಿತು. ಆದ್ದರಿಂದ ತಾನೇ ಸ್ವತಃ ರಹಸ್ಯವಾಗಿ ಬಂದು ಅವರ ವರ್ತನೆಯನ್ನು ಸೂಕ್ಷ್ಮವಾಗಿ ಗಮನಿಸಿದ. ಬಳಿಕ, 'ಯುವಕ ಗದಾಧರನು ಭಕ್ತಿ ಪ್ರೇಮ ಸರಳತೆಗಳ ಸಾಕಾರರೂಪವೇ ಸರಿ; ಆದರೆ ಭಕ್ತಿಯ ಆಧಿಕ್ಯದಿಂದಾಗಿ ಹೀಗೆ ವರ್ತಿಸುತ್ತಿದ್ದಾನೆ' ಎಂಬ ಸಿದ್ಧಾಂತಕ್ಕೆ ಬಂದ. ಆದರೂ ಸ್ವಭಾವತಃ ಲೌಕಿಕಬುದ್ಧಿಯವನಾದ ಅವನು ಶ್ರೀರಾಮಕೃಷ್ಣರಿಗೆ ಸೂಕ್ಷ್ಮವಾಗಿ ತಿಳಿಯಹೇಳಿದ: "ನೋಡಿ, ಯಾವುದನ್ನಾದರೂ ಮಿತಿ ಮೀರದಂತೆ ಮಾಡಿದರೆ ಲೇಸು. ಈ ಭಕ್ತಿ-ಶ್ರದ್ಧೆಯೇನೋ ಒಳ್ಳೆಯದೆ. ಆದರೆ ಹೀಗೆ ಮೈಮೇಲೆ ಪ್ರಜ್ಞೆ ತಪ್ಪಿದವರಂತೆ ವರ್ತಿಸಿದರೆ ಯಾರಾದರೂ ಸರಿಯೆನ್ನುತ್ತಾರೆಯೆ? ಅದರಿಂದ ಸುಮ್ಮನೆ ಅನ್ಯಾಯವಾಗಿ ಜನಗಳ ಬಾಯಿಗೀಡಾಗಬೇಕಾಗುತ್ತದೆ, ಅಷ್ಟೆ. ಅಲ್ಲದೆ, ನಾಲ್ಕು ಜನ ಹೇಳಿದ ಹಾಗೆ ಕೇಳದೆ, ನಾವೇ ಸ್ವೇಚ್ಛೆಯಿಂದ ಏನೋ ಮಾಡಹೊರಟರೆ ಹೆಚ್ಚುಕಡಿಮೆಯಾಗಬಹುದು." ಮಥುರನು ಶ್ರೀರಾಮಕೃಷ್ಣರಿಗೆ ಹೀಗೆ ತಿಳಿಯಹೇಳಿದರೂ, ಅವರ ಸತ್ಸಹವಾಸದಿಂದ ಅವನಲ್ಲೇ ಸುಪ್ತವಾಗಿದ್ದ ಭಕ್ತಿ ಆಗಾಗ ಜಾಗೃತವಾಗುವುದಿತ್ತು. ಆಗ ಅವನು ಯೋಚಿಸುತ್ತಿದ್ದ: 'ಆದರೆ ರಾಮಪ್ರಸಾದ ಮೊದಲಾದ ಸಾಧಕರೂ ಕೂಡ ಭಕ್ತಿಯಿಂದ ಹೀಗೆ ಹುಚ್ಚರಂತೆ ವರ್ತಿಸಿದರೆಂದು ಕೇಳಿದ್ದೇನೆ. ಠಾಕೂರರಿಗೂ ಹಾಗೆಯೇ ಆಗಿರಬಹುದೆ . . . ?' 'ಕೊನೆಗೆ ಅವನು, ಇವರು ತಮಗಿಷ್ಟ ಬಂದಂತೆಯೇ ಮಾಡಿಕೊಂಡು ಹೋಗಲಿ. ಆದರೆ ಪರಿಣಾಮ ಏನಾಗುವುದೆಂಬುದನ್ನು ಮಾತ್ರ ನಾನು ಗಮನಿಸುತ್ತಿರಬೇಕು' ಎಂದು ಸಂಕಲ್ಪಿಸಿದ.

ಎಷ್ಟಾದರೂ ಮಥುರ ಕಾಲೇಜು ವಿದ್ಯಾಭ್ಯಾಸ ಪಡೆದವನು. ಆಗಿನ ಕಾಲಕ್ಕೆ ಅದೊಂದು ಅತ್ಯಂತ ಪ್ರತಿಷ್ಠೆಯ ಸಂಗತಿ. ಆಂಗ್ಲಭಾಷಾ ಪಾಂಡಿತ್ಯದೊಂದಿಗೆ ಪಾಶ್ಚಾತ್ಯ ಚಿಂತನ ಕ್ರಮವನ್ನು ಆತ ಮೈಗೂಡಿಸಿಕೊಂಡಿದ್ದ. ಇದರಿಂದಾಗಿ ವೈಚಾರಿಕತೆ-ವೈಜ್ಞಾನಿಕ

ಮನೋಭಾವಗಳೂ ಅವನ ವ್ಯಕ್ತಿತ್ವವನ್ನು ರೂಪಿಸಿದ್ದುವು. ಸಮಕಾಲೀನ ಚಿಂತಕರಾದ ರಾಜಾ ರಾಮಮೋಹನ ರಾಯ್ ಮೊದಲಾದವರ ವಿಚಾರಧಾರೆಯ ಪ್ರಭಾವವೂ ಅವನ ಮೇಲೆ ಆಗಿದ್ದಿರಲೇ ಬೇಕು. ಇಷ್ಟೆಲ್ಲ ವಿದ್ಯಾವಂತನೂ ಬುದ್ಧಿವಂತನೂ ಆದ ಮಥುರನ ಮನಸ್ಸಿನಲ್ಲಿ, 'ನಾನು ಯಾರಿಗೇನು ಕಡಿಮೆ!' ಎಂಬ ಬಿಂಕವಿದ್ದರೆ ಆಶ್ಚರ್ಯವೇನು? ಆದ್ದರಿಂದ ಶ್ರೀರಾಮಕೃಷ್ಣರ ಮಾತುಗಳೋ ವರ್ತನೆಯೋ ಒಪ್ಪಿಗೆಯಾಗದಿದ್ದಲ್ಲಿ ತನ್ನ ಯುಕ್ತಿಯುತವಾದ ಮಾತುಗಳಿಂದ, ತರ್ಕದಿಂದ ಅವರ ಅಭಿಪ್ರಾಯವನ್ನು ಪ್ರತಿಭಟಿಸುತ್ತಿದ್ದ.

ಒಂದು ದಿನ ಅವನು ಶ್ರೀರಾಮಕೃಷ್ಣರೊಂದಿಗೆ ಮಾತನಾಡುತ್ತಿರುವಾಗ 'ಭಗವಂತನು ಜಗನ್ನಿಯಾಮಕ' ಎಂಬ ವಿಷಯ ಬಂದಿತು. ಆಗ ಮಥುರನೆಂದ: "ಅದೇನೋ ನಿಜ, ಆದರೆ ಭಗವಂತನೂ ತನ್ನ ಆ ನಿಯಮಗಳನ್ನು ಅನುಸರಿಸಿಯೇ ನಡೆಯಬೇಕು. ತಾನು ಒಮ್ಮೆ ಮಾಡಿದ ನಿಯಮವನ್ನು ಸ್ವತಃ ಅವನೂ ಉಲ್ಲಂಘಿಸಲಾರ."

ಶ್ರೀರಾಮಕೃಷ್ಣರು: "ಆಹಾ, ಇದೆಂಥ ವಾದ ನಿನ್ನದು! ಯಾರು ನಿಯಮವನ್ನು ಮಾಡಿದ್ದಾನೋ, ಅವನು ಇಚ್ಛಿಸಿದರೆ ಯಾವಾಗ ಬೇಕಾದರೂ ಅದನ್ನು ಮುರಿಯಲೂ ಬಲ್ಲ. ಅಥವಾ ಅದರ ಬದಲಿಗೆ ಮತ್ತೊಂದು ಹೊಸ ನಿಯಮವನ್ನು ಹಾಕಲೂ ಬಲ್ಲ. ಇದರಲ್ಲೇನು ಅನುಮಾನ?"

ಮಥುರ: "ಅದು ಹೇಗಾದೀತು? ಈಗ, ಒಂದು ಗಿಡದ ಉದಾಹರಣೆಯನ್ನೇ ತೆಗೆದುಕೊಳ್ಳಿ. ಕೆಂಪು ಹೂವಿನ ಗಿಡ ಎಂದಿಗೂ ಬಿಳಿ ಹೂಗಳನ್ನು ಬಿಡಲಾರದು. ಏಕೆಂದರೆ, ಅವನು ಮಾಡಿದ ನಿಯಮವೇ ಹಾಗಿದೆ. ಇಲ್ಲದೆಹೋದರೆ, ಕೆಂಪು ಹೂವಿನ ಗಿಡದಲ್ಲಿ ಬಿಳಿ ಹೂವು ಬರಲಿ ನೋಡೋಣ!"

ಶ್ರೀರಾಮಕೃಷ್ಣರು ಸ್ವಲ್ಪವೂ ಸಿಧಾನಿಸದೆ ಹೇಳಿದರು: "ಓ, ಖಂಡಿತವಾಗಿಯೂ ಸಾಧ್ಯ! ಅವನು ಇಷ್ಟಪಟ್ಟರೆ ಅದೂ ಆಗಿಬಿಡುತ್ತದೆ."

ಅವರೆಷ್ಟು ಹೇಳಿದರೂ ಮಥುರನಿಗೆ ಮಾತ್ರ ಒಪ್ಪಿಗೆಯಾಗಲಿಲ್ಲ. ಮರುದಿನ ಶ್ರೀರಾಮಕೃಷ್ಣರು ತೋಟದ ಕಡೆಗೆ ಹೋಗಿದ್ದಾಗ ಅಲ್ಲೊಂದು ದೃಶ್ಯವನ್ನು ಕಂಡರು—ಒಂದು ಕೆಂಪು ದಾಸವಾಳ ಗಿಡದ ಒಂದೇ ಕೊಂಬೆಯಲ್ಲಿ ಎರಡು ಹೂಗಳು ಬಿಟ್ಟಿವೆ; ಒಂದು ಕೆಂಪು ಬಣ್ಣ, ಮತ್ತೊಂದು ಅಚ್ಚ ಬಿಳಿ ಬಣ್ಣ! ಬಿಳಿ ಹೂವಿನಲ್ಲಿ ಒಂದೇ ಒಂದು ಕೆಂಪು ಚುಕ್ಕೆಯೂ ಇಲ್ಲ! ಶ್ರೀರಾಮಕೃಷ್ಣರು ಆ ಕೊಂಬೆಯನ್ನು ಕಿತ್ತು ತಂದರು. ಮಥುರನ ಮುಂದೆ ಹಿಡಿದು, "ಇಗೋ, ನೋಡು" ಎಂದರು.

ಮಥುರ ನೋಡಿದ. ಕಣ್ಣರಳಿಸಿಕೊಂಡು ನೋಡಿದ. ಏನು ಕಾಣುತ್ತಿದೆ? ಒಂದೇ ಕೊಂಬೆಯಲ್ಲಿ ಎರಡು ಬಣ್ಣದ ಹೂಗಳು—ಒಂದು ಕೆಂಪು . . . ಇನ್ನೊಂದು . . . ಬಿಳಿ! ನಿನ್ನೆಯಷ್ಟೇ ತಾನು ಯಾವುದು ಸಾಧ್ಯವಿಲ್ಲವೆಂದು ವಾದಿಸಿದ್ದನೋ ಅದನ್ನೇ ಇಂದು, ಸಾಧ್ಯವೆಂದು ಸಾಬೀತುಮಾಡುತ್ತಿದ್ದಾರೆ ಶ್ರೀರಾಮಕೃಷ್ಣರು! ಸಾಬೀತು ಮಾಡಿ ತೋರಿಸುತ್ತಿದ್ದಾರೋ ಅಥವಾ ಅದನ್ನು 'ಸಾಧ್ಯ'ಮಾಡಿ ತೋರಿಸುತ್ತಿದ್ದಾರೋ!

ಮಥುರ ಕೈಜೋಡಿಸಿ ನುಡಿದ: "ಅಪ್ಪಾ, ಒಪ್ಪಿದೆ ನಿಮ್ಮ ಮಾತು. ಸೋತೆ ನಾನು."

ಅಂದು ಅವನು ಹಾಗೆಂದರೂ ಅವನ ತರ್ಕಬುದ್ಧಿ ಅಷ್ಟು ಬೇಗ ಸೋಲೊಪ್ಪ

ಲಿಲ್ಲ. ಸಂಶಯಪಿಶಾಚಿ ತೊಲಗಲಿಲ್ಲ. ಎಷ್ಟೋ ವಿಷಯಗಳ ಬಗ್ಗೆ ಹೀಗೆಯೇ ವಾದ ಮಾಡುತ್ತಿದ್ದ. ಶ್ರೀರಾಮಕೃಷ್ಣರ ಭಾವವೈವಿಧ್ಯವನ್ನೆಲ್ಲ ಕಂಡು ಅವನಿಗೆ ಕೆಲವೊಮ್ಮೆ ಕುತೂಹಲ. ಅವರ ವಿಚಿತ್ರ ವರ್ತನೆಯನ್ನು ಕಂಡು, 'ಇದಾವ ಭಯಂಕರ ಬೇನೆಯಿರ ಬಹುದಪ್ಪಾ!' ಎಂಬ ದುಗುಡ; ಜೊತೆಗೆ ಕರುಣೆ. ಇನ್ನೊಮ್ಮೆ, 'ಇದು ನಿಜವಾಗಿಯೂ ಪ್ರಚಂಡ ಭಕ್ತಿಯ ಪರಿಣಾಮವೇ ಸರಿ!' ಎಂಬ ವಿಶ್ವಾಸದಿಂದುದಿಸಿದ ವಿಸ್ಮಯ, ಭಕ್ತಿ. ಹೀಗೆ ಶ್ರೀರಾಮಕೃಷ್ಣರ ಕುರಿತಾಗಿ ಮಥುರನ ಮನಸ್ಸು ಡೋಲಾಯಮಾನವಾಗಿತ್ತು. ಎಷ್ಟೋ ಸಲ ಅವರ ಕುರಿತಾಗಿಯೇ ಆಲೋಚಿಸುತ್ತ ಕುಳಿತುಬಿಡುತ್ತಿದ್ದ. ಅವರ ಕುರಿತಾಗಿ ತಲೆಕೆಡಿಸಿಕೊಳ್ಳದೆ ಸುಮ್ಮನೆ ಕುಳಿತುಕೊಳ್ಳುವುದಾದರೂ ಹೇಗೆ?— ಶ್ರೀರಾಮಕೃಷ್ಣರು ಆ ರೀತಿ ದಿನಕ್ಕೊಂದು ಬಗೆಯ ಆವೇಶ ತಾಳಿ, ದಿನಕ್ಕೊಂದು ಬಗೆಯ ಪೂಜೆ-ಸಾಧನೆ ಮಾಡುತ್ತಿರುವಾಗ?

ಅವನು ಶ್ರೀರಾಮಕೃಷ್ಣರ ವಿಷಯದಲ್ಲಿ ಯಾವೊಂದು ದೃಢ ನಿರ್ಧಾರಕ್ಕೂ ಬರಲಾಗದೆ, ಹೀಗೆ ಬಹು ಕಾಲ ತೊಳಲಾಡಿದ. ಆಗ ಲಭಿಸಿತು ಅವನಿಗೆ ಪರಮ ಸೌಭಾಗ್ಯ! ಶ್ರೀರಾಮಕೃಷ್ಣರ ಪವಿತ್ರ ಶರೀರದಲ್ಲಿ ಶಿವ-ಶಕ್ತಿಯರ ದರ್ಶನ ಮಾಡುವ ಅತಿಶಯ ಪುಣ್ಯ!!

ಅಂದಿನಿಂದ ಶ್ರೀರಾಮಕೃಷ್ಣರ ಬಗ್ಗೆ ಮಥುರನ ದೃಷ್ಟಿಕೋನ ಬಹಳಷ್ಟು ಬದಲಾಯಿತು. ಆತನ ಭಕ್ತಿ-ವಿಶ್ವಾಸ ಬಹುಮಟ್ಟಿಗೆ ಪಕ್ವವಾಯಿತು. ಏಕೆಂದರೆ, ತಾನು ಮೊದಲ ದರ್ಶನದಿಂದಲೂ ಯಾರಲ್ಲಿ ಆಕರ್ಷಿತನಾಗಿದ್ದನೋ, ಯಾರ ಕುರಿತಾಗಿ ತನ್ನಲ್ಲಿ ಯಾವಾಗಲೂ ಅಕಾರಣವಾದ, ಅನಿರ್ವಚನೀಯವಾದ ಪ್ರೇಮ-ಭಕ್ತಿ-ವಿಶ್ವಾಸ ಗಳುಂಟಾಗುತ್ತಿದ್ದುವೋ ಆ 'ಠಾಕೂರ'ರು ನಿಜಕ್ಕೂ ಸಾಮಾನ್ಯರಲ್ಲ ಎಂಬ ತಿಳಿವಳಿಕೆ ಅವನಲ್ಲಿ ಮೊದಲ ಬಾರಿಗೆ ಉಂಟಾಯಿತು. ಜಗನ್ಮಾತೆಯು ಕೃಪೆ ಮಾಡಿ ತನಗಾಗಿಯೇ ಶ್ರೀರಾಮಕೃಷ್ಣರ ದೇಹದಲ್ಲಿ ಸಾಕ್ಷಾತ್ತಾಗಿ ಇದ್ದಾಳೆ; ಮತ್ತು ತನ್ನ ಜಾತಕದಲ್ಲಿಯೇ ಹೇಳಿರುವಂತೆ ಆ ತನ್ನ ಇಷ್ಟದೇವತೆಯು ತನ್ನ ಜೊತೆಯಲ್ಲಿಯೇ ಓಡಾಡುತ್ತಿದ್ದಾಳೆ ಎಂದು ಮಥುರನಿಗೆ ಮನವರಿಕೆಯಾಯಿತು. ಮತ್ತು ಅಂದಿನಿಂದಲೇ ಅವರಿರ್ವರ ಸಂಬಂಧ ಮತ್ತಷ್ಟು ಗಾಢವಾಯಿತು.

ನಿಜಕ್ಕೂ ಮಥುರನ ಭಾಗ್ಯದ ಬಾಗಿಲು ತೆರೆದುಕೊಂಡಿತ್ತು! ಸಂಸಾರದಲ್ಲಿ ಬದ್ಧರಾದ ಸಾಮಾನ್ಯ ಮಾನವರು ಮುಕ್ತಪುರುಷರ ಸೇವೆ ಮಾಡಿದರೆ, ಅವರನ್ನು ಪ್ರೀತಿಸಿದರೆ, ಅವರ ಶುಭಕರ್ಮಗಳ ಫಲವನ್ನು ತಾವು ಗಳಿಸಿಕೊಳ್ಳುತ್ತಾರೆ ಮತ್ತು ಅವರನ್ನು ಹಿಂಸಿಸಿದರೆ, ದ್ವೇಷಿಸಿದರೆ ಅವರ ಪಾಪಕರ್ಮಗಳ ಫಲವನ್ನು ತಾವು ಅನುಭವಿಸುತ್ತಾರೆ ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಸಾಮಾನ್ಯ ಮಾನವರು ತಮ್ಮತಮ್ಮ ಪಾಪಪುಣ್ಯಗಳೆರಡರ ಫಲವನ್ನೂ ತಾವೇ ಅನುಭವಿಸಬೇಕಾಗುತ್ತದೆಂಬುದು ಸರಿಯೇ ಸರಿ. ಆದರೆ ಮುಕ್ತಪುರುಷರ ವಿಷಯ ಬೇರೆ. ದೇಹವಿರುವವರೆಗೆ ಅವರೂ ಕರ್ಮ ಮಾಡಲೇಬೇಕಾಗುತ್ತದೆ; ಆದರೆ ಅದರ ಫಲ ಮಾತ್ರ ಅವರಿಗೆ ಅಂಟುವುದಿಲ್ಲ. ಅದು, ಹಿಂದೆ ಹೇಳಿದ ರೀತಿಯಲ್ಲಿ, ಇತರರಿಗೆ ವರ್ಗಾವಣೆಯಾಗಿಬಿಡುತ್ತದೆ. ಸಾಮಾನ್ಯ ಮುಕ್ತಪುರುಷರ ಸೇವೆ ಮಾಡುವುದರಿಂದಲೇ ಅಂತಹ ಶ್ರೇಷ್ಠ ಪುಣ್ಯಸಂಪಾದನೆ ಯಾಗುವುದಾದರೆ, ಇನ್ನು ಶ್ರೀರಾಮಕೃಷ್ಣರಂತಹ ಅವತಾರಪುರುಷರಿಗೆ ಪ್ರೇಮ-ಭಕ್ತಿ

ಪೂರ್ವಕವಾಗಿ ಮಾಡಿದ ಸೇವೆಯಿಂದ ಮಥುರನಿಗೆ ಇನ್ನೆಂಥ ಫಲ ದೊರಕಿರಬೇಕು !

ದಿನಗಳುರುಳಿದಂತೆ ಮಥುರನು ಶ್ರೀರಾಮಕೃಷ್ಣರ ಮಹಿಮೆಯನ್ನು ಇನ್ನಷ್ಟು, ಮತ್ತಷ್ಟು ಸ್ಪಷ್ಟವಾಗಿ ಕಾಣತೊಡಗಿದ. ಅದರೊಂದಿಗೆ, ಅವರಲ್ಲಿ ಆತನ ಭಕ್ತಿಯೂ ದೃಢತರವಾಯಿತು. ಈ ನಡುವೆ ಎಷ್ಟೋ ಮಹತ್ವದ ಘಟನೆಗಳಾಗಿಹೋದುವು—ಜಗನ್ಮಾತೆಯ ವಿರಹದಿಂದಾಗಿ ಶ್ರೀರಾಮಕೃಷ್ಣರ ಶರೀರದಲ್ಲುಂಟಾದ ಉರಿ ಮತ್ತು ಅದರ ವಿಫಲ ಚಿಕಿತ್ಸೆ; ದಕ್ಷಿಣೇಶ್ವರಕ್ಕೆ ಭೈರವಿ ಬ್ರಾಹ್ಮಣಿಯ ಆಗಮನ; ಆಕೆ ಶ್ರೀರಾಮಕೃಷ್ಣರ ಆ ವಿಚಿತ್ರ ಕಾಯಿಲೆಯನ್ನು ವಿಚಿತ್ರ ರೀತಿಯಿಂದಲೇ ಗುಣಪಡಿಸಿದ್ದು; ಪಂಡಿತಶ್ರೇಷ್ಠರ ಸಮ್ಮುಖದಲ್ಲಿ ಆಕೆ ಶ್ರೀರಾಮಕೃಷ್ಣರು ಅವತಾರವೆಂದು ವಾದಿಸಿ ವಿಜೇತಳಾದುದು; ಮಹಾ ಪಂಡಿತನೂ ಜ್ಞಾನಿಯೂ ಆದ ತೋತಾಪುರಿಯ ಆಗಮನ ಮತ್ತು ಶ್ರೀರಾಮಕೃಷ್ಣರ ಸಂನ್ಯಾಸ ಸ್ವೀಕರಣ; ಚಂದ್ರಮಣೀ ದೇವಿ ದಕ್ಷಿಣೇಶ್ವರಕ್ಕೆ ಬಂದು ನೆಲಸಿದ್ದು, ಇತ್ಯಾದಿ. ಹಿಂದೆ ಹೇಳಿದ ಅದ್ಭುತ ದರ್ಶನವಾದಾಗಿನಿಂದ ಮಥುರನು ಶ್ರೀರಾಮಕೃಷ್ಣರ ಜೀವನದ ಈ ಎಲ್ಲ ಪ್ರಮುಖ ಘಟನೆಗಳಿಗೆ ಸಮೀಪದ ಸಾಕ್ಷಿಯಾಗಿದ್ದ. ಅವರ ಸಾಧನೆಗಳಿಗೆ ಅಗತ್ಯವಾದ ಯಾವುದೇ ಪದಾರ್ಥವನ್ನು ಕೂಡಲೇ ದೊರಕಿಸಿಕೊಡುತ್ತಿದ್ದ. ಭವತಾರಿಣಿಗೆ ಪಶ್ಚಿಮ ಪ್ರಾಂತದ ಸ್ತ್ರೀಯರು ಧರಿಸುವಂತಹ ಕಾಲಕಡಗ ಮೊದಲಾದ ಆಭರಣಗಳನ್ನು ತೊಡಿಸಬೇಕೆಂಬ ಇಚ್ಛೆ ಶ್ರೀರಾಮಕೃಷ್ಣರ ಮನದಲ್ಲುದಿಸಿದಾಗ ತಕ್ಷಣ ಅವನ್ನು ಮಾಡಿಸಿಕೊಟ್ಟ. ಮಧುರಭಾವ ಸಾಧನೆಯ ಕಾಲದಲ್ಲಿ ಅವರಿಗೆ ಹೆಂಗಸರಂತೆ ವೇಷ ಧರಿಸಬೇಕೆಂಬ ಅಭಿಲಾಷೆ ಯುಂಟಾದಾಗ ಒಡನೆಯೇ ಅವರಿಗಾಗಿ ವಜ್ರದ ಬೆಂಡೋಲೆ, ಕಾಶೀ ಸೀರೆ, ಶಾಲು ಮೊದಲಾದುವುಗಳನ್ನು ತರಿಸಿಕೊಟ್ಟ. ಶ್ರೀರಾಮಕೃಷ್ಣರು ಪಾನಿಹಾಟಿಯಲ್ಲಿ ನಡೆಯುವ ಉತ್ಸವವನ್ನು ನೋಡಲು ಬಯಸಿದಾಗ ಅದಕ್ಕೆ ಎಲ್ಲ ವ್ಯವಸ್ಥೆಯನ್ನೂ ಮಾಡಿಸಿದ; ಅಷ್ಟೇ ಅಲ್ಲ, ಅಲ್ಲಿನ ಜನಜಂಗುಳಿಯಿಂದ ಅವರಿಗೇನಾದರೂ ತೊಂದರೆಯಾಗ ಬಹುದೆಂದು ಊಹಿಸಿ ಅವರ ರಕ್ಷಣೆಗಾಗಿ ತಾನೇ ಸ್ವತಃ ಗೋಪ್ಯವಾಗಿ ಸೇವಕನನ್ನು ಕರೆದುಕೊಂಡು ಹೊರಟುಬಿಟ್ಟ !

ಹೀಗೆ ಮಥುರ ತ್ರಿಕರಣಪೂರ್ವಕವಾಗಿ ಶ್ರೀರಾಮಕೃಷ್ಣರ ಸೇವೆ ಮಾಡಿದುದನ್ನು ನೋಡುತ್ತೇವೆ. ಆದರೆ ಇದರೊಂದಿಗೆ, ಅವರನ್ನು ಪರೀಕ್ಷೆ ಮಾಡಲು—ಅಥವಾ, ಅವರಿಗೆ ನಿಜವಾಗಿಯೂ ಉಪಕಾರವನ್ನೇ ಮಾಡಲು—ವೇಶ್ಯೆಯರನ್ನು ಕಳುಹಿಸಿದ್ದು; ದೇವಸ್ಥಾನದ ಆಸ್ತಿಯನ್ನೆಲ್ಲ ಅವರ ಹೆಸರಿನಲ್ಲಿ ಬರೆದುಕೊಡಲು ಪ್ರಸ್ತಾಪ ಮಾಡಿದಾಗ ಅವರು ರೇಗಿ ಅವನಿಗೆ ಹೊಡೆಯಲು ಹೋದದ್ದು; ಜಗದಂಬಾದಾಸಿ ಪ್ರಾಣಾಂತಿಕ ಕಾಯಿಲೆಗೆ ಗುರಿಯಾದಾಗ ಅವನು ಅವರಲ್ಲಿ ಶರಣಾದದ್ದು ಮತ್ತು ಅವರು ನೀಡಿದ ಅಭಯವಾಣಿಯಂತೆಯೇ ಆಕೆ ಗುಣ ಹೊಂದಿದ್ದು—ಇಂತಹ ಘಟನೆಗಳನ್ನೂ ನೋಡಿ ದೆವು. ಇವುಗಳೆಲ್ಲದರ ಪರಿಣಾಮವಾಗಿ ಶ್ರೀರಾಮಕೃಷ್ಣರ ಮೇಲಿನ ಮಥುರನ ಪ್ರೇಮ ಭಕ್ತಿ ವಿಶ್ವಾಸಗಳು ಮತ್ತಷ್ಟು ದೃಢವಾಗುತ್ತ ಬಂದುವು.

ಹೀಗಾದುದು ತೀರ ಸಹಜವೇ ಎನ್ನಬೇಕು. ತಾನು ಒಡ್ಡಿದ ಎಲ್ಲ ಪರೀಕ್ಷೆಗಳಲ್ಲೂ ಶ್ರೀರಾಮಕೃಷ್ಣರು ಒಂದಾದಮೇಲೊಂದರಂತೆ ಉತ್ತೀರ್ಣರಾಗುತ್ತ ಬಂದಂತೆ ಅವನಿಗೆ ಅವರ ಅಲೌಕಿಕ ವ್ಯಕ್ತಿತ್ವವು ಸಹಸ್ರಪಾಲು ಹೆಚ್ಚು ಶೋಭಾಯಮಾನವಾಗಿ ಕಂಡಿತು.

ಮತ್ತೊಂದು ಕಡೆಯಿಂದ ಅವರ ಅಪಾರ ಅಹೈತುಕ ಪ್ರೇಮವು ಆತನ ಹೃದಯವನ್ನು ಸಂಪೂರ್ಣವಾಗಿ ಗೆದ್ದುಕೊಂಡಿತು. ಮಥುರ ಆಲೋಚಿಸಿದ: 'ಹಲವು ಲಕ್ಷ ರೂಪಾಯಿ ಬೆಲೆಬಾಳುವ ಆಸ್ತಿಯನ್ನು ಕೊಡುವೆನೆಂದರೂ ಇವರ ವೈರಾಗ್ಯಬುದ್ಧಿ ವಿಚಲಿತವಾಗ ಲಿಲ್ಲ! ಸುಂದರಿಯರಾದ ಯುವತಿಯರಿಂದ ಇವರ ಮನಸ್ಸು ಚಂಚಲವಾಗಲಿಲ್ಲ! ಅಷ್ಟೇಕೆ? ಮನುಷ್ಯನನ್ನು ದೇವರೆಂದು—ದೇವರ ಅವತಾರವೆಂದು—ಕರೆಯುವುದ ಕ್ಕಿಂತ ಹೆಚ್ಚಿನ ಸನ್ಮಾನ ಇನ್ನೇನಿದೆ? ಅದು ಕೂಡ ಲಭಿಸಿಯಾಯಿತು ಇವರಿಗೆ. ಇಂತಹ ಸಕಲ ಸೌಭಾಗ್ಯ-ಸನ್ಮಾನಗಳಿಂದಲೂ ಅವರಲ್ಲಿ ಕಿಂಚಿತ್ತಾದರೂ ಅಹಂಕಾರವುದಿಸಲಿಲ್ಲ! ಇವರು ಇಂಥ ವೈರಾಗ್ಯನಿಧಿ, ಗುಣಮಣಿ. ಆದರೂ ಇವರು ನನ್ನ ದೌರ್ಬಲ್ಯವನ್ನೆಲ್ಲ ಕಂಡು ಕೂಡ ನನ್ನನ್ನು ತಿರಸ್ಕರಿಸುವುದೂ ಇಲ್ಲ, ದ್ವೇಷಿಸುವುದೂ ಇಲ್ಲ. ಬದಲಾಗಿ ತಮ್ಮ ಸ್ವಕೀಯರಿಗಿಂತಲೂ ಹೆಚ್ಚಾಗಿ ನನ್ನನ್ನು ಪ್ರೀತಿಸುತ್ತಾರೆ! ಮತ್ತೆಮತ್ತೆ ವಿಪತ್ತು ಗಳಿಂದ ಪಾರುಮಾಡಿ ಉದ್ಧರಿಸುತ್ತಿದ್ದಾರೆ! ಸದಾ ನನ್ನ ಶ್ರೇಯಸ್ಸಿನ ಚಿಂತನೆಯನ್ನೇ ಮಾಡುತ್ತಿದ್ದಾರೆ. ಇದಕ್ಕೆಲ್ಲ ಕಾರಣವೇನು? ಇವರು ಮಾನವದೇಹಧಾರಿಯಾದರೂ ಈ ಲೋಕದವರಲ್ಲ; ಯಾವ ಲೋಕದಲ್ಲಿ ಕತ್ತಲೆಂಬುದೇ ಇಲ್ಲವೋ ಅಲ್ಲಿನ ನಿವಾಸಿ ಇವರು! ಇವರ ತ್ಯಾಗ, ಆತ್ಮಸಂಯಮ, ಜ್ಞಾನ, ಭಕ್ತಿ—ಮಾತ್ರವಲ್ಲ, ಇವರ ಪ್ರತಿಯೊಂದು ಕಾರ್ಯವೂ ಎಷ್ಟು ಅದ್ಭುತವಾಗಿದೆ! ಎಲ್ಲಕ್ಕಿಂತ ಮಿಗಿಲಾಗಿ, ನನ್ನಂತಹ ದುರ್ಬಲರೂ ಅಹಂಕಾರಿಗಳೂ ಆದ ಜೀವರ ಮೇಲಿನ ಇವರ ಕರುಣೆ, ಪ್ರೇಮ ಅದೆಷ್ಟು ಅದ್ಭುತ!'

ಇದರೊಂದಿಗೆ ಇನ್ನೊಂದು ವಿಷಯವನ್ನು ಮಥುರ ಭಾವಿಸಿ ಅನುಭವಿಸುತ್ತ ಲಿದ್ದ. ಅದು ಶ್ರೀರಾಮಕೃಷ್ಣರ ಮಾಧುರ್ಯ! ಅವರಲ್ಲಿ ಅಲೌಕಿಕ ದೈವೀಶಕ್ತಿಯ ಪ್ರಭೆ ಅಷ್ಟು ಉಜ್ವಲವಾಗಿ ತೋರಿಬರುತ್ತಿದ್ದರೂ ಅವರು ಮಾತ್ರ ಬಾಲಕರಿಗಿಂತಲೂ ಬಾಲಕರಾಗಿದ್ದಾರೆ! ಒಂದಿನಿತಾದರೂ ಅಹಂಕಾರವಿಲ್ಲ. ಇದೆಂಥ ಚಮತ್ಕಾರ! ತಮ್ಮ ಮನಸ್ಸಿನಲ್ಲಿ ಯಾವುದೇ ಭಾವವುಂಟಾಗಲಿ, ಐದು ವರ್ಷದ ಮಗುವಿನಂತೆ, ಅದನ್ನು ಮರೆಮಾಚುವ ಪ್ರಯತ್ನವನ್ನೇ ಮಾಡದೆ ಹೊರಗೆಡವಿಬಿಡುತ್ತಾರೆ! ಒಳಗೂ ಹೊರಗೂ ಸದಾ ಏಕಭಾವ! ಮನಸ್ಸಿನಲ್ಲಿ ಬಂದುದನ್ನೇ ನಿಷ್ಕಪಟವಾಗಿ ಮಾತಿ ನಿಂದಲೂ ಕಾರ್ಯದಿಂದಲೂ ವ್ಯಕ್ತಪಡಿಸುತ್ತಾರೆ; ಆದರೆ ಇತರರಿಗೆ ಬೇಸರವಾಗುವಂ ತಹ ಮಾತು ಒಮ್ಮೆಯಾದರೂ ಅವರ ಬಾಯಿಂದ ಬರಲಾರದು! ತಮಗೆ ಒಬ್ಬರಿಂದ ಎಷ್ಟೇ ಕಷ್ಟವಾಗಲಿ, ಅದನ್ನು ಬಾಯಿತಪ್ಪಿಯೂ ಬಹಿರಂಗಪಡಿಸುವುದಿಲ್ಲ. ಇದು ಮನುಷ್ಯಮಾತ್ರರಿಗೆ ಸಾಧ್ಯವೆ?

ಹಾಲ್ದಾರ ಎಂಬೊಬ್ಬ ಪುರೋಹಿತ ಬಹು ಕಾಲದಿಂದಲೂ ಮಥುರನ ಆಶ್ರಯ ದಲ್ಲಿದ್ದ (ಇವನು ಶ್ರೀರಾಮಕೃಷ್ಣರ ನಂಟನಾದ ಹಲಧಾರಿಯಲ್ಲ). ಇವನು ಕಲ್ಕತ್ತದ ಕಾಳೀಘಾಟಿನಲ್ಲಿದ್ದವನು. ಏನಾದರೂ ಮಾಡಿ ಮಥುರನನ್ನು ಒಲಿಸಿಕೊಂಡು ಆತನ ಮೇಲೆ ವರ್ಚಸ್ಸು ಬೀರಬೇಕು; ತನ್ಮೂಲಕ ಕೈತುಂಬ ಹಣವನ್ನೂ ಅಧಿಕಾರವನ್ನೂ ಗಳಿಸಿಕೊಳ್ಳಬೇಕು ಎಂದು ಹೊಂಚು ಹಾಕುತ್ತಲೇ ಇದ್ದ. ಆದರೆ ಎಷ್ಟೇ ಸೋಗು ಹಾಕಿದರೂ, ವಿನಯ ಪ್ರದರ್ಶಿಸಿದರೂ ಬುದ್ಧಿವಂತನಾದ ಯಜಮಾನನಿಗೆ ತಿಳಿಯದಿ ದ್ದೀತೆ? ಮಥುರ ಈತನನ್ನು ಎಷ್ಟು ಬೇಕೋ ಅಷ್ಟರಲ್ಲೇ ಇಟ್ಟಿದ್ದ.

ಆದರೆ ಬರಬರುತ್ತ ಮಥುರನ ಮೇಲೆ ಶ್ರೀರಾಮಕೃಷ್ಣರ ಪ್ರಭಾವ ಅಗಾಧವಾಗಿ ಹೆಚ್ಚುತ್ತ ಬಂದುದನ್ನು ಕಂಡು ಹಾಲ್ದಾರನಿಗೆ ಹೊಟ್ಟೆಯಲ್ಲಿ ಕಿಚ್ಚಿಟ್ಟಂತಾಯಿತು. ಅವನು ಆಲೋಚಿಸಿದ: 'ಈ ಧಣಿಗಳಿಗೋ ಇಪ್ಪತ್ನಾಲ್ಕು ಗಂಟೆಯೂ ಆ ಹುಚ್ಚು ಪೂಜಾರಿಯದೇ ಚಿಂತೆ! ಎಲ್ಲಾ ಬಿಟ್ಟು ಆ ತಿಕ್ಕಲು ಪೂಜಾರಿಗೆ ಬಲಿಯಾಗಿದ್ದಾರಲ್ಲ ಸಾಹುಕಾರರು! ಅವನು ಬಂದಾಗಿನಿಂದ ನಮಗೆಲ್ಲ ಮರ್ಯಾದೆಯೇ ಇಲ್ಲವಾಗಿದೆ. ನ್ಯಾಯವಾಗಿ ನಮಗೆ ಸಲ್ಲಬೇಕಾದ್ದೆಲ್ಲ ಅವನ ಕೈಸೇರುತ್ತಿದೆ. ನನ್ನಲ್ಲಿ ಇಲ್ಲದ್ದು ಅವನಲ್ಲೇನಿದೆ ಅಂಥದ್ದು!... ಮತ್ತಿನ್ನೇನು? ಏನೋ ಮಾಟ-ಮಂತ್ರ ಮಾಡಿ ಧಣಿಗಳನ್ನು ವಶಪಡಿಸಿಕೊಂಡಿದ್ದಾನೆ ಅವನು. ನೋಡಿದರೆ ಏನೂ ತಿಳಿಯದ ಮಗುವಿನ ಹಾಗೆ ನಾಟಕವಾಡುತ್ತಾನೆ! ಅಷ್ಟೊಂದು ಸಾಚಾತನ ಇದ್ದರೆ, ತಾನು ಪ್ರಯೋಗಿಸಿದ ಆ ಮಂತ್ರವನ್ನು ನನಗೂ ಹೇಳಿಕೊಡಲಿ ನೋಡೋಣ? ನಾನು ಇಷ್ಟು ವರ್ಷ ನನ್ನ ಬುದ್ಧಿಯನ್ನೆಲ್ಲ ಖರ್ಚು ಮಾಡಿದ್ದರಿಂದ ಸಾಹುಕಾರರು ಇನ್ನೇನು ನನ್ನ ವಶಕ್ಕೆ ಬರುವುದರಲ್ಲಿದ್ದರು. ಅಷ್ಟರಲ್ಲಿ ಎಲ್ಲಿಂದಲೋ ಬಂತು ಈ ಪಿಶಾಚಿ!'

ಹೀಗೆ ಈ ಹಾಲ್ದಾರ ಪುರೋಹಿತ ಎಷ್ಟೋ ದಿನಗಳಿಂದ ಲೆಕ್ಕ ಹಾಕುತ್ತಿದ್ದ. ಒಂದು ದಿನ ಅವನಿಗೆ ಅನುಕೂಲಕರವಾದ ಸಂದರ್ಭ ಒದಗಿ ಬಂತು. ಅಂದು ಮಥುರ 'ಠಾಕೂರ'ರನ್ನು ತನ್ನ ಜಾನ್ ಬಜಾರಿನ ಮನೆಗೆ ಕರೆದುಕೊಂಡು ಹೋಗಿದ್ದ. ಸಂಜೆಯ ವೇಳೆ. ಮನೆಯ ಒಂದು ಕೋಣೆಯಲ್ಲಿ ಶ್ರೀರಾಮಕೃಷ್ಣರು ತಮ್ಮಷ್ಟಕ್ಕೆ ತಾವು ಭಗವದಾನಂದವನ್ನು ಸವಿಯುತ್ತ ಕುಳಿತಿದ್ದಾರೆ. ಆಗತಾನೆ ಸಮಾಧಿಯಿಂದಿಳಿದು ಮೆಲ್ಲನೆ ಬಾಹ್ಯಪ್ರಜ್ಞೆಗೆ ಬರುತ್ತಿದ್ದಾರೆ. ಆ ವೇಳೆಗೆ ಹಾಲ್ದಾರ ಅಲ್ಲಿಗೆ ಬಂದ. ನೋಡಿದ; ಸಮೀಪದಲ್ಲಿ ಬೇರೆ ಯಾರೂ ಇಲ್ಲ. ಇದೇ ತಕ್ಕ ಸಮಯ ಎಂದು ಭಾವಿಸಿದ.

ಹಾಲ್ದಾರ ಪಕ್ಕದಲ್ಲೇ ಬಂದು ನಿಂತರೂ ಶ್ರೀರಾಮಕೃಷ್ಣರು ಅವನನ್ನು ಗಮನಿಸಲಿಲ್ಲ. ಆಗ ಅವನು ಅವರನ್ನು ಬಲವಾಗಿ ಅಲುಗಾಡಿಸುತ್ತ ಮೆಲುದನಿಯಲ್ಲೇ ಕರ್ಕಶವಾಗಿ ಕೂಗಿದ: "ಏಯ್ ಕಳ್ಳಾಟ ಆಡುತ್ತೀಯೇನೋ? ಮಾಲಿಕರಿಗೆ ಯಾವ ಮಂತ್ರ ಹಾಕಿಸಿದೆ? ಏನು ಮಾಡಿ ಅವರನ್ನು ವಶಪಡಿಸಿಕೊಂಡೆ? ಹೇಳು ಬೇಗ."

ಶ್ರೀರಾಮಕೃಷ್ಣರು ಉತ್ತರಿಸುವ ಸ್ಥಿತಿಯಲ್ಲಿದ್ದರೆ ತಾನೆ! ಪಾಪ, ಅವರಿಗೆ ಹಾಲ್ದಾರನ ಮಾತುಗಳು ಕೇಳಿಸಲೂ ಇಲ್ಲ. ಆದರೆ ಅವರ ಮೌನವನ್ನು ಕಂಡು ಅವನಿಗೆ ಇನ್ನಷ್ಟು ರೇಗಿತು. ಅವರ ಪವಿತ್ರ ಶರೀರವನ್ನು ಅತ್ತಿಂದಿತ್ತ ಎಳೆದಾಡುತ್ತ ಮತ್ತೆಮತ್ತೆ ಹೇಳಿದ: "ಏನೋ? ಏನೂ ಗೊತ್ತಿಲ್ಲದವನಂತೆ ಮಿಣ್ಣಗೆ ಕುಳಿತಿದ್ದೀಯ! ಹೇಳುತ್ತೀಯೋ ಇಲ್ಲವೊ? ಹೇಳಿಬಿಡು ಈಗಲೇ."

ಶ್ರೀರಾಮಕೃಷ್ಣರಿಗೆ ಅಸಹನೀಯ ವೇದನೆಯಾಗುತ್ತಿದ್ದರೂ, ಮಾತನಾಡಲಾಗುತ್ತಿಲ್ಲ! ಕಡೆಗೆ ಹಾಲ್ದಾರ ಪುರೋಹಿತ ಬೇಸತ್ತು, "ಮೂರ್ಖ, ಮಾತನ್ನೇ ಆಡುವುದಿಲ್ಲವಲ್ಲ!" ಎನ್ನುತ್ತ ಅವರನ್ನು ಜೋರಾಗಿ ಕಾಲಿನಿಂದ ಒದೆದು ಹೊರಟುಹೋದ.

ಶ್ರೀರಾಮಕೃಷ್ಣರಿಗೆ ನಡೆದ ವಿಷಯ ಅರ್ಥವಾಗಲು ಸ್ವಲ್ಪಹೊತ್ತು ಬೇಕಾಯಿತು. ಆದರೆ ಅವರು ಈ ವಿಷಯವನ್ನು ಯಾರಿಗೂ ತಿಳಿಸಲಿಲ್ಲ. ಇದೇನಾದರೂ ಮಥುರನ ಕಿವಿಗೆ ಬಿದ್ದರೆ ಪುರೋಹಿತನಿಗೆ ಕೇಡುಗಾಲ ಬರುವುದು ಖಂಡಿತ ಎಂದು ಅವರಿಗೆ ಗೊತ್ತಿತ್ತು. ಆದ್ದರಿಂದ ನಿರಭಿಮಾನಿಗಳಾದ ಅವರು ನೋವನ್ನು ನುಂಗಿಕೊಂಡು ಮೌನ

ವಾಗಿದ್ದುಬಿಟ್ಟರು. ಆದರೆ ಕೆಲದಿನಗಳಲ್ಲೇ ಅವನ ಬೇರಾವುದೋ ತಪ್ಪಿನಿಂದ ಸಿಟ್ಟಿಗೆದ್ದ ಮಥುರ ಅವನನ್ನು ಓಡಿಸಿಬಿಟ್ಟ. ಮುಂದೆ ಯಾವಾಗಲೋ ಸಂದರ್ಭ ಬಂದಾಗ ಶ್ರೀರಾಮಕೃಷ್ಣರು ಈ ವಿಷಯವನ್ನು ತಿಳಿಸಿದರು. ಅದನ್ನು ಕೇಳಿ ಮಥುರನಿಗೆ ಬಲು ಸಂಕಟವಾಯಿತು. "ಅಪ್ಪಾ, ನೀವು ಈ ವಿಷಯವನ್ನು ನನಗೆ ಅಂದೇ ತಿಳಿಸಿದ್ದರೆ! ನಿಜವಾಗಿಯೂ ಆ ಬ್ರಾಹ್ಮಣನ ತಲೆ ಉಳಿಯುತ್ತಿರಲಿಲ್ಲ!" ಎಂದು ಹಲ್ಲು ಕಡಿದ.

ಹಾಲ್ದಾರ ಪುರೋಹಿತನಿಗೆ ಶ್ರೀರಾಮಕೃಷ್ಣರ ಬಗ್ಗೆ ಹೊಟ್ಟೆಕಿಚ್ಚು ಉಂಟಾದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಮಥುರಬಾಬು ಅವರ ಬಗ್ಗೆ ತೋರುತ್ತಿದ್ದ ಭಕ್ತಿವಿಶ್ವಾಸ ಎಷ್ಟರಮಟ್ಟಿಗಿತ್ತೆಂದರೆ ಇತರರಿಗೆ ಅದನ್ನು ಅರ್ಥ ಮಾಡಿಕೊಳ್ಳುವುದು ಅಸಾಧ್ಯವೇ ಆಗಿತ್ತು. 'ಠಾಕೂರರ ಸಹವಾಸದಲ್ಲೇ ಸಾಧ್ಯವಾದಷ್ಟು ಹೆಚ್ಚು ಹೊತ್ತು ಇದ್ದುಬಿಡಲು ಉಪಾಯವೇನು? ಮತ್ತಷ್ಟು ಹೆಚ್ಚಾಗಿ ಅವರ ಸೇವೆ ಮಾಡುವ ಅವಕಾಶ ಹೇಗೆ ದೊರಕೀತು?' ಎಂಬೀ ಆಲೋಚನೆಯೇ ಮಥುರನ ತಲೆಯಲ್ಲಿ ತುಂಬಿರುತ್ತಿತ್ತು. ಆದ್ದರಿಂದ ಅವನು ಆಗಾಗ ಅವರನ್ನು ಪ್ರಾರ್ಥಿಸಿಕೊಂಡು ಒತ್ತಾಯದಿಂದ ಜಾನ್ ಬಜಾರಿನ ತನ್ನ ಮನೆಗೆ ಕರೆತರುತ್ತಿದ್ದ. ಮಧ್ಯಾಹ್ನದ ಹೊತ್ತಿನಲ್ಲಿ, "ಅಪ್ಪಾ, ಒಂದಿಷ್ಟು ಓಡಾಡಿಕೊಂಡು ಬರೋಣ, ಬನ್ನಿ" ಎಂದು ಅವರನ್ನು ಕರೆದುಕೊಂಡು ಕಲ್ಕತ್ತದ ಕೋಟೆಯ ಮೈದಾನ, ಈಡನ್ ಗಾರ್ಡನ್ ಮೊದಲಾದ ನಾನಾ ಸ್ಥಳಗಳಿಗೆ ಸಾರೋಟಿನಲ್ಲಿ ಹೋಗಿಬರುತ್ತಿದ್ದ. 'ಠಾಕೂರರಿಗೆ ಯಾವುದೆಂದರೆ ಆ ತಟ್ಟೆ ಬಟ್ಟಲುಗಳಲ್ಲಿ ತಿಂಡಿತೀರ್ಥ ಕೊಡುವುದೆ?' ಎಂದು ಅವರಿಗಾಗಿ ಬೆಳ್ಳಿ-ಬಂಗಾರದ ತಟ್ಟೆ ಲೋಟ ಬಟ್ಟಲುಗಳನ್ನೆಲ್ಲ ಹೊಸಹೊಸದಾಗಿ ಮಾಡಿಸಿ, ಅವುಗಳಲ್ಲಿ ಉಣಬಡಿಸುತ್ತಿದ್ದ. ಅವರಿಗೆ ಅತ್ಯುತ್ತಮವಾದ ಬಟ್ಟೆಬರೆಗಳನ್ನು ತೊಡಿಸುತ್ತಿದ್ದ. ಕೆಲವೊಮ್ಮೆ ಆತ ಹೇಳುತ್ತಿದ್ದ:

"ಅಪ್ಪಾ, ನೀವೇ ಈ ಎಲ್ಲ ಆಸ್ತಿಪಾಸ್ತಿಗಳ ಮಾಲೀಕರು. ನಾನು ನಿಮ್ಮ ಉಗ್ರಾಣಿ (ಸ್ಟೋರ್ ಕೀಪರ್) ಮಾತ್ರವೇ ಹೊರತು ಬೇರೇನೂ ಅಲ್ಲ. ಏಕೆಂದರೆ, ನೀವು ಈ ಬಂಗಾರದ ತಟ್ಟೆಯಲ್ಲಿ, ಬೆಳ್ಳಿಯ ಲೋಟ ಬಟ್ಟಲುಗಳಲ್ಲಿ ಊಟ ಮಾಡಿ, ಮತ್ತೆ ಅವರತ್ತ ತಿರುಗಿಯೂ ನೋಡದೆ ಎದ್ದುಬಿಡುತ್ತೀರಿ. ನಾನಾದರೋ, ನೀವು ಅವುಗಳಲ್ಲಿ ಪುನಃ ಊಟ ಮಾಡಲಾಗುವಂತೆ ಅವುಗಳನ್ನು ತೊಳೆಯಿಸಿ ಜಾಗ್ರತೆಯಿಂದ ಎತ್ತಿಡಿಸುತ್ತೇನೆ. ಅಲ್ಲದೆ, ಅವು ಕಳ್ಳತನವಾಗದಂತೆ ನೋಡಿಕೊಳ್ಳುತ್ತೇನೆ; ಬಿದ್ದು ನೆಗ್ಗಿ ಹೋದುವೋ, ಹಾಳಾದುವೋ ಎಂದು ವಿಚಾರಿಸುತ್ತೇನೆ. ಇದೆಲ್ಲ ನನ್ನ ಕರ್ತವ್ಯ."

ಮಥುರನ ಈ ಬಗೆಯ ಉಪಚಾರವನ್ನೆಲ್ಲ ಶ್ರೀರಾಮಕೃಷ್ಣರು ಸಂತೋಷದಿಂದ ಸ್ವೀಕರಿಸುತ್ತಿದ್ದರು ಎನ್ನಲಾಗದು. ಹಾಗೆ ಸ್ವೀಕರಿಸಿದಾಗಲೂ ಅದು ಯಾವ ಭಾವದಿಂದ ಎಂದು ನಾವು ಸುಲಭವಾಗಿ ಊಹಿಸಬಹುದು. ಇದಕ್ಕೆ ಉದಾಹರಣೆಯಾಗಿ ಒಂದು ಜೊತೆ ಕಾಶೀ ಶಾಲಿನ ದುರ್ಗತಿಯ ಕಥೆಯನ್ನು ಹೇಳಬಹುದು.

ಒಮ್ಮೆ ಮಥುರಾನಾಥ ಒಂದು ಸಾವಿರ ರೂಪಾಯಿಯಷ್ಟು ಬೆಲೆಬಾಳುವ ಒಂದು ಜೊತೆ ಉಣ್ಣೆಯ ಶಾಲನ್ನು ಕಾಶಿಯಿಂದ ತರಿಸಿದ್ದ. ಅದೆಂತಹ ಶ್ರೇಷ್ಠ ದರ್ಜೆಯದೆಂದರೆ ಅದು ಅಕ್ಷರಶಃ ರಾಜಯೋಗ್ಯವಾದದ್ದು. 'ಆಗಿನ ಕಾಲಕ್ಕೇ ಅದರ ಬೆಲೆ ಅಷ್ಟಾಗಿದ್ದರೆ, ಈಗ ಅಂಥವು ಕಣ್ಣಲ್ಲಿ ನೋಡಲೂ ಸಿಗಲಾರವು' ಎಂದು 'ಲೀಲಾಪ್ರಸಂಗ'ದಲ್ಲಿ ಸ್ವಾಮಿ ಶಾರದಾನಂದರು ಅಂದೇ (ಸುಮಾರು ೧೯೨೦ರಲ್ಲಿ)

ಬರೆದಿದ್ದಾರೆ! ಎಂದಮೇಲೆ ಅದು ಇನ್ನೆಷ್ಟು ಮೃದುವಾಗಿರಬೇಕು! ಇನ್ನೆಂತಹ ನಯ-ನಾಜೂಕು, ಕುಸುರಿ ಕೆಲಸ ಇರಬೇಕು ಅದರಲ್ಲಿ! ಇಷ್ಟು ಒಳ್ಳೆಯ ವಸ್ತುವನ್ನು ಠಾಕೂರರಿಗಲ್ಲದೆ ಮತ್ತಾರಿಗೆ ಕೊಡಲಿ ಎಂದು ಮಥುರ, ಅದನ್ನು ತನ್ನ ಕೈಯಿಂದಲೇ ಶ್ರೀರಾಮಕೃಷ್ಣರಿಗೆ ಹೊದಿಸಿ ಮಹದಾನಂದವನ್ನು ಅನುಭವಿಸಿದ. ಶ್ರೀರಾಮಕೃಷ್ಣರೂ ಅಷ್ಟೇ ಸಂತೋಷದಿಂದ ಅದನ್ನು ಹೊದ್ದುಕೊಂಡು ಸುತ್ತಮುತ್ತ ಓಡಾಡಿದರು. ಬಾಲಕನಂತೆ ಹಿರಿಹಿರಿ ಹಿಗ್ಗಿದರು. ಮತ್ತೆಮತ್ತೆ ತಮ್ಮನ್ನು ತಾವೇ ನೋಡಿಕೊಂಡರು. ಕಂಡಕಂಡವರಿಗೆಲ್ಲ ಅದನ್ನು ತೋರಿಸಿದರು. "ನೋಡಿದೆಯಾ, ಮಥುರ ನನಗಾಗಿ ಸಾವಿರ ರೂಪಾಯಿ ಕೊಟ್ಟು ಇದನ್ನು ತಂದಿದ್ದಾನೆ!" ಎಂದು ಹೇಳಿಹೇಳಿ ಸಂತೋಷ ಪಟ್ಟರು.

ಅವರು ಹೀಗೊಂದು ಕಾಲುಗಂಟೆಯೋ ಅರ್ಧಗಂಟೆಯೋ ಆನಂದಿಸಿರ ಬಹುದು. ಅಷ್ಟರಲ್ಲೇ ಇದ್ದಕ್ಕಿದ್ದಂತೆ ಅವರ ಮನಸ್ಸಿನಲ್ಲಿ ಮತ್ತೊಂದು ಭಾವವುದಿಸಿತು:

'ಎಲಾ, ಇದರಲ್ಲೇನಿದೆಯೆಂದು ನಾನಿಷ್ಟು ಸಂತೋಷಪಡುತ್ತಿದ್ದೇನೆ? ಇದರಲ್ಲಿ ಇರುವುದಾದರೂ ಏನು? ಒಂದಿಷ್ಟು ಕುರಿಯ ಕೂದಲು, ಅಷ್ಟೆ ತಾನೆ? ಇನ್ನು ಚಳಿ ಯನ್ನು ಹೋಗಲಾಡಿಸಿಕೊಳ್ಳಲೂ ಇದೇ ಆಗಬೇಕೆಂದೇನೂ ಇಲ್ಲ. ಅದಕ್ಕೆ ಸಾಧಾರಣ ವಾದ ರಜಾಯಿ ಕಂಬಳಿಯೇ ಸಾಕು. ಪಂಚಭೂತಗಳ ಮಿಶ್ರಣದಿಂದಾಗಿ ಹೇಗೆ ಜಗತ್ತಿನ ಸಮಸ್ತ ವಸ್ತುಗಳೂ ನಿರ್ಮಾಣವಾಗಿವೆಯೋ ಹಾಗೆಯೇ ಇದೂ ಕೂಡ. ಅಲ್ಲದೆ ಇದನ್ನು ಹೊದ್ದವನ ಮನಸ್ಸಿನಲ್ಲಿ ತಾನು ಇತರರಿಗಿಂತ ಶ್ರೀಮಂತ, ಶ್ರೇಷ್ಠ ಎಂಬ ಅಹಂಕಾರವುಂಟಾಗುತ್ತದೆ; ದರ್ಪವುಂಟಾಗುತ್ತದೆ. ಅದರಿಂದ ಭಕ್ತಿಯೂ ವೈರಾಗ್ಯವೂ ನಶಿಸಿಹೋಗುತ್ತದೆ. ಛೆ! ಎಷ್ಟು ದೋಷಗಳು ಇದರಲ್ಲಿ!"

ಹೀಗೆ ಭಾವಿಸುತ್ತ ಭಾವಿಸುತ್ತ ಶ್ರೀರಾಮಕೃಷ್ಣರಿಗೆ ಆ ಶಾಲಿನ ವಿಷಯದಲ್ಲಿ ಜುಗುಪ್ಸೆಯುಂಟಾಯಿತು. ತಕ್ಷಣವೇ ಅದನ್ನು ತೆಗೆದು ನೆಲದ ಮೇಲೆ ಒಗೆದರು. 'ಥೂ, ಇದರಿಂದ ಸಚ್ಚಿದಾನಂದವನ್ನು ಪಡೆಯಲಾಗುವುದಿಲ್ಲ' ಎನ್ನುತ್ತ, ಅದನ್ನು ಮಣ್ಣಿನಲ್ಲಿ ಹಾಕಿ, ಕಾಲಿನಿಂದ ಹೊಸಕುತ್ತ ಅದರ ಮೇಲೆ ಉಗುಳಿದರು. ಕಡೆಗೆ ಅದಕ್ಕೆ ಇನ್ನೇನು ಬೆಂಕಿ ಹಚ್ಚಿಬಿಡುವುದರಲ್ಲಿದ್ದರು. ಅಷ್ಟರಲ್ಲಿ ಯಾರೋ ಒಬ್ಬ ಅಲ್ಲಿಗೆ ಓಡಿ ಬಂದು ಅವರ ಕೈಯಿಂದ ಅದನ್ನು ಬಿಡಿಸಿಕೊಂಡು ಹೋದ.

ಈ ಸುದ್ದಿ ಕೂಡಲೇ ಮಥುರನ ಕಿವಿ ಮುಟ್ಟಿತು. ತಾನು ಪ್ರೀತಿಯಿಂದ ನೀಡಿದ ಆ ಬೆಲೆಬಾಳುವ ವಸ್ತುವಿಗೆ ಅಂಥ ದುರ್ಗತಿ ಬಂದಿತಲ್ಲ ಎಂದು ಅವನು ಸ್ವಲ್ಪವೂ ವಿಷಾದ ಪಡಲಿಲ್ಲ. "ಅಪ್ಪ ಹಾಗೆ ಮಾಡಿದ್ದೇ ಒಳ್ಳೆಯದಾಯಿತು" ಎಂದು ಶ್ರೀರಾಮ ಕೃಷ್ಣರನ್ನೇ ಸಮರ್ಥಿಸಿಕೊಂಡ.

ಹೀಗೆ ಅವನು ಶ್ರೀರಾಮಕೃಷ್ಣರನ್ನು ಭೋಗಸುಖದಲ್ಲಿ ಮುಳುಗಿಸಿಡಲು ಪ್ರಯತ್ನಿಸುತ್ತಿದ್ದರೆ, ಶ್ರೀರಾಮಕೃಷ್ಣರ ಮನಸ್ಸು ಮಾತ್ರ ಸದಾ ತನ್ನೊಳಗೆ ತಾನು ಮಗ್ನ ವಾಗಿರುತ್ತಿತ್ತು. ಇತರರ ಮನಸ್ಸು ಕತ್ತಲ ರಾಶಿಯಲ್ಲಿ ಮುಳುಗಿ ತಡಕಾಡುತ್ತಿರುವಾಗ, ಇವರ ಮನಸ್ಸು ಜಾಜ್ವಲ್ಯಮಾನವಾದ ಬೆಳಕನ್ನು ಅನುಭವಿಸುತ್ತಿತ್ತು. ಆ ಬೆಳಕಾದರೂ ಎಂಥದು? ನೆರಳೇ ಇಲ್ಲದ ಬೆಳಕು ಅದು! ಅದರ ಮುಂದೆ ಬೆಂಕಿಯ ಬೆಳಕು, ಮಿಂಚಿನ ಝಳಪು, ಸೂರ್ಯಚಂದ್ರರ ಹೊಳಪು ಕೂಡ ಕೇವಲ ಮಿಣುಕುಹುಳದಂತೆ.

ಆ ಬೆಳಕಿಗೆ ವೃದ್ಧಿಯೂ ಇಲ್ಲ, ಕ್ಷಯವೂ ಇಲ್ಲ. ಶ್ರೀರಾಮಕೃಷ್ಣರ ಮನಸ್ಸಿನ ಆವಾಸ ಸ್ಥಾನವೇ ಆ ಬೆಳಕು! ಹಿಂಸೆ ದ್ವೇಷ ಮೋಸ ಕಪಟಗಳಿಂದ ತುಂಬಿದ ಹಾಗೂ ಕಾಮಕ್ರೋಧಾದಿಗಳ ನೆಲೆವೀಡಾದ ಈ ಜಗತ್ತಿಗೆ—ಕತ್ತಲ ರಾಜ್ಯಕ್ಕೆ—ಅವರ ಮನಸ್ಸು ಆಗಾಗ ಇಳಿದು ಬರುವುದುಂಟು; ಆದರದು ಬದ್ಧಜೀವರ ಮೇಲಿನ ಕರುಣೆಯಿಂದಾಗಿ ಮತ್ತು ಕೇವಲ ಎರಡು ದಿನಗಳ ಭೇಟಿಗಾಗಿ, ಅಷ್ಟೆ! ಆದ್ದರಿಂದ ಮಥುರನ ಭೋಗ ವಿಲಾಸಭರಿತವಾದ ಜಾನ್ ಬಜಾರಿನ ಮನೆಯಲ್ಲಿದ್ದರೂ ಅವರೇನೂ ಬದಲಾಗುವವರಲ್ಲ. ನಿರ್ಲಿಪ್ತ, ನಿರಹಂಕಾರಭಾವದಿಂದ ಸದಾ ಅಂತರ್ಮುಖಿಗಳಾಗಿರುವವರು ಅವರು.

ಆಶ್ವೀಜ ಮಾಸ ಬಂದಿದೆ. ಎಲ್ಲೆಲ್ಲೂ ನವರಾತ್ರಿಯ ಸಡಗರ. ಸ್ತ್ರೀಯರು ಪುರುಷರು ಮಕ್ಕಳು ಮುದುಕರು ಎಲ್ಲರಿಗೂ ಬೇರೆಬೇರೆ ಕಾರಣಗಳಿಗಾಗಿ ಸಂತೋಷ, ಸಂಭ್ರಮ. 'ಅವರಿವರ ಮನೆಯ ವಿಷಯವೇಕೆ? ಮಥುರಬಾಬುಗಳ ಜಾನ್ ಬಜಾರಿನ ಮನೆಗೆ ಹೋಗೋಣ ಬನ್ನಿ. ದುರ್ಗಾಪೂಜೆಯನ್ನು ನೋಡಬೇಕೆಂದರೆ ಅಲ್ಲಿಗೆ ಹೋಗಬೇಕು!' ಇದು ಸುತ್ತಮುತ್ತಲ ಜನರ ಉದ್ಗಾರ. ಅವರೆನ್ನುವುದೂ ನಿಜವೇ. ಮಥುರನ ಮನೆಯಲ್ಲಿ ಆನಂದದ ಸಾಗರ ಆದಾಗಲೇ ಭೋರ್ಗರೆಯುತ್ತಿದೆ. ಇದಕ್ಕೆ ಮೂಲಕಾರಣ ಅಲ್ಲಿ ಈಗಾಗಲೇ ಕೆಲದಿನಗಳಿಂದ ವಾಸವಾಗಿರುವ ಶ್ರೀರಾಮ ಕೃಷ್ಣರ ಆನಂದಮಯ ಸಾನ್ನಿಧ್ಯ! ತಾಯಿಯ ಹತ್ತಿರ ಬಾಲಕನು ಯಾವ ಬಗೆಯ ಸಂಕೋಚ, ಭೀತಿ, ಮುಜುಗರವೂ ಇಲ್ಲದೆ ಆನಂದೋಲ್ಲಾಸದಿಂದ, ಸಲಿಗೆಯಿಂದ ವರ್ತಿಸುವುದಿಲ್ಲವೆ? ಬಗೆಬಗೆಯ ಹಾಸ್ಯ, ವಿಡಂಬನೆ, ನೃತ್ಯಾದಿಗಳಲ್ಲಿ ತೊಡಗಿರುವು ದಿಲ್ಲವೆ? ಹಾಗೆಯೇ ಶ್ರೀರಾಮಕೃಷ್ಣರು ಪ್ರತಿಮೆಯಲ್ಲಿ ಜಗನ್ಮಾತೆಯ ಆವಿರ್ಭಾವ ವನ್ನು ಕಂಡು ಸರ್ವದಾ ಭಾವಾವೇಶಭರಿತರಾಗಿ ವರ್ತಿಸುತ್ತಿದ್ದರು. ಆ ಬಗೆಯ ಅಪೂರ್ವ ವರ್ತನೆಯನ್ನು ನೋಡುತ್ತ ಪ್ರತಿಮೆಯು ಜೀವಂತ-ಜ್ಯೋತಿರ್ಮಯ ವಾಗಿ, ನಗುತ್ತಿರುವಂತೆ ಕಾಣುತ್ತಿತ್ತು! ತತ್ಪರಿಣಾಮವಾಗಿ ಪೂಜಾಸ್ಥಳದ ವಾತಾ ವರಣವು ಯಾವುದೋ ಒಂದು ಅನಿರ್ವಚನೀಯವಾದ ಸಾತ್ವಿಕಭಾವದಿಂದ ತುಂಬಿ, ಎಂಥ ಜೋಲುಮೋರೆಯ 'ಜಡಭರತ'ನಿಗೂ ಕೂಡ ಅಲ್ಲಿಗೆ ಹೋದೊಡನೆ ಆನಂದಾನುಭವವಾಗುತ್ತಿತ್ತು. ಜಗನ್ಮಾತೆಯ ಸಾನ್ನಿಧ್ಯದಿಂದಾಗಿ ಆ ಕೋಣೆ ಮಾತ್ರ ವಲ್ಲದೆ, ಮನೆಯ ಮೂಲೆಮೂಲೆಯೂ ಅಪೂರ್ವ ಕಾಂತಿಯಿಂದ ತುಂಬಿತ್ತು.

ಹಾಗಾದದ್ದರಲ್ಲಿ ಆಶ್ಚರ್ಯವೇನಿದೆ? ಮಥುರನ ಶ್ರೀಮಂತಿಕೆ ಹಾಗೂ ರಾಜಸಿಕ ಭಕ್ತಿ ಇವೆರಡರ ಪರಿಣಾಮವಾಗಿ ಪೂಜೆಗೆ ಸಂಬಂಧಿಸಿದ ಯಾವುದೇ ಆಚರಣೆಯಲ್ಲಿ, ಯಾವುದೇ ಆಡಂಬರದಲ್ಲಿ ಕೊರತೆಯಿರಲು ಸಾಧ್ಯವಿರಲಿಲ್ಲ. ಮನೆಯ ಒಳಹೊರ ಗೆಲ್ಲ ತಳಿರು ತೋರಣಗಳು, ಹಾರ ತುರಾಯಿಗಳು, ಬಣ್ಣಬಣ್ಣದ ರಂಗವಲ್ಲಿಗಳು; ಇನ್ನು ದುರ್ಗೆಯ ಸುಂದರವಾದ ಬೃಹತ್ ಗಾತ್ರದ ಪ್ರತಿಮೆ, ನಾನಾ ಬಗೆಯ ದಿವ್ಯಾಲಂಕಾರಗಳು, ಧೂಪದೀಪಗಳು, ಸುಗಂಧದ್ರವ್ಯಗಳು; ಇತ್ತ ಮನವನ್ನು ಮುದ ಗೊಳಿಸುವ ಮಂಗಳವಾದ್ಯದ ಮಧುರ ಸಂಗೀತ; ಸಮರ್ಥರಾದ ಪಂಡಿತರಿಂದ ಮಂತ್ರಘೋಷಗಳು; ಕುಶಲರಾದ ಪುರೋಹಿತರಿಂದ ಪೂಜಾಕರ್ಮಗಳು; ನೈವೇದ್ಯಕ್ಕೆ ಪರಮಾನ್ನ-ಮೃಷ್ಟಾನ್ನಗಳು; ಬ್ರಾಹ್ಮಣರಿಗೂ ಬಡಬಗ್ಗರಿಗೂ ದಾನ-ಧರ್ಮಗಳು.

ಇನ್ನೊಂದು ಕಡೆಯಿಂದ ಶ್ರೀರಾಮಕೃಷ್ಣರ ಅಲೌಕಿಕವಾದ ದೈವೀಭಾವವು ಹೊರಗಿನ ಆ ಎಲ್ಲ ಜಡಪದಾರ್ಥಗಳನ್ನು ಸ್ಪರ್ಶಿಸಿ ಅವುಗಳಲ್ಲಿ ಪ್ರಾಣಪ್ರತಿಷ್ಠೆ ಮಾಡಿತ್ತು! ಮಥುರನೂ ಅವನ ಪತ್ನಿಯೂ ಪೂಜೆಗೆ ಸಂಬಂಧಿಸಿದ ನಾನಾ ಕಾರ್ಯ ಗಳಲ್ಲಿ ನಿರತರಾಗಿದ್ದರು. ಅವರಿಗೆ ಮತ್ತಾವುದರ ಕಡೆಗೂ ಗಮನ ಹರಿಯಿಸಲು ವ್ಯವ ಧಾನವಿರಲಿಲ್ಲ. ಹಾಗಿದ್ದರೂ, ಅವರೂ ಕೂಡ ಸಮಾರಂಭದ ಭಾವ ಸೌಂದರ್ಯವನ್ನು

ತಮ್ಮ ಹೃದಯಗಳಲ್ಲಿಯೇ ಅನುಭವಿಸುತ್ತ ಅವ್ಯಕ್ತವಾದ ಆನಂದದಿಂದ ತುಂಬಿದ್ದರು.

ಸಪ್ತಮಿಯ ದಿನ ಅಪರಾಹ್ನದ ಪೂಜೆ ಮುಗಿಯಿತು. ಮಥುರನೂ ಜಗದಂಬಾ ದಾಸಿಯೂ ಹೇಗೋ ಸ್ವಲ್ಪ ಸಮಯ ಮಾಡಿಕೊಂಡು ಜಗನ್ಮಾತೆಯ ಹಾಗೂ ಶ್ರೀರಾಮಕೃಷ್ಣರ ಚರಣಾರವಿಂದಗಳಲ್ಲಿ ಪುಷ್ಪಾಂಜಲಿಯನ್ನಿರಿಸಿದರು.

ಸಾಯಂಕಾಲವಾಯಿತು. ಈಗ ಜಗನ್ಮಾತೆಗೆ ಸಂಧ್ಯಾರತಿಯಾಗಬೇಕು. ಎಲ್ಲ ಸಿದ್ಧ ವಾಗಿದೆ. ಆದರೆ ಬಳಿಯಲ್ಲಿ ಶ್ರೀರಾಮಕೃಷ್ಣರೇ ಇಲ್ಲ! ಅವರೆಲ್ಲಿ? ಒಳಗೆ ಅಂತಃ ಪುರದಲ್ಲಿದ್ದಾರೆ! ವಿಶಿಷ್ಟವಾದ ಭಾವದಿಂದ ಆವಿಷ್ಟರಾಗಿ ತಮ್ಮದು ಪುರುಷಶರೀರ ವೆಂಬುದನ್ನೇ ಮರೆತಿದ್ದಾರೆ! ಅವರೀಗ ಮಥುರನು ಕೊಟ್ಟ ಮನೋಹರವಾದ ರೇಶ್ಮೆ ಸೀರೆಯನ್ನುಟ್ಟಿದ್ದಾರೆ. 'ತಾವು ಜನ್ಮಜನ್ಮದಲ್ಲಿಯೂ ಆ ರಾಜರಾಜೇಶ್ವರಿಯ ಸಖಿ; ಆ ಜಗನ್ಮಾತೆಯೇ ತಮ್ಮ ಪ್ರಾಣ, ಮನಸ್ಸು, ಸರ್ವಸ್ವ; ಆಕೆಯ ಸೇವೆಗಾಗಿಯೇ ತಮ್ಮ ದೇಹಧಾರಣೆ, ಅದೇ ತಮ್ಮ ಜೀವನೋದ್ದೇಶ' ಎಂದು ಅವರ ನಡೆನುಡಿ ಗಳೊಂದೊಂದೂ ಪಡಿನುಡಿಯುತ್ತಿವೆ! ಅವರ ಮುಖಮಂಡಲವು ದಿವ್ಯಭಾವದಿಂದ ದೇದೀಪ್ಯಮಾನವಾಗಿದೆ. ಅವರ ಮಂದಹಾಸ, ಕಣ್ಣಿನ ನೋಟ, ಕೈಕಾಲ್ಗಳ ಚಲನೆ, ವಿವಿಧ ಅಂಗಭಂಗಿ ಎಲ್ಲವೂ ಸ್ತ್ರೀಯರಂತೆಯೇ! ಅವರನ್ನು ಪುರುಷರೆಂದು ಯಾರು ತಾನೆ ಹೇಳಬಲ್ಲರು!

ಆರತಿಗೆ ಸಮಯವಾಯಿತೆಂದು ಹೇಳಲು ಜಗದಂಬಾ ದಾಸಿ ಓಡಿಬಂದಳು. ನೋಡಿದರೆ ಶ್ರೀರಾಮಕೃಷ್ಣರು ಈ ಭಾವಸ್ಥಿತಿಯಲ್ಲಿದ್ದಾರೆ! ಕರೆದರೆ ಓಗೊಡಲೂ ಅವ ರಿಂದ ಸಾಧ್ಯವಾಗುವಂತಿಲ್ಲ. ಈಗೇನು ಮಾಡುವುದು? ಹೋಗಲಿ, ಅವರನ್ನು ಅವರಷ್ಟಕ್ಕೆ ಬಿಟ್ಟು ಹೊರಟುಬಿಡೋಣವೆ? ಅದು ಮಾತ್ರ ಸಾಧ್ಯವಿಲ್ಲ! ಏಕೆಂದರೆ ಅವರು ಇಂಥ ಸ್ಥಿತಿಯಲ್ಲಿರುವಾಗ ಸಮೀಪದಲ್ಲಿ ಯಾರಾದರೂ ಇರಲೇಬೇಕು. ಒಂದು ಬಾರಿಯಂತೂ, ಹೀಗೆಯೇ ಬಾಹ್ಯಪ್ರಜ್ಞೆಯಿಲ್ಲದಾಗ, ಕೆಂಡದ ಮೇಲೆ ಬಿದ್ದರೂ ಅವರಿಗೆ ತಿಳಿಯದೆಹೋಯಿತು. ಆಮೇಲೆ ಆ ಗಾಯ ವಾಸಿಯಾಗಲು ಎಷ್ಟೋ ದಿನ ಬೇಕಾಯಿತು. ಆದ್ದರಿಂದ ಅವಳೀಗ ತಾನೇ ಇಲ್ಲಿ ಇದ್ದುಬಿಡೋಣವೆಂದರೆ ಅದೂ ಸಾಧ್ಯವಿಲ್ಲ, ಅಲ್ಲಿ ಕೆಲಸ ಕೆಡುತ್ತದೆ. ಬೇರೆ ಯಾರನ್ನೇ ಬಿಟ್ಟುಹೋದರೂ ಆರತಿಯ ಘಂಟಾನಿನಾದ, ಕಹಳೆ-ಕೊಂಬು-ಡೋಲುಗಳ ಮೊಳಗುವಿಕೆಯನ್ನು ಕೇಳಿದ ಕೂಡಲೇ ಅವರು ಎಲ್ಲವನ್ನೂ ಮರೆತು ಓಡಿಬರುವುದೇ ಖಂಡಿತ. ಈಗೇನು ಮಾಡುವುದು? ಇನ್ನು ಯಜಮಾನರಂತೂ ಏನೆನ್ನುವರೋ ಏನೊ!

ಹೀಗೆ ಯೋಚಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಅವಳಿಗೊಂದು ಉಪಾಯ ಹೊಳೆ ಯಿತು. ಬೇಗಬೇಗ ತನ್ನ ಬೆಲೆಬಾಳುವ ಬಂಗಾರದ ಒಡವೆಗಳನ್ನೆಲ್ಲ ಹೊರಗೆ ತೆಗೆದು, ಅವುಗಳನ್ನು ಶ್ರೀರಾಮಕೃಷ್ಣರಿಗೆ ತೊಡಿಸುತ್ತ, "ಅಪ್ಪಾ, ಬನ್ನಿ ಬನ್ನಿ! ಜಗದಂಬೆಗೆ ಈಗ ಆರತಿ! ನೀವು ಚಾಮರ ಬೀಸುವುದಿಲ್ಲವೆ?" ಎಂದು ಕಿವಿಯಲ್ಲಿ ಉಸುರಿದಳು. ಹೀಗೆ ಅವಳು ಎರಡು ಮೂರು ಬಾರಿ ಹೇಳಿದಳೊ ಇಲ್ಲವೊ, ಶ್ರೀರಾಮಕೃಷ್ಣರಿಗೆ ಅರ್ಧ ಬಾಹ್ಯಾವಸ್ಥೆ ಮರಳಿತು. ಒಡನೆಯೇ ಅವರು ಆನಂದದಿಂದ ಉತ್ಸಾಹಪೂರ್ಣರಾಗಿ ಆಕೆಯೊಂದಿಗೆ ನಡೆದರು.

ಇಬ್ಬರೂ ಪೂಜಾಸ್ಥಳಕ್ಕೆ ಹೋದೊಡನೆಯೇ ಆರತಿ ಪ್ರಾರಂಭವಾಯಿತು. ಶ್ರೀರಾಮಕೃಷ್ಣರೂ ಸ್ತ್ರೀಯರ ನಡುವೆ ನಿಂತು ಚಾಮರ ಬೀಸತೊಡಗಿದರು. ಪ್ರತಿ

ಮೆಯು ಒಂದು ಪಕ್ಕದಲ್ಲಿ ಸ್ತ್ರೀಯರು, ಇನ್ನೊಂದು ಪಕ್ಕದಲ್ಲಿ ಪುರುಷರು ನಿಂತು ಆರತಿಯನ್ನು ನೋಡುತ್ತಿದ್ದಾರೆ. ಅಕಸ್ಮಾತ್ತಾಗಿ ಒಮ್ಮೆ ಮಥುರನ ದೃಷ್ಟಿ ಸ್ತ್ರೀಯರ ಕಡೆಗೆ ಹರಿಯಿತು. ನೋಡುತ್ತಾನೆ—ತನ್ನ ಹೆಂಡತಿಯ ಪಕ್ಕದಲ್ಲಿ ಯಾರೋ ಶ್ರೀಮಂತರ ಮನೆಯ ಮಹಿಳೆ ತನ್ಮಯಚಿತ್ತಳಾಗಿ ಚಾಮರ ಬೀಸುತ್ತಿದ್ದಾಳೆ. ವಿಶಿಷ್ಟವಾದ ವಸ್ತ್ರಾಲಂಕಾರಗಳಿಂದ ಭೂಷಿತಳಾಗಿ ಅಪೂರ್ವ ಸೌಂದರ್ಯವನ್ನು ಬೀರುತ್ತಿದ್ದಾಳೆ. ಯಾರಿರಬಹುದು ಈಕೆ! ಮನೆಯವಳಂತೂ ಅಲ್ಲ. ಎಲ್ಲೂ ನೋಡಿದ ನೆನಪು ಬರುತ್ತಿಲ್ಲ. ಮತ್ತೆಮತ್ತೆ ನೋಡಿದರೂ ಆಕೆ ಯಾರೆಂದು ತಿಳಿಯಲೇ ಇಲ್ಲ. ಕಡೆಗೆ, ತನ್ನ ಹೆಂಡತಿಯ ಪರಿಚಯಸ್ಥಳಾದ ಯಾರೋ ಒಬ್ಬಾಕೆ ಆಹ್ವಾನಿತಳಾಗಿ ಬಂದಿರಬೇಕೆಂದು ಊಹಿಸಿ ಸುಮ್ಮನಾದ.

ಆರತಿ ಮುಗಿಯಿತು. ಎಲ್ಲರೂ ದುರ್ಗೆಗೆ ಪ್ರಣಾಮ ಸಲ್ಲಿಸಿ ತಂತಮ್ಮ ಕಾರ್ಯಗಳಿಗೆ ಮರಳಿದರು. ಶ್ರೀರಾಮಕೃಷ್ಣರೂ ಅದೇ ಭಾವಾವಸ್ಥೆಯಲ್ಲಿ ಮಥುರನ ಹೆಂಡತಿಯೊಡನೆ ಒಳನಡೆದರು. ಕ್ರಮೇಣ ಸಂಪೂರ್ಣ ಸಹಜಸ್ಥಿತಿಗೆ ಬಂದರು. ಅಲಂಕಾರಾದಿಗಳನ್ನು ತೆಗೆದಿಟ್ಟು ಹೊರಕ್ಕೆ ಬಂದು ಪುರುಷರೊಡನೆ ಕುಳಿತರು. ಸಹಜವಾಗಿಯೇ ಆಧ್ಯಾತ್ಮಿಕ ವಿಷಯಗಳ ಕುರಿತಾದ ಮಾತುಕತೆ ಪ್ರಾರಂಭವಾಯಿತು. ಶ್ರೀರಾಮಕೃಷ್ಣರು ಸುಂದರವಾದ ದೃಷ್ಟಾಂತಗಳ ಮೂಲಕ ಕ್ಲಿಷ್ಟ ವಿಚಾರಗಳನ್ನು ಸುಲಭಗ್ರಾಹ್ಯವಾಗುವಂತೆ ತಿಳಿಸಿಕೊಡುತ್ತ ಅವರೆಲ್ಲರನ್ನೂ ರಂಜಿಸಿದರು.

ಸ್ವಲ್ಪ ಹೊತ್ತಿನ ಮೇಲೆ ಮಥುರ ಯಾವುದೋ ಕಾರಣಕ್ಕಾಗಿ ಒಳಗೆ ಹೋದ. ಆಗ ಏನೋ ನೆನಪಿಗೆ ಬಂದು, ಹೆಂಡತಿಯನ್ನು ಕೇಳಿದ:

"ಅದು ಸರಿ, ಆಗ ಆರತಿಯ ಸಮಯದಲ್ಲಿ ನಿನ್ನ ಪಕ್ಕ ನಿಂತಿದ್ದರಲ್ಲ, ಆಕೆ ಯಾರು ?"

"ಯಾರು ? ಚಾಮರ ಬೀಸುತ್ತಿದ್ದರಲ್ಲ ಅವರೇ ?"

"ಹೌದು ಹೌದು; ಯಾರಾಕೆ ? ಎಂದೂ ನೋಡಿದಂತಿಲ್ಲವಲ್ಲ ?"

"ಏನು ? ಅವರನ್ನು ನೋಡಿಲ್ಲವೆ ? ಚೆನ್ನಾಯಿತು !" ಎಂದು ಜಗದಂಬಾ ನಗತೊಡಗಿದಳು. ಮಥುರನಿಗೆ ಆಶ್ಚರ್ಯ.

"ನಾನು ನೋಡಿದ್ದೇನೆಯೆ ? ನೆನಪಿಗೆ ಬರುತ್ತಿಲ್ಲವಲ್ಲ ?"

ಆಕೆ ಮತ್ತಷ್ಟು ನಕ್ಕಳು.

"ಅಯ್ಯೋ, ಅವರು ಠಾಕೂರರಲ್ಲವೆ ?"

ಮಥುರ ಬೆಚ್ಚಿಬಿದ್ದು ಕೇಳಿದ, "ಏನು ! ತಂದೆಯವರೆ ? ಶ್ರೀರಾಮಕೃಷ್ಣರೆ ಅದು ?"

"ಮತ್ತೆ ಯಾರೆಂದುಕೊಂಡಿರಿ ! ಭಾವಾವೇಶದಿಂದ ಚಾಮರ ಬೀಸುತ್ತಿದ್ದರು. ನೀವು ಗುರುತಿಸದೆ ಇದ್ದಿರಲೂಬಹುದೆನ್ನಿ. ಅವರು ಹೆಂಗಸರಂತೆ ಉಡಿಗೆ ತೊಡಿಗೆಗಳನ್ನು ಧರಿಸಿದರೆ ಗುರುತು ಹಿಡಿಯುವುದು ಕಷ್ಟವೇ." ಹೀಗೆನ್ನುತ್ತ ಆಕೆ ಅಂದು ನಡೆದ ಘಟನೆಯನ್ನು ವಿವರವಾಗಿ ಬಣ್ಣಿಸಿದಳು.

ಅದನ್ನು ಕೇಳಿ ಮಥುರ ತನ್ನೊಳಗೇ ಹೇಳಿಕೊಂಡ: 'ನಿಜ; ಠಾಕೂರರು ತಾವಾಗಿ ಕೃಪೆ ಮಾಡಿ ತಿಳಿಸದಿದ್ದರೆ ಸಾಮಾನ್ಯ ಸನ್ನಿವೇಶದಲ್ಲಿ ಕೂಡ ಅವರನ್ನು ಗುರುತಿಸುವುದು ಯಾರಿಂದ ಸಾಧ್ಯವಾದೀತು ? ಇಪ್ಪತ್ತನಾಲ್ಕು ಗಂಟೆ ನೋಡಿಯೂ, ಅವರೊಡನೆ

ವಾಸ ಮಾಡಿಯೂ ಇವತ್ತು ನನಗವರನ್ನು ಗುರುತಿಸಲು ಸಾಧ್ಯವಾಗಲಿಲ್ಲವಲ್ಲ!'

ಸಪ್ತಮಿ, ಅಷ್ಟಮಿ, ನವಮಿ ಈ ಮೂರು ದಿನಗಳೂ ಪರಮಾನಂದದಿಂದ ಕಳೆದುಹೋದುವು. ಆದರೆ ಎಷ್ಟು ದಿನಗಳು ಕಳೆದುಹೋದುವೋ, ಇನ್ನೆಷ್ಟು ದಿನಗಳು ಬಾಕಿಯಿವೆಯೋ ಎಂಬುದರ ಪರಿವೆ ಯಾರಿಗಿದೆ? ಅಂತೂ ಬಂದೇಬಿಟ್ಟಿತು ವಿಜಯ ದಶಮಿ. ದುರ್ಗೋತ್ಸವದ ಕಡೆಯ ದಿನ. ಬೆಳಗಿನಿಂದಲೇ ಪೂಜಾದಿಗಳು ಪ್ರಾರಂಭ ವಾಗಿವೆ. ಪುರೋಹಿತರು ಅವಸರವಸರವಾಗಿ ಜಗನ್ಮಾತೆಯು 'ಸಂಕ್ಷೇಪ ಪೂಜೆ'ಯನ್ನು ಮುಗಿಸುತ್ತಿದ್ದಾರೆ. ಏಕೆಂದರೆ, ನಿಯಮಿತ ಘಳಿಗೆಯೊಳಗಾಗಿ 'ದರ್ಪಣ ವಿಸರ್ಜನೆ'* ಯನ್ನು ಮಾಡಿಬಿಡಬೇಕು. ಸಂಜೆ ಕಳೆಯುತ್ತಲೇ ಪ್ರತಿಮಾ ವಿಸರ್ಜನೆ (ದಕ್ಷಿಣಭಾರತ ದಲ್ಲಿ ವಿನಾಯಕ ಚತುರ್ಥಿಯಂದು ವಿನಾಯಕನ ಪ್ರತಿಮೆಯನ್ನು ಪೂಜಿಸಿ ವಿಸರ್ಜಿಸು ವಂತೆ). ಮನೆಮಂದಿಯ ಮನದಲ್ಲೆಲ್ಲ ಏನೋ ಒಂದು ಬಗೆಯ ವಿಷಾದ! ಪ್ರಿಯ ವಸ್ತುವೊಂದನ್ನು ಕಳೆದುಕೊಳ್ಳುತ್ತಿರುವಂತಹ ಸಂಕಟ. ಆದರೆ ಅದನ್ನು ಬಾಯಿಂದ ಹೇಳಲಾಗದು! ಹೇಳುವುದಾದರೂ ಯಾರೊಡನೆ? ಎಲ್ಲರ ಮುಖದಲ್ಲೂ ಒಂದು ಬೇಸರದ ಗೆರೆ ಕಾಣುತ್ತಿದೆ. ಇನ್ನು ಜಗದಂಬಾ ದಾಸಿಯ ವಿಷಯವನ್ನಂತೂ ಹೇಳ ಬೇಕಾಗಿಯೇ ಇಲ್ಲ. ಬೆಳಗಿನಿಂದಲೂ ಆಕೆ ಅತ್ತಿಂದಿತ್ತ ಓಡಾಡುತ್ತಲೇ, ಕೆಲಸಗಳನ್ನು ಮಾಡುತ್ತಲೇ ಆಗಾಗ, ಯಾರಿಗೂ ಕಾಣದಂತೆ ಸೆರಗಿನ ತುದಿಯಿಂದ ಕಣ್ಣೊರಸಿ ಕೊಳ್ಳುತ್ತಿದ್ದಾಳೆ.

ಈ ನಡುವೆ ಮಥುರನ ಸ್ಥಿತಿ? ಅವನಿಗಿನ್ನೂ ಅರಿವಿಗೇ ಬಂದಿಲ್ಲ—ಇಂದು ವಿಜಯ ದಶಮಿ, ಪ್ರತಿಮಾ ವಿಸರ್ಜನೆಯಾಗಬೇಕು ಎಂದು. ಹೊರಕೋಣೆಯಲ್ಲಿ ಈಗಲೂ ಆನಂದದಿಂದ ಉತ್ಸಾಹಭರಿತನಾಗಿಯೇ ಇದ್ದಾನೆ! 'ಜಗನ್ಮಾತೆ ಮನೆಗೆ ಬಂದು ನೆಲಸಿದ್ದಾಳೆ; ಠಾಕೂರರ ದಿವ್ಯಸಾನ್ನಿಧ್ಯ ದೊರಕಿದೆ, ಇನ್ನೇನಾಗಬೇಕು?'ಎಂದು ಭಾವಿಸುತ್ತ ಆತ್ಮವಿಸ್ಮೃತಿ ಹೊಂದಿ ಭಾವನಾಲೋಕದಲ್ಲೇ ವಿಹರಿಸುತ್ತಿದ್ದಾನೆ. ಎಲ್ಲಿ ಏನಾಗುತ್ತಿದೆಯೆಂಬುದೇ ಗೊತ್ತಾಗುತ್ತಿಲ್ಲ ಅವನಿಗೆ. ಗೊತ್ತಾಗಿ ಆಗಬೇಕಾದದ್ದಾದರೂ ಏನು? ದುರ್ಗಾದೇವಿಯೂ ಶ್ರೀರಾಮಕೃಷ್ಣರೂ ಹೀಗೇ ಶಾಶ್ವತವಾಗಿ ಇಲ್ಲಿಯೇ ಇದ್ದುಬಿಡುತ್ತಾರೆ ಎಂಬುದು ಅವನ ನಂಬಿಕೆ!

ಅಷ್ಟರಲ್ಲೇ ಪುರೋಹಿತರ ಕಡೆಯಿಂದ ಯಾರೋ ಬಂದು ಸುದ್ದಿ ತಲುಪಿಸಿದರು:

"ಈಗ ಪ್ರತಿಮೆಯು ವಿಸರ್ಜನವಾಗುತ್ತದೆ, ಬಾಬುಗಳು ಬಂದು ಪ್ರಣಾಮ ಸಲ್ಲಿಸಿ ಹೋಗಬಹುದೆಂದು ಪುರೋಹಿತರು ಹೇಳುತ್ತಿದ್ದಾರೆ."

ಮಥುರನಿಗೆ ಆ ವಿಷಯ ಮೊದಲು ತಲೆಗೇ ಹೋಗಲಿಲ್ಲ. ಪುನಃ ಯಾರನ್ನೋ ಕೇಳಿದಾಗ ಅಂದು ವಿಜಯದಶಮಿಯೆಂಬುದು ಜ್ಞಾಪಕಕ್ಕೆ ಬಂದಿತು. ಆಗ ಅವನಿಗೆ ಸಿಡಿಲು ಹೊಡೆದಂತೆ ಆಘಾತವಾಯಿತು. ಶೋಕತಪ್ತನಾಗಿ ಭಾವಿಸತೊಡಗಿದ:

'ಜಗನ್ಮಾತೆಯ ವಿಸರ್ಜನೆಯನ್ನು ಏಕೆ ಮಾಡಬೇಕು! ನನಗಾದರೋ ಜಗ ನ್ಮಾತೆಯ ಮತ್ತು ಠಾಕೂರರ ಕೃಪೆಯಿಂದ ಯಾವುದಕ್ಕೂ ಕೊರತೆಯಿಲ್ಲ. ಅಂತಿರುವಾಗ

---

*ಪ್ರತಿಮೆಯ ಮುಂದೆ ನೀರು ತುಂಬಿದ ಮಡಕೆಯೊಂದನ್ನು ಇರಿಸಿರುತ್ತಾರೆ. ಅದರಲ್ಲಿ ಬೀಳುವ ದೇವಿಯ ಪ್ರತಿಬಿಂಬವನ್ನು ಕಾಣಲಾಗುವಂತೆ ಅದರ ಮೇಲೊಂದು ಕನ್ನಡಿ (ದರ್ಪಣ) ಇರುತ್ತದೆ. ಈ ಕನ್ನಡಿಯನ್ನು ಪೂಜಾಂತ್ಯದಲ್ಲಿ ಮಡಕೆಯ ನೀರಿನೊಳಗೆ ಹಾಕುತ್ತಾರೆ. ಇದೇ 'ದರ್ಪಣ ವಿಸರ್ಜನ'.

ಈ ಪೂಜೆ ಹೀಗೆಯೇ ಮುಂದುವರಿಯಬಾರದೇಕೆ? ನನ್ನ ಮನಸ್ಸಿನಲ್ಲಿ ಯಾವ ಆನಂದಕ್ಕೆ ಕೊರತೆಯಿದ್ದಿತೋ ಅದು ಕೂಡ ಈಗ ಜಗನ್ಮಾತೆಯ ಆಗಮನದಿಂದ ನೀಗಿದೆ. ಹೀಗಿರುವಾಗ ಆಕೆಯನ್ನು ವಿಸರ್ಜಿಸಿ ಈ ಆನಂದದ ಸಂತೆಯನ್ನು ಕೊನೆಗಾಣಿಸಲೆ? ನಿರಾನಂದವನ್ನು ತಂದುಕೊಳ್ಳಲೆ? ಅದೆಂದಿಗೂ ಆಗದು. ಛೆ! ಜಗನ್ಮಾತೆಯ ವಿಸರ್ಜನೆಯೆ! ಆ ಯೋಚನೆಯನ್ನೇ ನನ್ನಿಂದ ತಡೆಯಲಾಗದು!' ಹೀಗೆ ಸಾಗಿತ್ತು ಮಥುರನ ಭಾವಧಾರೆ.

ಇತ್ತ ಹೊತ್ತು ಮೀರಿಹೋಗುತ್ತಿದೆ. "ಬಾಬುಗಳು ಒಂದು ಬಾರಿ ಬಂದು ನಿಂತುಕೊಳ್ಳಲಿ, ಸಾಕು; ವಿಸರ್ಜನೆ ಮಾಡಿಬಿಡೋಣ" ಎಂದು ಪುರೋಹಿತರು ಹೇಳಿಹೇಳಿ ಕಳುಹಿಸುತ್ತಿದ್ದಾರೆ. ಬಹುಶಃ ಯಜಮಾನರಿಗೆ ಯಾವುದೋ ಕಾರ್ಯದ ನಿಮಿತ್ತವಾಗಿ ಬರಲಾಗುತ್ತಿಲ್ಲ ಎಂಬುದು ಅವರ ಭಾವನೆ. ಆದರೆ ಒಬ್ಬೊಬ್ಬರು ಬಂದು ಹೇಳಿದಾಗಲೂ ಮಥುರನಿಗೆ ಸಿಟ್ಟೇರುತ್ತಿದೆ. ಆದರೆ ಏನೂ ಮಾತನಾಡದೆ ಕಂಬನಿದುಂಬಿ ಶತಪಥ ಹಾಕುತ್ತಿದ್ದಾನೆ. ಕೊನೆಗೆ ಒಬ್ಬ ಸೇವಕ ಬಂದು ನೆನಪಿಸಿದಾಗ ಕ್ರುದ್ಧನಾಗಿ ಘರ್ಜಿಸಿದ:

"ಏಯ್, ಹೋಗಾಕಡೆ! ಜಗನ್ಮಾತೆಯ ಪ್ರತಿಮೆಯನ್ನು ವಿಸರ್ಜನೆ ಮಾಡಲು ನಾನು ಬಿಡಲಾರೆ. ಹೋಗಿ ಹೇಳು, ಇಷ್ಟು ದಿನ ನಡೆದಂತೆ ಅವಳ ಪೂಜೆ ಇನ್ನು ಮುಂದೆಯೂ ನಡೆಯಬೇಕು ಅಂತ. ಹೌದು! ಪ್ರತಿದಿನವೂ ಹೀಗೆಯೇ ನಡೆಯುತ್ತದೆ. ನನ್ನ ಮಾತಿಗೆ ವಿರುದ್ಧವಾಗಿ ಏನಾದರೂ ಮಾಡಿದಿರೋ, ನೋಡಿಕೊಳ್ಳಿ, ಘೋರವಾದ ಅನರ್ಥಕ್ಕೆ ಗುರಿಯಾಗಬೇಕಾದೀತು. ಕಡೆಗೆ ರಕ್ತಪಾತವೂ ಆದೀತು, ಹುಷಾರ್!... ಹೊರಡಿಲ್ಲಿಂದ!"

ಧಣಿಗಳ ವಿಚಿತ್ರ ವರ್ತನೆಯನ್ನು ಕಂಡ ಸೇವಕ ಕೂಡಲೆ ಕಾಲಿಗೆ ಬುದ್ಧಿ ಹೇಳಿದ. ಓಡಿ ಹೋಗಿ ಪುರೋಹಿತರ ಬಳಿ ನಡೆದುದನ್ನೆಲ್ಲ ವಿವರಿಸಿದ. "ಇದೇನಪ್ಪ ಇದು!" ಎನ್ನುತ್ತ ಅಲ್ಲಿದ್ದವರೆಲ್ಲ ಮುಖಮುಖ ನೋಡಿಕೊಂಡರು. ಈಗೇನು ಮಾಡುವುದು? ಸಮಾಲೋಚಿಸಿದರು. ಮನೆಮಂದಿಯಲ್ಲಿ ಯಾರ್ಯಾರನ್ನು ಮಥುರ ವಿಶೇಷ ಗೌರವದಿಂದ ಕಾಣುತ್ತಿದ್ದನೋ ಅವರೆಲ್ಲ ಒಟ್ಟಿಗೆ ಹೋಗಿ ಆತನ ಮನವೊಲಿಸಬೇಕು ಎಂದು ತೀರ್ಮಾನವಾಯಿತು. ಸರಿ, ಎಲ್ಲರೂ ಹೋಗಿ ಮಥುರನಿಗೆ ಎಷ್ಟೆಷ್ಟೋ ಬಗೆಯಿಂದ ಹೇಳಿದರು. ಪ್ರತಿಮೆಯನ್ನು ವಿಸರ್ಜಿಸದೆ ಇರಬಾರದು; ಅದು ಶಾಸ್ತ್ರವಿರುದ್ಧ, ಸಂಪ್ರದಾಯವಿರುದ್ಧ ಎಂದರು. ಆದರೆ ಮಥುರನದು ಒಂದೇ ಹಟ:

"ನಾನು ಇನ್ನುಮೇಲೆ ಜಗನ್ಮಾತೆಯ ಪೂಜೆಯನ್ನು ಪ್ರತಿದಿನವೂ ಮಾಡುತ್ತೇನೆ. ಬೇರೆಯವರು ಏನು ಬೇಕಾದರೂ ಮಾಡಿಕೊಳ್ಳಲಿ. ಆ ಸುದ್ದಿ ನನಗೇಕೆ? ಆಕೆಯ ಕೃಪೆಯಿಂದ ನನಗಂತೂ ಯಾವುದಕ್ಕೂ ಬರಗಾಲವಿಲ್ಲ. ಪ್ರತಿದಿನವೂ ಪೂಜೆ ಮಾಡುವ ಶಕ್ತಿ ನನಗಿದೆ. ಹಾಗಿರುವಾಗ 'ವಿಸರ್ಜಿಸು ವಿಸರ್ಜಿಸು' ಎಂದೇಕೆ ಹೇಳುತ್ತೀರಿ?"

ಇವನಿಗಿನ್ನು ಬುದ್ಧಿ ಹೇಳಲು ಸಾಧ್ಯವಿಲ್ಲ ಎಂದುಕೊಂಡು ಎಲ್ಲರೂ ಹಿಂದಿರುಗಿದರು. ಕೆಲವರಿಗಂತೂ ಯಜಮಾನರ ತಲೆ ಕೆಟ್ಟೇಹೋಗಿದೆ ಎನ್ನಿಸಿಬಿಟ್ಟಿತು. ಹಾಗೆಯೇ ಒಬ್ಬರಿಗೊಬ್ಬರು ಪಿಸುಗುಟ್ಟಿಕೊಂಡರು. ಆದರೆ ಅದರಿಂದೇನಾದೀತು? ಮನೆಯವರಿಗೆಲ್ಲ ತಿಳಿದೇ ಇದೆ ಅವನ ಹಟಮಾರಿತನ. ಅವನಿಗೆ ಕೋಪ ಬಂದರೆ ಹಿತಾಹಿತಪ್ರಜ್ಞೆ ಇರುವುದಿಲ್ಲ ಎಂಬುದನ್ನು ಅವರೆಲ್ಲ ಬಲ್ಲರು. ಪ್ರತಿಮೆಯನ್ನು

ವಿಸರ್ಜನೆ ಮಾಡದಿದ್ದರೆ ಅಶುಭವೆಂಬುದೂ ಗೊತ್ತು. ಆದರೆ ಮಥುರನ ಕೋಪಕ್ಕೆ ಈಡಾಗುವುದಕ್ಕಿಂತ ದುರ್ಗೆಯನ್ನು ಎದುರುಹಾಕಿಕೊಳ್ಳುವುದೇ ಲೇಸಾಗಿ ಕಾಣಿಸಿತು ಅವರಿಗೆ!

ಈಗ ಯಜಮಾನಿತಿಗೂ ಈ ಎಲ್ಲ ಸುದ್ದಿ ತಲುಪಿತು. ಪಾಪ, ಅವಳ ಕೈಯಲ್ಲಾದರೂ ಏನಿದೆ? ಆಕೆಗೆ ತೋಚಿದ್ದು ಒಂದೇ ಉಪಾಯ—ಓಡಿದಳು ಶ್ರೀರಾಮಕೃಷ್ಣರ ಬಳಿಗೆ! ಮಥುರನ ತಲೆ ನಿಜವಾಗಿಯೂ ಕೆಟ್ಟುಹೋಗಿದ್ದ ಪಕ್ಷದಲ್ಲಿ ಅವನನ್ನು ವಿಪತ್ತಿನಿಂದ ಪಾರು ಮಾಡಬಲ್ಲವರು ಬೇರೆ ಯಾರಿದ್ದಾರೆ?

"ಅಪ್ಪಾ, ನೀವೇ ನಮಗೆ ದಿಕ್ಕು. ಅವರಿಗೆ ಮನದಟ್ಟಾಗುವಂತೆ ಹೇಳಿ" ಎಂದು ಕಂಬನಿದುಂಬಿ ಪ್ರಾರ್ಥಿಸಿದಳು.

ಶ್ರೀರಾಮಕೃಷ್ಣರು ಹೋಗಿ ನೋಡುತ್ತಾರೆ—ಮಥುರನ ಮುಖ ಗಂಭೀರ ಮುದ್ರೆ ತಾಳಿದೆ. ಕಣ್ಣುಗಳೆರಡೂ ಕೆಂಪಾಗಿವೆ. ಅತ್ತಿಂದಿತ್ತ ರಭಸದಿಂದ ಹೆಜ್ಜೆ ಹಾಕುತ್ತಿದ್ದಾನೆ. ಶ್ರೀರಾಮಕೃಷ್ಣರನ್ನು ಕಂಡೊಡನೆ ಅವನಿಗೆ ಗೊತ್ತಾಗಿಹೋಯಿತು—ಅವರು ತನ್ನಲ್ಲಿಗೆ ಬರುತ್ತಿರುವುದೇಕೆ ಎಂದು. ಅವರು ಬಂದು ತುಟಿಯೊಡೆಯುವ ಮೊದಲೇ ಮಥುರನೆಂದ:

"ಅಪ್ಪಾ, ಯಾರು ಏನೇ ಹೇಳಲಿ; ನಾನಂತೂ ಜೀವದಿಂದಿರುವವರೆಗೆ ಜಗನ್ಮಾತೆಯ ಪ್ರತಿಮೆಯನ್ನು ವಿಸರ್ಜನೆ ಮಾಡಲು ಬಿಡಲಾರೆ. ಇನ್ನುಮೇಲೆ ನಿತ್ಯವೂ ಪೂಜೆ ಮಾಡುವೆನೆಂದು ಹೇಳಿದ್ದೇನೆ. ತಾಯಿಯನ್ನು ಅಗಲಿ ನಾನು ಜೀವಿಸಿರಲಾರೆ."

ಹೀಗೆನ್ನುವಷ್ಟರಲ್ಲೇ ಅವನ ಸ್ವರ ಗದ್ಗದವಾಗಿ ಕಣ್ಣಿನಿಂದ ಬಿಂದುಗಳುರುಳಿದುವು. ಶ್ರೀರಾಮಕೃಷ್ಣರು ಅವನ ಎದೆಯನ್ನು ನೇವರಿಸುತ್ತ ಮೃದುವಾಗಿ ನುಡಿದರು:

"ಓಹೋ, ತಿಳಿಯಿತು! ಇಷ್ಟೇ ತಾನೆ ನಿನ್ನ ಭಯ?"

ಶ್ರೀರಾಮಕೃಷ್ಣರ ಸ್ಪರ್ಶವಾದೊಡನೆ ಅಫೀಮು ತಿಂದ ಸಿಂಹದಂತಾದ ಮಥುರ. ಶ್ರೀರಾಮಕೃಷ್ಣರು ಮತ್ತೆ ಇಂತೆಂದರು:

"ಮಥುರಬಾಬು, ನೀನು ತಾಯಿಯನ್ನು ಅಗಲಿ ಇರಬೇಕೆಂದವರು ಯಾರು? ಅವಳ ಪ್ರತಿಮೆಯನ್ನು ನೀನು ವಿಸರ್ಜನೆ ಮಾಡಿದರೂ ಅವಳು ನಿನ್ನನ್ನು ಬಿಟ್ಟು ಎಲ್ಲಿಗೆ ತಾನೆ ಹೋದಾಳು? ತಾಯಿಗಾದರೂ ತನ್ನ ಶಿಶುವನ್ನು ಬಿಟ್ಟಿರಲು ಸಾಧ್ಯವೆ? ಅವಳ ಮನವೊಪ್ಪುತ್ತದೆಯೆ?"

"ಹಾಗಾದರೆ . . . ಹಾಗಾದರೆ . . ."

"ಹೌದು, ಅವಳು ನಿನ್ನೊಂದಿಗೇ ಇರುತ್ತಾಳೆ! ನೋಡು, ಈ ಮೂರು ದಿನ ಆಕೆ ಹೊರಗೆ ಪೂಜಾಮಂಟಪದಲ್ಲಿ ಕುಳಿತು ನಿನ್ನ ಪೂಜೆಯನ್ನು ಸ್ವೀಕರಿಸಿದಳು. ಇಂದಿನಿಂದ ನಿನ್ನ ಹತ್ತಿರಕ್ಕೆ ಬಂದು, ನಿನ್ನ ಹೃದಯದಲ್ಲೇ ಕುಳಿತು, ನಿನ್ನ ಭಕ್ತಿನೈವೇದ್ಯವನ್ನು ಸ್ವೀಕರಿಸುತ್ತಾಳೆ, ಅಷ್ಟೆ!"

ಶ್ರೀರಾಮಕೃಷ್ಣರ ಮಾತಿನೊಂದಿಗೆ ಸ್ಪರ್ಶದಲ್ಲೂ ಅದೆಂಥ ಮೋಹಿನೀಶಕ್ತಿ! ಅವರ ಹಸ್ತಸ್ಪರ್ಶವೇ ಅವರ ಬ್ರಹ್ಮಾಸ್ತ್ರ! ಅದಕ್ಕೆ ಯಾವುದೂ ಎದುರಿಲ್ಲ. ಯಥಾರ್ಥ ಸತ್ಯವನ್ನು ಕಂಡುಕೊಳ್ಳುವ ಮಾರ್ಗದಲ್ಲಿ ಯಾರ್ಯಾರಿಗೆ ಏನೇನು ಪ್ರತಿಬಂಧಕಗಳಿರುವುವೋ ಅವುಗಳನ್ನೆಲ್ಲ ಅವರು ತಮ್ಮ ಸ್ಪರ್ಶಮಾತ್ರದಿಂದ ನಿವಾರಿಸಿಬಿಡಬಲ್ಲವರಾಗಿದ್ದರು. ಇದನ್ನು ಈಗ ಮಥುರನ ಮೇಲೆ ಪ್ರಯೋಗ ಮಾಡಿಬಿಟ್ಟರು. ಅದರ

ಪರಿಣಾಮವಾಗಿ, ಅವನ ಸ್ವಂತ ಬುದ್ಧಿಗೆ ತೋಚದಿದ್ದ, ಹತ್ತಾರು ಜನ ಹಿರಿಯರಿಂದಲೂ ತಿಳಿಸಿಕೊಡಲಾಗದಿದ್ದ ವಿಷಯವೊಂದು ಅವರ ಮುಟ್ಟುವಿಕೆಯಿಂದಲೇ ಅವನ ಅರಿವಿಗೆ ಬಂದಿತು. ಅವನು ತನ್ನ ಹೃದಯಕಂದರದಲ್ಲಿ ಜಗನ್ಮಾತೆ ಉಜ್ವಲ ಪ್ರಕಾಶದಿಂದ ಕಂಗೊಳಿಸುತ್ತಿರುವುದನ್ನು ಸಾಕ್ಷಾತ್ತಾಗಿ ಅನುಭವಿಸಿದ ! ಅವನ ಆನಂದ ನೂರ್ಮಡಿಗೊಂಡಿತು; ಅಂತರಂಗದ ಆನಂದದ ಮುಂದೆ ಬಹಿರಂಗದ ಪ್ರತಿಮೆ ಅವನಿಗಿನ್ನು ಬೇಕೆನಿಸಲಿಲ್ಲ.

ಪ್ರತಿಮಾ ವಿಸರ್ಜನೆಯ ಕಾರ್ಯ ಸಾಂಗವಾಗಿ ನೆರವೇರಿತು. ಬಳಿಕ, ಯಾವ ಮಡಕೆಯಲ್ಲಿ 'ದರ್ಪಣ ವಿಸರ್ಜನ' ನಡೆದಿದ್ದಿತೋ ಅದರಲ್ಲಿನ ನೀರನ್ನು (ಶಾಂತಿಜಲವನ್ನು) ಎಲ್ಲರೂ ಸೇಚನ ಮಾಡಿಕೊಂಡರು. ಈಗ, ಚಿಕ್ಕವರು ದೊಡ್ಡವರಿಗೆ ನಮಸ್ಕಾರ ಮಾಡಿದರು; ಪ್ರತಿಯಾಗಿ ದೊಡ್ಡವರು ಚಿಕ್ಕವರನ್ನು ಹರಸಿ ಆಲಿಂಗಿಸಿದರು. ಸಮಾನಸ್ಕಂಧರೂ ಪರಸ್ಪರ ಆಲಿಂಗಿಸಿಕೊಂಡರು. ಇದಕ್ಕೆ ಬಂಗಾಳಿಯಲ್ಲಿ 'ಕೊಲಾಕುಲಿ' ಎನ್ನುತ್ತಾರೆ. ಇದು ಆನಂದದ ಅಭಿವ್ಯಕ್ತಿ. ಪೂಜೆಗೊಂಡ ಜಗನ್ಮಾತೆಯು ಪ್ರತಿಮೆಯನ್ನು ವಿಸರ್ಜನೆ ಮಾಡುತ್ತಲೇ ಆನಂದಮಯಿಯಾದ ಆಕೆ ತನ್ನ ಭಕ್ತರೆಲ್ಲರ ಹೃದಯವನ್ನು ಆವರಿಸಿಕೊಳ್ಳುತ್ತಾಳೆ. ಇದರ ಪ್ರತಿಕ್ರಿಯೆಯೇ ಆಲಿಂಗನ !

ಶ್ರೀರಾಮಕೃಷ್ಣರ ಸ್ಪರ್ಶದಿಂದ ತಾನು ಪಡೆದ ಅನಿರ್ವಚನೀಯ ಆನಂದವೊಂದು ಮಥುರನಿಗೆ ಈ ಸಲ ಪ್ರಾಪ್ತವಾದ ದಿವ್ಯಾನುಭವ. ಇದರಿಂದಾಗಿ ಅವನ ಮನಸ್ಸಿನಲ್ಲೊಂದು ಕ್ರಾಂತಿಯೇ ನಡೆದುಹೋಯಿತು. ಆತ ಇಲ್ಲಿಯವರೆಗೆ ಶ್ರೀರಾಮಕೃಷ್ಣರು ಸಮಾಧಿಗೇರುವುದನ್ನು ಅದೆಷ್ಟು ಸಲ ಕಂಡಿದ್ದನೊ! ಆದರೆ ಆ ಸಮಾಧಿಸ್ಥಿತಿಯಲ್ಲಿ ಅವರಿಗೇನಾಗುತ್ತಿತ್ತು ಎಂಬುದರ ಸ್ಪಷ್ಟ ಕಲ್ಪನೆ ಅವನಿಗಾಗದ್ದರಿಂದ ಸುಮ್ಮನಿದ್ದ. ಈ ಸಲ ಅವರ ದಿವ್ಯಸ್ಪರ್ಶದಿಂದ ದೊರಕಿದ ಆನಂದವನ್ನು ಕಂಡು ಅವನಿಗನ್ನಿಸಿತು, 'ಇಂಥದೊಂದು ಆನಂದ ಇದೆಯೆಂದು ನನಗೆ ತಿಳಿಯದೆಹೋಯಿತಲ್ಲ! ಅವರು ತಮ್ಮ ಸಮಾಧಿಸ್ಥಿತಿಯಲ್ಲಿ ಅದೆಷ್ಟು ಆನಂದವನ್ನು ಅನುಭವಿಸುವರೊ! ಅವರ ದಿವ್ಯ ಸಹವಾಸವನ್ನು ಪಡೆದ ನಾನು ಅವರಿಂದ ಆ ಸಮಾಧಿಯನ್ನು ಪಡೆದುಕೊಳ್ಳುವುದು ಬೇಡವೆ ? ನನ್ನ ಈ ವಯಸ್ಸಿನಲ್ಲಿ ನಾನೇ ಸಾಧನೆ ಮಾಡಿ ಸಮಾಧಿಯ ಆನಂದವನ್ನು ಅನುಭವಿಸುವುದಂತೂ ಸಾಧ್ಯವಿಲ್ಲದ ಮಾತು. ಅಲ್ಲದೆ, ಶ್ರೀರಾಮಕೃಷ್ಣರು ತಮ್ಮ ಇಚ್ಛಾಮಾತ್ರದಿಂದ ಯಾರಿಗೆ ಬೇಕಾದರೂ ಅದನ್ನು ದೊರಕಿಸಿಕೊಡಲು ಸಮರ್ಥರು. ಏಕೆಂದರೆ ಅವರು ಸ್ವಯಂ ಭಗವಂತನೇ. ಶಿವ ಕಾಳಿ ಕೃಷ್ಣ ರಾಮ ಎಲ್ಲವೂ ಅವರೇ. ಅದರಲ್ಲೇನೂ ಸಂಶಯವಿಲ್ಲ. ನಾನು ಕಂಡಿದ್ದೇನೆ—ಅವರು ಕರುಣಾಮೂರ್ತಿ, ಕೃಪಾಸಿಂಧು! ಆದ್ದರಿಂದ ನನ್ನ ಕೋರಿಕೆಯನ್ನು ತಳ್ಳಿಹಾಕಲಾರರು.'

ಮಥುರನಲ್ಲಿ ಇಂಥ ವಿಶ್ವಾಸ ಉದಿಸಿದ್ದೊಂದು ಸಾಮಾನ್ಯವಾದ ಅದ್ಭುತವಲ್ಲ. ಅವನಿಗೆ ಮಾತ್ರವಲ್ಲ, ಮುಂದೆಯೂ ಕೂಡ ಶ್ರೀರಾಮಕೃಷ್ಣರ ನಿಕಟ ಸಂಪರ್ಕಕ್ಕೆ ಯಾರ್‍ಯಾರು ಬರುತ್ತಿದ್ದರೋ ಅವರಲ್ಲೆಲ್ಲ ಕ್ರಮೇಣ ಇಂಥ ನಂಬಿಕೆ ಹುಟ್ಟುತ್ತಿತ್ತು. ಠಾಕೂರರ ಇಚ್ಛೆಯಿಂದ, ಅಸಾಧ್ಯವಾದುದೂ ಸುಸಾಧ್ಯವಾಗುತ್ತದೆ ಮತ್ತು ಅವರು ಸಂಕಲ್ಪಮಾತ್ರದಿಂದ ಯಾರಿಗೆ ಬೇಕಾದರೂ ಆಧ್ಯಾತ್ಮಿಕ ಸತ್ಯಗಳನ್ನು ಅನುಭವ ಮಾಡಿಸಿಕೊಡಬಲ್ಲರು ಎಂದು ಪ್ರತಿಯೊಬ್ಬರಿಗೂ ಅನ್ನಿಸುತ್ತಿತ್ತು. ಅಷ್ಟೇ ಅಲ್ಲ, ಅಂತಹ ಅನೇಕ ಅದ್ಭುತಗಳನ್ನು ಜನರು ಪ್ರತ್ಯಕ್ಷ ಕಾಣುತ್ತಿದ್ದರು.

ನಿಜಕ್ಕೂ ಒಬ್ಬ ವ್ಯಕ್ತಿ, ಆತನೆಷ್ಟೇ ಆಧ್ಯಾತ್ಮಿಕ ಅನುಭವಗಳನ್ನು ಪಡೆದಿದ್ದರೂ, ಇನ್ನೊಬ್ಬನಲ್ಲಿ ಆಧ್ಯಾತ್ಮಿಕ ಭಾವವನ್ನು ಜಾಗೃತಗೊಳಿಸಲಾರ. ಹೆಚ್ಚೆಂದರೆ ದಾರಿತೋರಬಲ್ಲನೇ ಹೊರತು ಅನುಭವವನ್ನೇ ಮಾಡಿಸಿಕೊಡಲಾರ. ಆದರೆ ಶ್ರೀರಾಮಕೃಷ್ಣರು ಅನೇಕರಿಗೆ—ಅವರವರ ಅರ್ಹತೆ ಅಗತ್ಯಗಳಿಗನುಸಾರ ಒಬ್ಬೊಬ್ಬರಿಗೂ ಒಂದೊಂದು ಬಗೆಯ ಅನುಭವವನ್ನು ಮಾಡಿಸಿಕೊಡುವುದನ್ನು ನಾವು ನೋಡಲಿದ್ದೇವೆ. ಇದು ಅವರಿಗೆ, ಅವರಂಥ ಅವತಾರಪುರುಷರಿಗೆ ಮಾತ್ರವೇ ಸಾಧ್ಯ!

ಮಥುರನಿಗೆ ತಾನೂ ಭಾವಸಮಾಧಿಯ ರುಚಿ ನೋಡಬೇಕೆಂಬ ಮನಸ್ಸಾದೊಡನೆ ಶ್ರೀರಾಮಕೃಷ್ಣರ ಬಳಿಗೆ ಓಡಿದ; ಅವರ ಪಾದಗಳನ್ನು ಹಿಡಿದು ಬೇಡಿಕೊಂಡ:

"ಅಪ್ಪಾ, ನನಗೂ ಭಾವಸಮಾಧಿಯನ್ನು ಅನುಭವಿಸಬೇಕೆಂದು ತುಂಬ ಆಸೆಯಾಗಿದೆ. ದಯಮಾಡಿ ನೀವದನ್ನು ನನಗೆ ಕರುಣಿಸಬೇಕು."

ಇಂತಹ ಸಂದರ್ಭಗಳಲ್ಲಿ ತಾವು ಯಾವಾಗಲೂ ಹೇಳುವಂತೆಯೇ ಹೇಳಿದರು ಶ್ರೀರಾಮಕೃಷ್ಣರು:

"ಏನು ಸಮಾಧಿಯೆ! ಈಗ ಅದೆಲ್ಲ ಯಾಕೋ ನಿನಗೆ? ಎಲ್ಲವೂ ತಕ್ಕ ಸಮಯ ವೊದಗಿದಾಗ ಆಗುತ್ತದೆ. ಬೀಜ ಬಿತ್ತಿದೊಡನೆಯೇ ಮರ ಬೆಳೆದುನಿಂತು ಫಲ ಸಿಗಬೇಕೆಂದರೆ ಹೇಗೆ? ಅಲ್ಲದೆ ಈಗ ನಿನಗೇನು ಕಡಿಮೆಯಾಗಿದೆ ಹೇಳು? ಅತ್ತ ಕಡೆ, ಇತ್ತ ಕಡೆ ಎರಡು ಕಡೆಯೂ ನಡೆಯುತ್ತಿಲ್ಲವೆ? ಭಾವಸಮಾಧಿಯುಂಟಾದರೆ ನೀನು 'ಇತ್ತ ಕಡೆ'ಗೆ (ಸಂಸಾರದ ಕಡೆಗೆ) ಗಮನ ಕೊಡುವುದು ನಿಂತುಹೋಗಿಬಿಡುತ್ತದೆ. ಆಗ ನಿನ್ನ ಆಸ್ತಿಪಾಸ್ತಿಗಳನ್ನು ನೋಡಿಕೊಳ್ಳುವವರು ಯಾರು? ಇದೇ ಸಮಯ ಎಂದು ಎಲ್ಲರೂ ಸೇರಿ ಅದನ್ನು ಲೂಟಿ ಮಾಡಿಬಿಡುತ್ತಾರೆ, ನೋಡಿಕೊ!"

"ನನಗೆ ಗೊತ್ತು, ನೀವು ಸುಮ್ಮನೆ ನನ್ನನ್ನು ಹೆದರಿಸುತ್ತಿದ್ದೀರಿ. ಹಾಗೆಲ್ಲ ಏನೂ ಆಗುವುದಿಲ್ಲ. ನನಗೆ ಒಮ್ಮೆಯಾದರೂ ಆ ಅನುಭವವನ್ನು ಮಾಡಿಸಿಕೊಡಿ."

ಈಗ ಶ್ರೀರಾಮಕೃಷ್ಣರು ಸ್ವಲ್ಪ ಎತ್ತರದ ದನಿಯಲ್ಲಿ ಹೇಳಿದರು:

"ಅಲ್ಲಯ್ಯ, ಭಕ್ತರಾದವರು ದರ್ಶನಗಳನ್ನು ಮಾಡಲು ಹಂಬಲಿಸುತ್ತಾರೆಯೆ? ಅವರಿಗೆ ಬೇಕಾದದ್ದು ಅದಲ್ಲ. ಅವರಿಗೆ ಭಗವಂತನ ಸೇವಾವಕಾಶ ಬೇಕು. ಅದಕ್ಕಾಗಿ ಅವರು ಹಾತೊರೆಯುತ್ತಾರೆ. ಅಲೌಕಿಕ ಅನುಭವಗಳಾಗಿಬಿಟ್ಟರೆ, ಭಗವಂತನ ಅಪಾರ ಮಹಿಮೆಯ ಅರಿವಾಗಿ ಮನಸ್ಸಿನಲ್ಲಿ ಒಂದು ಬಗೆಯ ಅಂಜಿಕೆಯುದಿಸುತ್ತದೆ; ಪರಿಣಾಮವಾಗಿ ಆತನ ಮೇಲಿನ ಪ್ರೇಮ ತಗ್ಗುತ್ತದೆ. ಇದಕ್ಕೆ ಭಾಗವತದಲ್ಲೊಂದು ಉದಾಹರಣೆಯಿದೆ: ಶ್ರೀಕೃಷ್ಣ ಬೃಂದಾವನದಿಂದ ಮಥುರೆಗೆ ಹೋದಾಗ ಗೋಪಿಕೆಯರು ವಿರಹವೇದನೆಗೊಳಗಾದರು. ಅದನ್ನು ತಿಳಿದ ಶ್ರೀಕೃಷ್ಣ ಅವರನ್ನು ಸಂತೈಸಲು ಉದ್ಧವನನ್ನು ಕಳಿಸಿದ. ಉದ್ಧವನೊಬ್ಬ ಜ್ಞಾನಿಯಲ್ಲವೆ? ಆತ ವೇದಾಂತವನ್ನರಿತವನು. ಅವನು ಬೃಂದಾವನವಾಸಿಗಳ ಭಕ್ತಿಭಾವಗಳನ್ನೆಲ್ಲ ಮೆಚ್ಚುತ್ತಿರಲಿಲ್ಲ. ಕೃಷ್ಣನಿಗಾಗಿ ಕಣ್ಣೀರು ಸುರಿಸುವುದು, ಕೃಷ್ಣನನ್ನು ಅಲಂಕರಿಸುವುದು, ಉಪಚಾರ ಮಾಡುವುದು ಇಂಥದೆಲ್ಲ ಸ್ವಲ್ಪವೂ ಇಷ್ಟವಾಗದು ಅವನಿಗೆ. ಗೋಪಸ್ತ್ರೀಯರದು ಪರಿಶುದ್ಧ ಪ್ರೇಮವೆಂದರಿಯದೆ, ಅದು ಮೋಹದಿಂದ ಉಂಟಾದದ್ದು, ಕೆಳದರ್ಜೆಗೆ ಸೇರಿದ್ದು ಎಂದು ಉದ್ಧವ ಭಾವಿಸಿದ್ದ. ಆದ್ದರಿಂದ ಅವನಿಗೂ ಬುದ್ಧಿ ಕಲಿಸುವುದು ಕೃಷ್ಣನ ಮತ್ತೊಂದು ಉದ್ದೇಶವಾಗಿತ್ತು.

"ಉದ್ಧವ ಹೋಗಿ ಗೋಪಸ್ತ್ರೀಯರನ್ನು ಸಮಾಧಾನಗೊಳಿಸಲು ಯತ್ನಿಸುತ್ತ ಹೇಳಿದ: 'ನೀವೆಲ್ಲ ಕೃಷ್ಣ ಕೃಷ್ಣ ಎಂದು ಸುಮ್ಮನೆ ಕೊರಗುವುದೇಕೆ? ಅವನು ಸ್ವಯಂ ಭಗವಂತನೇ ಎಂಬುದು ನಿಮಗೆಲ್ಲ ಗೊತ್ತೇ ಇದೆ. ಎಂದಮೇಲೆ ಅವನು ಸರ್ವವ್ಯಾಪಿ ತಾನೆ? ಅವನೀಗ ಮಥುರೆಯಲ್ಲಿ ಮಾತ್ರ ಇರುವುದೆ? ಬೃಂದಾವನದಲ್ಲಿಲ್ಲವೆ? ಸುಮ್ಮನೆ ವ್ಯಾಕುಲಪಡದೆ ಕಣ್ಮುಚ್ಚಿಕೊಂಡು ನೋಡಿ: ನವಘನಶ್ಯಾಮನೂ ಮುರಲೀಧರನೂ ವನಮಾಲಿಯೂ ಆದ ಶ್ರೀಕೃಷ್ಣ ನಿಮ್ಮ ಹೃದಯದಲ್ಲೇ ಇರುವುದನ್ನು ಕಾಣಬಹುದು.' ಅದನ್ನು ಕೇಳಿ ಗೋಪಸ್ತ್ರೀಯರೆಂದರು: 'ಉದ್ಧವಾ, ನೀನು ಕೃಷ್ಣನ ಸಖ. ಮೇಲಾಗಿ ಜ್ಞಾನಿ. ಹಾಗಿದ್ದೂ ನೀನು ನಮ್ಮೊಡನೆ ಇಂಥ ಮಾತನ್ನಾಡಬಹುದೆ? ನಾವೇನು ಧ್ಯಾನಿಗಳೇ, ಜ್ಞಾನಿಗಳೇ? ಅಥವಾ ಋಷಿಮುನಿಗಳಂತೆ ಜಪತಪವನ್ನು ಸಾಧಿಸಿ ಕೃಷ್ಣನನ್ನು ಪಡೆದವರೆ? ನಾವು ಯಾರನ್ನು ಕೈಯಾರೆ ಅಲಂಕರಿಸಿದ್ದೇವೋ,

ತಿಂಡಿಯನ್ನು ತಿನ್ನಿಸಿ ಉಪಚರಿಸಿದ್ದೇವೋ ಅಂಥವನನ್ನು ಈಗ ಧ್ಯಾನದ ಮೂಲಕ ಪಡೆದುಕೊಳ್ಳಲು ಹೋಗಬೇಕೆ? ನಮ್ಮಿಂದ ಅದು ಸಾಧ್ಯವೆ? ಯಾವ ಮನಸ್ಸಿನಿಂದ ಧ್ಯಾನಜಪಗಳನ್ನು ಮಾಡಬೇಕೋ ಆ ಮನಸ್ಸು ನಮ್ಮದಾಗಿ ಇದ್ದರಲ್ಲವೆ ಅದನ್ನೆಲ್ಲ ಮಾಡುವುದು! ಆ ಮನಸ್ಸನ್ನು ಕೃಷ್ಣನ ಪಾದಗಳಿಗೆ ಯಾವಾಗಲೋ ಸಮರ್ಪಿಸಿ ಬಿಟ್ಟಿದ್ದೇವೆ. ಈಗ ನಮ್ಮದೆನ್ನುವುದೇನಿದೆ?'

"ಇದನ್ನು ಕೇಳಿ ಉದ್ಧವ ನಿರುತ್ತರನಾದ. ಅವನ ಕಣ್ಣು ತೆರೆಯಿತು. ಗೋಪ ಸ್ತ್ರೀಯರು ಕೃಷ್ಣನ ಮೇಲಿಟ್ಟಿದ್ದ ಪ್ರೇಮ ಎಷ್ಟು ಗಹನವಾದದ್ದು ಎಂಬುದನ್ನು ಕಂಡುಕೊಂಡು, ಅವರನ್ನು ಗುರುವೆಂದು ನಮಸ್ಕರಿಸಿ ಹೊರಟುಹೋದ.

"ಹೀಗೆ, ನಿಜವಾದ ಭಕ್ತನು ದರ್ಶನಗಳನ್ನೆಲ್ಲ ಬಯಸುವುದಿಲ್ಲ ಎಂಬುದನ್ನು ನೀನೇ ತಿಳಿಯಬಹುದು. ಭಗವಂತನ ಸೇವೆಯಲ್ಲೇ ಭಕ್ತನಿಗೆ ಪರಮಾನಂದ. ಅದಕ್ಕಿಂತ ಹೆಚ್ಚಾಯಿತೆಂದರೆ ಅದರಿಂದ ಭಕ್ತನ ಭಾವಕ್ಕೇ ಧಕ್ಕೆಯುಂಟಾಗುತ್ತದೆ."

ಶ್ರೀರಾಮಕೃಷ್ಣರು ಇಷ್ಟೆಲ್ಲ ಹೇಳಿದರೂ ಮಥುರನಿಗೆ ಸಮಾಧಾನವಾಗಲಿಲ್ಲ. ಅವರು ಹೇಳುತ್ತಿರುವುದು ತನ್ನ ಒಳಿತಿಗಾಗಿಯೇ ಎಂಬುದು ತಿಳಿಯಲಿಲ್ಲ. ಮತ್ತೆ ಮತ್ತೆ ಗೋಗರೆದ: "ನೀವು ಹೀಗೆಯೇ ಏನಾದರೊಂದು ಹೇಳಿಬಿಡುತ್ತೀರಿ. ಅದೆಲ್ಲ ಆಗದು. ಒಂದೇ ಒಂದು ಸಲ ನನಗೆ ಸಮಾಧಿಸ್ಥಿತಿಯನ್ನು ಕರುಣಿಸಿಬಿಡಿ, ಸಾಕು."

ಕಟ್ಟಕಡೆಗೆ ಶ್ರೀರಾಮಕೃಷ್ಣರೆಂದರು: "ಇನ್ನೇನಪ್ಪ ಹೇಳಲಿ? ನನಗೇನೂ ಗೊತ್ತಿಲ್ಲ. ತಾಯಿಯ ಇಷ್ಟವಿದ್ದಂತೆ ಆಗಲಿ."

ಕೆಲದಿನಗಳಾದುವು. ಒಂದು ದಿನ ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರಿಗೆ ಮಥುರ ನಿಂದ ಕರೆಬಂದಿತು: "ತಾವು ಈ ಕೂಡಲೇ ಬರಬೇಕಂತೆ. ಧಣಿಗಳಿಗೆ ಏನೋ ಆಗಿಬಿಟ್ಟಿದೆ! ಮೊನ್ನೆಯಿಂದಲೂ ವಿಚಿತ್ರವಾಗಿ ಆಡುತ್ತಿದ್ದಾರೆ. ಇದೇನೆಂದೇ ಅರ್ಥ ವಾಗುತ್ತಿಲ್ಲ. ಧಣಿಗಳು ಮಾತ್ರ, 'ಠಾಕೂರರನ್ನು ಕರೆಸಿ, ಎಲ್ಲ ಸರಿಹೋಗುತ್ತದೆ' ಎನ್ನುತ್ತಿದ್ದಾರೆ. ದಯವಿಟ್ಟು ತಾವು ಈಗಲೇ ಬರಬೇಕು."

ಶ್ರೀರಾಮಕೃಷ್ಣರು ತಕ್ಷಣ ಹೊರಟರು. ಮುಂದಾದುದನ್ನು ಅವರೇ ಹೇಳುತ್ತಾರೆ:

"ಮಥುರ ನನಗೆ ಹೇಳಿಕಳಿಸಿದ. ಸರಿ, ನಾನು ಹೋಗಿ ನೋಡುತ್ತೇನೆ—ಅವನು ಬೇರೆಯೇ ಮನುಷ್ಯನಾಗಿಬಿಟ್ಟಿದ್ದಾನೆ! ಕಣ್ಣುಗಳು ಕೆಂಪೇರಿವೆ, ಕಂಬನಿ ತಾನೇತಾನಾಗಿ ಹರಿಯುತ್ತಿದೆ! ಭಗವಂತನ ನಾಮವನ್ನುಚ್ಚರಿಸುತ್ತ ಒಂದೇ ಸಮನೆ ಅಳುತ್ತಿದ್ದಾನೆ. ಭಾವಾವೇಶದಿಂದ ಎದೆ ತುಡಿಯುತ್ತಿದೆ! ನನ್ನನ್ನು ಕಂಡೊಡನೆ ಓಡಿ ಬಂದ. ನನ್ನ ಕಾಲುಗಳೆರಡನ್ನೂ ಅಪ್ಪಿಕೊಂಡು, 'ಅಪ್ಪಾ, ನನ್ನಿಂದ ತಪ್ಪಾಗಿಹೋಯಿತು, ಒಪ್ಪಿಕೊಳ್ಳು ತ್ತೇನೆ. ಇವತ್ತಿಗೆ ಮೂರು ದಿನಗಳಿಂದ ಹೀಗಾಗುತ್ತಿದೆ. ಎಷ್ಟು ಪ್ರಯತ್ನಿಸಿದರೂ ಸಾಂಸಾರಿಕ ವಿಷಯಗಳಲ್ಲಿ ಮನಸ್ಸಿಡಲಾಗುತ್ತಿಲ್ಲ. ಎಸ್ಟೇಟಿನ ಕೆಲಸವೆಲ್ಲ ಕೆಟ್ಟಿತು. ಸದ್ಯ! ಈ ನಿಮ್ಮ 'ಭಾವ'ವನ್ನು ನೀವೇ ತೆಗೆದುಕೊಳ್ಳಿ. ನನಗದು ಬೇಕಾಗಿಲ್ಲ' ಎಂದ. ನಾನು ಹೇಳಿದೆ, 'ಅಲ್ಲಯ್ಯ, ನೀನೇ ಅಲ್ಲವೆ ಅದನ್ನು ಕೊಡಿಸಿ ಎಂದು ಗೋಗರೆದದ್ದು? ಆಗಲೇ ಸಾಕಾಗಿಹೋಯಿತೆ?' ಮಥುರನೆಂದ, 'ಹೌದು, ನಾನು ಕೇಳಿಕೊಂಡದ್ದೂ ನಿಜ, ಮತ್ತು ಈಗ ನಾನು ಆನಂದಭರಿತನಾಗಿರುವುದೂ ನಿಜ; ಇಲ್ಲವೆಂದಲ್ಲ. ಆದರೇನು ಮಾಡುವುದು? ನನ್ನ ಕೆಲಸವೆಲ್ಲ ಮಣ್ಣುಪಾಲಾಯಿತಲ್ಲ! ಅಪ್ಪಾ, ಇದೆಲ್ಲ ಏನಿದ್ದರೂ ನಿಮಗೇ ಸರಿ. ನಿಮ್ಮ ಭಾವ ನಿಮಗೇ ಶೋಭಿಸುತ್ತದೆ. ಅದು

ನಮ್ಮಂಥವರಿಗಲ್ಲ. ದಯವಿಟ್ಟು ಅದನ್ನು ಹಿಂತೆಗೆದುಕೊಂಡುಬಿಡಿ; ನೀವೇ ಇಟ್ಟುಕೊಳ್ಳಿ ಅದನ್ನು.' ನನಗೆ ನಗು ಬಂದಿತು. ನಾನೆಂದೆ, 'ಮಥುರ, ನಾನು ನಿನಗೆ ಈ ವಿಷಯ ವನ್ನು ಮೊದಲೇ ತಿಳಿಸಿದ್ದೆನೊ ಇಲ್ಲವೊ?' ಆಗ ಅವನು, 'ನೀವು ತಿಳಿಸಿದ್ದು ನಿಜ. ಆದರೆ ನನಗಾಗ ಅಷ್ಟು ಗೊತ್ತಾಗಲಿಲ್ಲ. ಅದೇನೊ ಬಹಳ ಆನಂದವಾಗಿ, ತಮಾಷೆ ಯಾಗಿ ಇರುತ್ತದೆ ಎಂದುಕೊಂಡೆ. ಆದರೆ ಇದೊಳ್ಳೇ ಭೂತ ಹಿಡಿದಂತೆ ಹಿಡಿಯುವು ದೆಂದು ಯಾರಿಗೆ ಗೊತ್ತಿತ್ತು? ಇಪ್ಪತ್ತನಾಲ್ಕು ಗಂಟೆಯೂ ಅದರ ಹುಚ್ಚಾಟದಲ್ಲಿ ಕುಣಿಯಬೇಕಾಗುತ್ತದೆ, ನನ್ನಿಷ್ಟದಂತೆ ಏನೂ ಮಾಡಲಾಗುವುದಿಲ್ಲ ಎಂದು ಯಾರಿಗೆ ತಾನೆ ಗೊತ್ತಿತ್ತು? ಈಗ ದಯೆತೋರಿ ನನ್ನನ್ನು ಇದರಿಂದ ಪಾರು ಮಾಡಿ' ಎಂದು ಕೇಳಿಕೊಂಡ. ಆಗ ನಾನವನ ಎದೆಯ ಮೇಲೆ ಕೈಯಾಡಿಸಿದೆ; ಎಲ್ಲವೂ ಮೊದಲಿನಂತಾಯಿತು."

ಭಾವಸಮಾಧಿಯ ಆನಂದವನ್ನು ಪಡೆಯಲು ಎಲ್ಲರಿಗೂ ಎಲ್ಲಿಲ್ಲದ ಹಂಬಲ! ಇದು ಸಹಜವೇ. ಆನಂದ ಯಾರಿಗೆ ಬೇಡ? ಆದರೆ ಈ ಆನಂದದ ರಭಸವನ್ನು ತಡೆದುಕೊಳ್ಳಲು ಯಾರಿಗೆ ಸಾಧ್ಯ ಎಂಬುದೇ ಪ್ರಶ್ನೆ. ಅಂತರ್ಯದಲ್ಲಿ ಆಸೆಯ ಕಿಲುಬು ಲೇಶಮಾತ್ರವಿದ್ದರೂ ಆ ಭಾವ ಉಳಿಯಲಾರದು. ಯಾವುದೋ ಒಂದು ಕ್ಷಣದಲ್ಲಿ ಭಾವೋತ್ಕರ್ಷವಾದರೂ ಅಂತರ್ಯದಲ್ಲಿ ಕಾಮಕಾಂಚನಾಸಕ್ತಿಯಿದ್ದರೆ ಅದು ಮರು ಕ್ಷಣಕ್ಕೆ ಮಾಯವಾಗಿ ಆತ ಹಿಂದಿನ ವ್ಯಕ್ತಿಯೇ ಆಗಿಬಿಡುತ್ತಾನೆ.

ಮಥುರ-ಶ್ರೀರಾಮಕೃಷ್ಣರ ನಡುವೆ ನೆಲಸಿದ್ದ ಸಂಬಂಧ ಅತ್ಯಂತ ಮಧುರ. ಶ್ರೀರಾಮಕೃಷ್ಣರು ತಮ್ಮ ಸಾಧನಾಕಾಲದಲ್ಲೂ ಅನಂತರವೂ ತಮಗೆ ಯಾವುದೇ ವಸ್ತುವಿನ ಅಗತ್ಯವುಂಟಾದರೆ ಒಡನೆಯೇ ಮಥುರನಿಗೆ ತಿಳಿಸುತ್ತಿದ್ದರು. ತಮ್ಮ ಮನಸ್ಸಿನಲ್ಲೇಳುವ ಭಾವನೆಗಳನ್ನು, ತಮಗಾಗುವ ದರ್ಶನ-ಅನುಭವಗಳನ್ನು ಅವನೊಂದಿಗೆ ಹಂಚಿಕೊಳ್ಳುತ್ತಿದ್ದರು. ಕೆಲವೊಮ್ಮೆ 'ಇದು ಹೀಗಾಗಲು ಕಾರಣವೇನು?' ಎಂದೋ, 'ನನಗೆ ಇಂತಹ ದರ್ಶನವಾಯಿತು; ಅದು ನಿಜವಿರಬಹುದೆ?' ಎಂದೋ ಅವನನ್ನು ಕೇಳುವುದಿತ್ತು. ಮಥುರನ ಹಣವು ಸತ್ಕಾರ್ಯಕ್ಕೆ ವಿನಿಯೋಗವಾಗುವಂತೆ ಮತ್ತು ದೇವತಾ ಸೇವೆಗಾಗಿ ಮೀಸಲಾಗಿರಿಸಿದ ಹಣದಿಂದ ಪೂಜೆಯೊಂದಿಗೆ ಸಾಧುಸಂತರಿಗೂ ಬಡಬಗ್ಗರಿಗೂ ಭಿಕ್ಷೆ ದೊರೆಯುವಂತೆ ಮಾಡುತ್ತಿದ್ದರು. ತನ್ಮೂಲಕ ಮಥುರನಿಗೆ ಶ್ರೇಯಸ್ಸುಂಟಾಗುವಂತೆ ಗಮನಕೊಟ್ಟಿದ್ದರು. ಅಷ್ಟೇ ಅಲ್ಲ, ರಾಸಮಣಿ-ಮಥುರರಿಬ್ಬರೂ ಕಾಲವಶರಾದ ಮೇಲೂ, ಅವರು ಸ್ಥಾಪಿಸಿದ್ದ ದಾನದತ್ತಿಗಳು ಮುಂದುವರಿದು ಸತ್ಪಾತ್ರರಿಗೆ ಅವುಗಳ ಫಲ ದೊರಕುವಂತೆ ಮಾಡುತ್ತಿದ್ದರು.

ಶ್ರೀರಾಮಕೃಷ್ಣರು ತನ್ನ ಮೇಲಿರಿಸಿದ್ದ ವಿಶ್ವಾಸಕ್ಕೆ ತಕ್ಕಂತಿತ್ತು, ಅವರ ಮೇಲೆ ಮಥುರನ ಪ್ರೇಮ ಭಕ್ತಿ ಆದರ. ಮಥುರನಿಗೆ ಅವರು ಪ್ರಾಣಸ್ವರೂಪರೇ ಆಗಿದ್ದರು. ಒಂದು ದೃಷ್ಟಿಯಿಂದ ಮಥುರ ಅವರನ್ನು ಸಕಲ ದೇವದೇವೀಸ್ವರೂಪರೆಂದು ಪರಿಗಣಿಸಿದ್ದರೆ, ಮತ್ತೊಂದು ದೃಷ್ಟಿಯಿಂದ ಕೇವಲ ಒಂದು ಮುಗ್ಧ ಅಸಹಾಯಕ ಹಸುಳೆಯೆಂಬಂತೆ ಕಂಡು ಪ್ರೇಮಧಾರೆಯನ್ನೇ ಹರಿಯಿಸುತ್ತಿದ್ದ. ಮುದ್ದಾದ ಹಸುಗೂಸೊಂದು ಬಳಿಯಲ್ಲಿ ಆಟವಾಡುತ್ತಲಿದ್ದರೆ ಯಾರ ಮನಸ್ಸು ತಾನೆ ಅತ್ತ ಆಕರ್ಷಿತವಾಗುವುದಿಲ್ಲ? ಮಗುವಿನ ತೊದಲು ನುಡಿ, ಅದರ ಆಟಪಾಠ, ಹಾವಭಾವ—ಇವುಗಳಿಂದ ದೊರೆಯುವ ಪರಿಶುದ್ಧ ಆನಂದ ಬೇರೆಲ್ಲಿ ಸಿಕ್ಕೀತು? ಜೊತೆಗೆ ಆ ಮಗುವಿನ ಓಡಾಟವನ್ನು ನೋಡುತ್ತ ನಿಂತವರ ಮನದಲ್ಲಿ, ಎಲ್ಲಿ ಮಗು ಬಿದ್ದು ತರಚಿಕೊಂಡೀತೋ ಎಂಬ ಆತಂಕವೂ ಹೇಗೆ ಸದಾ ಇದ್ದೇ ಇರುತ್ತದೆ! ಮಥುರ ಶ್ರೀರಾಮಕೃಷ್ಣರನ್ನು ಕಾಣುತ್ತಿದ್ದುದು ಇದೇ ಭಾವದಿಂದ. ಏಕೆಂದರೆ, ಅವರ ಬಾಲಭಾವದಲ್ಲಿ ಕೃತಕತೆಯಾಗಲಿ ಅಸಹಜತೆಯಾಗಲಿ ಕಿಂಚಿತ್ತೂ ಇರಲಿಲ್ಲ. ಅವರು ಆ ಭಾವದಲ್ಲಿದ್ದಾಗ ನಿಜಕ್ಕೂ ಒಬ್ಬ ಬಾಲಕನಂತೆಯೇ ತೋರುತ್ತಿದ್ದರು. ಮಥುರನೋ ಸ್ವಭಾವತಃ ಪರಾಕ್ರಮಶಾಲಿ, ಬುದ್ಧಿವಂತ. ಆದ್ದರಿಂದ ಅವನಲ್ಲಿ ಠಾಕೂರರನ್ನು ತಾನು ಸರ್ವವಿಧದಲ್ಲೂ ಕಾಪಾಡಬೇಕೆಂಬ ಸಂಕಲ್ಪ ತಾನೇತಾನಾಗಿ ಉದಿಸಿತ್ತು.

ಒಮ್ಮೆ ನೋಡಿದರೆ ಶ್ರೀರಾಮಕೃಷ್ಣರಲ್ಲಿ ದೇವಭಾವ, ಗುರುಭಾವ, ಸರ್ವಜ್ಞಭಾವ; ಇನ್ನೊಮ್ಮೆ ನೋಡಿದರೆ ಬಾಲಕಭಾವ! ಇವುಗಳ ವಿಚಿತ್ರ ಸಮಾವೇಶವನ್ನು ಕಂಡ ಮಥುರ ಬಹುಶಃ ಹೀಗೆ ಯೋಚಿಸಿರಬೇಕು—'ಪ್ರಾಪಂಚಿಕವಾದ ಎಲ್ಲ ವಿಷಯಗಳಲ್ಲೂ ತಾನು ಅವರನ್ನು ರಕ್ಷಿಸಬೇಕಾಗಿದೆ; ಮಾನವನ ಶಕ್ತಿಯನ್ನು ಮೀರಿದ, ಸೂಕ್ಷ್ಮವಾದ ಪಾರಮಾರ್ಥಿಕ ವಿಷಯಗಳಲ್ಲಿ ಅವರೇ ತನ್ನನ್ನು ರಕ್ಷಿಸುತ್ತಾರೆ' ಎಂದು.

ಭಾವಮುಖದಲ್ಲಿ ನೆಲಸಿದ, ವರಾಭಯಕರಮೂರ್ತಿಯಾದ ಶ್ರೀರಾಮಕೃಷ್ಣರು ಮಥುರನ ಉಪಾಸ್ಯದೇವತೆಯಾಗಿದ್ದರು. ಆದರೆ ಅವರು ಬಾಲಕಭಾವದಲ್ಲಿ ಸರಳತೆಯ ಮೂರ್ತಿಯಾಗಿದ್ದಾಗ ಮಥುರನೇ ಅವರನ್ನು ಎಷ್ಟೋ ಸಲ ನಾನಾ ಮಾತುಗಳಿಂದ ಸಮಾಧಾನ ಪಡಿಸಬೇಕಾಗುತ್ತಿತ್ತು. ಅವನ ಆ ಪ್ರೀತಿಯೇ ಅವನಿಗೆ ಅದ್ಭುತವಾದ ಸಮಯಸ್ಫೂರ್ತಿಯನ್ನು ನೀಡಿ, ಅವರನ್ನು ನೋಡಿಕೊಳ್ಳಬೇಕಾದ ರೀತಿಯನ್ನು ತಿಳಿಸಿಕೊಡುತ್ತಿತ್ತೆನ್ನಬಹುದು.

ಒಮ್ಮೆ ಶ್ರೀರಾಮಕೃಷ್ಣರು ಮಥುರನೊಂದಿಗೆ ಏನೋ ಮಾತನಾಡುತ್ತ ಕುಳಿತಿದ್ದಾಗ ಹೇಳಿದರು:

"ನೋಡು, ಜಗನ್ಮಾತೆ ನನಗೆ ಅನೇಕ ವಿಷಯಗಳನ್ನು ತೋರಿಸಿಕೊಟ್ಟಿದ್ದಾಳೆ. ಅವಳೇನು ತೋರಿಸಿದಳು ಗೊತ್ತೆ? 'ಇಲ್ಲಿಯ (ತಮ್ಮ) ಅಂತರಂಗಭಕ್ತರು ಅನೇಕ ರಿದ್ದಾರೆ; ಅವರೆಲ್ಲ ಬರುತ್ತಾರೆ, ಇಲ್ಲಿಂದ (ತಮ್ಮಿಂದ) ಭಗವದ್ವಿಚಾರಗಳನ್ನು ಕೇಳಿ ತಿಳಿಯುತ್ತಾರೆ, ಸಾಕ್ಷಾತ್ಕರಿಸಿಕೊಳ್ಳುತ್ತಾರೆ; ಪ್ರೇಮಭಕ್ತಿಯನ್ನು ಪಡೆದುಕೊಳ್ಳುತ್ತಾರೆ' ಎಂದು. ಅಲ್ಲದೆ ಅವಳು ತೋರಿಸಿಕೊಟ್ಟಿದ್ದಾಳೆ, ಈ ಕೋಶದ (ತಮ್ಮ ಶರೀರದ) ಮೂಲಕ ಅವಳು ಅನೇಕ ಲೀಲೆಗಳನ್ನಾಡಲಿಕ್ಕಿದೆ; ಅನೇಕರು ಇಲ್ಲಿಂದ ಪ್ರಯೋಜನ ಪಡೆಯಲಿದ್ದಾರೆ ಎಂದು. ಆದ್ದರಿಂದಲೇ ಅವಳಿದನ್ನು (ಈ ಶರೀರವೆಂಬ ಗಡಿಗೆಯನ್ನು) ಈವರೆಗೆ ಒಡೆದುಹಾಕದೆ ಉಳಿಸಿದ್ದಾಳೆ.

"ನಾನೇನೋ ಹೀಗೆಲ್ಲ ಕಂಡೆ. ಆದರೆ ಮಥುರ, ನಿನಗೇನೆನ್ನಿಸುತ್ತದೆ? ನಾನು ಕಂಡದ್ದೆಲ್ಲ ನಿಜವೋ ಅಥವಾ ನನ್ನ ಮನಸ್ಸಿನ ಭ್ರಾಂತಿಯೋ? ನೀನೇ ಹೇಳು."

"ಅಪ್ಪಾ, ಇವೆಲ್ಲ ನಿಮ್ಮ ಮನಸ್ಸಿನ ಭ್ರಾಂತಿಯಾಗಲು ಹೇಗೆ ಸಾಧ್ಯ? ಇದುವರೆಗೆ ಜಗನ್ಮಾತೆ ನಿಮಗೆ ಅಂಥ ಮಿಥ್ಯಗಳನ್ನೇನೂ ಕಾಣಿಸಿಲ್ಲವಲ್ಲ? ಆಕೆಯ ಯಾವ ಮಾತೂ ಸುಳ್ಳಾಗಲಿಲ್ಲವಲ್ಲ? ಅಂದಮೇಲೆ ಇದು ಮಾತ್ರ ಹೇಗೆ ಮಿಥ್ಯ ವಾದೀತು? ಇದು ಕೂಡ ಸತ್ಯವೇ. ಆದರೆ ಆ ಭಕ್ತರೆಲ್ಲ ಬರಲು ತಡವೇಕಾಗು ತ್ತಿದೆಯೊ! ಅವರೆಲ್ಲ ಬೇಗನೆ ಬರಲಿ. ನಾವೂ ಅವರೊಂದಿಗೆ ಸೇರಿ ಆನಂದಿಸುತ್ತೇವೆ."

ಈಗ ಶ್ರೀರಾಮಕೃಷ್ಣರಿಗೂ ಸಮಾಧಾನವಾಯಿತು. ಜಗನ್ಮಾತೆ ತಮಗೆ ಸರಿ ಯಾಗಿಯೇ ತೋರಿಸಿಕೊಟ್ಟಿದ್ದಾಳೆಂದು ಭಾವಿಸಿದರು. ಬಳಿಕ ಹೇಳಿದರು:

"ಆದರೆ ಅವರೆಲ್ಲ ಯಾವಾಗ ಬರುತ್ತಾರೆಂದು ನಾನು ಹೇಗೆ ತಾನೆ ಹೇಳಲಿ? ಜಗನ್ಮಾತೆ ಹಾಗೆ ಹೇಳಿದ್ದಾಳೆ, ತೋರಿಸಿಕೊಟ್ಟಿದ್ದಾಳೆ. ಇನ್ನು ಅವಳ ಇಚ್ಛೆಯಂತಾಗಲಿ."

ಇದಾಗಿ ಎಷ್ಟೋ ವರ್ಷಗಳು ಕಳೆದುವು. ಆದರೆ ಇನ್ನೂ ಯಾವ ಭಕ್ತರ ಸುಳಿವೂ ಇಲ್ಲ. ಮತ್ತೊಮ್ಮೆ ಇದೇ ವಿಷಯ ಪ್ರಸ್ತಾಪಕ್ಕೆ ಬಂದಿತು. ಮಥುರ ಕೇಳಿದ:

"ಅಪ್ಪಾ, ನಿಮ್ಮ ಭಕ್ತರೆಲ್ಲ ತಾವಾಗಿಯೇ ಇಲ್ಲಿಗೆ ಬರುತ್ತಾರೆ ಎಂದು ಹೇಳಿದ್ದಿ ರಲ್ಲ, ಎಲ್ಲಿ ಅವರೆಲ್ಲ? ಒಬ್ಬನಾದರೂ ಇಲ್ಲಿಯವರೆಗೆ ಬರಲೇ ಇಲ್ಲವಲ್ಲ?"

ಮಥುರನೇನೋ ಸಹಜವಾಗಿಯೇ ಕೇಳಿದ. ಆದರೆ ಶ್ರೀರಾಮಕೃಷ್ಣರಿಗೆ ಮಾತ್ರ ತುಂಬ ದುಃಖವಾಯಿತು. ಅವರೆಂದರು:

"ನಾನೇನು ತಾನೆ ಬಲ್ಲೆ? ತಾಯಿ ಅವರನ್ನೆಲ್ಲ ಯಾವಾಗ ಕರೆತರುವಳೋ ನನಗೆ ಗೊತ್ತಿಲ್ಲ. ಆದರೆ ಅವರೆಲ್ಲ ಬರುತ್ತಾರೆಂದು ಅವಳೇ ಸ್ವತಃ ಹೇಳಿದಳು. ಅವಳು ಈವರೆಗೆ ತೋರಿಸಿಕೊಟ್ಟದ್ದೆಲ್ಲ ಒಂದೊಂದಾಗಿ ಸತ್ಯವಾಗಿ ಪರಿಣಮಿಸಿದೆ. ಆದರೆ ಇದು

ಮಾತ್ರ ಏಕೆ ನಡೆಯಲಿಲ್ಲವೋ ನನಗೆ ತಿಳಿಯುತ್ತಿಲ್ಲ... ಅಥವಾ, ನನ್ನ ಆ ದರ್ಶನವೇ ಸುಳ್ಳಿರಬಹುದೇ? ಹಾಗಾದರೆ ನಾನು ಮೋಸಹೋದೆನೆ? ಒಂದೂ ಅರ್ಥವಾಗುತ್ತಿಲ್ಲವಲ್ಲ..."

ಶ್ರೀರಾಮಕೃಷ್ಣರ ಮುಖ ಸಪ್ಪಗಾದದ್ದನ್ನು ಕಂಡು ಮಥುರನಿಗೆ ಹೃದಯವನ್ನೇ ಹಿಂಡಿದಂತಾಯಿತು. 'ಅಯ್ಯೋ, ಎಂಥ ಅವಿವೇಕಿ ನಾನು! ಯಾಕಾದರೂ ಆ ವಿಷಯವನ್ನೆತ್ತಿದೆನೊ! ಸರಳ ಸ್ವಭಾವದ ಅವರು ಪ್ರತಿಯೊಂದು ಮಾತನ್ನೂ ಗಂಭೀರವಾಗಿ ತೆಗೆದುಕೊಳ್ಳುತ್ತಾರೆ ಎಂಬುದು ತಿಳಿದೂ ನಾನು ಹಾಗೆ ಕೇಳಿದ್ದು ನನ್ನ ಅಧಿಕಪ್ರಸಂಗವಲ್ಲದೆ ಮತ್ತೇನು?' ಎಂದುಕೊಂಡ. ಬಳಿಕ ಅವರನ್ನು ಸಮಾಧಾನಪಡಿಸಲು ಇಂತೆಂದ:

"ಅಪ್ಪಾ, ಇಷ್ಟು ಸಣ್ಣ ವಿಷಯಕ್ಕೇಕೆ ಅಷ್ಟೊಂದು ಚಿಂತೆ? ಅವರೆಲ್ಲ ಬರಲಿ ಅಥವಾ ಬಾರದಿರಲಿ. ನಿಮ್ಮ ಪರಮಭಕ್ತನಾಗಿ ನಾನಂತೂ ಇದ್ದೇನಲ್ಲವೆ? ಹಾಗಿರುವಾಗ ನಿಮ್ಮ ದರ್ಶನವು ಸುಳ್ಳೆಂದು ಹೇಗೆ ಹೇಳಲಾದೀತು? ನಾನೊಬ್ಬನೇ ನೂರಾರು ಭಕ್ತರಿಗೆ ಸಮನಲ್ಲವೆ? ಆದ್ದರಿಂದ ಜಗನ್ಮಾತೆ ನನ್ನನ್ನು ಉದ್ದೇಶಿಸಿಯೇ ಹಾಗೆ ಹೇಳಿರಬಹುದು."

ಬಾಲಕಸ್ವಭಾವದ ಶ್ರೀರಾಮಕೃಷ್ಣರು ಈ ಮಾತಿಗೇನೆಂದಾರು?

"ಏನೋಪ್ಪ, ನನಗೇನು ಗೊತ್ತು. ನೀನು ಹೇಳಿದ್ದೇ ಸರಿಯಿರಬಹುದು."

ಮಥುರ ಆ ವಿಷಯವನ್ನು ಮುಂದುವರಿಯಗೊಡದೆ ಶ್ರೀರಾಮಕೃಷ್ಣರ ಮನಸ್ಸನ್ನು ಬೇರೆಡೆ ತಿರುಗಿಸಿದ.

ರಾಣಿ ರಾಸಮಣಿ ತನ್ನ ಜೀವಿತಾವಧಿಯಲ್ಲೇ ತನ್ನ ಮೂವರು ಹೆಣ್ಣುಮಕ್ಕಳಿಗೂ ಆಸ್ತಿಯನ್ನು ಹಂಚಿಕೊಟ್ಟುಬಿಟ್ಟಿದ್ದಳು. ಮುಂದೆ ಅವರಲ್ಲೇ ಜಗಳವಾಗಬಾರದೆಂದು ಅವಳ ಈ ಮುನ್ನೆಚ್ಚರಿಕೆ. ಈ ವಿಭಜನೆಯೆಲ್ಲ ಆಗಿ ಎಷ್ಟೋ ವರ್ಷಗಳಾಗಿದ್ದುವು. ಮೂವರು ಸೋದರಿಯರೂ ಯಾವುದೇ ವೈಮನಸ್ಯವಿಲ್ಲದೆ ಪ್ರೀತಿ ವಿಶ್ವಾಸದಿಂದಲೇ ಜೀವಿಸುತ್ತಿದ್ದರು. ಇವರನ್ನು ಜನರು ಕ್ರಮವಾಗಿ ಮೊದಲನೆಯ ಒಡತಿ, ಎರಡನೆಯ ಒಡತಿ, ಮೂರನೆಯ ಒಡತಿ ಎಂದು ಕರೆಯುತ್ತಿದ್ದರು.

ಒಂದು ದಿನ ಮಥುರನ ಹೆಂಡತಿ—ಮೂರನೆಯ ಒಡತಿ—ಮನೆಯ ಪಕ್ಕದ ಒಂದು ಕೊಳಕ್ಕೆ ಸ್ನಾನಕ್ಕೆಂದು ಹೋಗಿದ್ದಳು. ಆ ಕೊಳ ಹಾಗೂ ಅದರ ಆಸುಪಾಸು ಅವಳ ಒಬ್ಬ ಅಕ್ಕನಿಗೆ ಸೇರಿದ್ದು. ಅಲ್ಲೇ ದಡದ ಮೇಲೆ ಒಂದು ಬಗೆಯ ಸೊಪ್ಪು ಸೊಂಪಾಗಿ ಬೆಳೆದಿತ್ತು. ಅಂದಿನ ಅಡುಗೆಗೆ ಅದನ್ನು ಉಪಯೋಗಿಸೋಣವೆಂದು ಅವಳು, ಸ್ನಾನವಾದಮೇಲೆ ಒಂದು ಕಂತೆ ಕಿತ್ತುಕೊಂಡು ಹೊರಟಳು.

ಇದು ಅಲ್ಲೇ ಸ್ವಲ್ಪ ದೂರದಲ್ಲಿ ನಿಂತಿದ್ದ ಶ್ರೀರಾಮಕೃಷ್ಣರ ಕಣ್ಣಿಗೆ ಬಿದ್ದುಬಿಟ್ಟಿತು! ತಕ್ಷಣ ಅವರ ಮನಸ್ಸಿನಲ್ಲಿ ನಾನಾ ಯೋಚನೆಗಳು:

'ಏನಿದು! ಇವಳು ಇಂತಹ ಕೆಲಸ ಮಾಡಿಬಿಟ್ಟಳಲ್ಲ! ಆಸ್ತಿಯನ್ನೆಲ್ಲ ಭಾಗ ಮಾಡಿದ್ದಾಗಿದೆ. ಈಗ ಅವಳಿಗೆ ಇದರಲ್ಲಿ ಹಕ್ಕಿಲ್ಲ. ಅವರೂ ಇನ್ನೊಬ್ಬರಿಗೆ ಸೇರಿದ ಜಾಗದಲ್ಲಿ ಬೆಳೆದ ಸೊಪ್ಪನ್ನು ಕಿತ್ತುಕೊಂಡುಬಿಟ್ಟಳು! ಹೇಳಲಿಲ್ಲ, ಕೇಳಲಿಲ್ಲ. ಹೀಗೆ ಕಳ್ಳತನ ಮಾಡಬಹುದೆ? ತಾನು ಮಾಡುತ್ತಿರುವುದು ತಪ್ಪು ಎಂಬ ಭಯವೇ ಇಲ್ಲವಲ್ಲ ಇವಳಿಗೆ!'

ಶ್ರೀರಾಮಕೃಷ್ಣರು ಹೀಗೆ ಚಿಂತಿಸುತ್ತ ವಿಷಣ್ಣರಾಗಿದ್ದಾಗ ಆ ಹಿರಿಯ ಸೋದರಿಯೇ ಅಲ್ಲಿಗೆ ಬಂದಳು. ತಕ್ಷಣ ಅವರು ನಡೆದ ಘಟನೆಯನ್ನು ಹೇಳಿಬಿಟ್ಟರು. ಬಳಿಕ "ನೋಡಮ್ಮ, ಕಣ್ಣಾರೆ ನೋಡಿದ ಮೇಲೂ ನಿನಗದನ್ನು ತಿಳಿಸದೆ ಸುಮ್ಮನಿದ್ದರೆ ತಪ್ಪಾಗುತ್ತದೆ ಎಂಬ ಕಾರಣದಿಂದ ನಿನಗೆ ಹೇಳಿಬಿಟ್ಟೆ" ಎಂದರು.

ಏನೋ ದೊಡ್ಡ ಕಳ್ಳತನವೋ ದರೋಡೆಯೋ ಆಗಿಹೋದಂತೆ ಶ್ರೀರಾಮಕೃಷ್ಣರು ಗಂಭೀರ ಭಾವದಿಂದ ಹೇಳುವುದನ್ನು ಕಂಡು ಆಕೆಗೆ ನಗು ಉಕ್ಕಿ ಬಂದಿತು. ಆದರೂ ನಗುವನ್ನು ಬಲವಂತವಾಗಿ ತಡೆದುಕೊಳ್ಳುತ್ತ, ಗಂಭೀರ ಮುಖಭಾವ ಧರಿಸಿ ನುಡಿದಳು: "ಹೌದು ಹೌದು. ಮೂರನೆಯ ಒಡತಿ ಬಹಳ ಅನ್ಯಾಯ ಮಾಡಿದ್ದಾಳೆ. ಛೆ! ಇಂಥ ಕೆಲಸ ಮಾಡಬಹುದೆ ಅವಳು ?"

ಆ ಹೊತ್ತಿಗೆ ಮೂರನೆಯ ಒಡತಿಯೂ ಅಲ್ಲಿಗೆ ಬಂದಳು. ಏನೋ ಮಾತುಕತೆ ನಡೆಯುತ್ತಿರುವುದನ್ನು ಕಂಡು ಅಕ್ಕನೊಡನೆ, "ಏನೇ ಸಮಾಚಾರ ?" ಎಂದಳು. ಅದಕ್ಕವಳು ಗಂಭೀರವಾಗಿ ಹೇಳಿದಳು:

"ನೀನೇನು ಮಾಡಿದೆ ಎಂಬುದು ಗೊತ್ತಾಗಿಹೋಯಿತು. ಅಪ್ಪ ಎಲ್ಲವನ್ನೂ ಹೇಳಿಬಿಟ್ಟರು . . . ನಿಜ ಹೇಳು, ನೀನು ನನಗೆ ಸೇರಿದ ನೆಲದಲ್ಲಿ ಬೆಳೆದಿದ್ದ ಸೊಪ್ಪನ್ನು ಕಿತ್ತುಕೊಂಡೆ; ಹೌದು ತಾನೆ ? ಇಂಥಾ ಅನ್ಯಾಯ ಮಾಡಲು ನಿನಗೆ ಹೇಗಾದರೂ ಮನಸ್ಸು ಬಂತೆ ?"

ಮೂರನೆಯವಳಿಗೆ ತಕ್ಷಣ ಎಲ್ಲವೂ ಅರ್ಥವಾಯಿತು. ಅವಳೂ ಈಗ ಅದೇ ದನಿಯಲ್ಲಿ ಹೇಳಿದಳು:

"ಅಪ್ಪಾ, ಏನಿದು ! ನೀವು ನನ್ನ ಮರ್ಯಾದೆ ತೆಗೆದುಬಿಟ್ಟಿರಲ್ಲ ! ನಾನೇನೋ ಒಂದು ಸಣ್ಣ ಕಳ್ಳತನ ಮಾಡಿದರೆ, ನೀವದನ್ನು ಇವಳಿಗೆ ಹೇಳಿಬಿಟ್ಟಿರಾ ? ಅಯ್ಯೋ, ನಾನೀಗ ತಲೆ ಎತ್ತಿಕೊಂಡು ತಿರುಗುವುದು ಹೇಗೆ ?"

ನಗುವಿನ ಕಟ್ಟೆಯೊಡೆಯಿತು. ಸೋದರಿಯರಿಬ್ಬರೂ ಮುಖಮುಖ ನೋಡಿಕೊಂಡು ಕಿಲಕಿಲ ನಕ್ಕರು. ಶ್ರೀರಾಮಕೃಷ್ಣರು ನೋಡಿದರು—ಇದರಲ್ಲೇನೋ ಕುಚೋದ್ಯ ಅಡಗಿದೆ ಎಂಬುದು ಅವರಿಗೆ ಈಗ ಗೊತ್ತಾಯಿತು. ಒಂದು ಬಗೆಯ ವಿಸ್ಮಯದಿಂದ ನುಡಿದರು:

"ಇದೇನೋಪ್ಪ, ನಿಮ್ಮ ವ್ಯವಹಾರಗಳ ರೀತಿಯೇ ನನಗರ್ಥವಾಗುವುದಿಲ್ಲ. ಅಲ್ಲಾ, ನಿಮ್ಮ ಜಮೀನು ಭಾಗವಾದ ಮೇಲೆ, ಒಬ್ಬರಿಗೆ ಸೇರಿದ್ದನ್ನು ಇನ್ನೊಬ್ಬರು ಹಾಗೆ ಹೇಳದೆಕೇಳದೆ ತೆಗೆದುಕೊಳ್ಳುವುದು ತಪ್ಪು ತಾನೆ ? ಆದ್ದರಿಂದ ಇವಳೇ ಅದನ್ನು ಹೇಗೆ ಬೇಕಾದರೂ ಇತ್ಯರ್ಥ ಮಾಡಿಕೊಳ್ಳಲಿ ಎಂದು ಇದ್ದದ್ದಿದ್ದಂತೆ ಹೇಳಿಬಿಟ್ಟೆ. ಈಗ ನೋಡಿದರೆ..."

ಇದನ್ನು ಕೇಳಿ ಅಕ್ಕತಂಗಿಯರು ಮತ್ತಷ್ಟು ನಕ್ಕರು. ಇವರು ಹೀಗೆ ನಗುವುದನ್ನು ಕಂಡು, "ಏನಂತೆ ? ಏನಂತೆ ?" ಎಂದು ಕೇಳಿಕೊಂಡು ಮನೆಯವರೆಲ್ಲ ನಕ್ಕರು. ಆದರೆ 'ತಂದೆ'ಯ ಸತ್ಯನಿಷ್ಠೆಯನ್ನು, ಋಜುಬುದ್ಧಿಯನ್ನು, ಸರಳತೆಯನ್ನು ಭಾವಿಸಿದಾಗ ಅವರುಗಳ ಕಣ್ಣಂಚಿನಲ್ಲಿ ನೀರಾಡಿತು.

ಒಂದೆಡೆ ಶ್ರೀರಾಮಕೃಷ್ಣರು ಬಾಲಸ್ವಭಾವವನ್ನು ತಾಳಿ ಮಥುರನನ್ನು ಅವಲಂಬಿಸಿಕೊಂಡಿದ್ದರೆ, ಮತ್ತೊಂದೆಡೆ, ತನ್ನ ಮತ್ತು ತನ್ನವರ ಸಮಸ್ತ ಶ್ರೇಯಸ್ಸಿಗಾಗಿ

ಮಥುರ ಶ್ರೀರಾಮಕೃಷ್ಣರನ್ನೇ ಆಶ್ರಯಿಸಿದ್ದ. ಯಾವುದೇ ವಿಪತ್ತು ಒದಗಿದಾಗಲೂ ಅವನಿಗೆ ಅವರೇ ದಿಕ್ಕು. ಹಿಂದೊಮ್ಮೆ ಜಗದಂಬಾ ದಾಸಿ ಪ್ರಾಣಾಂತಿಕ ಕಾಯಿಲೆಗೆ ಗುರಿಯಾಗಿದ್ದವಳು ಶ್ರೀರಾಮಕೃಷ್ಣರ ಕೃಪೆಯಿಂದ ಪವಾಡಸದೃಶವಾಗಿ ಗುಣಮುಖ ಳಾದ ವಿವರವನ್ನು ನಾವಾಗಲೇ ಕಂಡಿದ್ದೇವೆ.

ಮಥುರನಿಗೂ ಅವನ ನೆರೆಹೊರೆಯ ಇತರ ಜಮೀನ್ದಾರರಿಗೂ ಆಗಾಗ ಯಾವು ದಾದರೊಂದು ವಿಷಯಕ್ಕೆ ಕಲಹವೇರ್ಪಡುತ್ತಿತ್ತು. ಆಗ ಅವರ ಆಳುಗಳ ನಡುವೆ ಹೊಡೆದಾಟ ಬಡಿದಾಟವೂ ಆಗುತ್ತಿತ್ತು. ಒಮ್ಮೆ ಇಂಥದೊಂದು ಸಂದರ್ಭದಲ್ಲಿ ಮಾರಾಮಾರಿಯಾಗಿ, ಮಥುರನ ಕಡೆಯವರು ಅವರ ಕಡೆಯವನೊಬ್ಬನನ್ನು ಕೊಂದೇಹಾಕಿಬಿಟ್ಟರು. ಇದಕ್ಕೆ ಮಥುರನ ಬೆಂಬಲವೂ ಇದ್ದೇ ಇತ್ತು. ತಪ್ಪು ಮೂಲತಃ ಯಾರದ್ದೇ ಆಗಿರಲಿ, ಕೊಲೆಯಂತೂ ನಡೆದುಹೋಯಿತು. ಈಗ ಕಾನೂನಿನ ಕೈ ಮಥುರನ ಕುತ್ತಿಗೆಯತ್ತ ಚಾಚಿತು. ನ್ಯಾಯಾಲಯದಲ್ಲಿ ಒಮ್ಮೆ ತೀರ್ಮಾನವಾಯಿ ತೆಂದರೆ ತುರಂಗವಾಸ ತಪ್ಪಿದ್ದಲ್ಲ. ಇದು ಬುದ್ಧಿಗೆ ಹೊಳೆದಾಗ ಮಥುರ ನಡುಗಿದ. ತಪ್ಪು ಮಾಡುವಷ್ಟು ಸುಲಭವೆ ಶಿಕ್ಷೆ ಅನುಭವಿಸುವುದು ? ಮಥುರ ಓಡಿದ ಶ್ರೀರಾಮ ಕೃಷ್ಣರ ಬಳಿಗೆ. ಅವರ ಕಾಲನ್ನು ಹಿಡಿದು ಬೇಡಿಕೊಂಡ:

"ತಂದೆ, ನನ್ನಿಂದ ಅಪರಾಧವಾಯಿತು, ನಿಜ. ಆದರೆ ದಯವಿಟ್ಟು ಈ ಬಾರಿ ನನ್ನನ್ನು ಕಾಪಾಡಿ ! ನೀವೇ ನನಗೆ ಗತಿ !"

ಶ್ರೀರಾಮಕೃಷ್ಣರು ಸಿಟ್ಟಿಗೆದ್ದರು.

"ಮೂರ್ಖ, ದಿನವೂ ಇಂಥದೊಂದು ಏನಾದರೂ ಅನಾಹುತ ಮಾಡಿಕೊಂಡು ನನ್ನ ಬಳಿ ಬರುತ್ತಿ, 'ನನ್ನನ್ನು ಕಾಪಾಡಿ' ಎನ್ನುತ್ತ. ನಾನೇನು ಮಾಡಲು ಸಾಧ್ಯ ? ನೀನೇ ಏನು ಬೇಕಾದರೂ ಮಾಡಿಕೊ, ಹೋಗು. ಮಾಡಿದ್ದನ್ನು ಅನುಭವಿಸು !"

ಮಥುರ ಕಣ್ಣೀರ್ಗರೆದು ಮತ್ತೆಮತ್ತೆ ಬೇಡಿಕೊಂಡ:

"ಅಯ್ಯೋ ಹಾಗೆನ್ನಬೇಡಿ. ನೀವೇ ಹಾಗೆಂದುಬಿಟ್ಟರೆ ನನಗಾರು ಗತಿ ? ಇದೊಂದು ಬಾರಿ ನನ್ನನ್ನು ಕ್ಷಮಿಸಿಬಿಡಿ. ಇನ್ನೆಂದಿಗೂ ಹೀಗಾಗಲು ಬಿಡುವುದಿಲ್ಲ."

ಕಡೆಗೆ ಶ್ರೀರಾಮಕೃಷ್ಣರೆಂದರು:

"ಸರಿ, ನಡೆ; ಜಗನ್ಮಾತೆಯ ಇಚ್ಛೆ ಹೇಗಿದೆಯೋ ಹಾಗಾಗಲಿ."

ಅಂತೂ ಹೇಗೋ ಏನೋ, ಆಶ್ಚರ್ಯಕರ ರೀತಿಯಲ್ಲಿ ಆ ಮೊಕದ್ದಮೆ ಮುಚ್ಚಿ ಹೋಯಿತು. ಮಥುರನಿಗೊದಗಿದ್ದ ಗಂಡಾಂತರ ದೂರದಿಂದಲೇ ತೊಲಗಿಹೋಯಿತು.

ಶ್ರೀರಾಮಕೃಷ್ಣರಲ್ಲಿ ದೇವಭಾವ, ಬಾಲಕಭಾವ—ಈ ಎರಡೂ ಭಾವಗಳನ್ನು ತೋರಿಸಿಕೊಡುವ ದೃಷ್ಟಾಂತಗಳು ಅದೆಷ್ಟೊ. ಅವರೊಂದಿಗೇ ವಾಸಿಸುತ್ತಿದ್ದ ಮಥುರ ನಂತೂ ಅವರ ಮಹಿಮೆಯನ್ನು ಇನ್ನೆಷ್ಟು ಸ್ಪಷ್ಟವಾಗಿ ಕಂಡಿದ್ದಿರಬೇಕು! ಆದ್ದರಿಂದ ಅವನಿಗೆ ದೃಢ ನಂಬಿಕೆಯುಂಟಾಗಿತ್ತು, ಧನ-ಮಾನ-ಪ್ರತಾಪಗಳೆಲ್ಲವೂ ತನ್ನ ಕೈಸೇರಿ ರುವುದು ಶ್ರೀರಾಮಕೃಷ್ಣರ ಅಹೈತುಕ ಕೃಪೆಯಿಂದಲೇ ಎಂದು. ಅವನೊಮ್ಮೆ ಹೃದಯನ ಮುಂದೆ ಹೇಳುತ್ತಾನೆ:

“ಓ ಹೃದಯ, ನನ್ನ ಹೆಂಡತಿ-ಮಕ್ಕಳು ಆಸ್ತಿ-ಪಾಸ್ತಿ ಸ್ಥಾನ-ಮಾನ ಇವೆಲ್ಲವೂ ಅಸತ್ಯ; ನನ್ನ ಪಾಲಿಗೆ ಶ್ರೀರಾಮಕೃಷ್ಣರೊಬ್ಬರೇ ಸತ್ಯ.”

ಸಾಮಾನ್ಯವಾಗಿ ಪ್ರಾಪಂಚಿಕ ಜನರ ಭಕ್ತಿಯ ಪ್ರಮಾಣವನ್ನು, ಅವರು ತಮಗೆ ಪೂಜ್ಯರಾದವರಿಗಾಗಿ ಎಷ್ಟು ಹಣವನ್ನು ಖರ್ಚು ಮಾಡಬಲ್ಲರು ಎಂಬುದರಿಂದ ತಿಳಿಯಬಹುದು. ಈ ನಿಯಮಕ್ಕೆ ಮಥುರನೇನೂ ಹೊರತಲ್ಲ. ಅವನು ಅತಿ ಚತುರ; ವ್ಯವಹಾರಕುಶಲಿ. ಇಂಥವನು ಶ್ರೀರಾಮಕೃಷ್ಣರಿಗಾಗಿ ಹಣವನ್ನು ಹೇಗೆ ಖರ್ಚು ಮಾಡಿದ ಎಂಬುದನ್ನು ನೋಡಿ, ಅವನ ಭಕ್ತಿವಿಶ್ವಾಸದ ಮಟ್ಟವನ್ನು ಊಹಿಸಬಹುದು.

ಆಗಾಗ ಮಥುರ ಶ್ರೀರಾಮಕೃಷ್ಣರನ್ನು ಬಯಲುನಾಟಕಕ್ಕೆ ಕರೆದೊಯ್ಯುತ್ತಾನೆ. ಅವರಿಗೆ ಬೆಲೆಬಾಳುವ ವಸ್ತ್ರಗಳನ್ನು ತೊಡಿಸಿ, ರಂಗಮಂಟಪದ ಇದಿರಿನಲ್ಲೇ ಕುಳ್ಳಿರಿ ಸುತ್ತಾನೆ. ನಟರಿಗೆ ಬಹುಮಾನವಾಗಿ ಕೊಡಲು ಅಲ್ಲಿ ನಾಣ್ಯಗಳ ರಾಶಿಯನ್ನೇ ಪೇರಿಸಿಡಲಾಗುತ್ತದೆ. ಎರಡಾಣೆ ನಾಲ್ಕಾಣೆಗಳಿಂದ ಹಿಡಿದು ಒಂದು ರೂಪಾಯಿಯ ವರೆಗಿನ ನಾಣ್ಯಗಳು. ಒಂದೊಂದು ರಾಶಿಯಲ್ಲಿ ಹತ್ತತ್ತು ರೂಪಾಯಿಯಂತೆ ಒಟ್ಟು ನೂರು ರೂಪಾಯಿ ಅಥವಾ ಅದಕ್ಕಿಂತಲೂ ಹೆಚ್ಚಿನ ಹಣ ಅಲ್ಲಿರುತ್ತದೆ! (ಆಗಿನ ಕಾಲದ ನೂರು ರೂಪಾಯಿಗೆ ಬಹುಶಃ ಇಂದಿನ ಐದು ಸಾವಿರಕ್ಕಿಂತ ಹೆಚ್ಚಿನ ಬೆಲೆ.) ಶ್ರೀರಾಮಕೃಷ್ಣರು ಸಂತೋಷದಿಂದ ತಲೆದೂಗುತ್ತ ಬಯಲಾಟವನ್ನು ಆನಂದಿಸುತ್ತಿರು ತ್ತಾರೆ. ಯಾವನಾದರೂ ನಟನ ಮಾತಿನಿಂದಲೋ ಹಾಡಿನಿಂದಲೋ ಅವರಿಗೆ ವಿಶೇಷ ಸಂತೋಷವುಂಟಾಯಿತೆಂದರೆ, “ಭಲ, ಭಲೆ!” ಎನ್ನುತ್ತ ಕೈಗೆ ಸಿಕ್ಕಿದಷ್ಟು ಹಣವನ್ನೆತ್ತಿ ಅವನಿಗೆ ಕೊಟ್ಟುಬಿಡುತ್ತಾರೆ! ಇನ್ನೂ ಹೆಚ್ಚು ಸಂತೋಷವಾಗಿ ಭಾವಾವಸ್ಥೆಯುಂಟಾ ಯಿತೆಂದರೆ, ಎದುರಿಗಿರುವ ಅಷ್ಟು ಹಣವನ್ನೂ ಅವನತ್ತ ನೂಕಿಬಿಡುತ್ತಾರೆ. ಇದನ್ನು ನೋಡಿ, ಹುಟ್ಟಾ ಜಿಪುಣನಾದ ಮಥುರನಿಗೆ ಮನಸ್ಸಿನಲ್ಲಾದರೂ ಸಂಕಟವಾಗ ಲಾರದೆ? ಇಲ್ಲವೇ ಇಲ್ಲ. “ಠಾಕೂರರಿಗಾದ ಆನಂದಕ್ಕೆ ಸಾಟಿಯಾದ ಬಹುಮಾನ ವನ್ನು ನೀಡಲಾಗಿದೆ” ಎನ್ನುತ್ತ, ಮತ್ತೊಮ್ಮೆ ಅವರೆದುರು ಅಷ್ಟೇ ಹಣವನ್ನು ಪೇರಿಸಿಡುತ್ತಾನೆ. ‘ಹೊನ್ನೇ ಮಣ್ಣು, ಮಣ್ಣೇ ಹೊನ್ನು’ ಎಂದು ದೃಢವಾಗಿ ನಂಬಿದ ಶ್ರೀರಾಮಕೃಷ್ಣರೆದುರು ಅದು ಇನ್ನೆಷ್ಟು ಹೊತ್ತು ಇದ್ದೀತು? ಮತ್ತೊಮ್ಮೆ ಅಂತಹ ಭಾವಪರವಶತೆಯುಂಟಾಯಿತೆಂದರೆ, ಅಷ್ಟೂ ಹಣ ಇನ್ನೊಬ್ಬ ಭಾಗ್ಯಶಾಲೀ ನಟನ ಪಾಲು! ಬಳಿಕ, ಮತ್ತೊಮ್ಮೆ ಕೈಹಾಕಿ ನೋಡಿದರೆ ಅಲ್ಲೇನೂ ಇಲ್ಲ. ಸರಿ, ಒಬ್ಬನಿಗೆ

ತಮ್ಮ ಮೈಮೇಲಿನ ಶಾಲನ್ನೂ ಮತ್ತೊಬ್ಬನಿಗೆ ಪೀತಾಂಬರವನ್ನೂ ಕೊಟ್ಟು, ತಾವು ಕೇವಲ ಭಾವಾಂಬರಧಾರಿಯಾಗಿ ಕುಳಿತುಬಿಡುತ್ತಾರೆ! ತನ್ನ ಹಣ ಸಾರ್ಥಕವಾಯಿತೆಂದು ತಿಳಿದು ಮಥುರನೂ ಆನಂದಿತನಾಗಿ ಶ್ರೀರಾಮಕೃಷ್ಣರಿಗೆ ಗಾಳಿ ಬೀಸುತ್ತ ನಿಲ್ಲುತ್ತಾನೆ!

ಹೀಗೆ ಮಥುರ ಶ್ರೀರಾಮಕೃಷ್ಣರ ವಿಷಯದಲ್ಲಿ ಪರಮ ಉದಾರತೆಯನ್ನು ತೋರಿಸಿದ್ದಕ್ಕೆ ಎಷ್ಟೋ ಉದಾಹರಣೆಗಳನ್ನು ಕೊಡಬಹುದು. ಅವನು ತಮ್ಮನ್ನು ಕಾಶೀ-ಬೃಂದಾವನ ಯಾತ್ರೆಗೆ ಕರೆದುಕೊಂಡು ಹೋಗಿದ್ದಾಗ, ದಾನಧರ್ಮಾದಿಗಳ ಖರ್ಚೆಲ್ಲ ಸೇರಿದಂತೆ ಸುಮಾರು ಒಂದು ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿದನೆಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು! ಕಾಶಿಯಲ್ಲಿ ಅವನು 'ಕಲ್ಪತರು'ವಿನಂತಾಗಿ ಕೇಳಿಕೇಳಿದವರಿಗೆಲ್ಲ ಬೇಕುಬೇಕಾದ ಪದಾರ್ಥಗಳನ್ನು ಕೊಟ್ಟ ಸಂದರ್ಭದಲ್ಲಿ, "ನೀವೂ ನನ್ನಿಂದ ಏನಾದರೊಂದು ವಸ್ತುವನ್ನು ಪಡೆದುಕೊಳ್ಳಲೇಬೇಕು" ಎಂದು ಶ್ರೀರಾಮಕೃಷ್ಣರನ್ನು ಆಗ್ರಹಪಡಿಸಿದ. ಆದರೆ ಎಷ್ಟು ಆಲೋಚಿಸಿದರೂ ಅವರಿಗೆ ಯಾವುದಕ್ಕೂ ಕೊರತೆ ಕಾಣಲಿಲ್ಲ. ಕೊನೆಗೆ ಅವನ ಒತ್ತಾಯಕ್ಕೆ ಸೋತು, "ಹಾಗಾದರೆ ನನಗೊಂದು ಕಮಂಡಲವನ್ನು ಕೊಡು" ಎಂದಾಗ, ಮಥುರನ ಕಣ್ಣಲ್ಲಿ ನೀರಾಡಿತು.

ಎಡೆಬಿಡದೆ ಹದಿನಾಲ್ಕು ವರ್ಷ ಸರ್ವಾಂತಃಕರಣದಿಂದ ಶ್ರೀರಾಮಕೃಷ್ಣರ ಸೇವೆಯಲ್ಲಿ ತೊಡಗಿದ್ದುದರಿಂದ ಮಥುರನ ಮನಸ್ಸೀಗ ಎಷ್ಟರಮಟ್ಟಿಗೆ ಪಕ್ವವಾಗಿತ್ತೆಂಬುದಕ್ಕೆ ಒಂದು ಉದಾಹರಣೆಯನ್ನು ಹೇಳಬಹುದು.

ಒಮ್ಮೆ ಮಥುರನಿಗೆ ಮೈಯಲ್ಲೇನೋ ಒಂದು ಹುಣ್ಣಾಗಿ ಹಾಸಿಗೆ ಹಿಡಿದಿದ್ದ. ಎದ್ದುಕೂಡುವುದೂ ತುಂಬ ಕಷ್ಟವಾಗಿಬಿಟ್ಟಿತ್ತು; ಅಷ್ಟು ನೋವು. ಜೊತೆಗೆ, ಮನಸ್ಸಿಗೇನೋ ಕರಕರೆ, ಏನೋ ಅಶಾಂತಿ. ಆಗ ಅವನಿಗೆ ಶ್ರೀರಾಮಕೃಷ್ಣರನ್ನು ನೋಡಬೇಕೆಂಬ ಉತ್ಕಟಾಕಾಂಕ್ಷೆ ಉಂಟಾಯಿತು. (ಅವನಿದ್ದದ್ದು ಜಾನ್ ಬಜಾರಿನ ಮನೆಯಲ್ಲಿ.) ಹೃದಯ ಬಂದು ಶ್ರೀರಾಮಕೃಷ್ಣರಿಗೆ ಈ ಸುದ್ದಿ ತಲುಪಿಸಿದ. ಇದನ್ನು ಕೇಳಿ ಅವರೆಂದರು:

"ನಾನು ಅಲ್ಲಿಗೆ ಹೋಗುವುದರಿಂದ ಏನಾದೀತೊ? ಅವನ ಹುಣ್ಣನ್ನು ಗುಣಪಡಿಸಲು ನನ್ನಿಂದಾದೀತೆ?"

ಆದರೆ ಮಥುರ ಬಿಡಲಿಲ್ಲ. ಮತ್ತೆಮತ್ತೆ ಜನರನ್ನು ಕಳುಹಿಸಿ, ಒಮ್ಮೆಯಾದರೂ ಬಂದುಹೋಗಬೇಕೆಂದು ಪ್ರಾರ್ಥಿಸಿಕೊಂಡ. ಕಡೆಗೆ ಶ್ರೀರಾಮಕೃಷ್ಣರು ಹೋದರು. ಅವರನ್ನು ಕಂಡು ಮಥುರನ ಆನಂದಕ್ಕೆ ಪಾರವೇ ಇಲ್ಲ. "ಅಪ್ಪಾ, ಬಂದಿರಾ, ಬಂದಿರಾ!" ಎಂದು ಉದ್ಗರಿಸುತ್ತ ಕಷ್ಟಪಟ್ಟು ಎದ್ದುಕುಳಿತ.

"ಅಪ್ಪಾ, ಸ್ವಲ್ಪ ನಿಮ್ಮ ಪಾದಧೂಳಿಯನ್ನು ಕೊಡಿ" ಎಂದು ಕೇಳಿಕೊಂಡ.

"ನನ್ನ ಪಾದಧೂಳಿಯನ್ನು ತೆಗೆದುಕೊಂಡರೆ ಏನಾಗುತ್ತದೆ? ಅದರಿಂದೇನು ನಿನ್ನ ಹುಣ್ಣು ವಾಸಿಯಾಗುತ್ತದೆಯೆ?"

"ಅಪ್ಪಾ, ಈ ಹುಣ್ಣನ್ನು ವಾಸಿಮಾಡಿಕೊಳ್ಳಲು ನಿಮ್ಮ ಪಾದಧೂಳಿಯನ್ನು ಕೇಳುತ್ತೇನೆಯೆ! ಅದಕ್ಕೆ ಡಾಕ್ಟರಿದ್ದಾರೆ. ಈ ಭವಸಾಗರವನ್ನು ದಾಟುವುದಕ್ಕಾಗಿ ನಿಮ್ಮ ಶ್ರೀಚರಣರೇಣುವನ್ನು ಬೇಡುತ್ತಿದ್ದೇನೆ."

ಈ ಮಾತನ್ನು ಕೇಳಿದೊಡನೆ ಶ್ರೀರಾಮಕೃಷ್ಣರು ಭಾವಾವಿಷ್ಟರಾದರು. ಇದೇ

ಸದವಕಾಶವೆಂದು, ಮಥುರ ಅವರ ಶ್ರೀಚರಣಗಳ ಮೇಲೆ ತಲೆಯನ್ನಿರಿಸಿ, 'ನಾನು ಧನ್ಯನಾದೆ' ಎಂದು ಭಾವಿಸಿದ. ಅವನ ಕಂಗಳಿಂದ ಆನಂದಬಾಷ್ಪ ಹರಿಯತೊಡಗಿತು.

ಒಮ್ಮೆ ಶ್ರೀರಾಮಕೃಷ್ಣರು ಭಾವಾವಸ್ಥೆಯಲ್ಲಿದ್ದಾಗ ಮಥುರನಿಗೆ ಹೇಳಿದರು:

"ಮಥುರ, ನೀನು ಜೀವಿಸಿರುವವರೆಗೆ ನಾನು ದಕ್ಷಿಣೇಶ್ವರದಲ್ಲಿರುತ್ತೇನೆ."

ಇದನ್ನು ಕೇಳಿ ಮಥುರನಿಗೆ ಸಂತೋಷವಾಗಿರಬೇಕಲ್ಲವೆ ? ಇಲ್ಲ, ಹಾಗಾಗಲಿಲ್ಲ. ಅವನು ಭಯದಿಂದ ನಡುಗಿದ. ಏಕೆಂದರೆ ಸಾಕ್ಷಾತ್ ಕಾಳೀ ಮಾತೆಯೇ ಶ್ರೀರಾಮ ಕೃಷ್ಣರ ಶರೀರದ ಮೂಲಕ ತನ್ನನ್ನೂ ತನ್ನ ಕುಟುಂಬವರ್ಗದವರನ್ನೂ ಸದಾ ಕಾಪಾಡುತ್ತಿದ್ದಾಳೆಂದು ಅವನಿಗೆ ದೃಢನಂಬಿಕೆಯುಂಟಾಗಿತ್ತು. ತಾನು ತೀರಿಹೋದ ಮೇಲೆ ಠಾಕೂರರು ಇಲ್ಲಿಂದ ಹೊರಟುಬಿಟ್ಟರೆ ತನ್ನ ಸತಿಸುತರ ಗತಿ ? ಆದ್ದರಿಂದ ದೈನ್ಯದಿಂದ ಬೇಡಿದ:

"ಅಪ್ಪಾ, ಹೀಗೇಕೆ ಹೇಳುತ್ತೀರಿ ? ನಾನು ತೀರಿಹೋದರೇನಂತೆ ? ನನ್ನ ಹೆಂಡತಿಯೂ ಮಗನೂ ನಿಮ್ಮನ್ನು ನನ್ನಷ್ಟೇ ಭಕ್ತಿಯಿಂದ ನೋಡಿಕೊಳ್ಳುತ್ತಾರೆ. ಹಾಗಿರುವಾಗ ನೀವೇಕೆ ಈ ಸ್ಥಳವನ್ನು ಬಿಟ್ಟುಹೋಗಬೇಕು ?"

ಮಥುರ ಖಿನ್ನನಾದುದನ್ನು ಕಂಡು ಶ್ರೀರಾಮಕೃಷ್ಣರು ಒಂದು ಕ್ಷಣ ಬಿಟ್ಟು ನುಡಿದರು: "ಸರಿ, ಹಾಗಾದರೆ. ನಿನ್ನ ಹೆಂಡತಿಯೂ ದ್ವಾರಕಾನಾಥನೂ ಇರುವವರೆಗೂ ನಾನು ಇಲ್ಲಿಯೇ ಇರುತ್ತೇನೆ."

ಈಗ ಮಥುರನಿಗೆ ಸಮಾಧಾನವಾಯಿತು. ಮುಂದೆ ಶ್ರೀರಾಮಕೃಷ್ಣರು ಅದ ರಂತೆಯೇ ತಮ್ಮ ಮಾತನ್ನು ನಡೆಸಿಕೊಟ್ಟರು.

ಹೀಗೆ ಶ್ರೀರಾಮಕೃಷ್ಣರು ಮಥುರನನ್ನು ತಮ್ಮೊಂದಿಗೆ ಒಂದು ಅಭೂತಪೂರ್ವ ಸಂಬಂಧದಿಂದ ಬಿಗಿದಿಟ್ಟುಕೊಂಡಿದ್ದರು. ಈ ಸಂಬಂಧವು ಹೇಗೆ ಹುಟ್ಟಿ ಹೇಗೆ ಬೆಳೆಯಿತೆಂಬುದನ್ನು ನೋಡಿದಂತೆಲ್ಲ ಮನವರಿಕೆಯಾಗುತ್ತದೆ—ಇದೊಂದು ಆಕಸ್ಮಿಕ ವಲ್ಲ ಅಥವಾ ಕೇವಲ ಮಾನವಯತ್ನದಿಂದಾದುದಲ್ಲ ಎಂದು. ಸಾಧನಾಕಾಲದಲ್ಲಿ ಒಮ್ಮೆ ಶ್ರೀರಾಮಕೃಷ್ಣರೊಳಗೆ ಇದ್ದಕ್ಕಿದ್ದಂತೆ ಒಂದು ವಿಶೇಷ ಭಾವಸಂಚಾರವಾಗಿ, ಅವರು ಜಗನ್ಮಾತೆಯನ್ನು ಪ್ರಾರ್ಥಿಸಿಕೊಂಡಿದ್ದರು, "ಅಮ್ಮಾ, ನನ್ನನ್ನೊಬ್ಬ ಶುಷ್ಕ ಸಾಧುವನ್ನಾಗಿ ಮಾಡಬೇಡ" ಎಂದು.

ಭಗವದಾನಂದವೆಂಬ ಸುಧಾರಸವನ್ನೇ ಸುರಿಸುತ್ತಿರುವ ಸಾಧುವು 'ಶುಷ್ಕ' ಹೇಗಾದಾನು ? ಆದರೆ ಇಲ್ಲಿ ಸಂಗತಿ ಅದಲ್ಲ. ಬಳಿಗೆ ಬರುವ ಭಕ್ತರಿಗೆ, ಶಿಷ್ಯರಿಗೆ ಎಷ್ಟೇ ಆಧ್ಯಾತ್ಮಿಕ ಉಪದೇಶ ಕೊಟ್ಟರೂ ಪ್ರಸಾದರೂಪವಾಗಿ ಒಂದಿಷ್ಟು ತಿನಿಸನ್ನು ಕೊಡದಿದ್ದರೆ 'ಕೊಡುವಿಕೆ' ಪೂರ್ಣವಾಗದು. ಅಲ್ಲದೆ, ಊಟದ ವೇಳೆಗೆ ಬಂದ ಶಿಷ್ಯ ರಿಗೆ ಉಣಲಿಕ್ಕದೆ ಕೇವಲ ಉಪಚಾರದ ಮಾತುಗಳಿಂದಲೇ ಅವರನ್ನು ಹಿಂದಿರುಗಿಸಿ ಬಿಟ್ಟರೆ ಎಷ್ಟೇ ಆಧ್ಯಾತ್ಮವನ್ನು ಬೋಧಿಸಿದರೂ ಅದು ಪೂರ್ಣ ಫಲ ಕೊಡಲಾರದು. ಗುರುಶಿಷ್ಯ ಸಂಬಂಧ ಮಧುಮಯವಾಗಲು ಗುರುಹಸ್ತದಿಂದ ಒಂದಿಷ್ಟಾದರೂ ಸವಿ ತಿನಿಸು ಶಿಷ್ಯನ ಉದರ ಸೇರಬೇಕು. ಕೇವಲ ಶಿಷ್ಯರು ಮಾತ್ರವೇ ಅಲ್ಲ, ಇತರ ಸಾಧಕರು-ಸಂತರು-ಭಕ್ತರು ಸತ್ಸಂಗಸುಖಕ್ಕಾಗಿ ಬಳಿಗೆ ಬಂದಾಗ ಅವರ ಅಶನ-ವಸತಿ ಗಳಿಗೆ ವ್ಯವಸ್ಥೆ ಮಾಡಲು ಸಾಧ್ಯವಾಗುವಂತಿರಬೇಕು. ಆದರೆ, ಇಷ್ಟಕ್ಕೂ, ಶ್ರೀರಾಮ ಕೃಷ್ಣರು ಹಣ ಮುಟ್ಟುವವರಲ್ಲ. ವ್ಯವಸ್ಥೆ ಮಾತ್ರ ಆಗಬೇಕು—ಹೇಗೆ ಸಾಧ್ಯ ?

ಆದ್ದರಿಂದಲೇ ಅವರಿಂದ ಆ ಪ್ರಾರ್ಥನೆ ಹೊರಟಿತು.

ಜಗನ್ಮಾತೆ ಅವರು ಬೇಡಿದ ವರವನ್ನು ನೀಡಿದಳು. ಅದರ ಫಲವೇ ಮಥುರ ನಂಥ ಶ್ರೀಮಂತನಿಂದ ಆ ನಿಷ್ಠಾಯುತ ಸೇವೆ. ಇದು ಶ್ರೀರಾಮಕೃಷ್ಣರಿಗೆ ಅಂದು ಆದ ದರ್ಶನದಿಂದಲೇ ಸ್ಪಷ್ಟವಾಯಿತು. ಜಗನ್ಮಾತೆ ಅವರಿಗೆ ನಾಲ್ವರನ್ನು ತೋರಿಸಿ, "ಇವರು ನಿನ್ನ 'ರಸದ್ದಾರರು' (ಅರ್ಥಾತ್, ಅಗತ್ಯಗಳನ್ನೆಲ್ಲ ಪೂರೈಸುವವರು). ಇವರು ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾರೆ" ಎಂದಳು. ಅವರಲ್ಲಿ ಮೊದಲಿಗನೇ ಮತ್ತು ಅಗ್ರಗಣ್ಯನೇ ಮಥುರನೆಂಬುದನ್ನು ಆ ದರ್ಶನದಲ್ಲಿ ಶ್ರೀರಾಮಕೃಷ್ಣರು ಕಂಡಿದ್ದರು. ನಿಜಕ್ಕೂ ದೈವೇಚ್ಛೆಯಿಂದಲ್ಲದಿದ್ದರೆ ಇಂಥದೊಂದು ಸಂಬಂಧವು ಇಷ್ಟು ದೀರ್ಘಕಾಲ ನಿರಾತಂಕವಾಗಿ ಉಳಿದುಕೊಂಡು ಬರಲು ಸಾಧ್ಯವಿತ್ತೆ?

ವರ್ಷಗಳು ಉರುಳಿದುವು. ೧೮೭೧ ನೇ ಇಸವಿ. ಮಥುರ-ಶ್ರೀರಾಮಕೃಷ್ಣರ ನಡುವಣ ಬಾಂಧವ್ಯದ ಹದಿನಾಲ್ಕು ವರ್ಷಗಳು ಕಳೆದು ಹದಿನೈದನೇ ವರ್ಷ ಕಾಲಿಟ್ಟಿದೆ. ಮಥುರನಿಗೆ ಇಳಿ ವಯಸ್ಸು. ಬಹಳಷ್ಟು ಮೆತ್ತಗಾಗಿದ್ದಾನೆ. ಆಷಾಢಮಾಸ ಬಂದಿತು. ಮಥುರ ಜ್ವರದಿಂದ ಹಾಸಿಗೆ ಹಿಡಿದ. ಕ್ರಮೇಣ ಅದು ಉಲ್ಬಣಿಸಿ, ಏಳೆಂಟು ದಿನಗಳಲ್ಲೇ ಸನ್ನಿಪಾತಕ್ಕೆ ತಿರುಗಿಕೊಂಡಿತು. ನಾಲಿಗೆ ಬಿದ್ದುಹೋಯಿತು. ಮಥುರನ ಐಹಿಕ ವ್ಯಾಪಾರ ಮುಗಿದಿದೆಯೆಂದು ಶ್ರೀರಾಮಕೃಷ್ಣರಿಗಾಗಲೇ ತಿಳಿದಿತ್ತು. ಆದರೂ ಅವರು ಒಮ್ಮೆಯೂ ಆತನನ್ನು ನೋಡಲು ಜಾನ್ ಬಜಾರಿಗೆ ಹೋಗಲಿಲ್ಲ. ಆದರೆ ಪ್ರತಿದಿನವೂ ಹೃದಯುನನ್ನು ಕಳುಹಿಸಿ, ಅವನ ಸ್ಥಿತಿಯ ಬಗ್ಗೆ ತಿಳಿದುಕೊಳ್ಳುತ್ತಿದ್ದರು. ಕೊನೆಗೊಂದು ದಿನ ಶ್ರೀರಾಮಕೃಷ್ಣರು ಹೃದಯುನಿಗೆ, "ಇಂದು ನೀನು ಹೋಗಬೇಕಾಗಿಲ್ಲ" ಎಂದರು. ಬಳಿಕ ಮಧ್ಯಾಹ್ನದ ಮೇಲೆ ಎರಡು ಮೂರು ಗಂಟೆಗಳ ಕಾಲ ಗಂಭೀರಭಾವದಲ್ಲಿ ಮುಳುಗಿದ್ದುಬಿಟ್ಟರು.

ಭಾವಭಂಗವಾದ ಮೇಲೆ ಶ್ರೀರಾಮಕೃಷ್ಣರು ಹೃದಯುನನ್ನು ಕರೆಯಿಸಿದರು. ಆಗ ಸುಮಾರು ಐದೂವರೆ ಗಂಟೆ. ಅವರು ನುಡಿದರು:

"ಜಗನ್ಮಾತೆಯ ಸಖಿಯರು ಬಂದು ಮಥುರನನ್ನು ಆದರದಿಂದ ದಿವ್ಯರಥದಲ್ಲಿ ಕುಳ್ಳಿರಿಸಿ ಕರೆದೊಯ್ದರು. ಅವನ ಆತ್ಮ ದೇವೀಲೋಕಕ್ಕೆ ಹೋಯಿತು."

ಇದನ್ನು ಕೇಳಿ ಹೃದಯು ವಿಸ್ಮಿತನಾಗಿ ನಿಂತ. ಶ್ರೀರಾಮಕೃಷ್ಣರು ಅಲ್ಲಿಂದಲೇ ಜ್ಯೋತಿರ್ಮಾರ್ಗವಾಗಿ ಸೂಕ್ಷ್ಮಶರೀರದಿಂದ ಪಯಣಿಸಿ ಮಥುರನಿಗೆ ಆತನ ಅಂತ್ಯ ಕಾಲದಲ್ಲಿ ದರ್ಶನ ನೀಡಿದ್ದರು. ನಿಷ್ಠೆಯಿಂದ ತಮ್ಮ ಸೇವೆ ಮಾಡಿದ ಮಥುರನನ್ನು ಅವರು ಬಿಟ್ಟುಬಿಡುವರೆ?

ಅಂದು ರಾತ್ರಿ ಬಹಳ ಹೊತ್ತಿನ ಮೇಲೆ ದೇವಸ್ಥಾನದ ಕೆಲವು ಕೆಲಸಗಾರರು ಕಲ್ಕತ್ತದಿಂದ ಮರಳಿ ಬಂದು ಮಥುರನ ಮರಣದ ವಾರ್ತೆಯನ್ನು ತಿಳಿಸಿದರು. ಸಂಜೆ ಸುಮಾರು ಐದು ಗಂಟೆಯ ಹೊತ್ತಿಗೆ ಮರಣ ಸಂಭವಿಸಿತೆಂದು ಅವರು ಹೇಳಿದರು.

ಮಥುರನಿಗೆ ಉತ್ತಮಲೋಕ ಪ್ರಾಪ್ತವಾಯಿತೆಂದು ಶ್ರೀರಾಮಕೃಷ್ಣರು ಅಂದು ಹೇಳಿದರೂ, ಅವನು ಮತ್ತೆ ನರಜನ್ಮ ತಾಳಿ ಬಂದನೆಂದು ಇನ್ನೊಮ್ಮೆ ಅವರಾಡಿದ ಮಾತಿನಿಂದಲೇ ತಿಳಿಯಬಹುದು. ಅನೇಕ ವರ್ಷಗಳ ತರುವಾಯ, ಅವರು ತಮ್ಮ ಶಿಷ್ಯರೊಡನೆ ಮಾತನಾಡುವಾಗ ಆತನ ಪ್ರಸ್ತಾಪ ಬಂದಿತು. ಅವರ ಬಾಯಿಂದಲೇ ಆತನ ಅದ್ಭುತ ಶ್ರದ್ಧಾಭಕ್ತಿಗಳ ಕಥೆಯನ್ನು ಕೇಳುತ್ತ, ಆತನ ಮಹಾಭಾಗ್ಯವನ್ನು

ಭಾವಿಸುತ್ತ ಸ್ತಬ್ಧನಾದ ಭಕ್ತನೊಬ್ಬ ಅವರನ್ನು ಕೇಳಿದ:

"ಮಹಾಶಯರೆ, ಮಥುರನಿಗೀಗ ಎಂತಹ ಸ್ಥಿತಿ ಪ್ರಾಪ್ತವಾಗಿರಬಹುದು? ಖಂಡಿತವಾಗಿ ಅವನಿನ್ನು ಪುನರ್ಜನ್ಮ ತಾಳಿ ಬರಬೇಕಾಗಿಲ್ಲವೆಂದು ತೋರುತ್ತದೆ, ಅಲ್ಲವೆ?"

ಶ್ರೀರಾಮಕೃಷ್ಣರು: "ಬಹುಶಃ ಅವನು ಎಲ್ಲಿಯೋ ಒಬ್ಬ ರಾಜನಾಗಿ ಹುಟ್ಟಿದ್ದಾನೆ. ಅವನಿಗಿನ್ನೂ ಭೋಗಾಸಕ್ತಿಯಿತ್ತು."

ಹೀಗೆಂದ ಶ್ರೀರಾಮಕೃಷ್ಣರು ಆ ವಿಷಯವನ್ನು ಅಲ್ಲಿಗೇ ಅಂತ್ಯಗೊಳಿಸಿದರು.

ಇತ್ತ ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರು ಓರ್ವ ಕಾಷಾಯಧಾರಿಗೂ ಮಿಗಿಲಾದ ಭಗವನ್ಮಯ-ತ್ಯಾಗಪೂರ್ಣ ಜೀವನವನ್ನು ನಡೆಸುತ್ತಿದ್ದರೆ, ಅತ್ತ ದೂರದೊಂದು ಊರಿನಲ್ಲಿ ಮತ್ತೊಂದು ಜೀವ ಅನುದಿನವೂ ಅವರನ್ನೇ ನೆನೆಯುತ್ತ ಅವರಲ್ಲೇ ತನ್ನೆಲ್ಲ ಭರವಸೆಗಳನ್ನಿರಿಸಿ ದಿನ ತಳ್ಳುತ್ತಿದೆ, ಸದಾ ರಾಮಕೃಷ್ಣಭಾವದಲ್ಲೇ ತುಡಿಯುತ್ತಿದೆ. ಯಾವುದು ಆ ಜೀವ? ಅವರ ಸಹಧರ್ಮಿಣಿ ಶಾರದಾಮಣಿ ದೇವಿ!

ಶಾರದೆ ಶ್ರೀರಾಮಕೃಷ್ಣರನ್ನು ಕಂಡದ್ದು ನಾಲ್ಕು ವರ್ಷಗಳ ಹಿಂದೆ. ಆಗಿನ್ನೂ ಆಕೆ ಅತ್ಯಂತ ಸರಳ ಮುಗ್ಧ ಬಾಲಿಕೆಯಷ್ಟೇ. ದಾಂಪತ್ಯ ಜೀವನದ ಉದ್ದೇಶವನ್ನೂ ಹೊಣೆಗಾರಿಕೆಯನ್ನೂ ಅರಿಯುವ ಶಕ್ತಿ ಆಕೆಯಲ್ಲಿ ಆಗತಾನೆ ವಿಕಾಸಗೊಳ್ಳುತ್ತಿತ್ತು. ಆಗ ಶ್ರೀರಾಮಕೃಷ್ಣರು ತೋರಿದ ಪವಿತ್ರ-ನಿಸ್ವಾರ್ಥ ಪ್ರೇಮವು ಆ ಎಳೆಯ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿತು.

ಕೆಲತಿಂಗಳ ಬಳಿಕ ಶ್ರೀರಾಮಕೃಷ್ಣರು ಕಾಮಾರಪುಕುರದಿಂದ ಕಲ್ಕತ್ತಕ್ಕೆ ಮರಳಿ ದಾಗ, ಶಾರದೆಯೂ ತನ್ನೂರಿಗೆ ಹಿಂದಿರುಗಿದಳು. ತಾನು ಅನಂತ ಆನಂದದ ಅಧಿಕಾರಿಣಿಯೆಂಬ ಹಿಗ್ಗು ಆಕೆಯ ಅಂತರ್ಯದಲ್ಲಿ ಉಕ್ಕೇಳುತ್ತಿತ್ತು. ಅದರ ಪರಿ ಣಾಮವು ಆಕೆಯ ನಡೆನುಡಿಗಳಲ್ಲೆಲ್ಲ ಪ್ರತಿಫಲಿಸುತ್ತಿತ್ತು. ಆದರೆ ಸಾಮಾನ್ಯರಿಗೆ ಅದನ್ನು ಗುರುತಿಸಲು ಸಾಧ್ಯವಿರಲಿಲ್ಲ. ಏಕೆಂದರೆ, ಮೊದಲೇ ಶಾಂತಸ್ವಭಾವದವಳಾದ ಶಾರದೆ, ತನ್ನೊಳಗಿನ ಈ ಆನಂದದ ಪರಿಣಾಮವಾಗಿ ಇನ್ನಷ್ಟು ಲಜ್ಜಾಶೀಲೆಯೂ ನಿಸ್ವಾರ್ಥಿಯೂ ಆದಳು. ಕುಗ್ರಾಮದಲ್ಲಿ, ಬಡ ದಂಪತಿಗಳ ಮಗಳಾದವಳಿಗೆ ಕಷ್ಟಕ್ಕೇನು ಕೊರತೆ? ಆದರೆ ಶಾರದೆಗೆ ಮಾತ್ರ ಯಾವ ಕಷ್ಟವೂ, ಯಾವ ಕೊರತೆಯೂ ತೋರುತ್ತಿರಲಿಲ್ಲ. ಅಷ್ಟೇ ಅಲ್ಲ, ಇತರರ ಕಷ್ಟಗಳಿಗಾಗಿ ಮರುಗುವ, ಅವರ ನೆರವಿಗಾಗಿ ಧಾವಿಸುವಂತೆ ಮಾಡುವ ಅನಂತ ಸಹಾನುಭೂತಿ ಆಕೆಯ ಹೃದಯದಲ್ಲಿ ಬೆಳೆಯುತ್ತಿತ್ತು. ಕರುಣೆಯ ಸಾಕಾರಮೂರ್ತಿಯೇ ಆದಳು ಅವಳು. ಮತ್ತೊಬ್ಬರಿಗೆ ತಾನು ತೋರಿದ ಪ್ರೀತಿಗೆ, ಮಾಡಿದ ಉಪಕಾರಕ್ಕೆ ತಕ್ಕ ಪ್ರತಿಸ್ಪಂದನ ವಿಲ್ಲದಿದ್ದರೂ ಅವಳಿಗೆ ಬೇಸರವಿಲ್ಲ. ಅದರಿಂದಾಗಿ ತನ್ನ ಧೋರಣೆಯನ್ನು ಬದಲಾ ಯಿಸಿಕೊಳ್ಳುವವಳಲ್ಲ. ಇದು ಅವಳ ಮಾನಸಿಕ ಉಲ್ಲಾಸದ ಪರಿಣಾಮ.

ಹೀಗೆ ಬಾಲಕಿ ಶಾರದೆ ಅಲ್ಪತೃಪ್ತಳಾಗಿ ತನ್ನಲ್ಲೇ ತಾನು ಮಗ್ನಳಾಗಿ ದಿನಗಳನ್ನು ಕಳೆಯತೊಡಗಿದಳು. ಆದರೆ ಜಯರಾಂಬಾಟಿಯಲ್ಲಿ ಇದ್ದದ್ದು ಅವಳ ದೇಹ ಮಾತ್ರ. ಮನಸ್ಸು ತನ್ನ ಪತಿದೇವನ ಪಾದವನ್ನನುಸರಿಸಿ ದಕ್ಷಿಣೇಶ್ವರದಲ್ಲೇ ನೆಲೆಗೊಂಡಿತ್ತು. ಅವರನ್ನು ಯಾವಾಗ ಕಂಡೇನು, ಯಾವಾಗ ಅವರ ಸನಿಹದಲ್ಲಿರುವ ಸೌಭಾಗ್ಯ ತನ್ನದಾದೀತು ಎಂದು ಮನಸ್ಸಿನಲ್ಲಿ ಪ್ರಬಲ ಇಚ್ಛಾತರಂಗವೇಳುತ್ತಿತ್ತು. ಆದರೆ ಜೊತೆಗೊಂದು ಸಂದೇಹ—'ಇಷ್ಟು ದಿನಗಳಾದರೂ ಅವರೇಕೆ ಬರಲಿಲ್ಲ? ಬಂದು ನನ್ನನ್ನು ಕರೆದೊಯ್ಯಲಿಲ್ಲ? ನನ್ನನ್ನೇನಾದರೂ ಮರೆತುಬಿಟ್ಟರೆ?' ಬಳಿಕ ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದಳು—'ಛೆ, ಎಲ್ಲಿಯಾದರೂ ಉಂಟೆ? ಮೊದಲ ಬಾರಿ

ನನ್ನನ್ನು ಕಂಡಾಗ ಅವರು ತೋರಿದ ಅಲೌಕಿಕ ಪ್ರೀತಿಯೆಂಥದು! ಅದನ್ನು ನೆನೆದೊಡನೆ ಮನದಲ್ಲಿ ಧನ್ಯತಾ ಭಾವ ಉಂಟಾಗುವುದಲ್ಲ! ಮೈನವಿರೇಳುವುದಲ್ಲ! ಅಂಥವರು ನನ್ನನ್ನು ಮರೆತಿರಲು ಸಾಧ್ಯವೆ?' 'ಹಾಗಾದರೆ ಅವರಿನ್ನೂ ಬರಲಿಲ್ಲವೇಕೆ?' 'ಬರುತ್ತಾರೆ ತಾಳು; ಸಮಯ ಬರುತ್ತದೆ. ಅದು ಬಂದೊಡನೆ ನೀನು ಅವರಲ್ಲಿಗೆ ಹೋಗುವೆ!'

ಆದರೆ ಶಾರದೆಗೆ ಈ ಬಗೆಯಾಗಿ ಸಮಾಧಾನ ತಂದುಕೊಂಡು ನೆಮ್ಮದಿಯಿಂದಿರಲೂ ಆಸ್ಪದವಿಲ್ಲ ಆ ಹಳ್ಳಿಯಲ್ಲಿ. ಏಕೆಂದರೆ ಅಲ್ಲಿ ಈಗಾಗಲೇ ಒಂದು ವದಂತಿ ಹಬ್ಬಿತ್ತು—'ಶಾರದೆಯ ಗಂಡನಿಗೆ ಸ್ವಲ್ಪ ಹುಚ್ಚು' ಎಂದು. ಅದರಲ್ಲೂ ಅಲ್ಲಿಯ ಹೆಂಗಸರೆಲ್ಲ ಸೇರಿದರೆಂದರೆ ಇದೇ ಮಾತು:

"ಕೇಳಿದಿರೇನ್ರಿ, ನಮ್ಮ ಶಾರದೆಯ ಯಜಮಾನರಿಗೆ ಅರಳುಮರುಳಂತೆ!"

"ಯಾರು? ನಮ್ಮ ಮುಖರ್ಜಿಗಳ ಅಳಿಯ ತಾನೆ? ಅವರಿಗೇನು ಬಂತ್ರೀ? ಒಳ್ಳೇ ಲಕ್ಷಣವಾಗಿದ್ದರಲ್ಲ! ಇಲ್ಲಿಗೆ ಬಂದಾಗ ಚೆನ್ನಾಗಿಯೇ ಇದ್ದರು!"

"ಚೆನ್ನ ಏನು ಬಂತು? ಸ್ವಲ್ಪ ಹಾಗೆ—ಸ್ವಲ್ಪ ಹೀಗೆ. ನೋಡಿದವರೇ ಬಂದು ಹೇಳಿದರಲ್ಲ ಅವರ ವಿಷಯ ಎಲ್ಲ!"

"ಓ, ಹಾಗೇನು! ಅಂತೂ ಆಕೇನ ಹುಚ್ಚನಿಗೆ ಕೊಟ್ಟುಬಿಟ್ಟರು ಅನ್ನಿ!" .

"ಏನು ಕರ್ಮವೊ! ಹೋಗಲಿ ಬಿಡಿ, ನಮಗ್ಯಾಕೆ ಆ ವಿಷಯ."

ಈ ಮಾತುಗಳೆಲ್ಲ ಶಾರದೆಯ ಕಿವಿಗೂ ಬಿದ್ದುವು; ಕಿವಿಗೆ ಬೀಳುವ ಹಾಗೆ ಅಂದರು ಆ ಹೆಂಗಸರು. ಆದರೆ ಯಾವ ಸ್ತ್ರೀಗೆ ತಾನೆ ಇಂಥ ಮಾತುಗಳನ್ನು ಕೇಳಿ ಸಹಿಸಿಕೊಳ್ಳಲು ಸಾಧ್ಯ? ಅದರಲ್ಲೂ ಶಾರದೆಯ ಮೃದು ಹೃದಯವನ್ನು ಇವು ಕೂರಂಬುಗಳಂತೆ ಇರಿದು ಘಾಸಿಗೊಳಿಸಿದುವು. 'ಇದೇನಪ್ಪ ಇದು! ಈ ಜನರೆನ್ನುತ್ತಿರುವುದೆಲ್ಲ ನಿಜವೆ?' ಎಂದು ದಿಗ್ಭ್ರಾಂತಳಾದಳು. 'ಈ ಲೋಕದ ಜನ ಮಾತನಾಡುವುದೇ ಹೀಗೆ' ಎಂದು ತಿಳಿಯಬಲ್ಲ ಪ್ರಬುದ್ಧತೆ ಆ ಮುಗ್ಧ ಬಾಲಿಕೆಗೆ ಹೇಗೆ ಬರಬೇಕು? 'ಇವರ ಸಹವಾಸವೇ ಬೇಡ' ಎಂದುಕೊಂಡು ಮನೆಯಲ್ಲಿದ್ದರೆ, ಅಲ್ಲಿಗೇ ಹುಡುಕಿಕೊಂಡು ಬಂದು ಹಿಂಸಿಸುವವರು ಕೆಲವರು:

"ಏನಮ್ಮಾ ಶ್ಯಾಮಸುಂದರಿ, ನಿನ್ನ ಅಳಿಯನಿಗೆ ಬುದ್ಧಿಭ್ರಮಣೆಯಾಗಿದೆಯಂತೆ? ಯಾರೋ ಹೇಳಿದರು . . . ಪಾಪ, ಏನು ಮಾಡುವುದು, ಎಲ್ಲ ಅನುಭವಿಸಲೇ ಬೇಕಲ್ಲ!"

ಈ ಆಕ್ರಮಣದಿಂದಲೂ ತಪ್ಪಿಸಿಕೊಳ್ಳಲು ಶಾರದೆ, ಕೆಲವೊಮ್ಮೆ ತನ್ನ ಪರಿಚಿತಳಾದ ಭಾನು ಅತ್ತೆಯ ಮನೆಗೆ ಹೋಗುತ್ತಿದ್ದಳು. ಆ ಹಳ್ಳಿಯಲ್ಲೆಲ್ಲ ಆಕೆಗೆ ತುಂಬ ಆತ್ಮೀಯರೆಂದರೆ ಇವಳೊಬ್ಬಳೇ. ಇವಳು ಅತ್ಯಂತ ಶುದ್ಧ ಸಾತ್ವಿಕ ಜೀವಿ. ಇವಳಿಗೊಂದು ವಿಶೇಷ ಅಂತರ್ದೃಷ್ಟಿಯಿತ್ತು. ಶ್ರೀರಾಮಕೃಷ್ಣರ ದಿವ್ಯತೆಯನ್ನು ಕೆಲಮಟ್ಟಿಗೆ ಕಂಡುಕೊಂಡಿದ್ದವಳು ಈಕೆ. ಶಾರದೆ ಬಂದು ತನ್ನ ಸಂಕಟವನ್ನು ತೋಡಿಕೊಂಡರೆ, "ಅಯ್ಯೋ, ಇಷ್ಟಕ್ಕೆಲ್ಲ ಹೆದರಿಬಿಟ್ಟೆಯೇನೆ ನೀನು! ಚಿಂತೆ ಮಾಡಬೇಡ. ಈ ಜನರ ಮಾತೆಲ್ಲ ಶುದ್ಧ ಸುಳ್ಳು, ನಿನ್ನ ಗಂಡನಿಗೇನೂ ಆಗಿಲ್ಲ" ಎಂದು ಸಮಾಧಾನ ಮಾಡುತ್ತಿದ್ದಳು. ಅಲ್ಲದೆ, ಶ್ಯಾಮಸುಂದರಿಯ ಮನೆಗೆ ಹೋಗಿ ಅವಳಿಗೂ ಹೇಳುತ್ತಿದ್ದಳು:

"ನೋಡಮ್ಮಾ, ನಿನ್ನ ಅಳಿಯ ಯಾರು ಅಂತ ತಿಳಿದಿದ್ದೀ? ಅವರು ಸಾಕ್ಷಾತ್

ಶಿವ ! ಸಾಕ್ಷಾತ್ ಕೃಷ್ಣ ! ಈಗ ನೀನು ನನ್ನ ಮಾತನ್ನು ನಂಬದೆಯಿರಬಹುದು. ಆದರೆ ನೋಡುತ್ತಿರು, ಮುಂದೆ ನಿನಗೇ ಗೊತ್ತಾಗುತ್ತದೆ.''

ಜನ ಏನೇ ಅಂದರೂ ಶಾರದೆಯ ಅಂತರಂಗಕ್ಕೆ ಮಾತ್ರ ಚೆನ್ನಾಗಿ ಗೊತ್ತಿತ್ತು— ಇದೆಲ್ಲ ಕೇವಲ ಕಾಡುಹರಟೆಯ ಮಾತುಗಳು, ತನ್ನ ಪತಿಯೆಂದಿಗೂ ಹುಚ್ಚನಾಗಲು ಸಾಧ್ಯವಿಲ್ಲ ಎಂದು. ಏಕೆಂದರೆ ಪತಿದೇವನ ಸ್ಮೃತಿಯಿನ್ನೂ ಆಕೆಯ ಮನದಲ್ಲಿ ಹಚ್ಚಹಸಿರಾಗಿದೆ. ಹಿಂದೆ ಅವರ ಸಾನ್ನಿಧ್ಯದಲ್ಲಿದ್ದಾಗ ತಾನು ಅನುಭವಿಸಿದ ಶಾಂತಿ ಸಮಾಧಾನವೆಂಥದು ! ಅವರ ಹೃದಯವೈಶಾಲ್ಯವೆಷ್ಟು ? ಅವರ ಮಾತಿನ ಸ್ವಾರಸ್ಯ, ಹಾಸ್ಯಚಟಾಕಿಗಳು ಇವುಗಳಿಂದ ಜನರಿಗೆಲ್ಲ ಉಂಟಾಗುತ್ತಿದ್ದ ಸಂತಸವೆಷ್ಟು ! ಅವರ ಅದ್ಭುತ ಆಧ್ಯಾತ್ಮಿಕ ವ್ಯಕ್ತಿತ್ವದಿಂದ ಸ್ವತಃ ತನ್ನ ಮೇಲುಂಟಾದ ಪರಿಣಾಮವೆಂಥದು ! ಇದನ್ನೆಲ್ಲ ಭಾವಿಸಿದಾಗ, ಇಂಥ ವದಂತಿ ಹೇಗೆ ಹುಟ್ಟಿಕೊಂಡಿರಬಹುದು ಎಂಬ ಆಶ್ಚರ್ಯ ಶಾರದೆಗೆ. ಆದರೂ . . . ಇಷ್ಟೊಂದು ಜನ ಹೇಳುತ್ತಿರುವಾಗ . . . ಏನಾದರೂ ಸತ್ಯವಿರಬಹುದೆ ? ವಿಧಿಯಿಚ್ಛೆಯಂತೆ ಒಂದು ವೇಳೆ ಅದೇನಾದರೂ ನಿಜವಾಗಿದ್ದರೆ ತಾನಿಲ್ಲಿ ಸುಮ್ಮನಿರುವುದು ತರವೆ ? ಹೋಗಿ ಅವರ ಆರೈಕೆ ಮಾಡಬೇಕಾದದ್ದು ತನ್ನ ಆದ್ಯ ಕರ್ತವ್ಯವಲ್ಲವೆ ? ಹೀಗೆ ಶಾರದೆಯ ಹೃದಯ ಚಡಪಡಿಸುತ್ತಿದೆ. ಆದರೆ ಆಕೆಯ ಮನಸ್ಥಿತಿಯನ್ನು ಯಾರೂ ಅರಿಯಲಾರದೆ ಹೋದರು.

ಈಗ, ಇಷ್ಟು ದಿನಗಳವರೆಗೆ ಶಾರದೆಯ ತಂದೆತಾಯಂದಿರು ಅವಳನ್ನು ಪತಿಗೃಹಕ್ಕೆ ಕಳುಹಿಸಿಕೊಡಲಿಲ್ಲವೇಕೆ ಎಂಬ ಪ್ರಶ್ನೆಯೇಳಬಹುದು. ಇದಕ್ಕೆ ಬಾಲ್ಯ ವಿವಾಹ ಪದ್ಧತಿಯ ಹಿನ್ನೆಲೆ ತಿಳಿದಿರಬೇಕಾಗುತ್ತದೆ. ಬಾಲ್ಯದಲ್ಲೇ ವಿವಾಹವಾದ ಹೆಣ್ಣುಮಗಳನ್ನು, ಆಕೆ ಜವ್ವನೆಯಾದ ಮೇಲೆ ಪತಿಗೃಹಕ್ಕೆ ಕಳುಹಿಸಿಕೊಡುವುದು ಪದ್ಧತಿ. ಆದರೆ ಹಳ್ಳಿಯ ಬಾಲಕ-ಬಾಲಕಿಯರ ಶರೀರ-ಮನಸ್ಸುಗಳು ಪ್ರಾಯದ ಲಕ್ಷಣಗಳನ್ನು ತೋರುವುದು ಸ್ವಲ್ಪ ನಿಧಾನ. ಬಹುಶಃ ನಿಸರ್ಗದ ಮಡಿಲಲ್ಲಿ, ನಿರ್ಮಲ ವಾತಾವರಣದಲ್ಲಿ ಸ್ವಚ್ಛಂದ ಹಕ್ಕಿಗಳಂತೆ ಬೆಳೆಯುವುದರಿಂದ ಹಾಗಾಗುವುದೆಂದು ತೋರುತ್ತದೆ. ಅದು ಹೇಗೇ ಇರಲಿ; ರಾಮಚಂದ್ರ ಮುಖರ್ಜಿ ತಾನೇ ಮಗಳನ್ನು ದಕ್ಷಿಣೇಶ್ವರಕ್ಕೆ ಕರೆದೊಯ್ಯಬಹುದಾಗಿತ್ತು. ಆದರೆ, ಬೀಗರ ಮನೆಯವರು ಅವರಾಗಿಯೇ ಬರಲಿ ಎಂದೋ ಏನೋ, ಅವನು ಸುಮ್ಮನಿದ್ದುಬಿಟ್ಟಿದ್ದ.

ಅಂತೂ ಭಗವದಿಚ್ಛೆಯಿಂದ, ಅದಕ್ಕೊಂದು ಅವಕಾಶ ತಾನಾಗಿಯೇ ಒದಗಿ ಬಂತು. ಅದು ೧೮೭೨ ನೆಯ ಮಾರ್ಚ್ ತಿಂಗಳು. ಕೆಲವೇ ದಿನಗಳಲ್ಲಿ ಶ್ರೀಚೈತನ್ಯ ಜಯಂತಿ. ಬಂಗಾಳದಲ್ಲಿ ಇದು ದೋಲ್ ಪೂರ್ಣಿಮೆ ಅಥವಾ ದೋಲೋತ್ಸವ ಎಂದು ಪ್ರಸಿದ್ಧ. ಆ ಪವಿತ್ರ ದಿನದಂದು ಗಂಗಾಸ್ನಾನ ಮಾಡಲು ಬಂಗಾಳದ ದೂರದೂರದ ಪ್ರದೇಶಗಳಿಂದಲೂ ಭಕ್ತಾದಿಗಳು ಕಲ್ಕತ್ತಕ್ಕೋ ಇತರ ಸ್ಥಳಗಳಿಗೋ ಹೋಗುತ್ತಾರೆ. ಆ ವರ್ಷ ಶಾರದೆಯ ದೂರದ ಬಂಧುಗಳು ಕೆಲವರು ಕಲ್ಕತ್ತಕ್ಕೆ ಹೊರಟಿದ್ದರು. ಇಂಥ ಅವಕಾಶಕ್ಕಾಗಿಯೇ ಕಾಯುತ್ತಿದ್ದ ಶಾರದೆ, ತನ್ನನ್ನೂ ಕರೆದುಕೊಂಡು ಹೋಗಬೇಕೆಂದು ಅವರಲ್ಲೊಬ್ಬ ಮಹಿಳೆಯನ್ನು ಕೇಳಿಕೊಂಡಳು. ನೇರವಾಗಿ ತಂದೆಯ ಬಳಿಯೇ ಹೇಳಿಕೊಳ್ಳಲು ನಾಚಿಕೆ. ಇದನ್ನು ಊಹಿಸಿ ಆ ಮಹಿಳೆಯೇ ಅವಳ ನೆರವಿಗೆ ಬಂದಳು; ರಾಮಚಂದ್ರ ಮುಖರ್ಜಿಯ ಬಳಿ ವಿಷಯವನ್ನು ಪ್ರಸ್ತಾಪಿಸಿದಳು. ಅವನಿಗೆ ಕೂಡಲೇ ಹೊಳೆಯಿತು, ತನ್ನ ಮಗಳು ಕಲ್ಕತ್ತಕ್ಕೆ ಹೊರಟಿರುವುದರ

ನಿಜವಾದ ಉದ್ದೇಶವೇನೆಂದು. ಮಗಳೊಂದಿಗೆ ತಾನೇ ಹೊರಟುನಿಂತ.

ಜಯರಾಂಬಾಟಿಯಿಂದ ಕಲ್ಕತ್ತಕ್ಕೆ ಅರವತ್ತು ಮೈಲಿಯ ಸುದೀರ್ಘ ಪ್ರಯಾಣ. ರೈಲು-ಬಸ್ಸಿನ ವ್ಯವಸ್ಥೆಯೇನೂ ಇರಲಿಲ್ಲ. ಯೋಗ್ಯತೆಯಿದ್ದವರು ಬೇಕಾದರೆ ಪಲ್ಲಕ್ಕಿಯಲ್ಲಿ ಹೋಗಬಹುದಾಗಿತ್ತು. ಆದರೆ ರಾಮಚಂದ್ರನಂಥವರಿಗೆ ಅದು ಕೈಗೆಟಕುವ ಮಾತಲ್ಲ. ಇನ್ನುಳಿದುದೊಂದೇ ಉಪಾಯ—ಕಾಲ್ನಡಿಗೆ. ರಾಮಚಂದ್ರ, ಶಾರದೆ ಹಾಗೂ ಊರಿನ ಇನ್ನೂ ಕೆಲವರು ಕಾಲ್ನಡಿಗೆಯಿಂದಲೇ ಕಲ್ಕತ್ತದತ್ತ ಸಾಗಿದರು.

ಹೆಚ್ಚಿನ ಭಾಗ ಕಾಲ್ದಾರಿಯಾಗಿಯೇ ಪ್ರಯಾಣ. ವಸಂತ ಋತು ಆಗತಾನೆ ಹೆಜ್ಜೆಯಿಟ್ಟಿತ್ತು. ಪ್ರಕೃತಿದೇವಿ ಹೊಸವರ್ಷವನ್ನು ಸ್ವಾಗತಿಸಲು ಹಸಿರನ್ನುಟ್ಟು ಸಜ್ಜಾಗಿದ್ದಳು. ದಾರಿಯುದ್ದಕ್ಕೂ ಪಚ್ಚೆ ಪಯಿರಿನಿಂದ ತುಂಬಿದ ಹೊಲಗದ್ದೆಗಳು, ಅರಳಿದ ತಾವರೆಗಳಿಂದ ಕಂಗೊಳಿಸುವ ಕೆರೆ-ಕೊಳಗಳು ಕಣ್ಣಿಗೆ ತಂಪು ನೀಡುತ್ತಿದ್ದುವು. ಅಶ್ವತ್ಥಾದಿ ಮಹಾವೃಕ್ಷಗಳು ಬಳಲಿದ ಪಯಣಿಗರನ್ನು ತಣಿಸುತ್ತಿದ್ದುವು. ದಕ್ಷಿಣೇಶ್ವರವನ್ನು, ಅಲ್ಲಿನ ತನ್ನ ಆರಾಧ್ಯದೈವವನ್ನು ನೆನೆಯುತ್ತ ಶಾರದೆ ಸಂಗಡಿಗರೊಂದಿಗೆ ಉತ್ಸಾಹದಿಂದ ಹೆಜ್ಜೆಹಾಕಿದಳು. ಮೊದಲ ಎರಡು ಮೂರು ದಿನ ಪ್ರಯಾಣ ಅತ್ಯಂತ ಆಹ್ಲಾದಕರವಾಗಿತ್ತು. ಆದರೆ ಶಾರದೆಗೆ ಒಂದೇ ಸಲಕ್ಕೆ ಅಷ್ಟೊಂದು ದೂರ ನಡೆದು ಅಭ್ಯಾಸವಿಲ್ಲ. ಆದ್ದರಿಂದ ಕಾಲುಗಳು ಸೋತುವು. ಹೆಜ್ಜೆ ನಿಧಾನವಾಯಿತು. ಎಳೆಯ ಶರೀರ ಬಳಲಿತು. ಆದರೆ ತನ್ನ ಸ್ವಭಾವಸಹಜವಾದ ಸಂಕೋಚದಿಂದ ಆಕೆ ಅದನ್ನು ಯಾರಿಗೂ ತಿಳಿಸಲಿಲ್ಲ. ಹೇಗೋ ಮಾಡಿ ನಡೆದುಬಿಡೋಣವೆಂದು ಕಷ್ಟಪಟ್ಟು ಕಾಲೆಳೆಯುತ್ತ ಸಾಗಿದಳು. ಆದರೆ ಶರೀರದ ನೋವನ್ನು ಎಷ್ಟೆಂದು ತಡೆದುಕೊಳ್ಳಲಾದೀತು ? ಮರುದಿನವೇ ಕೆಂಡಾಮಂಡಲ ಜ್ವರ. ರಾಮಚಂದ್ರನಿಗೆ ಚಿಂತೆ ಹತ್ತಿತು. ಬೇರೆ ಉಪಾಯಗಾಣದೆ ದಾರಿಯಲ್ಲಿದ್ದ ಒಂದು ಸತ್ರದಲ್ಲಿ ಮಗಳೊಂದಿಗೆ ಇಳಿದುಕೊಂಡ. ಉಳಿದ ಪ್ರಯಾಣಿಕರೆಲ್ಲ ತಮ್ಮ ಪಾಡಿಗೆ ಮುನ್ನಡೆದರು.

ಮಾರ್ಗಮಧ್ಯದಲ್ಲೊದಗಿದ ಆಪತ್ತಿನಿಂದ ಶಾರದೆಗುಂಟಾದ ಆತಂಕವನ್ನು ಭಾವಿಸಿನೋಡಬೇಕು. ಜ್ವರದಿಂದ ನರಳುವಂತಾಯಿತಲ್ಲ ಎಂಬ ದುಗುಡಕ್ಕಿಂತ ಹೆಚ್ಚಾಗಿ, ತಾನು ವ್ಯಾಕುಲಹೃದಯದಿಂದ ಪತಿಯ ಬಳಿಗೆ ಹೊರಟ ಸಮಯದಲ್ಲೇ ಹೀಗಾಯಿತಲ್ಲ ಎಂಬ ವ್ಯಥೆ ಅವಳಿಗೆ. ಆದರೆ ಅದೇ ರಾತ್ರಿ ಅವಳಿಗೊಂದು ಕನಸಾಯಿತು. ಆಕೆಯ ಮನಸ್ಸಿಗೆ ಎಷ್ಟೋ ಸಮಾಧಾನ ತಂದ ಅದ್ಭುತ ದರ್ಶನ ಅದು. ಅದನ್ನು ಮುಂದೆ ಶಾರದಾದೇವಿಯವರು ತಮ್ಮ ಭಕ್ತೆಯರ ಬಳಿ ಬಣ್ಣಿಸುತ್ತಾರೆ:

"ಜ್ವರದಿಂದ ಮೈಮೇಲೆ ಪ್ರಜ್ಞೆಯಿಲ್ಲದೆ ಮಲಗಿದ್ದೇನೆ. ಆಗ ಒಬ್ಬಳು ಹೆಂಗಸು ಬಂದು ಸನಿಹದಲ್ಲಿ ಕುಳಿತಂತೆ ಕಂಡೆ. ಆಕೆಯದು ಕಾಡಿಗೆ ಮೈಬಣ್ಣ. ಆದರೆ ಅಂಥಾ ಸೌಂದರ್ಯವನ್ನು ಮಾತ್ರ ನಾನೆಂದೂ ಕಂಡವಳಲ್ಲ! ಅವಳು ನನ್ನ ಹಣೆಯನ್ನೂ ಮೈಯನ್ನೂ ಮೆಲ್ಲನೆ ನೇವರಿಸತೊಡಗಿದಳು. ಆ ಸ್ಪರ್ಶ ಅದೆಷ್ಟು ಮೃದು ! ಅದೆಷ್ಟು ಶೀತಲ ! ನನ್ನ ಜ್ವರದ ತಾಪ ಕೂಡಲೇ ಇಳಿಯತೊಡಗಿತು. ನಾನವಳನ್ನು ಕೇಳಿದೆ:

'ಎಲ್ಲಿಂದ ಬಂದೆಯಮ್ಮ ನೀನು ?'

ಅವಳೆಂದಳು: 'ದಕ್ಷಿಣೇಶ್ವರದಿಂದ.'

"ನಾನೆಂದೆ: 'ಓ, ಹಾಗೇನು ? ನಾನೂ ಅಲ್ಲಿಗೇ ಹೊರಟಿರುವುದು ! ಅವರು (ಶ್ರೀರಾಮಕೃಷ್ಣರು) ಅಲ್ಲಿದ್ದಾರೆ. ಅವರನ್ನು ಕಂಡು, ಅವರ ಸೇವೆ ಮಾಡೋಣವೆಂದು

ಹೊರಟೆ. ನೋಡಿದರೆ ಈಗ ಈ ಜ್ವರ ಅಂಟಿಕೊಂಡಿದೆ. ಏನು ಮಾಡಲಮ್ಮ?'

"ಆಗ ಅವಳು ನನಗೆ ಸಮಾಧಾನ ಮಾಡಿದಳು: 'ನೀನೇನೂ ಚಿಂತಿಸಬೇಡ. ನೀನು ಬೇಗ ಗುಣ ಹೊಂದುವೆ. ಅಲ್ಲಿಗೆ ಹೋಗಿ ಅವರನ್ನು ಕಾಣುವೆ. ನಿನಗಾಗಿಯೇ ನಾನವರನ್ನು ಅಲ್ಲಿರಿಸಿದ್ದೇನೆ.'

'ಹೌದೆ ? ಹಾಗಾದರೆ . . . ನೀನು ಯಾರು !' ಎಂದೆ.

ಅದಕ್ಕೆ ಅವಳೆಂದಳು, 'ನಾನು ನಿನ್ನ ಸೋದರಿ.'

"ನಾನೆಂದೆ, 'ಓ, ಹಾಗೇನು ? ಅದಕ್ಕೇ ನೀನಿಲ್ಲಿಗೆ ಬಂದಿರುವುದು ! ?' ಹೀಗೆ ಮಾತನಾಡುತ್ತ ಆಡುತ್ತ ನನಗೆ ಗಾಢ ನಿದ್ದೆ ಬಂದುಬಿಟ್ಟಿತು . . . "

ರಾಮಚಂದ್ರ ಮುಖರ್ಜಿ ಬೆಳಗಾಗೆದ್ದು ನೋಡುತ್ತಾನೆ—ಮಗಳ ಜ್ವರ ಬಿಟ್ಟು ಹೋಗಿದೆ! ಇನ್ನು ಆ ನಡುದಾರಿಯಲ್ಲಿ ಕುಳಿತಿರುವುದಕ್ಕಿಂತ ಹೇಗೋ ಮಾಡಿ ಹೊರಟುಬಿಡುವುದೇ ಲೇಸೆನಿಸಿತು. ಹಿಂದಿನ ರಾತ್ರಿಯ ದರ್ಶನದಿಂದ ಉಲ್ಲಸಿತಳಾಗಿದ್ದ ಶಾರದೆಯೂ ಇದಕ್ಕೆ ಸಮ್ಮತಿಸಿದಳು. ಸರಿ, ತಂದೆ-ಮಗಳಿಬ್ಬರೂ ಮೆಲ್ಲನೆ ಮುಂದೆ ಸಾಗಿದರು. ಸದ್ಯ, ಹೆಚ್ಚು ನಡೆಯಬೇಕಾಗಲಿಲ್ಲ. ಸ್ವಲ್ಪ ದೂರ ಸಾಗುತ್ತಲೇ ಒಂದು ಪಲ್ಲಕ್ಕಿ ಸಿಕ್ಕಿತು. ಇದು ದುಡ್ಡಿನ ಮುಖ ನೋಡುವ ಸಮಯವಲ್ಲ ಎಂದು, ರಾಮಚಂದ್ರ ಕೂಡಲೇ ಅದನ್ನು ಬಾಡಿಗೆಗೆ ಹಿಡಿದ. ಈಗ ಪ್ರಯಾಣ ಸಲೀಸಾಯಿತು. ಅಂದೂ ಶಾರದೆಗೆ ಜ್ವರ ಸ್ವಲ್ಪ ಬಂದಿತು. ಆದರೆ ಅದು ಅಷ್ಟು ತೀವ್ರವಾಗಿಲ್ಲದ್ದರಿಂದ ಆಕೆ ಅದನ್ನು ಹೇಳಿಕೊಳ್ಳಲೇ ಇಲ್ಲ. ದಿನವಿಡೀ ಪ್ರಯಾಣ ಮಾಡಿ ಕಲ್ಕತ್ತಕ್ಕೆ ಬಂದರು. ಬಳಿಕ ದೋಣಿಯಲ್ಲಿ ನದಿಯನ್ನು ದಾಟಿ, ರಾತ್ರಿ ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ದಕ್ಷಿಣೇಶ್ವರವನ್ನು ತಲುಪಿದರು.

ಶಾರದಾದೇವಿಯವರು ದೋಣಿಯಿಂದಿಳಿದು ಬರುವುದನ್ನು ದೂರದಿಂದಲೇ ಕಂಡ ಶ್ರೀರಾಮಕೃಷ್ಣರು ಹೃದಯುನನ್ನು ಕೂಗಿ ಕರೆದರು: "ಹೃದೇ! ನೋಡಲ್ಲಿ, ಅವಳು ಬರುತ್ತಿದ್ದಾಳೆ! ಗಂಟೆ ಎಷ್ಟಾಯಿತು? ಸದ್ಯ, ರಾಹುಕಾಲ ಕಳೆದಿದೆಯೆಂದು ಭಾವಿಸುತ್ತೇನೆ . . . ! ಇದು ಅವಳ ಮೊದಲ ಆಗಮನ." ಈ ಮಾತು ಶಾರದಾದೇವಿಯವರ ಕಿವಿಗೂ ಬಿತ್ತು. ಆ ದನಿಯಲ್ಲಿ ಅದೆಂಥ ಕಳಕಳಿ, ಪ್ರೀತಿ! ಅದನ್ನು ಕೇಳಿದೊಡನೆಯೇ ಅವರ ಹೃದಯ ಅನಿರ್ವಚನೀಯ ಆನಂದದಿಂದ ಹಿಗ್ಗಿತು.

ಬಂದವರಾರೆಂದು ನೋಡಿದ ಹೃದಯು ಹೇಳಿದ: "ಮಾವಯ್ಯ, ಏನೂ ಚಿಂತೆಯಿಲ್ಲ. ರಾಹುಕಾಲ ಕಳೆದು ಆಗಲೇ ಸ್ವಲ್ಪ ಹೊತ್ತಾಯಿತು."

ಶಾರದಾದೇವಿಯವರನ್ನು ಹೃದಯು ನೇರವಾಗಿ ಶ್ರೀರಾಮಕೃಷ್ಣರ ಕೋಣೆಗೆ ಕರೆತಂದ. ಶ್ರೀರಾಮಕೃಷ್ಣರು ಅತ್ಯಂತ ಪ್ರೀತಿಯಿಂದ ನುಡಿದರು:

"ಆಹ್, ಇಷ್ಟು ದಿನಗಳ ಮೇಲಾದರೂ ಬಂದೆಯಲ್ಲ! ಒಳ್ಳೆಯದು; ಬಹಳ ಒಳ್ಳೆಯದು."

ಶಾರದಾದೇವಿಯವರು ಪತಿಗೆ ನಮಸ್ಕರಿಸಿ ಮೌನವಾಗಿ ತಲೆತಗ್ಗಿಸಿ ಕುಳಿತರು.

ಶ್ರೀರಾಮಕೃಷ್ಣರು: "ಸೌಖ್ಯವಾಗಿದ್ದೀಯಾ? ಮನೆಯಲ್ಲಿ ಎಲ್ಲರೂ ಆರೋಗ್ಯವಷ್ಟೆ? . . . ಓ ಇದೇನು? ಬಹಳ ಬಳಲಿದಂತೆ ಕಾಣುವೆ! ಏಕೆ, ಪ್ರಯಾಣದಿಂದ ಬಹಳ ಆಯಾಸವಾಯಿತೆ?"

ಶಾರದಾದೇವಿಯವರು ತಾವು ದಾರಿಯಲ್ಲಿ ಜ್ವರದಿಂದ ನರಳಿದ ವಿಷಯವನ್ನು ಸಂಕ್ಷೇಪವಾಗಿ ತಿಳಿಸಿದರು. ಅದನ್ನು ಕೇಳುತ್ತ ಶ್ರೀರಾಮಕೃಷ್ಣರಿಗಾದ ವ್ಯಥೆ ಅಷ್ಟಿಷ್ಟಲ್ಲ. ವಿಷಾದದಿಂದ ಮತ್ತೆಮತ್ತೆ ಎಂದರು:

"ಅಯ್ಯೋ, ನೀನು ಈಗ ಬರುತ್ತಿದ್ದೀಯಲ್ಲ! ನನ್ನ ಮಥುರ ಇರುವಾಗ ಬರಬೇಕಿತ್ತು ನೀನು. ಅವನಿದ್ದಿದ್ದರೆ, ಈಗ ನಿನ್ನ ಆರೈಕೆಗೆ ಬೇಕಾದ್ದನ್ನೆಲ್ಲ ಮಾಡಿಬಿಡುತ್ತಿದ್ದ. ಅವನು ತೀರಿಹೋದ್ದರಿಂದ ನನ್ನ ಬಲಗೈಯೇ ಬಿದ್ದುಹೋದಂತಾಗಿಬಿಟ್ಟಿದೆ. ಏನು ಮಾಡಲೀ . . . "

ಶ್ರೀರಾಮಕೃಷ್ಣರ ಅಮೃತೋಪಮ ಮಾತನ್ನು ಕೇಳಿಯೇ ಶಾರದಾದೇವಿಯವರಿಗೆ ಕಾಯಿಲೆ-ಆಯಾಸವೆಲ್ಲ ಪರಿಹಾರವಾದಂತೆನಿಸಿತು. ಧನ್ಯತಾಭಾವ ಮನಸ್ಸನ್ನಾವರಿಸಿತು.

ಶ್ರೀರಾಮಕೃಷ್ಣರು ಪತ್ನಿಗಾಗಿ ತಮ್ಮ ಕೋಣೆಯಲ್ಲೇ ಬೆಚ್ಚನೆ ಹಾಸಿಗೆಯ ವ್ಯವಸ್ಥೆ ಮಾಡಿಸಿದರು. ಮರುದಿನವೇ ಒಬ್ಬ ವೈದ್ಯರನ್ನು ಕರೆಯಿಸಿ ತೋರಿಸಿದರು. ತಾವೇ ಸ್ವತಃ ನಿಂತು, ಮಡದಿಯ ಔಷಧಿ-ಪಥ್ಯಾದಿ ಸಕಲ ವಿಷಯಗಳಿಗೂ ಗಮನ ಕೊಟ್ಟರು. ಮೂರ್‍ನಾಲ್ಕು ದಿನಗಳಲ್ಲೇ ಶಾರದಾದೇವಿಯವರು ಸಂಪೂರ್ಣ ಸ್ವಸ್ಥರಾದರು. ಬಳಿಕ ಅವರು, ಉತ್ತರ ದಿಕ್ಕಿನ ನಹಬತ್ ಖಾನೆಯಲ್ಲಿ (ವಾದ್ಯಕುಟೀರ) ಅತ್ತೆ ಚಂದ್ರಮಣಿ ದೇವಿಯೊಂದಿಗೆ ಇರತೊಡಗಿದರು.

ಜ್ವರ ಗುಣವಾದ ವಿಷಯು ಹಾಗಿರಲಿ; ಶಾರದಾದೇವಿಯವರ ಮನಸ್ಸಿಗಾಗಿರುವ ನೆಮ್ಮದಿ, ಆನಂದ, ಶಾಂತಿ ಎಷ್ಟೆಂದು ಹೇಳೋಣ! ಅವರು ಆಲೋಚಿಸಿದರು: 'ಸುಮ್ಮನೆ ಆ ತಿಳಿವಳಿಕೆಯಿಲ್ಲದ ಜನರ ಮಾತನ್ನು ಕೇಳಿಕೊಂಡು, ಅದು ನಿಜವಿರ ಬಹುದೇ ಎಂದು ಚಿಂತಿಸಿ ತಲೆ ಕೆಡಿಸಿಕೊಂಡೆನಲ್ಲ ನಾನು! ಈಗಲೂ ಇವರು, ನಾನು ನಾಲ್ಕುವರ್ಷದ ಕೆಳಗೆ ಕಂಡಿದ್ದ ದೇವತೆಯೇ ಆಗಿದ್ದಾರೆ! ಇವರನ್ನು ಪಡೆದ ನಾನೇ ಮಹಾಭಾಗ್ಯವತಿ!' ಅಂತೂ, ಇತರರ ಮಾತುಗಳಿಂದ ಅವರ ಮನಸ್ಸಿನಲ್ಲಿ ಕವಿದಿದ್ದ ಮೋಡವೀಗ ಶ್ರೀರಾಮಕೃಷ್ಣರ ಪ್ರೇಮಪೂರ್ಣ ಆರೈಕೆಯೆಂಬ ಗಾಳಿಯಿಂದ ಚದರಿ ಹೋಯಿತು; ಶ್ರದ್ಧೆಯ ಸೂರ್ಯ ಮತ್ತೆ ಬೆಳಗತೊಡಗಿದ.

ಈಗ ಶಾರದಾದೇವಿಯವರು ತಮ್ಮ ಪತಿದೇವನ ಹಾಗೂ ವೃದ್ಧೆ ಚಂದ್ರಮಣಿಯ ಹೃತ್ಪೂರ್ವಕ ಸೇವೆಯಲ್ಲಿ ನಿರತರಾದರು. ಚಂದ್ರಮಣಿಗಂತೂ ಸೊಸೆಯೆಂದರೆ ಪಂಚ ಪ್ರಾಣ. ಮಗಳೀಗ ಪತಿಸಾನ್ನಿಧ್ಯದಲ್ಲಿ ಆನಂದದಿಂದಿರುವುದನ್ನು ಕಂಡು ರಾಮಚಂದ್ರ ಮುಖರ್ಜಿಗೂ ಸಂತೋಷ. ಕೆಲಕಾಲ ದಕ್ಷಿಣೇಶ್ವರದಲ್ಲಿದ್ದು ಆತ ನಿರಾಳ ಹೃದಯ ದಿಂದ ಊರಿಗೆ ಮರಳಿದ.

ದಕ್ಷಿಣೇಶ್ವರಕ್ಕೆ ಶಾರದಾದೇವಿಯವರ ಆಗಮನದ ಬಳಿಕ ಈಗ ಶ್ರೀರಾಮಕೃಷ್ಣರು ಪುನಃ ತಮ್ಮ ಗೃಹಸ್ಥಧರ್ಮ ಪರಿಪಾಲನೆಯಲ್ಲಿ ತೊಡಗಿದರು. ಅವರು ಹಿಂದೆ ಕಾಮಾರಪುಕುರದಲ್ಲಿ ತಮ್ಮ ಪತ್ನಿಯೊಡನೆ ನಡೆಸಿದ ಗೃಹಸ್ಥಜೀವನದ ಪರಿಯನ್ನು ನೋಡಿದ್ದೇವೆ. ನಿರ್ವಿಕಲ್ಪಸಮಾಧಿಯ ಪರಮಾನಂದವನ್ನನುಭವಿಸಿದ ಶ್ರೀರಾಮಕೃಷ್ಣರ ಪಾಲಿಗೆ ಗೃಹಸ್ಥಧರ್ಮಕ್ಕೇನರ್ಥ? ಆದರೆ ಅವರಲ್ಲಿ ಅನ್ಯಾದೃಶ ದಾಂಪತ್ಯದ ಮಾದರಿ ಯೊಂದು ಅರಳಿ ಬಂದುದನ್ನು ನಾವು ನೋಡಲಿದ್ದೇವೆ.

ಈಗ ಇಲ್ಲಿ ಒಂದು ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಬೇಕಾಗಿದೆ. ಶ್ರೀರಾಮ ಕೃಷ್ಣರು ತಮ್ಮ ಸತಿಯನ್ನು ಇಷ್ಟು ದಿನಗಳವರೆಗೆ, ತಾವಾಗಿಯೇ ಕರೆಸಿಕೊಳ್ಳಲಿಲ್ಲವೇಕೆ? ತಾವು ಗೃಹಸ್ಥರಾಗಿ ನಿರ್ವಹಿಸಬೇಕಾದ ಕರ್ತವ್ಯಗಳನ್ನು ಈಗಾಗಲೇ ಪ್ರಾರಂಭಿಸಬಹು ದಾಗಿತ್ತಲ್ಲ, ಹಾಗೇಕೆ ಮಾಡಲಿಲ್ಲ? ನಿಜ, ಸಾಮಾನ್ಯ ಜನರಾಗಿದ್ದರೆ ಹಾಗೆ ತಡ ಮಾಡುವ ಸಂಭವವಿರಲಿಲ್ಲ. ತಡ ಮಾಡಿದ್ದರೇ ಅಸಹಜವಾಗುತ್ತಿತ್ತು. ಆದರೆ, ಶ್ರೀರಾಮಕೃಷ್ಣರು ಆ ಶ್ರೇಣಿಗೆ ಸೇರಿದವರಲ್ಲ ಎಂಬುದನ್ನು ನೆನಪಿಟ್ಟಿರಬೇಕು. ಯಾರು ಭಗವದಿಚ್ಛೆಗೆ ತಮ್ಮನ್ನು ಸಂಪೂರ್ಣ ಶರಣಾಗಿಸಿಕೊಂಡಿರುತ್ತಾರೋ, ಭಗವದಿಚ್ಛೆ ಯಂತೆಯೇ ತಮ್ಮೆಲ್ಲ ಕೆಲಸಕಾರ್ಯಗಳನ್ನು ಮಾಡುವ ಅಭ್ಯಾಸವನ್ನು ಬೆಳೆಸಿ ಕೊಂಡಿರುತ್ತಾರೋ ಅಂಥವರ ಕಾರ್ಯವಿಧಾನವೇ ಬೇರೆ. ಅವರೆಂದಿಗೂ ಒಂದು ಯೋಜನೆಯನ್ನು ಹೂಡಿ, ಅದರ ಪ್ರಕಾರ ಮುಂದುವರಿಯಲು ಪ್ರಯತ್ನಿಸುವುದಿಲ್ಲ. ಅವರು ಹಾಗೆ ಮಾಡಲಾರರು. ಯಾವುದೇ ಕಾರ್ಯದಲ್ಲಿ ತೊಡಗಿದಾಗ ಅವರು ಸಾಮಾನ್ಯರಂತೆ ಅಲ್ಪ ಪ್ರಮಾಣದ್ದಾದ ವೈಯಕ್ತಿಕ ಬುದ್ಧಿಶಕ್ತಿಯನ್ನು ಅವಲಂಬಿಸುವು ದಿಲ್ಲ. ಬದಲಾಗಿ, ಭಗವಂತನ ವಿರಾಟ್ ಬುದ್ಧಿಯ ಸಹಾಯವನ್ನು, ಮಾರ್ಗದರ್ಶನ ವನ್ನು ಪಡೆದುಕೊಂಡು ಅದರಂತೆ ನಡೆಯುತ್ತಾರೆ. ಯಾವುದನ್ನೂ ತಾವಾಗಿಯೇ ಮಾಡಲು ಹೊರಡುವುದಿಲ್ಲ; ಆದರೆ ಸಂದರ್ಭವೊದಗಿದಾಗ, ಮಾಡಬೇಕಾದ್ದನ್ನು ಮಾಡದೆಯಿರುವುದಿಲ್ಲ—ಇದು ಅಂಥವರ ಲಕ್ಷಣ. ಶ್ರೀರಾಮಕೃಷ್ಣರು ಮಾಡಿ ದ್ದಾದರೂ ಹೀಗೆಯೇ. ತಮ್ಮ ಬ್ರಹ್ಮಜ್ಞಾನದ ಪರೀಕ್ಷೆಯನ್ನಾಗಲಿ, ಗೃಹಸ್ಥಧರ್ಮದ

ಅನುಷ್ಠಾನವನ್ನಾಗಲಿ ನಡೆಸಲು ತಾವಾಗಿಯೇ ಮುಂದಾಗಲಿಲ್ಲ. ಆದರೆ ಪತ್ನಿ ಶಾರದಾ ದೇವಿ ತಮ್ಮ ಬಳಿಗೆ ಬರುತ್ತಲೇ, ತಮ್ಮ ಕರ್ತವ್ಯವನ್ನು ಹೃತ್ಪೂರ್ವಕವಾಗಿ ಸಂತೋಷ ದಿಂದ ನೆರವೇರಿಸಲು ಉದ್ಯುಕ್ತರಾದರು.

ಶ್ರೀರಾಮಕೃಷ್ಣರು ಹಿಂದೆ ಕಾಮಾರಪುಕುರದಲ್ಲಿ ತಮ್ಮ ಪತ್ನಿಗೆ ಯಾವ ಬಗೆಯ ಜೀವನಶಿಕ್ಷಣವನ್ನು ನೀಡತೊಡಗಿದ್ದರೋ ಅದನ್ನೇ ಈಗ ಮುಂದುವರಿಸಿದರು. ಸಣ್ಣ ಪುಟ್ಟ ಕೆಲಸಕಾರ್ಯಗಳಿಂದ ಹಿಡಿದು, ಜಪ ಧ್ಯಾನ ಸಮಾಧಿ ಬ್ರಹ್ಮಜ್ಞಾನದವರೆಗೆ ಸಕಲವಿಷಯಗಳನ್ನೂ ವಿವರವಾಗಿ ತಿಳಿಯಪಡಿಸಿದರು. ಮಾನವಜೀವನದ ಉದ್ದೇಶ-ಕರ್ತವ್ಯಗಳನ್ನು ಬೋಧಿಸಿದರು. ಆದರೆ ಹೀಗೆಂದಾಕ್ಷಣ, ಶಾರದಾದೇವಿಯವರಿಗೆ ಉಪದೇಶದ ಸುರಿಮಳೆಯೇ ಆಗುತ್ತಿತ್ತೆಂದೋ, ಅಥವಾ ಅಲ್ಲೊಂದು ಗಂಭೀರವಾದ ವಾತಾವರಣ ನಿರ್ಮಾಣವಾಗಿತ್ತೆಂದೋ ಊಹಿಸಬಾರದು. ನಿಜಕ್ಕೂ ಅದೊಂದು ಅತ್ಯಂತ ಮಧುರವಾದ ಅಲೌಕಿಕ ಬಾಂಧವ್ಯ. ಅಂಥದೊಂದು ಸಂಬಂಧವನ್ನು ಊಹಿಸುವುದೇ ಕಷ್ಟ. ಶ್ರೀರಾಮಕೃಷ್ಣರು ತಮ್ಮ ಪತ್ನಿಯ ಅರ್ಹತೆ, ಅಗತ್ಯಗಳನ್ನರಿತು ಕೊಂಡು, ಸಂದರ್ಭಾನುಸಾರವಾಗಿ ಸೂಚನೆ-ಬೋಧನೆಗಳನ್ನು ನೀಡುತ್ತಿದ್ದರು. ಒಂದು ದೃಷ್ಟಿಯಲ್ಲಿ ಶಾರದಾದೇವಿಯವರೇ ಶ್ರೀರಾಮಕೃಷ್ಣರ ಪ್ರಥಮ ಶಿಷ್ಯರಲ್ಲೊಬ್ಬರೆನ್ನ ಬಹುದು. ಸೂಕ್ಷ್ಮಮತಿಗಳಾದ ಶಾರದಾದೇವಿಯವರು ಕೂಡ ತಮ್ಮ ಪತಿದೇವನ ಬೋಧನೆಗಳ ಮರ್ಮವನ್ನು ತಕ್ಷಣ ಗ್ರಹಿಸಿ ಅದರಂತೆ ನಡೆಯುತ್ತಿದ್ದರು. ಅಲ್ಲದೆ ಶ್ರೀರಾಮಕೃಷ್ಣರಾದರೂ ಕೇವಲ ಉಪದೇಶ ಕೊಟ್ಟು ಸುಮ್ಮನಾಗುವ ಸ್ವಭಾವದವ ರಲ್ಲ. ತಮ್ಮ ಬೋಧನೆ ಎಷ್ಟರಮಟ್ಟಿಗೆ ಆಚರಣೆಗೆ ಬಂದಿದೆ ಎಂಬುದನ್ನು ಕಣ್ಣಲ್ಲಿ ಕಣ್ಣಿಟ್ಟು ಗಮನಿಸುತ್ತಿದ್ದರು. ಎಲ್ಲಿಯಾದರೂ ಲೋಪದೋಷಗಳು ಕಂಡುಬಂದರೆ ಆಗಿಂದಾಗಲೇ ಅದನ್ನು ಸರಿಪಡಿಸುತ್ತಿದ್ದರು.

ಶ್ರೀರಾಮಕೃಷ್ಣರು ಸಂದರ್ಭವೊದಗಿದಾಗಲೆಲ್ಲ ತಮ್ಮನ್ನೂ ಕೂಡ ಇದೇ ಬಗೆಯ ಕಠಿಣ ಪರೀಕ್ಷೆಗೆ ಒಳಪಡಿಸಿ ನೋಡಿಕೊಳ್ಳದಿರುತ್ತಿರಲಿಲ್ಲ. ಪುರುಷರಾದರೆ ಸ್ತ್ರೀಯರಿಂದ, ಸ್ತ್ರೀಯರಾದರೆ ಪುರುಷರಿಂದ ದೂರವಿದ್ದು ಮನಶ್ಶುದ್ಧಿಯನ್ನು ಸಿದ್ಧಿಸಿಕೊಂಡಿದ್ದರೆ ಅಂಥವರು ಉತ್ತಮ ಸಾಧಕರೆಂಬುದರಲ್ಲಿ ಸಂಶಯವಿಲ್ಲ; ಆದರೂ ಬ್ರಹ್ಮಜ್ಞಾನ ಮಾತ್ರ ಅವರಿಂದ ಬಹಳ ದೂರವೇ. ಏಕೆಂದರೆ ನಿಜವಾದ ಬ್ರಹ್ಮಜ್ಞಾನಿಗಳು ಸ್ತ್ರೀ ಪುರುಷರಲ್ಲಿ ಭೇದ ಕಾಣಲಾರರು. ಅವರಲ್ಲಿ ಕಾಣಬರುವ ಪರಿಶುದ್ಧ ವ್ಯವಹಾರವು ಕೇವಲ ನೈತಿಕ ಪ್ರಜ್ಞೆಯಿಂದ ಉಂಟಾದುದಲ್ಲ. ಅದು ಆತ್ಮೈಕ್ಯಭಾವದ ಮಹಾಫಲ. ಶ್ರೀರಾಮಕೃಷ್ಣರು ತಮಗೆ ಸಿದ್ಧಿಸಿದ ಪರಿಶುದ್ಧ ಮನಸ್ಥಿತಿಯನ್ನು ಪರೀಕ್ಷೆ ಮಾಡಿ ನೋಡಿಕೊಳ್ಳಲು, ಈಗ ಒದಗಿದ ಸತಿಸಾನ್ನಿಧ್ಯವನ್ನು ಒಂದು ಸದವಕಾಶವೆಂದು ಭಾವಿಸಿದರು. ಅವರು ಸಾಮಾನ್ಯ ಸಾಧಕರಂತೆ ಮಂದಗಾಮಿಗಳಲ್ಲ. ಮನಸ್ಸಿಗೆ ಒಂದು ಆಲೋಚನೆ ಬಂದಿತೆಂದರೆ, ತಕ್ಷಣ ಅದನ್ನು ಪ್ರಯೋಗ ಮಾಡಿ ನೋಡಿಯೇ ಬಿಡು ವವರು. ಸರಿ; ಈಗ ಪತ್ನಿಗೆ ಮನಸ್ತೃಪ್ತಿಯಾಗುವಷ್ಟು ತಮ್ಮ ವೈಯಕ್ತಿಕ ಸೇವೆ ಮಾಡಲು ಅವಕಾಶ ಕೊಟ್ಟರು. ಅಷ್ಟೇ ಅಲ್ಲ; ಅವರಿಗೆ ತಮ್ಮ ಕೋಣೆಯಲ್ಲಿಯೇ ತಮ್ಮ ಹಾಸಿಗೆಯ ಮೇಲೆಯೇ ಮಲಗಿಕೊಳ್ಳಲು ಅವಕಾಶ ಕೊಟ್ಟರು. ಯುವತಪಸ್ವಿ ಯೊರ್ವನ ಪಾಲಿಗೆ ಇದು ಅಗ್ನಿಪರೀಕ್ಷೆಗಿಂತಲೂ ಅಧಿಕ. ಆದರೆ ಶ್ರೀರಾಮಕೃಷ್ಣರಿಗಲ್ಲ. ಅವರ ವಿವೇಕಪೂರ್ಣ ಬುದ್ಧಿ ಈ ಭುವನಮೋಹಿನೀ ಮಾಯೆಯೊಡ್ಡುವ ಬಲೆಯಲ್ಲಿ

ಸಿಕ್ಕಿಕೊಳ್ಳಲಾರದು.

ಒಂದು ದಿನ ತಮ್ಮ ಮಗ್ಗುಲಲ್ಲಿ ಮಲಗಿರುವ ಸತಿಯನ್ನು ಕಂಡು ಶ್ರೀರಾಮಕೃಷ್ಣರು ತಮ್ಮಲ್ಲಿಯೇ ವಿವೇಚಿಸುತ್ತ ಮನಸ್ಸಿಗೆ ಹೇಳಿಕೊಂಡರು: 'ಓ ಮನಸ್ಸೇ, ನೋಡು, ಹೆಣ್ಣಿನ ದೇಹ ಎನ್ನುವುದು ಇದಕ್ಕೇ. ಜಗದ ಜನರು ಪರಮ ಭೋಗದ ವಸ್ತುವೆಂದು ಭಾವಿಸಿ ಚಪಲಚಿತ್ತರಾಗಿ ಧಾವಿಸುವುದು ಇದರ ಹಿಂದೆಯೇ. ಆದರೆ ಇದನ್ನು ಭೋಗಿಸಹೊರಟರೆ ದೇಹಬುದ್ಧಿಯ ಬಲೆಯಲ್ಲೇ ಬಿದ್ದಿರಬೇಕಾಗುತ್ತದೆ. ಸತ್ಯಜ್ಞಾನಾನಂದಸ್ವರೂಪನಾದ ಭಗವಂತನನ್ನು ಎಂದಿಗೂ ಪಡೆಯಲಾಗುವುದಿಲ್ಲ. ಈಗ ನೀ ಹೇಳು, ಓ ಮನಸ್ಸೇ, ನಿನಗೆ ಈ ಶರೀರಸುಖ ಬೇಕೋ, ಭಗವಂತ ಬೇಕೋ? ನಿನ್ನನ್ನು ನೀನೇ ವಂಚಿಸಿಕೊಳ್ಳಬೇಡ. ನಿನಗೆ ಹೆಣ್ಣಿನ ದೇಹ ಬೇಕಿದ್ದರೆ ಇಗೋ, ಇಲ್ಲಿಯೇ ಇದೆ. ಯಾವ ಶಂಕೆಯೂ ಇಲ್ಲದೆ ನೀನಿದನ್ನು ಅನುಭವಿಸಬಹುದು.'

ಹೀಗೆ ವಿವೇಚಿಸುತ್ತ ಅವರು ಮಡದಿಯ ಮೈಯನ್ನು ಇನ್ನೇನು ಮುಟ್ಟಬೇಕು—ಅಷ್ಟರಲ್ಲಿ ಅವರ ಮನಸ್ಸು ಎಂಥ ವೇಗದಿಂದ ಹಿಮ್ಮೆಟ್ಟಿತೆಂದರೆ, ಅದು ಅತ್ಯಂತ ಗಾಢ ಸಮಾಧಿಸ್ಥಿತಿಗೇರಿಬಿಟ್ಟಿತು! ಆ ರಾತ್ರಿಯೆಲ್ಲ ಅವರು ಸಹಜಸ್ಥಿತಿಗೆ ಮರಳಲೇ ಇಲ್ಲ. ಮರುದಿನ ಹೃದಯ ಬಂದು ಬಹು ಹೊತ್ತಿನವರೆಗೆ ಅವರ ಕಿವಿಯಲ್ಲಿ ಭಗವನ್ನಾಮವನ್ನು ಉಚ್ಚರಿಸಿದ ಮೇಲಷ್ಟೇ ಪ್ರಜ್ಞೆ ಹಿಂದಿರುಗಿತು.

ಈ ಒಂದು ಅದ್ಭುತ ಘಟನೆಯಿಂದ ಅವರಿರ್ವರು ಯಾವ ಬಗೆಯ ದಾಂಪತ್ಯ ಜೀವನವನ್ನು ನಡೆಸಿದರೆಂಬುದರ ಕಲ್ಪನೆ ಮೂಡುತ್ತದೆ. ಶ್ರೀರಾಮಕೃಷ್ಣರ ವಿಶಿಷ್ಟ ಗುಣಕ್ಕೆ ತಕ್ಕಂತೆ ನಡೆದ ಇನ್ನೊಂದು ಘಟನೆಯನ್ನು ಹೇಳಿದರೆ ಈ ವಿಲಕ್ಷಣ ವೈವಾಹಿಕ ಜೀವನದ ವರ್ಣನೆ ಇನ್ನಷ್ಟು ವಿಶದವಾಗುತ್ತದೆ. ಒಂದು ದಿನ ಶ್ರೀರಾಮಕೃಷ್ಣರು ಮಲಗಿಕೊಂಡಿದ್ದಾರೆ; ಶಾರದಾದೇವಿಯವರು ಅವರ ಕಾಲೊತ್ತುತ್ತ ಕುಳಿತಿದ್ದಾರೆ. ಆಗ ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರಿಗೆ ಅವರ ಹರೆಯದ ಮಡದಿಯಿಂದ ನೇರವಾಗಿ ಒಂದು ಪ್ರಶ್ನೆ ಬಂದಿತು: "ನಾನು ನಿಮಗೆ ಹೇಗೆ ಕಾಣುತ್ತಿದ್ದೇನೆ?"

ಯುವಕನಾದ ಪತಿಯನ್ನು ಪ್ರಾಯಭರಿತಳಾದ ಸತಿ ಈ ಪ್ರಶ್ನೆ ಕೇಳುತ್ತಿದ್ದಾಳೆ. ಅದಕ್ಕೆ ಶ್ರೀರಾಮಕೃಷ್ಣರು ಕೊಟ್ಟ ಉತ್ತರ ಜಗತ್ತಿನ ಆಧ್ಯಾತ್ಮಿಕ ಇತಿಹಾಸದಲ್ಲೇ ಅಮರವಾಗಿ ಉಳಿಯುವಂಥದು. ಅವರೆನ್ನುತ್ತಾರೆ: "ಮಂದಿರದಲ್ಲಿ ಪೂಜಿಸಲ್ಪಡುತ್ತಿರುವ ಜಗನ್ಮಾತೆಯೇ ವಾದ್ಯಕುಟೀರದಲ್ಲಿ ವಾಸಿಸುತ್ತಿರುವ ನನ್ನ ಜನ್ಮದಾತೆ; ಮತ್ತು ಅವಳೇ ಈಗ ನನ್ನ ಕಾಲುಗಳನ್ನು ಒತ್ತುತ್ತ ಕುಳಿತಿದ್ದಾಳೆ. ನಿಜಕ್ಕೂ ನೀನು ನನಗೆ ಯಾವಾಗಲೂ ಆನಂದಮಯಿ ಜಗನ್ಮಾತೆಯೇ ಮೈದಳೆದು ಬಂದಿರುವಂತೆ ಕಾಣುತ್ತಿರುವೆ."

ಶ್ರೀರಾಮಕೃಷ್ಣ-ಶಾರದಾದೇವಿಯರ ಈ ಬಗೆಯ ಅದ್ಭುತವಾದ ಸಂಯಮದ ಜೀವನ ಹೀಗೆಯೇ ಮುಂದುವರಿಯಿತು. ಹೆಚ್ಚಿನ ರಾತ್ರಿಗಳೆಲ್ಲ ಶ್ರೀರಾಮಕೃಷ್ಣರು ಸಮಾಧಿಯಲ್ಲೇ ಇದ್ದುಬಿಡುತ್ತಿದ್ದರು. ಆಗಾಗ ಬಾಹ್ಯಭೂಮಿಕೆಗೆ ಇಳಿದು ಬಂದರೂ ಅವರ ಮನಸ್ಸು ಎಷ್ಟು ಉನ್ನತಾವಸ್ಥೆಯಲ್ಲಿರುತ್ತಿತ್ತೆಂದರೆ, ಒಂದು ಕ್ಷಣವಾದರೂ ಅವರಲ್ಲಿ ದೇಹಬುದ್ಧಿ ಹುಟ್ಟಲು ಸಾಧ್ಯವಿರಲಿಲ್ಲ. ಹೀಗೆ ದಿನದ ಮೇಲೆ ದಿನ, ತಿಂಗಳ ಮೇಲೆ ತಿಂಗಳು ಉರುಳಿ ಒಂದು ವರ್ಷಕ್ಕಿಂತ ಹೆಚ್ಚಿನ ಕಾಲ ಕಳೆಯಿತು. ಆದರೆ ಆ ಅದ್ಭುತ ದಂಪತಿಗಳ ಸಂಯಮದ ಕಟ್ಟೆ ಮಾತ್ರ ಒಡೆದು ಹೋಗಲಿಲ್ಲ. ಮರೆತಾದರೂ ಅವರ ಮನಸ್ಸುಗಳು ದೇಹಸುಖವನ್ನು ಬಯಸಲಿಲ್ಲ.

ಶಾರದಾದೇವಿಯವರು ವಿವಾಹಿತರಾದರೂ ಬಂಜೆಯಾಗಿ ಉಳಿಯಬೇಕಾಯಿತಲ್ಲ ಎಂದು ಜನ ಸಹಾನುಭೂತಿ ತೋರಿದ್ದುಂಟು. ಏಕೆಂದರೆ ಸ್ವಯಂ ಪತಿಯೇ ತನ್ನ ಪತ್ನಿಯನ್ನು ತಾಯಿಯಂತೆ ಕಂಡರೆ ಇನ್ನು ಅಲ್ಲಿ ಸಂತಾನವಾಗುವ ಸಂಭವವೆಲ್ಲಿ? ಅಲ್ಲದೆ ಶಾರದಾದೇವಿಯವರ ವೈವಾಹಿಕಜೀವನದ ಸೌಖ್ಯಕ್ಕೆ, ಅದಕ್ಕೂ ಮಿಗಿಲಾಗಿ ಸ್ತ್ರೀಯರ ಹೆಮ್ಮೆಯ ವಿಷಯವಾದ ತಾಯ್ತನದ ಸೌಭಾಗ್ಯಕ್ಕೆ ಪತಿಯ ಮಹಿಮೆಯೇ 'ತಡೆ'ಯಾಗಿ ನಿಂತಿದೆಯಲ್ಲ! ಶಾರದಾದೇವಿಯವರ ತಾಯಿ ಶ್ಯಾಮಸುಂದರಿಯೂ ಮಗಳ ಸ್ಥಿತಿಗಾಗಿ ಮರುಗಿದ್ದುಂಟು. ಅವಳೊಮ್ಮೆ ಶ್ರೀರಾಮಕೃಷ್ಣರಿಗೆ ಕೇಳುವಂತೆಯೇ ಗೊಣಗಿಕೊಂಡಳು:

"ಅಂತೂ, ನನ್ನ ಶಾರದೆಯನ್ನು ಹುಚ್ಚನಿಗೆ ಕೊಟ್ಟು ಮದುವೆ ಮಾಡಿದ ಹಾಗಾಯಿತು. ಅವಳಿಗೆ ದಾಂಪತ್ಯಜೀವನವೆಂದರೆ ಏನೆಂದೇ ತಿಳಿಯುವುದಕ್ಕಿಲ್ಲವಾಯಿತು. 'ಅಮ್ಮಾ' ಎಂದು ಬಾಯ್ತುಂಬ ಕರೆಸಿಕೊಳ್ಳುವ ಸೌಭಾಗ್ಯ ಅವಳ ಪಾಲಿಗಿಲ್ಲ."

ಆಗ ಶ್ರೀರಾಮಕೃಷ್ಣರು ಆಕೆಗೆ ಸಮಾಧಾನ ಹೇಳಿದರು:

"ನೋಡಿ ಅತ್ತೆ, ಸುಮ್ಮನೆ ಚಿಂತಿಸಬೇಡಿ. ಮುಂದೆ ನಿಮ್ಮ ಮಗಳನ್ನು 'ಅಮ್ಮಾ ಅಮ್ಮಾ' ಎಂದು ಕರೆಯುವ ಎಷ್ಟೊಂದು ಜನ ಬರುತ್ತಾರೆಂದರೆ, ಹಗಲೂ ರಾತ್ರಿ 'ಅಮ್ಮಾ, ಅಮ್ಮಾ' ಎಂದು ಕರೆಯಿಸಿಕೊಂಡು ಸುಸ್ತಾಗಿಬಿಡಬೇಕು!"

ಆದರೆ ಈ ಮಾತಿನಿಂದ ಆಕೆಗೆ ಎಷ್ಟರಮಟ್ಟಿಗೆ ಸಮಾಧಾನವಾಯಿತೋ ಗೊತ್ತಿಲ್ಲ. ಅಂತೂ ಶಾರದಾದೇವಿಯವರಿಗೆ ಮಕ್ಕಳಿಲ್ಲವೆಂದು ಅವರ ತಾಯಿ, ಬಂಧುಗಳು, ನೆರೆಹೊರೆಯವರು ಎಲ್ಲರೂ ಮರುಗಿದರು. ಆದರೆ ಸ್ವತಃ ಶಾರದಾದೇವಿಯವರೇ ಮರುಗಲಿಲ್ಲ. ಪತಿಯ ದಿವ್ಯ ಸತ್ಸಂಗದಿಂದ ತಾವು ಪಡೆದ ಭಗವದಾನಂದದ ಪರಿಣಾಮವಾಗಿ, ತಮಗೆ ಮಕ್ಕಳಿಲ್ಲವೆಂದು ಮರುಗಲು ಅವಕಾಶವೇ ಇರಲಿಲ್ಲ. ಅಲ್ಲದೆ ಒಂದು ವೇಳೆ ಅವರೇನಾದರೂ ಇಷ್ಟಪಟ್ಟಿದ್ದರೆ ಶ್ರೀರಾಮಕೃಷ್ಣರನ್ನು ಪ್ರಾಪಂಚಿಕ ಜೀವನಕ್ಕೆ ಎಳೆಯುವ ಸ್ವಾತಂತ್ರ್ಯ ಅವರಿಗಿತ್ತು; ಜಗತ್ತಿನ ಇತರ ಸ್ತ್ರೀಯರಂತೆ ತಾಯಿಯಾಗಬಹುದಿತ್ತು. ಆದರೆ ಅವರ ಮನೋಭಾವ ಅದಾಗಿರಲಿಲ್ಲ. ಒಮ್ಮೆ ಶ್ರೀರಾಮಕೃಷ್ಣರು ಅವರನ್ನು ಕೇಳಿದರು:

"ನೋಡು, ನೀನು ನನ್ನ ಕೈಹಿಡಿದ ಪತ್ನಿ; ನಿನಗೆ ನನ್ನ ಮೇಲೆ ಹಕ್ಕಿದೆ. ನಿನಗೆ ನನ್ನನ್ನು ಪ್ರಾಪಂಚಿಕ ಜೀವನಕ್ಕೆ ಎಳೆಯುವ ಮನಸ್ಸಿದೆಯೇನು?"

ಶಾರದಾದೇವಿಯವರ ಉತ್ತರ ತಕ್ಷಣ ಬಂದಿತು:

"ನಾನೇಕೆ ಹಾಗೆ ಮಾಡಲಿ? ನಾನು ಬಂದಿರುವುದು ನಿಮ್ಮ ಆಧ್ಯಾತ್ಮಿಕ ಜೀವನದಲ್ಲಿ ನೆರವಾಗಲು."

ಎಂಥ ಘನವಾದ ಉತ್ತರ! ಶಾರದಾದೇವಿಯಂಥವರಿಂದ ಮಾತ್ರ ಬರಬಹುದಾದ ದಿವ್ಯ ಉತ್ತರ. ಅದರಲ್ಲಿ ಅಸ್ವಾಭಾವಿಕತೆಯಿರಲಿಲ್ಲ. ಇನ್ನೊಬ್ಬರನ್ನು ಮೆಚ್ಚಿಸಲು ಆಡಿದ ಮಿಥ್ಯಾಚರಣೆಯ ಮಾತೂ ಅವಲ್ಲ. ಅದು ಅವರ ಸ್ವಭಾವಸಹಜವಾದ ಸರಳ

ಉತ್ತರ. ಪತಿಯ ಆದರ್ಶವೇ ಸತಿಯ ಆದರ್ಶ—ಅಂತಹ ಪರಮ ಆದರ್ಶದಿಂದ ಪರಿಪಾಕಗೊಂಡ ಹೃದಯದಿಂದ ಬಂದ ಹಿರಿಯ ಉತ್ತರ.

ತಾವು ಪತಿಯ ಸಾನ್ನಿಧ್ಯದಲ್ಲಿ ಕಳೆದ ಶುಭದಿನಗಳನ್ನು ಸ್ಮರಿಸಿಕೊಂಡು ಮುಂದೆ ಶಾರದಾದೇವಿಯವರು ಹೇಳುತ್ತಾರೆ:

"ಆ ದಿನಗಳಲ್ಲಿ ಶ್ರೀರಾಮಕೃಷ್ಣರು ಎಂಥ ದಿವ್ಯಭಾವದಲ್ಲಿ ಲೀನರಾಗಿರುತ್ತಿದ್ದರು ಎನ್ನುವುದು ವರ್ಣನೆಗೆ ಮೀರಿದ್ದು. ಆನಂದಾತಿಶಯದಿಂದ ಅವರು ಕೆಲವು ಸಲ ನಗುತ್ತಿದ್ದರು, ಕೆಲವು ಸಲ ಅಳುತ್ತಿದ್ದರು. ಇನ್ನು ಕೆಲವು ಸಲ ಸಮಾಧಿಯಲ್ಲೇ ನಿಮಗ್ನರಾಗಿರುತ್ತಿದ್ದರು. ಒಂದೊಂದು ಸಲ ಅವರ ಶರೀರದಲ್ಲಿ ಪ್ರಾಣಸಂಚಾರದ ಲಕ್ಷಣಗಳೊಂದೂ ಕಾಣುತ್ತಿರಲಿಲ್ಲ! ಕೆಲವೊಮ್ಮೆಯಂತೂ ಇಡೀ ರಾತ್ರಿ ಆ ಸ್ಥಿತಿಯಲ್ಲೇ ಇರುತ್ತಿದ್ದರು. ಆ ದಿವ್ಯ ಸನ್ನಿಧಿಯಲ್ಲಿ ನನ್ನ ಶರೀರವಿಡೀ ಕಂಪಿಸುತ್ತಿತ್ತು. ನಾನು ಕಾತರಳಾಗಿ ಬೆಳಗಾಗುವುದನ್ನೇ ಕಾಯುತ್ತ ಕುಳಿತಿರುತ್ತಿದ್ದೆ. ಏಕೆಂದರೆ ನನಗೆ ಆ ದಿನಗಳಲ್ಲಿ ಸಮಾಧಿಯ ವಿಚಾರ ಅಷ್ಟಾಗಿ ಗೊತ್ತಿರಲಿಲ್ಲ. ಒಂದು ರಾತ್ರಿಯಂತೂ ಅವರ ಸಮಾಧಿಸ್ಥಿತಿ ಬಹಳ ಹೊತ್ತಿನವರೆಗೆ ಮುಂದುವರಿಯಿತು. ನಾನು ಭಯಗೊಂಡು ಅಳುತ್ತ ಹೃದಯನಿಗೆ ಹೇಳಿಕಳಿಸಿದೆ. ಅವನು ಬಂದು ಅವರ ಕಿವಿಯಲ್ಲಿ ಭಗವನ್ನಾಮೋಚ್ಚಾರಣೆ ಮಾಡಲಾರಂಭಿಸಿದ. ಸ್ವಲ್ಪ ಹೊತ್ತು ಹೀಗೆಯೇ ಮಾಡಿದ ಮೇಲೆ ಅವರಿಗೆ ಬಾಹ್ಯಪ್ರಜ್ಞೆ ಮರಳಿತು. ಈ ಘಟನೆ ನಡೆದಾಗ ನಾನು ಬಹಳ ಹೆದರಿದ್ದೆ. ಇದು ಶ್ರೀರಾಮಕೃಷ್ಣರಿಗೆ ತಿಳಿದುಬಂತು. ಆಗ ಅವರು, ಯಾವ ಬಗೆಯ ಸಮಾಧಿಯೊದಗಿದಾಗ ಯಾವ ಮಂತ್ರವನ್ನು ಕಿವಿಯಲ್ಲಿ ಉಚ್ಚರಿಸಬೇಕು ಎನ್ನುವುದನ್ನು ನನಗೆ ಕಲಿಸಿಕೊಟ್ಟರು. ಆಮೇಲೆ ನನ್ನ ಭಯ ಕಡಮೆಯಾಯಿತು. ನಾನು ಅವರ ಕಿವಿಯಲ್ಲಿ ಭಗವನ್ನಾಮೋಚ್ಚಾರಣೆ ಮಾಡಿದಾಗ ತಪ್ಪದೆ ಅವರಿಗೆ ಬಾಹ್ಯಪ್ರಜ್ಞೆ ಬಂದುಬಿಡುತ್ತಿತ್ತು. ಹೀಗಿದ್ದರೂ ಕೂಡ ಅವರಿಗೆ ಯಾವಾಗ ಸಮಾಧಿಯುಂಟಾಗುವುದೋ ಎಂಬ ಯೋಚನೆಯಿಂದ ನಾನು ರಾತ್ರಿಯಿಡೀ ಎಚ್ಚರವಾಗಿಯೇ ಇರುತ್ತಿದ್ದೆ. ದಿನಕಳೆದಂತೆ ಅವರಿಗೆ ನನ್ನ ಕಷ್ಟದ ಅರಿವಾಯಿತು. ಅಷ್ಟೊಂದು ದಿನಗಳವರೆಗೆ ಅವರೊಂದಿಗಿದ್ದರೂ ಕೂಡ ಅವರ ಸಮಾಧಿಸ್ವಭಾವಕ್ಕೆ ಹೊಂದಿಕೊಳ್ಳಲು ನನ್ನಿಂದಾಗದೆಹೋಯಿತು. ಆದ್ದರಿಂದ ಅವರು ನನಗೆ ಇನ್ನುಮೇಲೆ ವಾದ್ಯಕುಟೀರದಲ್ಲಿಯೇ ಮಲಗುವಂತೆ ಹೇಳಿದರು."

ಶ್ರೀರಾಮಕೃಷ್ಣರದು ಪರಿಪೂರ್ಣವಾದ ದಿವ್ಯ ಜೀವನ. ಇದರಲ್ಲಿ ಅವರ ವೈವಾಹಿಕ ಜೀವನಾದರ್ಶದ ಅಂಶವನ್ನು ಅತ್ಯಂತ ದಕ್ಷತೆಯಿಂದ ತುಂಬಿಕೊಟ್ಟವರೆಂದರೆ ಶಾರದಾದೇವಿಯವರು. ವಿವಾಹಿತರಾದರೂ ದೇಹಬುದ್ಧಿಯನ್ನು ತ್ಯಜಿಸಿ, ಕೇವಲ ಆತ್ಮಭಾವದಲ್ಲಿ ನೆಲಸಿದ್ದ ಶ್ರೀರಾಮಕೃಷ್ಣರ ಯಶಸ್ಸಿನಲ್ಲಿ ಶಾರದಾದೇವಿಯವರಿಗೆ ಸಮಪಾಲು ಸಲ್ಲುತ್ತದೆ.

ತಮ್ಮ ಆಧ್ಯಾತ್ಮಿಕ ಜೀವನದ ಪರಿಪೂರ್ಣತೆಗೆ ತಮ್ಮ ಪತ್ನಿ ನೀಡಿದ ಅಮೂಲ್ಯ ಕೊಡುಗೆಯನ್ನು ಶ್ರೀರಾಮಕೃಷ್ಣರು ಹೀಗೆ ಕೊಂಡಾಡುತ್ತಾರೆ:

"ಅವಳು ಅಷ್ಟೊಂದು ಪರಿಶುದ್ಧಳಾಗಿರದಿದ್ದಲ್ಲಿ, ಅವಳ ಪ್ರಚೋದನೆಗೆ ಒಳಗಾಗಿ ನನ್ನ ಸಂಯಮದ ಕಟ್ಟೆ ಒಡೆದುಹೋಗುತ್ತಿತ್ತೋ ಏನೋ, ಯಾರಿಗೆ ಗೊತ್ತು? ವಿವಾಹದ ನಂತರ ನಾನು ಜಗನ್ಮಾತೆಯಲ್ಲಿ ವ್ಯಾಕುಲತೆಯಿಂದ ಬೇಡಿಕೊಂಡಿದ್ದೆ, 'ಅಮ್ಮಾ, ನನ್ನ ಮಡದಿಯ ಮನದಲ್ಲಿ ಪ್ರಾಪಂಚಿಕತೆಯ ಅತ್ಯಲ್ಪ ಮಾಲಿನ್ಯವಿದ್ದರೂ

ಅದನ್ನು ತೊಡೆದುಹಾಕಿಬಿಡು' ಎಂದು. ಮುಂದೆ ಅವಳೊಂದಿಗೆ ವಾಸಿಸಿದಾಗ, ಜಗನ್ಮಾತೆ ನನ್ನ ಪ್ರಾರ್ಥನೆಯನ್ನು ನಿಜವಾಗಿಯೂ ಮನ್ನಿಸಿದ್ದಾಳೆ ಎಂಬುದು ನನಗೆ ತಿಳಿಯಿತು."

ಇದೊಂದು ಅದ್ಭುತ ಸಂಗತಿಯೇ ಸರಿ. ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿ ತಪೋನಿಮಗ್ನರಾಗಿದ್ದಾಗ, ತಮ್ಮ ಪ್ರಾರ್ಥನಾಬಲದಿಂದ ಶಾರದಾದೇವಿಯವರಲ್ಲೂ ಆಧ್ಯಾತ್ಮಿಕ ವಿಕಾಸವನ್ನುಂಟುಮಾಡುತ್ತಿದ್ದರು ಎನ್ನಬೇಕು. ತಮ್ಮ ತೀವ್ರ ಮನಶ್ಶಕ್ತಿಯಿಂದ ಅವರು, ತಾವು ಆಚರಿಸಿದ ಅಭೂತಪೂರ್ವ ಆಧ್ಯಾತ್ಮಿಕ ಸಾಧನೆಯಲ್ಲಿ ತಮ್ಮ ಸತಿಯನ್ನು ಕೂಡ ಮಾನಸಿಕವಾಗಿ ಸಹಭಾಗಿಯಾಗುವಂತೆ ಮಾಡಿದರೆಂದು ನಾವು ಅರ್ಥಮಾಡಿಕೊಳ್ಳಬಹುದು. ಅಲ್ಲದೆ ಒಬ್ಬರು ಇನ್ನೊಬ್ಬರಿಂದ ಬಹುದೂರದಲ್ಲಿದ್ದರೂ ಕೂಡ ಅಂತಹ ಪ್ರಾರ್ಥನೆಯ ಮೂಲಕ ಅವರು ತಮ್ಮ ಪತ್ನಿಯೊಂದಿಗೆ ಆಧ್ಯಾತ್ಮಿಕ ಸಂಬಂಧವನ್ನು ಸ್ಥಾಪಿಸಿದ್ದರೆಂಬುದು ವೇದ್ಯವಾಗುತ್ತದೆ. ಮತ್ತು ಅಂತಹ ದಿವ್ಯ ಪ್ರಾರ್ಥನೆಯೇ ಅವರು ದಕ್ಷಿಣೇಶ್ವರದಲ್ಲಿ ಶೇಖರಿಸುತ್ತಿದ್ದ ಆಧ್ಯಾತ್ಮಿಕತೆಯ ಸಾರವನ್ನು ಶಾರದಾದೇವಿಯವರು ದೂರದ ಜಯರಾಂಬಾಟಿಯಿಂದಲೇ ಹೀರಿಕೊಳ್ಳುವಂತೆ ಮಾಡಿತ್ತೆಂಬುದು ಗೊತ್ತಾಗುತ್ತದೆ.

ಶ್ರೀರಾಮಕೃಷ್ಣರ ಈ ವಿಲಕ್ಷಣ ದಾಂಪತ್ಯಜೀವನವನ್ನು ಪರಿಶೀಲಿಸಿದಾಗ ಒಂದು ಪ್ರಶ್ನೆ ಅತ್ಯಂತ ಸಹಜವಾಗಿಯೇ ಉದ್ಭವಿಸುತ್ತದೆ—'ಕಾಮಕ್ಕಾಗಿ ಅಲ್ಲದಿದ್ದರೆ, ಶ್ರೀರಾಮಕೃಷ್ಣರು ವಿವಾಹ ಮಾಡಿಕೊಂಡದ್ದು ಮತ್ತಾವ ಪುರುಷಾರ್ಥಕ್ಕಾಗಿ? ಅವರು ಸುಖವಾಗಿ ಬ್ರಹ್ಮಚಾರಿಗಳಾಗಿಯೇ ಇರಬಹುದಾಗಿತ್ತಲ್ಲ? ಈಗ ನೋಡಿದರೆ, ಅವರು ಆ ಕಡೆ ಸಂನ್ಯಾಸಿಯೂ ಅಲ್ಲ, ಈ ಕಡೆ ಗೃಹಸ್ಥರೂ ಅಲ್ಲ!'

ಇದೊಂದು ಬಹು ಮುಖ್ಯ ಪ್ರಶ್ನೆಯೇ ಸರಿ. ಇದಕ್ಕೆ ಉತ್ತರವೂ ಮಹತ್ತ್ವಪೂರ್ಣವಾದುದೇ. ಶ್ರೀರಾಮಕೃಷ್ಣರ ಜೀವನ-ಸಂದೇಶಗಳಲ್ಲೇ ಈ ಉತ್ತರ ಅಡಗಿದೆ. ಸ್ವಾಮಿ ಶಾರದಾನಂದರು ಲೀಲಾಪ್ರಸಂಗದಲ್ಲಿ ಇದನ್ನು ಸವಿಸ್ತಾರವಾಗಿ ವಿಶ್ಲೇಷಿಸಿದ್ದಾರೆ.

ಈ ಪ್ರಶ್ನೆಗೆ ಉತ್ತರವಾಗಿ ಕೆಲವರು ಭಾವಿಸಬಹುದು, 'ಶ್ರೀರಾಮಕೃಷ್ಣರು ವಿವಾಹವಾದದ್ದೇ ಒಂದು ಆಕಸ್ಮಿಕ ಘಟನೆಯಿರಬೇಕು' ಎಂದು. ಸ್ವಲ್ಪ ವಿಚಾರಮಾಡಿ ನೋಡಿದರೆ, ಇದು ಖಂಡಿತವಾಗಿ ಸುಳ್ಳೆಂದು ತಿಳಿಯುತ್ತದೆ. ಹಿಂದೆ ಶ್ರೀರಾಮಕೃಷ್ಣರಿಗಾಗಿ ಅವರ ಮನೆಯವರು ಹೆಣ್ಣು ಹುಡುಕುತ್ತಿದ್ದಾಗ, ತಾವಾಗಿಯೇ ಅವರು ಹೆಣ್ಣನ್ನು ಸೂಚಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಹುಡುಗಿಗೋ ಐದೇ ವರ್ಷ! ವಧೂವರರ ಅಂತರ ಹದಿನೆಂಟು ವರ್ಷಗಳು! ಆದರೂ ಈ ವಿಚಿತ್ರ ಜೋಡಿಗೆ ವಿವಾಹ ನಡೆದೇ ಬಿಡುವುದೆಂದರೇನು! ಬಳಿಕ ಅವರಿರ್ವರಲ್ಲಿ ಕಂಡುಬಂದ ಪರಸ್ಪರ ಸಾಮರಸ್ಯವೆಂಥದು! ಅಲ್ಲದೆ ಶ್ರೀರಾಮಕೃಷ್ಣರ ಜೀವನವನ್ನು ಅವಲೋಕಿಸಿದಾಗ ತಿಳಿಯುತ್ತದೆ —ಅದರಲ್ಲಿನ ಒಂದೊಂದು ಘಟನೆಯೂ ಅರ್ಥಪೂರ್ಣ, ಮಹತ್ತ್ವಪೂರ್ಣ ಎಂದು. ಇಲ್ಲಿ ಇನ್ನೊಂದು ಸೂಕ್ಷ್ಮ ವಿಚಾರವಿದೆ. ಶ್ರೀರಾಮಕೃಷ್ಣರದು ಪರಮ ನಿಃಸ್ವಾರ್ಥ ಸ್ವಭಾವ ಎಂಬುದನ್ನು ನಾವು ಈಗಾಗಲೇ ಸಾಕಷ್ಟು ಚೆನ್ನಾಗಿ ಅರಿತಿದ್ದೇವೆ. ತಮ್ಮಿಂದ ಇನ್ನೊಬ್ಬರಿಗೆ ಅತಿ ಸಣ್ಣ ಪ್ರಮಾಣದ ಕಷ್ಟವಾಗುವುದನ್ನೂ ಅವರು ಸಹಿಸುತ್ತಿರಲಿಲ್ಲ. ಇಂಥವರು, ಮುಂದಾಲೋಚನೆಯಿಲ್ಲದೆಯೋ ಅಥವಾ ತಮ್ಮ ಸ್ವಾರ್ಥೋದ್ದೇಶಕ್ಕಾಗಿಯೋ ಮದುವೆ ಮಾಡಿಕೊಂಡು, ಯಾರೋ ಒಬ್ಬ ಅಪರಿಚಿತ ಮುಗ್ಧ ಬಾಲಿಕೆ

ಯನ್ನು ಚಿರಕಾಲದ ದುಃಖಯಾತನೆಗೆ ಈಡು ಮಾಡುವುದನ್ನು ಊಹಿಸಿಕೊಳ್ಳಲಾದರೂ ಸಾಧ್ಯವೆ!

ಹಾಗಾದರೆ ಅವರು ಮದುವೆ ಮಾಡಿಕೊಂಡದ್ದೇಕೆ? ಹೊತ್ತುಹೊತ್ತಿಗೆ ಅವರಿಗೆ ಒಗ್ಗುವಂತಹ ಅಡಿಗೆ ಮಾಡಿಹಾಕಲು ಒಬ್ಬರು ಬೇಕೆಂದೆ? ಕೆಲವೊಮ್ಮೆ ಶ್ರೀರಾಮಕೃಷ್ಣರು, "ಅದಕ್ಕಾಗಿಯೇ ಇರಬೇಕು" ಎಂದು ಹಾಸ್ಯ ಮಾಡುತ್ತಿದ್ದುದುಂಟು. ಅದೂ ಅಲ್ಲವೆಂದಲ್ಲ. ಆದರೆ ಅದಕ್ಕಿಂತ ಮಹತ್ತರವಾದ, ಘನತರವಾದ ಕಾರಣಗಳನ್ನು ನಾವಿಲ್ಲಿ ನೋಡಬಹುದಾಗಿದೆ.

ಹಿಂದೂ ಶಾಸ್ತ್ರಗಳಲ್ಲಿ ಮದುವೆಯ ಉದಾತ್ತ ಧ್ಯೇಯೋದ್ದೇಶಗಳನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಮದುವೆಯು ಕೇವಲ ಭೋಗಸುಖಕ್ಕಲ್ಲ; ಸದ್ಗುಣಿಗಳಾದ ಮಕ್ಕಳನ್ನು ಪಡೆದು, ಭಗವಂತನ ಸೃಷ್ಟಿರಕ್ಷಣೆಯ ನಿಯಮವನ್ನು ಪರಿಪಾಲಿಸುವುದು; ತನ್ಮೂಲಕ ಸರ್ವಜನಹಿತವನ್ನು ಸಾಧಿಸುವುದು—ಇದೇ ವಿವಾಹಕರ್ಮದ ಉದ್ದೇಶ ಎಂದು ಅವು ಸಾರುತ್ತವೆ. ಹಾಗಾದರೆ, ಇದರಲ್ಲಿ ವ್ಯಕ್ತಿಯ ಸ್ವಾರ್ಥ ಸ್ವಲ್ಪವೂ ಇರಲಾರದೆ? ಎಂದರೆ, ಹಾಗಲ್ಲ. ಶಾಸ್ತ್ರಕಾರರಾದ ಋಷಿಗಳು ಮನುಷ್ಯನ ದೌರ್ಬಲ್ಯವನ್ನು ಚೆನ್ನಾಗಿ ಅರಿತಿದ್ದರು. ಸ್ವಾರ್ಥೋದ್ದೇಶವಿಲ್ಲದಿದ್ದಲ್ಲಿ ಮನುಷ್ಯ ಯಾವ ಕೆಲಸಕ್ಕೂ ಕೈಹಾಕುವುದಿಲ್ಲ ಎಂಬ ಸತ್ಯ ಅವರಿಗೆ ತಿಳಿದಿತ್ತು. ಆದ್ದರಿಂದ ಅಂಥವನು ಮೇಲೇರಿ ಉದ್ಧಾರವಾಗಬೇಕಾದರೆ, ಅವನ ಸ್ವಾರ್ಥೋದ್ದೇಶಕ್ಕೆ ಉನ್ನತ ಧ್ಯೇಯಾದರ್ಶಗಳನ್ನು ಗಂಟುಹಾಕಬೇಕೆಂದು ಕಂಡುಕೊಂಡರು. ಇಲ್ಲದಿದ್ದರೆ, ಜನರು ಜನನ-ಮರಣಗಳ ಬಂಧನದಲ್ಲಿ ಸಿಲುಕಿಕೊಂಡು, ನಿರಂತರವೂ ನರಳುತ್ತಲೇ ಇರುತ್ತಾರೆಂಬ ಅರಿವು ಅವರಿಗಿತ್ತು. ಮನದೊಳಗಿನ ಭೋಗಾಭಿಲಾಷೆಯನ್ನು ಒಮ್ಮೆಗೇ ಕಿತ್ತುಹಾಕಿ ನಾಶಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಭೋಗವನ್ನು ಅನುಭವಿಸಿದರೂ ಕ್ರಮೇಣ ಮನಸ್ಸಿಗೆ ಶಿಕ್ಷಣ ಕೊಡುತ್ತ, ಭೋಗಾಭಿಲಾಷೆಯನ್ನು ಕಡಮೆ ಮಾಡಿಕೊಳ್ಳುತ್ತ, ಮನಸ್ಸನ್ನು ಉನ್ನತ ಧ್ಯೇಯದೆಡೆಗೆ ಹರಿಯಿಸಬೇಕು ಎಂಬುದು ಶಾಸ್ತ್ರವಾಕ್ಯಗಳ ಇಂಗಿತ. ಇದನ್ನೇ ಶ್ರೀರಾಮಕೃಷ್ಣರು ಮುಂದೆ ಮತ್ತೆಮತ್ತೆ ಸಾರುತ್ತಾರೆ. ಸಂಯಮದ ಪ್ರಜ್ಞೆ ಬರಬರುತ್ತ ನಶಿಸಿಹೋಗಿ, ಪಾಶ್ಚಾತ್ಯರ ಭೋಗವಾದವೇ ಭಾರತೀಯರ ನರನಾಡಿಗಳಲ್ಲಿ ಸೇರಿಕೊಂಡು ಇಡೀ ಜನಾಂಗವನ್ನೇ ದುರ್ಬಲಗೊಳಿಸುತ್ತಿರುವ ಈ ಕಾಲದಲ್ಲಿ, ಜನರ ಮುಂದೆ ಸಂಯಮದ ಅತ್ಯುಚ್ಚ ಆದರ್ಶವನ್ನಿಡಲೆಂದೇ ಅವರು ವಿವಾಹ ಮಾಡಿಕೊಂಡು, ಅಂತಹ ದುಸ್ಸಾಧ್ಯವಾದ ಜೀವನವನ್ನು ನಡೆಸಿ ತೋರಿಸಿದರು.

ಶ್ರೀರಾಮಕೃಷ್ಣರು ಜನರನ್ನುದ್ದೇಶಿಸಿ ತಮ್ಮ ಗ್ರಾಮ್ಯಭಾಷೆಯಲ್ಲಿ ಹೇಳುತ್ತಾರೆ:

"ನಾನು ಮಾಡುವುದೆಲ್ಲವೂ ನಿಮಗಾಗಿಯೇ. ಎಲೋ, ನಾನು ಹದಿನಾರಾಣೆ ಮಾಡಿದರೆ, ನೀವೆಲ್ಲೋ ಒಂದಾಣೆಯಷ್ಟು ಮಾಡೀರಿ. ಆದರೆ ನಾನೇನಾದರೂ ನಿಂತು ಉಚ್ಚೆ ಹೊಯ್ದರೆ, ನೀವು ಘಟಿಂಗರು–ಸುತ್ತಿಸುತ್ತಿಕೊಂಡು ಉಚ್ಚೆ ಹೊಯ್ಯುವಿರಿ!"

ಈ ಕಾರಣದಿಂದಲೇ ಅವರು ದಾಂಪತ್ಯಜೀವನದ ಕರ್ತವ್ಯವನ್ನು ವಹಿಸಿಕೊಂಡು ಪರಮೋತ್ಕೃಷ್ಟವಾದ ಆದರ್ಶವನ್ನು ಅನುಷ್ಠಿಸಿ ತೋರಿಸಿದರು. ಅವರೇನಾದರೂ ಮದುವೆ ಮಾಡಿಕೊಳ್ಳದಿದ್ದ ಪಕ್ಷದಲ್ಲಿ ಗೃಹಸ್ಥರು ಹೇಳುತ್ತಿದ್ದರು, "ಪರಮಹಂಸರಿಗೇನು ಗೊತ್ತು ಗೃಹಸ್ಥಜೀವನದ ವಿಷಯ? ಅವರೇನು ಮದುವೆ ಮಾಡಿಕೊಂಡು, ಹೆಂಡತಿಯ ಜೊತೆ ಬಾಳಿದವರೆ? ಅವರೂ ಒಬ್ಬಳು ಹೆಂಡತಿಯನ್ನು ಕಟ್ಟಿಕೊಳ್ಳ

ಬೇಕಾಗಿತ್ತು—ಆಗ ಗೊತ್ತಾಗುತ್ತಿತ್ತು. ಈ ಸಂಸಾರ ಎಂದರೆ ಏನು-ಎಂಥದು ಅಂತ! ಅವರಿಗೆ ಅದೊಂದೂ ಗೊತ್ತಿಲ್ಲ, ಆದ್ದರಿಂದಲೇ ನಮಗೀಗ ಬ್ರಹ್ಮಚರ್ಯ, ವೈರಾಗ್ಯ ಎಂದು ಪೊಳ್ಳು ಉಪದೇಶ ಕೊಡುತ್ತಿದ್ದಾರೆ. ಅದೆಲ್ಲ ಆಗುವ-ಹೋಗುವ ಮಾತೇ?" ಎಂದು. ಇಂತಹ ಆಕ್ಷೇಪಗಳು ಏಳಬಾರದೆಂದೇ ಶ್ರೀರಾಮಕೃಷ್ಣರು ವಿವಾಹ ಮಾಡಿ ಕೊಂಡದ್ದು; ಅಷ್ಟು ಮಾತ್ರವಲ್ಲ, ಪೂರ್ಣ ಯೌವನಸ್ಥೆಯಾದ ತಮ್ಮ ಪತ್ನಿಯೊಂದಿಗೆ ಎಡೆಬಿಡದೆ ಎಂಟು ತಿಂಗಳ ಕಾಲ ವಾಸಮಾಡಿ, ಅಷ್ಟೇ ಅಲ್ಲ, ಒಂದೇ ಹಾಸಿಗೆಯ ಮೇಲೆ ಮಲಗಿಯೂ ಬ್ರಹ್ಮಚರ್ಯವನ್ನು ಪರಿಪಾಲಿಸಿ ತೋರಿಸಿದ್ದು. 'ಹಾಗಾದರೆ ಜನ ರೆಲ್ಲರೂ ಹೀಗೆಯೇ ಮಾಡಬೇಕೆಂದರ್ಥವೇ?' ಎಂದರೆ, ಹಾಗಲ್ಲವೇ ಅಲ್ಲ. ಸಾಮಾನ್ಯ ಜನರ ಮಾತಿರಲಿ, ಕೋಟಿಗೊಬ್ಬನೂ ಹಾಗೆ ಮಾಡಲಾರ. ಹೆಂಡತಿಯೊಂದಿಗೆ ವಾಸ ಮಾಡುತ್ತಲೇ ಅಖಂಡ ಬ್ರಹ್ಮಚರ್ಯವನ್ನು ಪಾಲಿಸಲು ಜನರಿಗೆ ಸಾಧ್ಯವಿಲ್ಲವೆಂದು ಶ್ರೀರಾಮಕೃಷ್ಣರು ಚೆನ್ನಾಗಿಯೇ ತಿಳಿದಿದ್ದರು. ಆದರೆ ಅವರೇ ಹೇಳುವಂತೆ, ತಾವು ಮಾಡಿದ್ದರಲ್ಲಿ ಒಂದಾಣೆ ಭಾಗವನ್ನಾದರೂ ಇತರರು ಮಾಡಿದ್ದಾದರೆ ಅದು ಸಾಕು ಸಾಕಷ್ಟಾಯಿತು.

ಕಡೆಗೀಗ ಮತ್ತೊಂದು ಪ್ರಶ್ನೆ: 'ಶ್ರೀರಾಮಕೃಷ್ಣರು ವಿವಾಹವನ್ನೇನೋ ಮಾಡಿ ಕೊಂಡರು. ಆದರೆ ಅವರು ಕನಿಷ್ಠಪಕ್ಷ ಒಂದು ಮಗುವಿಗಾದರೂ ತಂದೆಯಾಗಿದ್ದಿದ್ದರೆ, ಮತ್ತು ಅನಂತರ ಪತ್ನಿಯೊಂದಿಗಿನ ದೇಹಸಂಬಂಧವನ್ನು ವರ್ಜಿಸಿದ್ದರೆ, ಎಲ್ಲ ದೃಷ್ಟಿ ಯಿಂದಲೂ ಸರಿಹೋಗುತ್ತಿತ್ತಲ್ಲವೆ? ಹಾಗೆ ಮಾಡುವುದರಿಂದ, ಭಗವಂತನ ಸೃಷ್ಟಿ ಯನ್ನು ರಕ್ಷಣೆ ಮಾಡುವುದು ಮನುಷ್ಯನಾದವನ ಕರ್ತವ್ಯವೆಂದು ತೋರಿಸಿಕೊಟ್ಟಂ ತಾಗುತ್ತಿತ್ತು; ಜೊತೆಗೆ ಪುರುಷನು ಪತ್ನಿಯಲ್ಲಿ ಒಂದು ಮಗುವನ್ನಾದರೂ ಪಡೆದು ಪಿತೃಋಣದಿಂದ ಮುಕ್ತನಾಗಬೇಕು ಎಂಬ ಶಾಸ್ತ್ರವಾಕ್ಯಕ್ಕೆ ಮರ್ಯಾದೆ ತೋರಿಸಿ ದಂತಾಗುತ್ತಿತ್ತು—ಅಲ್ಲವೆ?'

ಈ ಪ್ರಶ್ನೆಯೂ ಅಷ್ಟು ತೊಡಕಾದುದೇನಲ್ಲ. ಸೃಷ್ಟಿರಕ್ಷಣೆಯ ವಿಷಯವನ್ನು ತೆಗೆದುಕೊಂಡರೆ, ಅದನ್ನು ಮಾಡಲು ಅಸಂಖ್ಯಾತ ಜನರಿದ್ದಾರೆ. ಕೆಲವು ನೂರುಜನ —ಅಲ್ಲ—ಕೆಲವು ಕೋಟಿ ಜನ ಆ ಮಾರ್ಗವನ್ನು ಹಿಡಿಯದಿದ್ದರೂ ವ್ಯತ್ಯಾಸವೇನೂ ಆಗುವುದಿಲ್ಲ! ಜಗತ್ತಿನ ಸ್ತ್ರೀಪುರುಷರೆಲ್ಲರೂ ಸೃಷ್ಟಿಕರ್ತನಿಗೆ ಸಹಾಯವಾಗಲೆಂದೇ ಮದುವೆಯಾಗುತ್ತಾರೆಯೆ? ಮತ್ತೂ ಮುಖ್ಯವಾದ ಅಂಶವೆಂದರೆ, ಉನ್ನತವಾದ ಧ್ಯೇಯೋದ್ದೇಶಗಳ ಸಲುವಾಗಿ ಶಕ್ತಿಯನ್ನು ರಕ್ಷಿಸಿಕೊಳ್ಳುವುದು, ಅರ್ಥಾತ್, ಸಾಮಾನ್ಯ ವಾದ ವಿಷಯಗಳಿಗಾಗಿ ಶಕ್ತಿಯನ್ನು ವ್ಯಯಿಸದಿರುವುದು ಕೂಡ ಸೃಷ್ಟಿಯ ನಿಯ ಮವೇ! ಎಲ್ಲರೂ ಕೆಳಮಟ್ಟದ ಸಾಧನೆಗಳಲ್ಲೇ ಶಕ್ತಿಯನ್ನು ವ್ಯಯಿಸಿದರೆ ಮೇಲ್ಮಟ್ಟದ ಚಟುವಟಿಕೆಗಳಲ್ಲಿ ನಿರತರಾಗಿ ಆಧ್ಯಾತ್ಮಿಕ ವಿಕಾಸ ಹೊಂದುವವರು ಯಾರಿರುತ್ತಾರೆ? ಇನ್ನು ಶಾಸ್ತ್ರವಾಕ್ಯದ ಮಾತು: ಶಾಸ್ತ್ರಗಳಲ್ಲಿ ದಾಂಪತ್ಯಧರ್ಮವನ್ನು ಎತ್ತಿಹಿಡಿದಿರುವು ದೇನೋ ನಿಜವೇ. ಆದರೆ ಅದೇ ಶಾಸ್ತ್ರಗಳಲ್ಲಿ ಇನ್ನೊಂದು ಮಾತಿದೆ: ವ್ಯಕ್ತಿಯ ಮನಸ್ಸಿ ನಲ್ಲಿ ಯಾವಾಗ ನಿಜವಾದ ವೈರಾಗ್ಯವುದಿಸುವುದೋ, ಆ ಕ್ಷಣವೇ ಅವನು ಸಂಸಾರ ವನ್ನು ತೊರೆಯಬೇಕು ಎಂದು. ಅಲ್ಲದೆ ಮತ್ತೊಂದೆಡೆಯಲ್ಲಿ, ಯಥಾರ್ಥಸಂನ್ಯಾಸಿ ಯಾದವನು ತನ್ನ ಹಿಂದಿನ ಹಾಗೂ ಮುಂದಿನ ಏಳು ತಲೆಮಾರುಗಳನ್ನೂ ತನ್ನ ಪುಣ್ಯ ಬಲದಿಂದ ಉದ್ಧರಿಸುತ್ತಾನೆ ಎಂಬ ಮಾತಿದೆ. ಆದ್ದರಿಂದ, ಶ್ರೀರಾಮಕೃಷ್ಣರು ಶಾಸ್ತ್ರ

ವಾಕ್ಯದಂತೆ ನಡೆಯಲಿಲ್ಲವೆಂಬ ಆಕ್ಷೇಪ ಹಾಸ್ಯಾಸ್ಪದವಾಗುತ್ತದೆ.

ಹೀಗೆ ಶ್ರೀರಾಮಕೃಷ್ಣರು ತಮ್ಮ ಅಭೂತಪೂರ್ವ ದಾಂಪತ್ಯಜೀವನದ ಮೂಲಕ ಸಮಸ್ತ ಜಗತ್ತಿಗೆ, ನವನಾಗರಿಕತೆಗೆ ಮಾರ್ಗದರ್ಶನ ಮಾಡಿದ್ದಾರೆ. ಆ ಕುರಿತಾಗಿ ಭಾವಿಸಿದಷ್ಟೂ ಅದರ ಅರ್ಥ-ಮಹತ್ವಗಳು ಮನೋಬುದ್ಧಿಗಳಿಗೆ ನಿಲುಕದಷ್ಟು ಅಗಾಧವಾಗಿ ಬೆಳೆಯುತ್ತಹೋಗುತ್ತವೆ. ಆದರೆ ನಾವು ಈವರೆಗೆ ನೋಡಿರುವುದು ಶ್ರೀರಾಮಕೃಷ್ಣರ ದಾಂಪತ್ಯಜೀವನದ ಅಲ್ಪಾಂಶವನ್ನು ಮಾತ್ರವೇ. ಈಗ ನಾವು ಈ ಸಂಬಂಧವಾಗಿ ನಡೆದ ಇನ್ನೊಂದು ಅದ್ಭುತ ಪ್ರಸಂಗವನ್ನು ನೋಡೋಣ.

ದಕ್ಷಿಣೇಶ್ವರಕ್ಕೆ ಆಗಮಿಸಿದ ತಮ್ಮ ಸತಿಯೊಡನೆ ಅಪೂರ್ವ ಗೃಹಸ್ಥಜೀವನ ನಡೆಸು ತ್ತಿದ್ದ ಈ ಸಮಯದಲ್ಲೇ ಶ್ರೀರಾಮಕೃಷ್ಣರ ಮನಸ್ಸಿಗೊಂದು ಅದ್ಭುತವಾದ ಪ್ರೇರಣೆ ಯಾಯಿತು. ಆ ಪ್ರೇರಣೆಯುಂಟಾದುದು ಸ್ವಯಂ ಜಗನ್ಮಾತೆಯ ಇಚ್ಛೆಯಿಂದಲೇ ಎಂಬುದರಲ್ಲಿ ಅವರಿಗೆ ಸ್ವಲ್ಪವೂ ಸಂದೇಹವಿರಲಿಲ್ಲ. ಆದ್ದರಿಂದ ತಡ ಮಾಡದೆ ಆ ಆಲೋಚನೆಯನ್ನು ಕಾರ್ಯಗತಗೊಳಿಸಲು ಅವರು ಅನುವಾದರು.

೧೮೭೩ ರ ಜೂನ್ ೫ ನೇ ತಾರೀಖು. ಅಂದು ಫಲಹಾರಿಣೀ ಕಾಳೀಪೂಜೆಯ ಪವಿತ್ರ ದಿನ; ವೈಶಾಖ ಬಹುಳ ಅಮಾವಾಸ್ಯೆ. ಕಾಳೀದೇವಿಯು ಜೀವಿಗಳ ಪೂರ್ವಾ ರ್ಜಿತ ಕರ್ಮಫಲಗಳನ್ನು ನಿರ್ಮೂಲ ಮಾಡಬಲ್ಲವಳಾದ್ದರಿಂದ ಆಕೆಗೆ ಫಲಹಾರಿಣೀ ಎಂಬ ಬಿರುದು. ದಕ್ಷಿಣೇಶ್ವರ ದೇವಾಲಯವು ವಿಶೇಷ ಉತ್ಸವದ ಅಂಗವಾಗಿ ಸಿಂಗರಿಸ ಲ್ಪಟ್ಟಿದೆ. ಭಕ್ತಜನರು ಬಹುಸಂಖ್ಯೆಯಲ್ಲಿ ಬರುತ್ತಿದ್ದಾರೆ. ಎಲ್ಲೆಲ್ಲೂ ನಾಮಸಂಕೀರ್ತ ನೆಯ ಸಂಭ್ರಮ. ಶ್ರೀರಾಮಕೃಷ್ಣರು ತಾವೂ ಇಂದು ಜಗನ್ಮಾತೆಯ ಪೂಜೆ ಮಾಡಲು ಸಕಲ ಸನ್ನಾಹ ಮಾಡಿಕೊಂಡಿದ್ದಾರೆ—ಆದರೆ ಗರ್ಭಗುಡಿಯಲ್ಲಲ್ಲ, ತಮ್ಮ ಕೋಣೆ ಯಲ್ಲೇ. ಪೂಜ್ಯ-ಪೂಜಕರಲ್ಲದೆ ಮತ್ತಾರಿಗೂ ಅಲ್ಲಿ ಪ್ರವೇಶವಿಲ್ಲ. ಭಗವತಿಯ ಪೂಜೆ ಮಾಡಬೇಕೆಂಬ ಶ್ರೀರಾಮಕೃಷ್ಣರ ಇಚ್ಛೆಯನ್ನು ತಿಳಿದ ಹೃದಯ ಅವರ ನೆರವಿಗೆ ಒದಗಿ ಬಂದ. ಫಲಪುಷ್ಪಗಳನ್ನೂ ಇತರ ಪೂಜಾಸಾಮಗ್ರಿಗಳನ್ನೂ ತಂದಿರಿಸಿದ. ಆದರೆ ಅವ ನಿಗೆ ಮಂದಿರದಲ್ಲಿ ವಿಶೇಷ ಪೂಜೆಯನ್ನು ನಿರ್ವಹಿಸುವ ಜವಾಬ್ದಾರಿಯಿತ್ತು; ಆದ್ದ ರಿಂದ ಬೇಗನೆ ಹೊರಟುಹೋದ. ಬಳಿಕ, ರಾಧಾಗೋವಿಂದ ದೇವಾಲಯದಲ್ಲಿ ಅರ್ಚಕ ನಾಗಿದ್ದ ದಿನು ಎಂಬ ಹುಡುಗ ಬಂದು ಶ್ರೀರಾಮಕೃಷ್ಣರ ನಿರ್ದೇಶನದಂತೆ ಉಳಿದ ಕೆಲಸಗಳನ್ನು ಮಾಡಿದ. ಪೂಜೆಯ ವಸ್ತುಗಳನ್ನೆಲ್ಲ ಆಯಾ ಸ್ಥಳದಲ್ಲಿ ಜೋಡಿಸಿಟ್ಟ. ಪೂಜಾಸ್ಥಾನವನ್ನು ಕಲಾತ್ಮಕವಾಗಿ ರಂಗವಲ್ಲಿಯಿಂದ ಅಲಂಕರಿಸಿ ಮಣೆಯೊಂದನ್ನು ತಂದಿಟ್ಟ. ಇಲ್ಲಿಗೆ ಅವನ ಕೆಲಸ ಮುಗಿಯಿತು, ಹೊರಟುಹೋದ. ಈ ವೇಳೆಗೆ ರಾತ್ರಿ ಒಂಬತ್ತಾಗಿತ್ತು. ಪೂಜೆಯ ವೇಳೆಗೆ ಸರಿಯಾಗಿ ಬಂದುಬಿಡುವಂತೆ ಶ್ರೀರಾಮಕೃಷ್ಣರು ಶಾರದಾದೇವಿಯವರಿಗೆ ಮೊದಲೇ ತಿಳಿಸಿದ್ದರು. ಅದರಂತೆ ಅವರು ಈಗ ಕೋಣೆ ಯೊಳಗೆ ಬಂದರು.

ಈಗ ಪೂಜೆ ಪ್ರಾರಂಭವಾಯಿತು. ಶ್ರೀರಾಮಕೃಷ್ಣರು ತಮ್ಮ ಕೋಣೆಯ ಪಶ್ಚಿಮ ದ್ವಾರದ ಬಳಿ ಪೂರ್ವಾಭಿಮುಖವಾಗಿ ಕುಳಿತರು. ಕ್ರಮಾಗತವಾಗಿ ಆಚಮನಾದಿ ಶುದ್ಧಿ ಕಾರ್ಯಗಳನ್ನು ಮಾಡಿ ಮುಗಿಸಿದರು. ಈಗ, ದೇವತೆಯನ್ನು ಪೂಜಿಸಬೇಕಾದ ಪೂಜಾಪೀಠದ ಮೇಲೆ ಬಂದು ಕುಳಿತುಕೊಳ್ಳುವಂತೆ ಸತಿಗೆ ಸನ್ನೆಯ ಮೂಲಕ ಸೂಚಿ ಸಿದರು. ಶಾರದಾದೇವಿಯವರು ಮಂತ್ರಮುಗ್ಧರಂತೆ ಬಂದು, ಪೀಠದ ಮೇಲೆ ಕುಳಿ ತರು. ಅವರ ಮನಸ್ಸು ಈಗಾಗಲೇ ಭಗವದ್ಭಾವದಿಂದ ರಂಜಿತವಾಗಿತ್ತು. ಶ್ರೀರಾಮ ಕೃಷ್ಣರು ಅವರ ಮೇಲೆ ಪವಿತ್ರ ಗಂಗಾಜಲವನ್ನು ಪ್ರೋಕ್ಷಿಸುತ್ತ, ಜಗನ್ಮಾತೆಯನ್ನು ಆವಾಹನೆ ಮಾಡುವ ಮಂತ್ರವನ್ನು ಉಚ್ಚರಿಸಿದರು:

"ಹೇ ಕೌಮಾರೀ, ಸರ್ವಶಕ್ತಿಪ್ರದಾಯಿನೀ, ಸೌಂದರ್ಯರತ್ನಾಕರೀ! ಈಕೆಯ ದೇಹಮನಗಳನ್ನು ಪವಿತ್ರಗೊಳಿಸಿ ಈಕೆಯಲ್ಲಿ ಆವಿರ್ಭವಿಸು! ಸಿದ್ಧಿದ್ವಾರವನ್ನು ತೆರೆ, ಶುಭವನ್ನುಂಟುಮಾಡು, ಮಂಗಳವನ್ನುಂಟುಮಾಡು!"

ಬಳಿಕ ಶ್ರೀರಾಮಕೃಷ್ಣರು ಶಾರದಾದೇವಿಯವರ ಅಂಗಪ್ರತ್ಯಂಗವನ್ನೂ ಮಂತ್ರ ಪೂರ್ವಕವಾಗಿ ನ್ಯಾಸ ಮಾಡಿ, ಅವರಲ್ಲಿ ಜಗನ್ಮಾತೆಯನ್ನು ತಾದಾತ್ಮ್ಯಗೊಳಿಸಿದರು. ವಿಧ್ಯುಕ್ತವಾಗಿ ಷೋಡಶೋಪಚಾರ ಪೂಜೆ* ಮಾಡಿದರು. ಅವರ ಹಿಮ್ಮಡಿಗೆ ಕೆಂಪು ಬಣ್ಣವನ್ನು ಲೇಪಿಸಿದರು. ಹಣೆಗೆ ಅರಶಿನ-ಕುಂಕುಮವನ್ನಿಟ್ಟರು; ಕೈಯಾರೆ ಹೊಸ ಸೀರೆಯನ್ನುಡಿಸಿದರು. ಮಂತ್ರಸಹಿತವಾಗಿ ನೈವೇದ್ಯವನ್ನು ಸಮರ್ಪಿಸಿ ಅದರಲ್ಲೊಂದು ಭಾಗವನ್ನು ಅವರಿಗೆ ತಾವೇ ತಿನ್ನಿಸಿದರು. ಬಳಿಕ ತಾಂಬೂಲವನ್ನು ನಿವೇದಿಸಿದರು. ಶಾರದಾದೇವಿಯವರು ಸಾಕ್ಷಾತ್ ಜಗನ್ಮಾತೆಯೇ ಆಗಿ ಪೂಜೆಯ ಪ್ರತಿಯೊಂದು ಅಂಶ ವನ್ನೂ ಸ್ವೀಕರಿಸಿದರು.

ಪೂಜೆ ಪ್ರಾರಂಭವಾಗುವಾಗಲೇ ಭಾವಾವಸ್ಥೆಯಲ್ಲಿದ್ದ ಶಾರದಾದೇವಿಯವರು ಪೂರ್ಣಾಹುತಿಯ ವೇಳೆಗೆ ಬಾಹ್ಯಪ್ರಜ್ಞೆಯನ್ನು ಕಳೆದುಕೊಂಡು ಸಂಪೂರ್ಣ ಸಮಾ ಧಿಸ್ಥರಾದರು. ಶ್ರೀರಾಮಕೃಷ್ಣರು ಕೂಡ ಅರೆಬಾಹ್ಯಾವಸ್ಥೆಯಲ್ಲಿ ಮಂತ್ರೋಚ್ಚಾರಣೆ ಮಾಡುತ್ತಮಾಡುತ್ತ ಈಗ ಗಾಢ ಸಮಾಧಿಗೇರಿಬಿಟ್ಟರು. ಪೂಜ್ಯ-ಪೂಜಕರಿಬ್ಬರೂ ಇಂದ್ರಿಯರಾಜ್ಯವನ್ನು ಅತಿಕ್ರಮಿಸಿ ಆತ್ಮಭಾವದಲ್ಲಿ ಏಕೀಭವಿಸಿದರು; ಸಚ್ಚಿದಾನಂದ ದಲ್ಲಿ ತಾದಾತ್ಮ್ಯ ಹೊಂದಿದರು!

ನಡುರಾತ್ರಿ ಕಳೆದಮೇಲೆ ಶ್ರೀರಾಮಕೃಷ್ಣರಲ್ಲಿ ಬಾಹ್ಯಪ್ರಜ್ಞೆಯ ಲಕ್ಷಣಗಳು ಸ್ವಲ್ಪ ಸ್ವಲ್ಪವಾಗಿ ಕಾಣಿಸಿಕೊಂಡುವು. ಈಗ ಅವರು, ತಮ್ಮ ಮುಂದೆ ಮಾನುಷರೂಪಿಣಿ ಯಾಗಿ ವಿರಾಜಿಸುತ್ತಿದ್ದ ಜಗನ್ಮಾತೆಯ ಪದತಲದಲ್ಲಿ ತಮ್ಮ ಸಕಲ ಸಾಧನೆಗಳ ಫಲ ಮತ್ತು ಜಪಮಾಲೆಗಳೊಂದಿಗೆ ತಮ್ಮ ಸರ್ವಸ್ವವನ್ನೂ ಸಮರ್ಪಣೆ ಮಾಡಿಕೊಂಡರು. ಬಳಿಕ ಅಂಜಲಿಬದ್ಧರಾಗಿ,

*ಓಂ ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ।*
*ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತು ತೇ॥*

ಎಂದು ಸ್ತುತಿಸುತ್ತ ಸಾಷ್ಟಾಂಗ ಪ್ರಣಾಮ ಮಾಡಿದರು.

ಪೂಜೆ ಮುಗಿಯಿತು. ಶಾರದಾದೇವಿಯವರು ಬಹಿರ್ಮುಖರಾದರು. ಶ್ರೀರಾಮ ಕೃಷ್ಣರಿಗೆ ಮನದಲ್ಲೇ ನಮಿಸಿ ನಡಬತ್ತಿನತ್ತ ನಡೆದರು. ಇಂದಿಗೆ ಶ್ರೀರಾಮಕೃಷ್ಣರ ಆಧ್ಯಾ ತ್ಮಿಕ ಸಾಧನೆಯು ಪರಿಸಮಾಪ್ತಿಗೊಂಡಿತು. ಅವರ ದೇವಮಾನವತ್ವವು ಪರಿಪೂರ್ಣ ಅಭಿವ್ಯಕ್ತಿ ಪಡೆಯಿತು. ಇದರೊಂದಿಗೆ ಶಾರದಾದೇವಿಯವರು ಜಗನ್ಮಾತೃತ್ವವನ್ನೈದರು.

ಶ್ರೀರಾಮಕೃಷ್ಣರು ಶಾರದಾದೇವಿಯವರಿಗೆ ಸಲ್ಲಿಸಿದ ಈ ಬಗೆಯ ವಿಶೇಷ ಪೂಜೆಯು ಬಂಗಾಳದಲ್ಲಿ 'ಷೋಡಶೀಪೂಜೆ' ಎಂದು ಪ್ರಸಿದ್ಧ. ಷೋಡಶೀ ಎಂಬುದು ಜಗನ್ಮಾತೆಯ ಹೆಸರುಗಳಲ್ಲೊಂದು. ದೇವಿಯು ದಶಮಹಾವಿದ್ಯೆಯರೆಂದು ಕರೆಯ

---

*ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನೀಯ, ಮಧುಪರ್ಕ, ಪುನರಾಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ವಂದನೆ—ಈ ಹದಿನಾರು ಅಂಗಗಳನ್ನೊಳಗೊಂಡದ್ದೇ ಷೋಡಶೋಪಚಾರ ಪೂಜೆ.

ಲ್ಪಡುವ ಹತ್ತು ಪ್ರಮುಖರೂಪಗಳಿಂದ ವ್ಯಕ್ತವಾಗುತ್ತಾಳೆಂದು ಶಾಸ್ತ್ರಗಳಲ್ಲಿ ಹೇಳಿದೆ. ಕಾಳೀ, ತಾರಾ, ಷೋಡಶೀ, ಭುವನೇಶ್ವರೀ, ಭೈರವೀ, ಛಿನ್ನಮಸ್ತಾ, ಧೂಮವತೀ, ಬಗಲಾ, ಮಾತಂಗೀ ಮತ್ತು ಕಮಲಾ—ಇವೇ ಆ ಹತ್ತು ದೇವತೆಗಳ ಹೆಸರುಗಳು. ಇವರಲ್ಲಿ ಮೂರನೆಯವಳಾದ ಷೋಡಶಿಯು ಹದಿನಾರರ ಹರೆಯದ, ಪರಮ ಲಾವಣ್ಯವತಿಯಾದ ಕನ್ಯೆ. (ಶ್ರೀರಾಮಕೃಷ್ಣರು ಹಿಂದೆಯೇ ತಮ್ಮ ಹಲವಾರು ದರ್ಶನ ಗಳಲ್ಲಿ ಈಕೆಯನ್ನು ಕಂಡಿದ್ದರು.) ಈಕೆಯ ಪೂಜೆಯೇ ಷೋಡಶೀಪೂಜೆ. ಈ ಪೂಜಾ ವಿಧಾನದಲ್ಲಿ ಜಗನ್ಮಾತೆಯ ಪ್ರತೀಕವಾಗಿ ಕನ್ಯಾಕುಮಾರಿಯ ಚಿತ್ರವನ್ನಾಗಲಿ, ಕಲಶ ವನ್ನಾಗಲಿ, ಯಂತ್ರವನ್ನಾಗಲಿ, ಮಣ್ಣಿನ ಪ್ರತಿಮೆಯನ್ನಾಗಲಿ ಪೂಜಿಸುತ್ತಾರೆ. ಇವುಗಳ ಬದಲಾಗಿ ಎಳೆಯ ವಯಸ್ಸಿನ ಅವಿವಾಹಿತ ಬಾಲಕಿಯನ್ನೇ ಪೀಠದ ಮೇಲೆ ಕುಳ್ಳಿರಿಸಿ ಪೂಜಿಸುವ ಸಂಪ್ರದಾಯವೂ ಇದೆ. ಇದಕ್ಕೆ ಕುಮಾರೀಪೂಜೆ ಎನ್ನುತ್ತಾರೆ. ಇಲ್ಲಿ ಶ್ರೀರಾಮಕೃಷ್ಣರು ತಮ್ಮ ಪತ್ನಿಯನ್ನೇ ಜಗನ್ಮಾತೆಯ ಪ್ರತೀಕವಾಗಿ ಕಂಡು ಪೂಜಿಸಿದರು. ಇದು ಮಾತ್ರ ಒಂದು ಅಭೂತಪೂರ್ವವಾದ ಅದ್ಭುತ ಪ್ರಸಂಗವೆನ್ನಬೇಕು.

ಶ್ರೀರಾಮಕೃಷ್ಣ-ಶ್ರೀಶಾರದಾದೇವಿ ಇಬ್ಬರ ಜೀವನದಲ್ಲೂ ಈ ಘಟನೆಗೆ ಅತ್ಯಂತ ಮಹತ್ವದ ಸ್ಥಾನ. ಮತ್ತು ಇದು ತುಂಬ ಸಾಂಕೇತಿಕವೂ ಅರ್ಥಪೂರ್ಣವೂ ಆದದ್ದು. ಈ ಪೂಜೆಯ ಮೂಲಕ ಶ್ರೀರಾಮಕೃಷ್ಣರು ಮಾನವನಲ್ಲಿ ಅಡಗಿರುವ ಮೃಗೀಯತೆ ಯನ್ನು ಮರ್ದನಮಾಡಿ ತೋರಿಸಿದರು; ಭೌತಿಕ ಶರೀರದ ಮೇಲೆ ಆತ್ಮದ ಪ್ರಭುತ್ವ ವನ್ನು ಪ್ರತಿಷ್ಠಾಪಿಸಿದರು. ಸ್ವಪತ್ನಿಯಲ್ಲಿ ಜಗನ್ಮಾತೆಯನ್ನು ದರ್ಶಿಸಿ, ಜಗದ ಜನರು ಕಂಡುಕೇಳರಿಯದ ಅದ್ಭುತವನ್ನು ಪ್ರದರ್ಶಿಸಿದರು. ಅವರ ಕಾಮರಹಿತ ದಾಂಪತ್ಯ ಜೀವನದ ಪರಮಾದರ್ಶವನ್ನು ಈ ಮೂಲಕ ಜಗತ್ತು ಗುರುತಿಸುವಂತಾಯಿತು. ಅಲ್ಲದೆ ಸಮಸ್ತ ಸ್ತ್ರೀಸಮುದಾಯದ ಪ್ರತೀಕದಂತಿರುವ ಶಾರದಾದೇವಿಯವರಲ್ಲಿ ಜಗ ನ್ಮಾತೆಯನ್ನು ಆವಾಹನೆ ಮಾಡಿ ಪೂಜಿಸುವುದರ ಮೂಲಕ ಶ್ರೀರಾಮಕೃಷ್ಣರು ಸ್ತ್ರೀಕುಲವನ್ನೇ ಅತ್ಯುನ್ನತ ಸ್ಥಾನದಲ್ಲಿ ಪ್ರತಿಷ್ಠಾಪಿಸಿದರು.

ಅಲ್ಲದೆ, ಸ್ವಯಂ ಶಾರದಾದೇವಿಯವರ ಮಾಹಾತ್ಮ್ಯವನ್ನೂ ಎತ್ತಿಹಿಡಿಯುವ ಘಟನೆ ಈ ಷೋಡಶೀಪೂಜೆ. ಪರಿಪೂರ್ಣವಾಗಿ ಆವಿರ್ಭಾವಗೊಂಡ ಆಧ್ಯಾತ್ಮಿಕ ಶಕ್ತಿಯು ಕೋಟಿಸೂರ್ಯಪ್ರಭೆಗಿಂತ ಪ್ರಖರ. ಇಂಥ ದಿವ್ಯಶಕ್ತಿಸಂಪನ್ನರಾದ ಪತಿ ಯಿಂದ ಪೂಜೆ ಮಾಡಿಸಿಕೊಳ್ಳಬೇಕಾದರೆ, ಶಾರದಾದೇವಿಯವರ ಅಂತಸ್ಸತ್ತ್ವ, ಆಧ್ಯಾತ್ಮಿಕ ಮಟ್ಟ ಎಂಥದಿರಬೇಕು! ಅಷ್ಟೇ ಅಲ್ಲ, ಶ್ರೀರಾಮಕೃಷ್ಣರ ಸಕಲ ಸಾಧನೆಗಳ ಫಲವನ್ನು ಸ್ವೀಕರಿಸಿ ಅರಗಿಸಿಕೊಳ್ಳಬೇಕಾದರೆ ಅವರ ಸಾಮರ್ಥ್ಯ ಎಷ್ಟಿದ್ದಿರಬೇಕು! ಅಲ್ಲದೆ ಒಂದು ಸಾಮಾನ್ಯ ಹೊಗಳಿಕೆಯ ಮಾತನ್ನು ಕೇಳಿದರೇ ಸಾಕು, ಜನರ ಮನಸ್ಸು ಹುಣ್ಣಿಮೆಯ ಸಮುದ್ರದಂತೆ ಉಬ್ಬುತ್ತದೆ. ಹಾಗಿರುವಾಗ, ಕೇವಲ ಒಬ್ಬ ಹಳ್ಳೀ ಹೆಂಗಸಾದ ಅವರು ಷೋಡಶೋಪಚಾರ ಪೂಜೆಯನ್ನು ಸ್ವೀಕರಿಸಿಯೂ ನಿಶ್ಚಲ-ನಿರ್ವಿಕಾರ ಚಿತ್ತರಾಗಿದ್ದುದು ಹೇಗೆ? ಮುಂದೊಮ್ಮೆ ಅವರ ಕೆಲವು ಭಕ್ತೆಯರು ಕುತೂಹಲ ತಾಳಲಾರದೆ ಅವರನ್ನೇ ಕೇಳುತ್ತಾರೆ:

"ಅಮ್ಮಾ, ನೀವು ಅಷ್ಟೊಂದು ಲಜ್ಜೆಯ ಸ್ವಭಾವದವರು. ಹೀಗಿರುವಾಗ, ನೀವು ಶ್ರೀರಾಮಕೃಷ್ಣರಿಂದ ಹೇಗೆ ಪೂಜೆ ಮಾಡಿಸಿಕೊಂಡಿರಿ?"

ಇದಕ್ಕೆ ಅವರಿಂದ ದೊರೆತ ಚುಟುಕಾದ ಉತ್ತರ ಇದು:

"ಆಗ ನಾನು ನಾನಾಗಿರಲಿಲ್ಲ..."

ಎಂದರೆ, ಆಗ ಅವರು ಜಗನ್ಮಾತೆಯೇ ಆಗಿ ಪೂಜೆಯನ್ನು ಸ್ವೀಕರಿಸಿದರೆಂದು ನಾವು ಊಹಿಸಬೇಕು.

ಆ ಷೋಡಶೀಪೂಜೆಯ ಕಾಲದಲ್ಲಿ ಶ್ರೀರಾಮಕೃಷ್ಣರು ತಮ್ಮ ಸಕಲ ಸಾಧನೆಗಳ ಫಲವನ್ನು ಶಾರದಾದೇವಿಯವರಿಗೆ ಸಮರ್ಪಿಸಿದ್ದನ್ನು ನೋಡಿದೆವು. ಹೀಗೆ ಶಾರದಾ ದೇವಿಯವರು ಸ್ವತಃ ಯಾವುದೇ ಆಧ್ಯಾತ್ಮಿಕ ಸಾಧನೆಯನ್ನು ಕೈಗೊಳ್ಳದಿದ್ದರೂ, ಆ ಎಳೆಯ ವಯಸ್ಸಿನಲ್ಲಿಯೇ ಅಪಾರ ಆಧ್ಯಾತ್ಮಿಕ ಸಂಪತ್ತಿನ ಅಧಿಕಾರಿಣಿಯಾದರು. ಅವರು ಆ ವರೆಗೆ ಸಾಧನೆ ಎನ್ನಿಸಿಕೊಳ್ಳುವಂಥದೇನನ್ನೂ ಮಾಡಿರದಿದ್ದರೂ, ಮುಂದೆ ಶ್ರೀರಾಮಕೃಷ್ಣರ ಮಾರ್ಗದರ್ಶನದಲ್ಲಿ ಕೆಲವೊಂದು ಸಾಧನೆಗಳನ್ನು ಅಭ್ಯಸಿಸಿದರು. ಆದರೆ ಪತಿಸೇವೆಯೇ ಅವರ ಪ್ರಧಾನ ಸಾಧನೆಯಾಗಿ ಪರಿಣಮಿಸಿತು. ಪತಿವ್ರತೆಯ ಭಾಗಕ್ಕೆ ಪತಿಸೇವೆಯೂ ಆಧ್ಯಾತ್ಮಿಕ ಸಾಧನೆಯೂ ಬೇರೆಬೇರೆಯಲ್ಲ. ತಿಳಿವಳಿಕಸ್ಥಳಾದ ಪ್ರತಿಯೊಬ್ಬ ಹಿಂದೂ ಮಹಿಳೆಯೂ ತನ್ನ ಪತಿಯನ್ನು ಭಗವಂತನ ಪ್ರತಿರೂಪವೆಂದು ನಂಬುತ್ತಾಳೆ. ಸದ್ಭಾವದಿಂದ, ನಿಃಸ್ವಾರ್ಥಭಾವನೆಯಿಂದ ಮಾಡಿದ ಪತಿಸೇವೆಯೇ ತನ್ನ ಆತ್ಮೋನ್ನತಿಗೆ ಸಾಧಕವಾಗುತ್ತದೆಂಬುದು ಆಕೆಯ ದೃಢವಿಶ್ವಾಸ. ಹಿಂದೂ ಶಾಸ್ತ್ರಗಳೆಲ್ಲ ಇದನ್ನೇ ಸಾರುತ್ತವೆ. ಆದರೆ, ಪತಿಯಾದವನು ಕೇವಲ ಒಬ್ಬ ಸಾಮಾನ್ಯ ವ್ಯಕ್ತಿಯಾಗಿದ್ದರೆ ? ಆಗಲೂ ಕೂಡ ಸತಿಯು ಉದಾತ್ತಭಾವದಿಂದ ಆತನ ಸೇವೆ ಸಲ್ಲಿಸಿದರೆ ಅವಳು ಆತ್ಮೋನ್ನತಿ ಹೊಂದುವುದು ನಿಶ್ಚಿತ. ಇನ್ನು ಆ ಪತಿಯು ಸ್ವತಃ ಒಬ್ಬ ಆಧ್ಯಾತ್ಮಿಕ ವ್ಯಕ್ತಿಯಾಗಿದ್ದರೆ, ಅಂಥವನಿಗೆ ಸಲ್ಲಿಸಿದ ಸೇವೆಯ ಪ್ರಭಾವ ಮತ್ತೂ ಮಹತ್ತರವಾದುದು. ಅವನ ಪವಿತ್ರ ಸನ್ನಿಧಿಯಲ್ಲಿದ್ದುಕೊಂಡು ಅವನ ದಿವ್ಯ ವ್ಯಕ್ತಿತ್ವವನ್ನೇ ಚಿಂತಿಸುತ್ತ, ಪರಮಪ್ರೀತಿಯಿಂದ ಆತನ ಸೇವೆ ಮಾಡುವುದರ ಮೂಲಕ ಅವನ ಆಧ್ಯಾತ್ಮಿಕ ಅನುಭವದಲ್ಲಿ ಸಹಭಾಗಿಯಾಗುವ ಸುಯೋಗ ಅವಳಿಗೆ ಬಂದೇ ಬರುತ್ತದೆ.

ಶಾರದಾದೇವಿಯವರಿಗೆ ಲಭಿಸಿದ ಸೌಭಾಗ್ಯ ಈ ಬಗೆಯದು. ಅವರ ಪತಿಯಾದರೂ ಯಾರು ?—ದೇವಮಾನವ ಶ್ರೀರಾಮಕೃಷ್ಣರು ! ಅಂತಹ ಪರಮಪುರುಷನಿಂದ ಹೊರಹೊಮ್ಮುವ ಆಧ್ಯಾತ್ಮಿಕ ಶಕ್ತಿಯ ಪಾವನ ತರಂಗದಲ್ಲಿ ಮಿಂದವರು ಪುನೀತರಾಗುವುದರಲ್ಲಿ ಸಂದೇಹವೇನಿದೆ ? ಅವತಾರಪುರುಷನ ಸಾನ್ನಿಧ್ಯವೇ ಒಂದು ಸುಯೋಗ. ಆತನ ಶುದ್ಧ ಚಾರಿತ್ರ್ಯದ ಧ್ಯಾನ-ಚಿಂತನವೇ ಮಹಾ ಯೋಗ. ಆತನ ದಿವ್ಯವ್ಯಕ್ತಿತ್ವವನ್ನು ಧ್ಯಾನಿಸುತ್ತ ಧ್ಯಾನಿಸುತ್ತ, ಮನವು ದೇಹಬುದ್ಧಿಯನ್ನು ಬಿಟ್ಟು ಮೇಲೇರುತ್ತದೆ; ಕ್ರಮೇಣ ಆತ್ಮಸ್ಥವಾಗುತ್ತದೆ. ಹೀಗೆ ಶಾರದಾದೇವಿಯವರಿಗೆ ದೇವಮಾನವ ಶ್ರೀರಾಮಕೃಷ್ಣರ ಸಾಮೀಪ್ಯ-ಸೇವೆಗಳ ಸೌಭಾಗ್ಯದೊಂದಿಗೆ ಅವರ ದಿವ್ಯ ಚೇತನದಲ್ಲಿ ತಾದಾತ್ಮ್ಯಹೊಂದುವ ಯೋಗ, ಸುಯೋಗ !

ಆದರೆ ಮಾಡಿದ ಸೇವೆ ಆಧ್ಯಾತ್ಮಿಕ ಶಕ್ತಿಯಾಗಿ ಪರಿವರ್ತನೆಗೊಳ್ಳಬೇಕಾದರೆ ಭಕ್ತಿಯುತ ಭಗವದ್ಧ್ಯಾನ ಅತ್ಯಗತ್ಯ. ಭಾವರಹಿತವಾದ ಸೇವಾಕಾರ್ಯ ಶುಷ್ಕ, ಕೇವಲ ಯಾಂತ್ರಿಕ. ಸೇವೆ ಸಾರ್ಥಕವಾಗಬೇಕಾದರೆ ಆದರೊಂದಿಗೆ ಪ್ರೀತಿಯುತ ಸದ್ಭಾವನೆಯ ಸಹಯೋಗವಿರಬೇಕು. ಭಗವದ್ಧ್ಯಾನದಿಂದ ಮಾತ್ರ ಇಂಥ ಸದ್ಭಾವನೆ ಲಭ್ಯವಾದೀತು. ಶ್ರೀರಾಮಕೃಷ್ಣರು ತಮ್ಮ ಸತಿಗೆ ನೀಡಿದ ಆಧ್ಯಾತ್ಮಿಕ ಶಿಕ್ಷಣದಲ್ಲಿ ಭಕ್ತಿಸಾಧನೆ, ಭಗವ

ದ್ಧ್ಯಾನ ಇವುಗಳಿಗೆ ಪ್ರಧಾನಸ್ಥಾನ. ಶಾರದಾದೇವಿಯವರು ಈ ಬಗೆಯ ಸದ್ಭಾವದಿಂದ ಪತಿಯ ಹಾಗೂ ಅತ್ತೆಯ ಸೇವೆ ಮಾಡಿದರು. ಅದರಲ್ಲೂ ಅತ್ತೆ ಚಂದ್ರಮಣಿ ಈಗ ವೃದ್ಧಾಪ್ಯದಿಂದಾಗಿ ನಿರ್ಬಲಳಾಗಿರುವಳಲ್ಲವೆ! ಎಲ್ಲದಕ್ಕೂ ಆಕೆ ಸೊಸೆಯನ್ನೇ ನೆಚ್ಚಿಕೊಂಡಿರಬೇಕಾಗಿದೆ. ಇದನ್ನರಿತ ಶಾರದಾದೇವಿಯವರು ಅತ್ತೆಗೆ ಅತ್ಯಂತ ಸಂತೋಷವಾಗುವಂತೆ, ತಮ್ಮ ಅನನುಕೂಲಗಳೊಂದನ್ನೂ ಲೆಕ್ಕಿಸದೆ ಸೇವೆ ಮಾಡಿದರು.

ಹೀಗೆ ಸುಮಾರು ಒಂದು ವರ್ಷ ಕಳೆಯಿತು. ಅಷ್ಟರಲ್ಲಿ ಶಾರದಾದೇವಿಯವರು ಕಾಯಿಲೆ ಬಿದ್ದರು. ಶ್ರೀರಾಮಕೃಷ್ಣರು ತಮ್ಮ ಭಕ್ತನಾದ ಶಂಭುಮಲ್ಲಿಕನ ಮೂಲಕ ಚಿಕಿತ್ಸೆಗೆ ವ್ಯವಸ್ಥೆ ಮಾಡಿಸಿದರು. ಆದರೆ ಚಿಕಿತ್ಸೆಯಿಂದೇನೂ ಉಪಯೋಗ ಕಾಣಲಿಲ್ಲ. ಆಗ ಶಾರದಾದೇವಿಯವರು, 'ಈ ಸ್ಥಿತಿಯಲ್ಲಿ ನನ್ನಿಂದ ಇಲ್ಲಿ ಯಾರಿಗೂ ಉಪಯೋಗವಿಲ್ಲ. ನನ್ನಿಂದಾಗಿ ಇವರಿಗೆ ಇನ್ನಷ್ಟು ಆತಂಕ, ತೊಂದರೆ. ಆದ್ದರಿಂದ ಕೆಲಕಾಲ ಊರಿಗೆ ಹೋಗಿಬರುವುದು ವಾಸಿ' ಎಂದು ಚಿಂತಿಸಿ ೧೮೭೫ರ ಅಕ್ಟೋಬರಿನಲ್ಲಿ ಜಯರಾಂಬಾಟಿಗೆ ಹೊರಟರು.

ಮಥುರಾನಾಥ ತೀರಿಕೊಂಡ ಸುಮಾರು ಒಂದು ವರ್ಷದ ಬಳಿಕ, ಆತನ ಸ್ಥಾನವನ್ನು ತುಂಬಲೋ ಎಂಬಂತೆ ಶ್ರೀರಾಮಕೃಷ್ಣರಿಗೆ ಮತ್ತೊಬ್ಬ 'ರಸದ್ದಾರ' ಒದಗಿಬಂದ. ಇವನೇ ನಾವು ಹಿಂದೆ ನೋಡಿದ ಶಂಭುಚರಣ ಮಲ್ಲಿಕ. ಈತ ಕಲ್ಕತ್ತದ ಸಿಂದೂರಿಯಾಪಟಿ ಎಂಬ ಮೊಹಲ್ಲೆಯ ನಿವಾಸಿ; ದೊಡ್ಡ ಶ್ರೀಮಂತ. ಶ್ರೀಮಂತಿಕೆಗೆ ತಕ್ಕಂಥ ಹೃದಯವಂತಿಕೆ. ತನ್ನ ಔದಾರ್ಯದಿಂದ ಈತ ಕಲ್ಕತ್ತದಲ್ಲೆಲ್ಲ ಹೆಸರುವಾಸಿಯಾಗಿದ್ದ. ಸ್ವಭಾವತಃ ಧಾರ್ಮಿಕನೂ ದೈವಭಕ್ತನೂ ಆದ ಇವನು ಬ್ರಾಹ್ಮಸಮಾಜದ ಬೋಧನೆಗಳಿಗೆ ಮನಸೋತವನು.

ಶ್ರೀರಾಮಕೃಷ್ಣರ ಪರಿಚಯವಾದ ಕೆಲದಿನಗಳಲ್ಲೇ ಶಂಭುಮಲ್ಲಿಕ ಅವರ ಅತ್ಯಂತ ಗಾಢ ಭಕ್ತನಾದ. ಅಲ್ಲದೆ ಶಾರದಾದೇವಿಯವರ ಬಗ್ಗೆಯೂ ಅವನಿಗಿದ್ದ ಭಕ್ತಿ ಅಸದಳವಾದದ್ದು. ಶಂಭುಮಲ್ಲಿಕನ ಹೆಂಡತಿಯೂ ಅವನಿಗೆ ಅನುರೂಪಳಾದವಳು. ಶ್ರೀರಾಮಕೃಷ್ಣರ ಹಾಗೂ ಶಾರದಾದೇವಿಯವರ ಸಕಲ ಅಗತ್ಯಗಳನ್ನು ಅರಿತುಕೊಂಡು ಶಂಭುಮಲ್ಲಿಕ ಪರಮಾನಂದದಿಂದ ಅವನ್ನು ತಾನಾಗಿಯೇ ಒದಗಿಸಿಕೊಡುತ್ತಿದ್ದ.

ಶ್ರೀರಾಮಕೃಷ್ಣರನ್ನು ಶಂಭು 'ಗುರೂಜಿ' ಎಂದು ಸಂಬೋಧಿಸುತ್ತಿದ್ದ. ಆದರೆ ಅವರಿಗೆ ಇಂತಹ ಸಂಬೋಧನೆ ಸಹ್ಯವಾಗುತ್ತಿರಲಿಲ್ಲ. 'ಗುರು' 'ಸ್ವಾಮಿ' 'ಮಹಾರಾಜ್' ಇತ್ಯಾದಿಯಾಗಿ ಯಾರಾದರೂ ಕರೆದರೆ ಅವರಿಗೆ ತಾಳಲಾರದ ಹಿಂಸೆಯಾಗುತ್ತಿತ್ತು. ಆದ್ದರಿಂದ ಅವರು ಅವನಿಗೆ ಆಗಾಗ ಅಸಹನೆಯಿಂದಲೊ ಜುಗುಪ್ಸೆಯಿಂದಲೊ "ಯಾರಿಗೆ ಯಾರಯ್ಯ ಗುರು? ನೀನೇ ನನ್ನ ಗುರು!" ಎನ್ನುತ್ತಿದ್ದರು. ಆದರೂ ಶಂಭು ಹಾಗೆ ಕರೆಯುವುದನ್ನು ಬಿಡಲಿಲ್ಲ. ಅವನು ಶ್ರೀರಾಮಕೃಷ್ಣರಲ್ಲಿ ಅಂತಹ ದಿವ್ಯತೆಯನ್ನು ಕಂಡುಕೊಂಡಿರಬೇಕು ಹಾಗೂ ಆಧ್ಯಾತ್ಮಿಕವಾಗಿ ಮುಂದುವರಿಯಲು ಅವನಿಗೆ ಅವರಿಂದ ಬಹಳವಾದ ಸಹಾಯವೊದಗಿರಬೇಕು. ಅವನ ಹೆಂಡತಿ ಶ್ರೀರಾಮಕೃಷ್ಣರನ್ನು ಸಾಕ್ಷಾತ್ ಭಗವಂತನೆಂಬಂತೆ ಕಾಣುತ್ತಿದ್ದಳು. ಶಾರದಾದೇವಿಯವರು ದಕ್ಷಿಣೇಶ್ವರದಲ್ಲಿದ್ದಾಗ ಪ್ರತಿ ಮಂಗಳವಾರವೂ ಅವರನ್ನು ಒತ್ತಾಯದಿಂದ ತನ್ನ ಮನೆಗೆ ಕರೆದೊಯ್ದು, ಅವರಿಗೆ ಷೋಡಶೋಪಚಾರಸಹಿತವಾದ ಪೂಜೆ ಸಲ್ಲಿಸುತ್ತಿದ್ದಳು.

ದಕ್ಷಿಣೇಶ್ವರದ ದೇವಾಲಯಕ್ಕೆ ಸನಿಹದಲ್ಲೇ ಶಂಭುವಿಗೆ ಸೇರಿದ ಒಂದು ತೋಟವಿತ್ತು. ಶ್ರೀರಾಮಕೃಷ್ಣರು ಆತನೊಂದಿಗೆ ಎಷ್ಟೋ ದಿನ ಸಂಜೆಹೊತ್ತು ಅಲ್ಲಿ ಅಡ್ಡಾಡುತ್ತಿದ್ದರು. ಆಧ್ಯಾತ್ಮಿಕ ವಿಷಯವಾಗಿ ಸಂಭಾಷಣೆ ನಡೆಯುತ್ತಿತ್ತು. ಅವರ ಅಮೃತವಾಣಿಯನ್ನು ಆಲಿಸುತ್ತ ಶಂಭುಮಲ್ಲಿಕ ಆನಂದಭರಿತನಾಗುತ್ತಿದ್ದ. ಆತ ದೈವಭಕ್ತ; ಮಾತ್ರವಲ್ಲದೆ ವಿಚಾರವಂತ, ಬುದ್ಧಿವಂತ. ಆದ್ದರಿಂದ ಅವನೊಂದಿಗೆ ಮಾತನಾಡುವುದೆಂದರೆ ಶ್ರೀರಾಮಕೃಷ್ಣರಿಗೂ ಸಂತಸ.

ಶ್ರೀರಾಮಕೃಷ್ಣರು ಷೋಡಶೀಪೂಜೆಯನ್ನು ಮಾಡಿ, ಅದರೊಂದಿಗೆ ತಮ್ಮ ಸಾಧನಾಯಜ್ಞವನ್ನು ಸಮಾಪ್ತಿಗೊಳಿಸಿ ಒಂದು ವರ್ಷವಾಗುತ್ತ ಬಂದಿತ್ತು. ಅವರು ತಮ್ಮ ಮನಸ್ಸು ಬುದ್ಧಿ ಚಿತ್ತ ಅಹಂಕಾರ ಹೃದಯಗಳೆಲ್ಲವನ್ನೂ ಆ ಯಜ್ಞದಲ್ಲಿ ಆಹುತಿ

ಕೊಟ್ಟಾಗಿತ್ತು. ಈಗಾಗಲೇ ಅವರು ಅರವತ್ತನಾಲ್ಕು ತಂತ್ರಗಳ ಸಕಲ ಸಾಧನೆಗಳನ್ನೂ, ವೈಷ್ಣವ ಸಂಪ್ರದಾಯಕ್ಕನುಸಾರವಾದ ಪಂಚಭಾವದ ಸಾಧನೆಗಳನ್ನೂ ಒಂದೊಂದಾಗಿ ಮಾಡಿ ಮುಗಿಸಿದ್ದರು. ಅಲ್ಲದೆ, ವಿಧ್ಯುಕ್ತವಾಗಿ ಸಂನ್ಯಾಸವನ್ನೂ ಸ್ವೀಕರಿಸಿ ಅತ್ಯುಚ್ಚ ವಾದ ನಿರ್ಗುಣಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ್ದರು. ಇದೆಲ್ಲ ಸಾಲದೆಂಬಂತೆ, ಪರ ಕೀಯವಾದ ಇಸ್ಲಾಂ ಧರ್ಮದ ಸಾಧನೆಯಲ್ಲೂ ಗುರಿಮುಟ್ಟಿದ್ದರು. ಹಾಗಿರುವಾಗ ಅವರು ಮಾಡಬೇಕಾದ ಸಾಧನೆ ಮತ್ತೇನಿದ್ದೀತು!

ಆದರೆ ಅವರೀಗ ತಮಗೇ ಅರಿವಿಲ್ಲದಂತೆ ಮತ್ತೊಂದು ನೂತನ ಮಾರ್ಗದಿಂದ ಜಗನ್ಮಾತೆಯ ದರ್ಶನ ಮಾಡಲು ಅನುವಾಗುತ್ತಿದ್ದರು. ಇದೇ ಸಮಯದಲ್ಲಿ ಅವರಿಗೆ ಶಂಭುಮಲ್ಲಿಕನ ಮೂಲಕ ಕ್ರೈಸ್ತಧರ್ಮದ ಕುರಿತಾಗಿ ತಿಳಿದುಕೊಳ್ಳುವ ಅವಕಾಶವೊದ ಗಿತು. ಶಂಭುಮಲ್ಲಿಕ ಆಗಾಗ ಅವರಿಗೆ ಬೈಬಲನ್ನು ಓದಿಹೇಳುತ್ತಿದ್ದ. ಏಸುಕ್ರಿಸ್ತನ ಪವಿತ್ರ ಜೀವನವನ್ನೂ ಆತನ ಸಂದೇಶಗಳನ್ನೂ ಕೇಳಿದಾಗ ಶ್ರೀರಾಮಕೃಷ್ಣರ ಮೇಲುಂಟಾದ ಪರಿಣಾಮ ಅಪಾರ! ಲೀಲಾಮಯವಾದ ಆ ದಿವ್ಯ ಕಥನವನ್ನು ಕೇಳ ಕೇಳುತ್ತಿದ್ದಂತೆ, ಕ್ರಿಸ್ತಭಗವಂತನು ಬೋಧಿಸಿ ತೋರಿಸಿಕೊಟ್ಟ ಮಾರ್ಗವನ್ನು ಅನುಸರಿಸಿ ಸಾಧನೆ ಮಾಡಬೇಕೆಂಬ ಉತ್ಕಟೇಚ್ಛೆ ಅವರ ಮನದಲ್ಲಿ ಅತ್ಯಂತ ಸಹಜವಾಗಿ ಸ್ಫುರಿಸಿತು.

ಶ್ರೀರಾಮಕೃಷ್ಣರ ಮನಸ್ಸಿನಲ್ಲಿ ಈ ಇಚ್ಛೆ ಹುಟ್ಟುವುದೇ ತಡ, ಭಗವತಿಯ ಕೃಪೆಯಿಂದ ಅದು ಅದ್ಭುತವಾದ ರೀತಿಯಲ್ಲಿ ನೆರವೇರಿಯೇಬಿಟ್ಟಿತು! ಅದಕ್ಕಾಗಿ ಅವರು ತಾವಾಗಿಯೇ ಯಾವ ಪ್ರಯತ್ನವನ್ನೂ ಮಾಡಬೇಕಾಗಿ ಬರಲಿಲ್ಲ. ಅದು ನೆರ ವೇರಿದ ಬಗೆ ಅತ್ಯಂತ ಸ್ವಾರಸ್ಯಕರವಾಗಿದೆ.

ಕಾಳೀದೇವಾಲಯದ ದಕ್ಷಿಣಕ್ಕೆ ಯದುನಾಥ ಮಲ್ಲಿಕನೆಂಬಾತನ ತೋಟದ ಮನೆಯಿತ್ತು. ಈ ಯದುಮಲ್ಲಿಕನೂ ಅವನ ತಾಯಿಯೂ ಶ್ರೀರಾಮಕೃಷ್ಣರ ಪರಮ ಭಕ್ತರು. ಶ್ರೀರಾಮಕೃಷ್ಣರು ಯಾವಾಗಲಾದರೊಮ್ಮೆ ಆ ತೋಟಕ್ಕೆ ಅಡ್ಡಾಡಲು ಹೋಗು ತ್ತಿದ್ದರು. ಆ ಸಮಯದಲ್ಲಿ ಮನೆಯವರು ಇಲ್ಲದಿದ್ದರೆ ಸೇವಕರೇ ಅವರನ್ನು ಬರ ಮಾಡಿಕೊಂಡು, ದಿವಾನಖಾನೆಯನ್ನು ತೆರೆದು, ಅಲ್ಲಿ ವಿರಮಿಸಿ ಹೋಗುವಂತೆ ಅವ ರನ್ನು ಪ್ರಾರ್ಥಿಸಿಕೊಳ್ಳುತ್ತಿದ್ದರು.

ಒಮ್ಮೆ ಇಂಥದೊಂದು ಸಂದರ್ಭದಲ್ಲಿ ಶ್ರೀರಾಮಕೃಷ್ಣರು ಆ ಕೋಣೆಯಲ್ಲಿ ಕುಳಿತಿದ್ದರು. ಅಲ್ಲಿ ಗೋಡೆಯ ಮೇಲೆ ಸುಂದರವಾದ ಅನೇಕ ಪಟಗಳನ್ನು ತೂಗು ಹಾಕಲಾಗಿತ್ತು. ಮಾತೆ ಮೇರಿಯ ಮಡಿಲಲ್ಲಿ ಕುಳಿತಿರುವ ಬಾಲಕ್ರಿಸ್ತನ ಚಿತ್ರವೂ ಅವು ಗಳಲ್ಲೊಂದು. ಶ್ರೀರಾಮಕೃಷ್ಣರ ದೃಷ್ಟಿ ಆ ಚಿತ್ರದ ಮೇಲೆ ಬಿದ್ದೊಡನೆ ಅಲ್ಲಿಯೇ ನೆಟ್ಟು ಸ್ಥಿರವಾಯಿತು. ಆ ನಯನಮನೋಹರಮೂರ್ತಿಯನ್ನೇ ದಿಟ್ಟಿಸಿ ನೋಡುತ್ತ ಅವರು ತನ್ಮಯರಾಗಿ ಕುಳಿತುಬಿಟ್ಟರು. ಕ್ರಿಸ್ತನ ಅದ್ಭುತ ಜೀವನಕಥೆ ಅವರ ಮನಃಪಟ ಲದ ಮೇಲೆ ಚಲಚ್ಚಿತ್ರದೋಪಾದಿಯಲ್ಲಿ ಸರಿದುಹೋಗತೊಡಗಿತು. ಅವರು ಏಸು ಕ್ರಿಸ್ತನ ಆ ಚಿತ್ರವನ್ನೇ ಕಣ್ತುಂಬ ನೋಡುತ್ತಿದ್ದಾರೆ; ನೋಡನೋಡುತ್ತಿದ್ದಂತೆ ಆ ಚಿತ್ರ ಜೀವತಳೆದು ಜ್ಯೋತಿರ್ಮಯವಾಯಿತು! ಮೇರಿಯ ಹಾಗೂ ಆ ದಿವ್ಯ ಶಿಶುವಿನ ಶರೀರದಿಂದ ಜ್ಯೋತಿ ಕಿರಣಗಳು ಹೊರಟು ತಮ್ಮನ್ನು ಪ್ರವೇಶಿಸುತ್ತಿರುವಂತೆ, ಜೊತೆಗೇ ತಮ್ಮ ಅಂತರಂಗದ ಭಾವಗಳೆಲ್ಲ ಆಮೂಲಾಗ್ರವಾಗಿ ಪರಿವರ್ತನೆಗೊಳ್ಳು

ತ್ತಿರುವಂತೆ ಅನುಭವವಾಯಿತು ! ಹುಟ್ಟಿನಿಂದಲೂ ಬಂದ ತಮ್ಮ ಹಿಂದೂ ಸಂಸ್ಕಾರಗಳೆಲ್ಲ ಹೃದಯದ ಮೂಲೆಯೊಂದರಲ್ಲಿ ಅಡಗಿ ಮಾಯವಾಗಿ, ಅದರ ಬದಲಾಗಿ ಬೇರೆಯೇ ಸಂಸ್ಕಾರಗಳು ತಮ್ಮೊಳಗೆ ಉದ್ಭವವಾಗುತ್ತಿರುವುದನ್ನು ಅನುಭವಿಸುತ್ತ ಶ್ರೀರಾಮಕೃಷ್ಣರು ವಿಸ್ಮಿತರಾದರು; ಕಂಗಾಲಾದರು ! 'ನನಗಿದೆಂಥ ವಿಚಿತ್ರ ಅನುಭವವಾಗುತ್ತಿದೆಯಪ್ಪ !' ಎಂದು ಭಾವಿಸುತ್ತ ಪ್ರಯತ್ನಪೂರ್ವಕವಾಗಿ ಅದನ್ನು ತಡೆಗಟ್ಟಲು ನೋಡಿದರು. ಏನೂ ಪ್ರಯೋಜನವಾಗಲಿಲ್ಲ. 'ಅಮ್ಮಾ! ನನಗೆ ಇದೇನು ಮಾಡುತ್ತಿದ್ದೀಯೆ ?' ಎಂದು ಜಗನ್ಮಾತೆಯ ಬಳಿ ಮೊರೆಯಿಟ್ಟರು. ಆದರೆ ಎಷ್ಟೆಷ್ಟು ಪ್ರಯತ್ನಪಟ್ಟರೂ ಅವರ ಇಚ್ಛೆಯೇನೂ ನಡೆಯಲಿಲ್ಲ. ಆ ನೂತನ ಸಂಸ್ಕಾರದ ಅಲೆಗಳು ರಭಸದಿಂದ ನುಗ್ಗಿ, ಅವರ ಮನಸ್ಸಿನ ಪೂರ್ವಸಂಸ್ಕಾರಗಳನ್ನೆಲ್ಲ ನಿಮಿಷಾರ್ಧದಲ್ಲಿ ಕೊಚ್ಚಿಹಾಕಿದುವು. ಕಾಳೀ, ಕೃಷ್ಣ, ರಾಮನೇ ಮೊದಲಾದ ಹಿಂದೂ ದೇವದೇವಿಯರಲ್ಲಿ ಅವರಿಗಿದ್ದ ಭಕ್ತಿಭಾವ ಒಮ್ಮೆಗೇ ಮಾಯವಾಯಿತು ! ಅದರ ಸ್ಥಳದಲ್ಲಿ ದೇವದೂತ ಏಸುಕ್ರಿಸ್ತನ ಹಾಗೂ ಅವನು ಪ್ರವರ್ತನೆ ಮಾಡಿದ ಕ್ರೈಸ್ತಧರ್ಮದ ವಿಷಯದಲ್ಲಿ ಉತ್ಕಟವಾದ ಭಕ್ತಿ ಶ್ರದ್ಧೆಗಳು ಉದಿಸಿ ಹೃದಯವನ್ನು ತುಂಬಿದುವು. ವೇದಧರ್ಮದ ನೆನಪೇ ಅವರ ಮನಃಪಟಲದಿಂದ ಅಳಿಸಿಹೋಯಿತು. ಈಗ ಅವರ ಕನಸುಮನಸುಗಳಲ್ಲೆಲ್ಲ ಏಸುಕ್ರಿಸ್ತನೇ ! ಆತನ ಕರುಣೆ ಪ್ರೇಮ ನಿಸ್ವಾರ್ಥತೆಗಳ ನೆನಪೇ !

ಶ್ರೀರಾಮಕೃಷ್ಣರು ತಮ್ಮ ಕೋಣೆಗೆ ಹಿಂದಿರುಗಿದಮೇಲೂ ಈ ಭಾವ ಅವರಿಂದ ದೂರವಾಗಲಿಲ್ಲ. ಅವರೀಗ ಕಾಳೀಮಂದಿರಕ್ಕೆ ಹೋಗುವುದನ್ನೇ ಮರೆತರು. ಸುಮ್ಮನೆ ತಮ್ಮ ಕೋಣೆಯಲ್ಲಿ ಕುಳಿತು ಹಗಲಿರುಳೂ ಕ್ರಿಸ್ತನನ್ನೇ ಧ್ಯಾನಿಸತೊಡಗಿದರು. ಕ್ರಿಸ್ತಭಾವದಲ್ಲಿ ಮುಳುಗಿಹೋದರು. ಇಂತಹ ಸ್ಥಿತಿಯಲ್ಲಿರುವಾಗ ಅವರ ಅಂತಶ್ಚಕ್ಷುಸ್ಸಿಗೆ ಹಲವಾರು ದೃಶ್ಯಗಳು ಗೋಚರವಾಗತೊಡಗಿದುವು. ಇಗರ್ಜಿಗಳಲ್ಲಿ ಪಾದ್ರಿಗಳು ಕ್ರಿಸ್ತನ ಸಮ್ಮುಖದಲ್ಲಿ ವ್ಯಾಕುಲತೆಯಿಂದ ಪ್ರಾರ್ಥನೆ ಸಲ್ಲಿಸುತ್ತಿರುವುದು, ಆತನಿಗೆ ಧೂಪ-ದೀಪಗಳನ್ನು ನೈವೇದ್ಯ ಮಾಡುತ್ತಿರುವುದು—ಇವುಗಳನ್ನೆಲ್ಲ ಅವರು ಕಂಡರು.

ಹೀಗೆ ಮೂರು ದಿನಗಳ ಪರ್ಯಂತ ಈ ಕ್ರಿಸ್ತಭಾವ ಶ್ರೀರಾಮಕೃಷ್ಣರನ್ನು ನಿರಂತರವಾಗಿ ಆಕ್ರಮಿಸಿಬಿಟ್ಟಿತ್ತು. ಅವರ ಪ್ರತಿಯೊಂದು ಚಲನವಲನ ನಡೆನುಡಿಯಲ್ಲೂ ಅದು ಎದ್ದುಕಾಣುತ್ತಿತ್ತು. ಮೂರನೆಯ ದಿನ ಸಂಜೆ ಶ್ರೀರಾಮಕೃಷ್ಣರು ಅದೇ ಭಾವದಲ್ಲಿ ತತ್ಪರರಾಗಿ ಪಂಚವಟಿಯಡಿಯಲ್ಲಿ ಮೆಲ್ಲನೆ ನಡೆದಾಡುತ್ತಿದ್ದಾರೆ; ಆಗ ಅವರು ಅದ್ಭುತ ದೃಶ್ಯವೊಂದನ್ನು ಕಂಡರು: ಒಬ್ಬ ಸುಂದರನಾದ ಗೌರವರ್ಣದ ದಿವ್ಯ ಪುರುಷ; ನೆಟ್ಟದೃಷ್ಟಿಯಿಂದ ಅವರನ್ನೇ ನೋಡುತ್ತ, ಮೆಲ್ಲನೆ ಅವರತ್ತಲೇ ನಡೆದು ಬರುತ್ತಿದ್ದಾನೆ. ಪರಮಪ್ರಶಾಂತಿಯನ್ನು ಸೂಸುವ ನಯನದ್ವಯ; ಅಪೂರ್ವ ಕಾಂತಿಯಿಂದ ಶೋಭಿಸುವ ಮುಖಮಂಡಲ. ಆತನದು ಸ್ವಲ್ಪ ಚಪ್ಪಟೆಯಾದ ಮೂಗು—ಆದರೆ ಅದರಿಂದ ಅವನ ಸೌಂದರ್ಯ ಸ್ವಲ್ಪವೂ ಕುಂದಿಲ್ಲ. ಅವನನ್ನು ನೋಡುತ್ತಲೇ ಶ್ರೀರಾಮಕೃಷ್ಣರಿಗೆ ಗೊತ್ತಾಯಿತು—ಇವನು ಭಾರತೀಯನಲ್ಲ, ಐರೋಪ್ಯಸಂಜಾತ ಎಂದು. ಆದರೆ ಯಾರಿವನು ? ಅಪೂರ್ವ ದೈವತ್ವವನ್ನು ಬಿಂಬಿಸುತ್ತಿರುವ ಈ ಮಹಾಪುರುಷನಾರಿರಬಹುದು ? ನೋಡನೋಡುತ್ತಿದ್ದಂತೆ ಆ ವ್ಯಕ್ತಿ ಇನ್ನಷ್ಟು ಹತ್ತಿರ ಬಂದ. ಆಗ ಅವರ ಪವಿತ್ರ ಅಂತರ್ಯದೊಳಗಿನಿಂದ ಧ್ವನಿಯೊಂದು ತಾನಾಗಿಯೇ ಮೊಳಗಿತು:

"ಇವನೇ ಏಸುಕ್ರಿಸ್ತ!—ದುಃಖ ಸಂಕಟಗಳಿಂದ ಜೀವಕೋಟಿಯನ್ನು ಪಾರುಗೈಯಲೆಂದು ತನ್ನ ಹೃದಯದ ರಕ್ತವನ್ನೇ ಬಸಿದು ಹರಿಸಿದವನು! ಪ್ರತಿಯಾಗಿ ಸಹಮಾನವರಿಂದ ಅಸಹನೀಯವಾದ ಪೀಡನೆಯನ್ನೇ ಪಡೆದರೂ ನಗುನಗುತ್ತ ಜೀವತೆತ್ತವನು! ಮಹಾಯೋಗಿ! ಭಗವಂತನ ಪ್ರಿಯಪುತ್ರ ಏಸುಕ್ರಿಸ್ತ!"

ಆತನನ್ನು ನೋಡುತ್ತ ಭಾವೋತ್ಕಟತೆಯಿಂದ ಮೂಕರಾಗಿ ನಿಂತುಬಿಟ್ಟರು ಶ್ರೀರಾಮಕೃಷ್ಣರು. ಆಗ, ಮೆಲ್ಲನೆ ಅವರ ಬಳಿಗೈದ ಆ ಪ್ರಶಾಂತಮೂರ್ತಿ ಅವರನ್ನು ಗಾಢವಾಗಿ ತಬ್ಬಿಕೊಂಡು ಅವರಲ್ಲಿಯೇ ಲೀನನಾಗಿಬಿಟ್ಟ! ಶ್ರೀರಾಮಕೃಷ್ಣರ ಮನಸ್ಸು ಉನ್ನತ ಸ್ತರಕ್ಕೇರಿ ವಿರಾಟ್‌ಸ್ವರೂಪದ ಸಗುಣಬ್ರಹ್ಮದೊಂದಿಗೆ ಏಕೀಭವಿಸಿತು. ಈ ಅನುಭವವಾದ ಮೇಲೆ ಏಸುಕ್ರಿಸ್ತನು ಅವತಾರಪುರುಷನೆಂಬುದರ ಬಗ್ಗೆ ಅವರಿಗೆ ಯಾವ ಸಂಶಯವೂ ಉಳಿಯಲಿಲ್ಲ.

ಇದಾಗಿ ಹಲವಾರು ವರ್ಷಗಳ ತರುವಾಯ, ಅವರೊಮ್ಮೆ ತಮ್ಮ ಸುಶಿಕ್ಷಿತ ತರುಣಶಿಷ್ಯರೊಂದಿಗೆ ಮಾತನಾಡುವಾಗ ಸಾಂದರ್ಭಿಕವಾಗಿ ಕೇಳಿದರು:

"ಏನಪ್ಪ, ನೀವೆಲ್ಲ ಬೈಬಲ್ ಓದಿದ್ದೀರಲ್ಲ, ಕ್ರಿಸ್ತನ ದೇಹಾಕೃತಿಯನ್ನು ಅದರಲ್ಲಿ ಹೇಗೆ ಬಣ್ಣಿಸಿದೆ, ಹೇಳಬಲ್ಲಿರಾ? ನೋಡಲು ಅವನು ಹೇಗಿದ್ದ?"

ಇದಕ್ಕುತ್ತರವಾಗಿ ಆ ತರುಣರೆಂದರು:

"ಸ್ವಾಮಿ, ಕ್ರಿಸ್ತನ ರೂಪದ ವಿಷಯವಾಗಿ ಬೈಬಲಿನಲ್ಲಿ ಏನೂ ಹೇಳಿದಂತೆ ಕಾಣೆವು . . . ಆದರೆ ಅವನು ಯಹೂದ್ಯನಲ್ಲವೆ? ಸಹಜವಾಗಿಯೇ ಅವನು ಸುಂದರನೂ ಗೌರವರ್ಣದವನೂ ಆಗಿದ್ದಿರಬೇಕು. ಮತ್ತು ಅವನಿಗೆ ಪ್ರಶಾಂತವಾದ ನೀಳ್ಗಣ್ಣುಗಳೂ ನೀಳವಾದ ಮೂಗೂ ಇದ್ದಿರಬೇಕು ಎಂದು ಊಹಿಸಬಹುದು."

ಇದನ್ನು ಕೇಳಿ ಶ್ರೀರಾಮಕೃಷ್ಣರ ಮುಖದಲ್ಲಿ ಅಚ್ಚರಿ ಮೂಡಿತು. ಸ್ವಲ್ಪ ಚಿಂತಾಪರರಾಗಿ ನುಡಿದರು: "ಹೌದೆ? ಆದರೆ ಆ ದರ್ಶನದಲ್ಲಿ ನಾನು ಆತನ ಮೂಗು ಸ್ವಲ್ಪ ಚಪ್ಪಟೆಯಾಗಿದ್ದಂತೆ ಕಂಡೆನಲ್ಲ! ಅದೇಕೆ ಹಾಗೆ ಕಂಡಿತೊ ತಿಳಿಯದು . . ."

ಶಿಷ್ಯರು ಪ್ರತಿಯಾಗಿ ಏನೂ ಮಾತನಾಡಲಿಲ್ಲ. ಆದರೆ ಎಲ್ಲರೂ ಮನಸ್ಸಿನಲ್ಲಿ ಭಾವಿಸುತ್ತಿದ್ದರು, 'ಅಲ್ಲ, ಇದೊಳ್ಳೇ ತಮಾಷೆ! ಇವರು ಭಾವಾವೇಶದಲ್ಲಿ ಕಂಡ ಚಿತ್ರವು ಏಸುವಿನ ನಿಜವಾದ ರೂಪವನ್ನು ಹೋಲಬೇಕೆಂದರೆ ಹೇಗೆ ಸಾಧ್ಯ?' ಎಂದು. ಇತರ ಜನರು ಕಾಣಬಹುದಾದ ದೃಶ್ಯಗಳಿಗೂ ಶ್ರೀರಾಮಕೃಷ್ಣರು ಕಂಡ ದರ್ಶನಗಳಿಗೂ ಅಂತರವೇನಾದರೂ ಇರಬಹುದೆಂದು ಆ ಶಿಷ್ಯರಿಗೆ ಆಗ ಅನಿಸಿರಲಿಲ್ಲ. ಆದರೆ ಕ್ರೈಸ್ತ ಗ್ರಂಥಗಳಲ್ಲಿ ಕ್ರಿಸ್ತನ ದೇಹಾಕೃತಿಯ ಕುರಿತಾಗಿ ಮೂರು ಬಗೆಯ ವಿವರಣೆಗಳನ್ನು ಬರೆದಿಡಲಾಗಿದೆ; ಮತ್ತು ಅವುಗಳಲ್ಲೊಂದು, ಆತನ ಮೂಗು ಚಪ್ಪಟೆಯಾಗಿತ್ತೆಂದು ಉಲ್ಲೇಖಿಸುತ್ತದೆ ಎಂಬ ವಿಷಯ ಆ ಶಿಷ್ಯರಿಗೆ ಅನೇಕ ವರ್ಷಗಳ ಬಳಿಕ ತಿಳಿದುಬಂತು.

ಶ್ರೀರಾಮಕೃಷ್ಣರು ಏಸುಕ್ರಿಸ್ತನನ್ನು ಆರಾಧಿಸಿ ಸಾಕ್ಷಾತ್ಕರಿಸಿಕೊಂಡ ಈ ಪ್ರಸಂಗ ಅವರ ಲೀಲಾಮಯ ಜೀವನದಲ್ಲಿ ಅತ್ಯಂತ ಮಹತ್ವಪೂರ್ಣವಾದದ್ದು. ಅವರ ಅವತಾರೋದ್ದೇಶವನ್ನು ಪರಿಪೂರ್ಣಗೊಳಿಸುವಲ್ಲಿ ಇದಕ್ಕೊಂದು ವಿಶೇಷ ಸ್ಥಾನವಿದೆ. ಹಾಗೆ ನೋಡಿದರೆ ಶ್ರೀರಾಮಕೃಷ್ಣರು ಈ ಸಾಧನೆಯನ್ನು ಕೈಗೊಂಡುದೇ ಆಕಸ್ಮಿಕವಾಗಿಯೋ ಎಂಬಂತೆ ತೋರುತ್ತದೆ. ಅವರಿಗೆ ಕ್ರಿಸ್ತನ ಜೀವನದ ಹಾಗೂ ಕ್ರೈಸ್ತಧರ್ಮದ ಪರಿಚಯವಾದದ್ದು, ಆ ಕುರಿತಾಗಿ ಅವರಲ್ಲಿ ಆಸಕ್ತಿ ಮೂಡಿದ್ದು, ಅದರ ಪ್ರಕಾರ ಸಾಧನೆ ಮಾಡಬೇಕೆಂಬ ಪ್ರಬಲೇಚ್ಛೆ ಉದಿಸಿದುದು ಮತ್ತು ಆ ಇಚ್ಛೆ ಈಡೇರಿ ಅವರು ಕೃತಕೃತ್ಯರಾದದ್ದು—ಇವೆಲ್ಲವೂ ಕೆಲವೇ ದಿನಗಳ, ಹೆಚ್ಚೆಂದರೆ ಕೆಲವು ವಾರಗಳ ಅವಧಿಯಲ್ಲಿ ನಡೆದುಹೋಯಿತು! ಇಂಥದೊಂದು ಸಂಗತಿ ನಿಜಕ್ಕೂ ನಡೆಯಲು ಸಾಧ್ಯವೆ?—ಎಂಬ ಪ್ರಶ್ನೆ ನಮ್ಮಲ್ಲೆದ್ದರೆ ಅದು ಸಹಜವೇ. ಕ್ರೈಸ್ತರಾಗಿಯೇ ಹುಟ್ಟಿ ಬೆಳೆದು, ಶ್ರದ್ಧಾಭಕ್ತಿಗಳಿಂದ ಆ ಮಾರ್ಗದಲ್ಲಿ ಮುಂದುವರಿದ ಸಾಧಕರಿಗೇ ಆದರೂ ಹಾಗೆ ಅಷ್ಟು ಬೇಗನೆ ಯಶಸ್ವಿಗಳಾಗಲು, ಕೃತಾರ್ಥರೆನಿಸಿಕೊಳ್ಳಲು ಸಾಧ್ಯವೆ? ಅಂಥದೊಂದು ಸಂಗತಿ ದುಸ್ಸಾಧ್ಯವೆಂದೇ ಹೇಳಬೇಕಾಗುತ್ತದೆ. ಆದರೆ ಇಲ್ಲಿ ನಾವು ವಿಚಾರ ಮಾಡುತ್ತಿರುವುದು ಯಾವ ವ್ಯಕ್ತಿಯ ಕುರಿತಾಗಿ? ಶ್ರೀರಾಮಕೃಷ್ಣ ಪರಮಹಂಸರ ಕುರಿತಾಗಿ! ಅವರ ಜೀವನವನ್ನು, ಅವರ ವ್ಯಕ್ತಿತ್ವವನ್ನು, ಅವರ ಮಾನಸಿಕ-ಆಧ್ಯಾತ್ಮಿಕ ಹಿನ್ನೆಲೆಯನ್ನು ನಾವು ಮರೆಯುವಂತಿಲ್ಲ. ಅತ್ಯಂತ ಕಷ್ಟಸಾಧ್ಯವಾದ ತಾಂತ್ರಿಕ ಸಾಧನೆಗಳಲ್ಲೂ, ಮತ್ತೂ ಕಠಿಣವಾದ ಅದ್ವೈತಮಾರ್ಗದಲ್ಲೂ ಕೃತಕೃತ್ಯರೆನಿಸಿಕೊಳ್ಳಲು ಅವರಿಗೆ ಹೆಚ್ಚೆಂದರೆ ಮೂರು ಮೂರು ದಿನಗಳ ಅವಧಿ ಸಾಕಾಗಿರಲಿಲ್ಲವೆ? ಅವರ ಕ್ರೈಸ್ತ-ಇಸ್ಲಾಂ ಧರ್ಮ ಸಾಧನೆಗಳಿಗೂ ಈ ಮಾತು ಅನ್ವಯವಾಗುತ್ತದೆ.

ಇಲ್ಲಿ ಮತ್ತೂ ಕೆಲವು ಪ್ರಶ್ನೆಗಳು ಏಳಬಹುದು: ಶ್ರೀರಾಮಕೃಷ್ಣರಿಗೆ ಕ್ರೈಸ್ತ-ಇಸ್ಲಾಂಗಳಂತಹ 'ಪರಕೀಯ' ಧರ್ಮಗಳ ತತ್ತ್ವ-ಬೋಧನೆಗಳನ್ನು ಅರಿಯಬೇಕು, ಅವುಗಳನ್ನು ಅನುಷ್ಠಾನ ಮಾಡಿ ಗುರಿ ಸೇರಬೇಕು ಎಂಬ ಇಚ್ಛೆ ಉಂಟಾದುದಾದರೂ ಹೇಗೆ? ಅದರಿಂದ ಅವರು ಯಾವ ಪ್ರಯೋಜನವನ್ನು ಹೊಂದಬೇಕಾಗಿತ್ತು? ನಿಜಕ್ಕೂ ಅದರಿಂದೆಲ್ಲ ಅವರಿಗೆ ಏನಾದರೂ ಲಾಭವಾಯಿತೆ?

ಇವುಗಳಿಗೆ ಉತ್ತರ ಶ್ರೀರಾಮಕೃಷ್ಣರ ಮಾತುಗಳಲ್ಲೂ ಅವರ ಜೀವನದಲ್ಲೂ ಸ್ಪಷ್ಟವಾಗಿಯೇ ಇದೆ. ಮೊದಲನೆಯದಾಗಿ ಅವರ ದೃಷ್ಟಿಗೆ ಯಾವ ಧರ್ಮವೂ ಯಾವ ಸಾಧನಾಮಾರ್ಗವೂ ಎಂದೂ 'ಪರಕೀಯ'ವೆಂಬಂತೆ ತೋರಲಿಲ್ಲ. 'ಎಲ್ಲ ಮಾರ್ಗಗಳೂ ಸಾಧಕನನ್ನು ಒಂದೇ ಸತ್ಯದೆಡೆಗೆ ಕರೆದೊಯ್ಯುತ್ತವೆಯೆ?'—ಇದು ಒಬ್ಬ ಜಿಜ್ಞಾಸು-ಸಾಧಕನಾಗಿ ಶ್ರೀರಾಮಕೃಷ್ಣರನ್ನು ಕಾಡಿದ ಪ್ರಶ್ನೆ. ಅದ್ದರಿಂದ ಮೊದಲು ಉತ್ಕಟ ವ್ಯಾಕುಲತೆಯೊಂದರ ನೆರವಿನಿಂದಲೇ ಜಗನ್ಮಾತೆಯನ್ನು ಸಾಕ್ಷಾತ್ಕರಿಸಿಕೊಂಡ ಅವರು, ಅಷ್ಟಕ್ಕೇ ತೃಪ್ತರಾಗದೆ, ತಮ್ಮ ಅರಿವಿಗೆ ಬಂದ ಪ್ರತಿಯೊಂದು ಮಾರ್ಗದಿಂದಲೂ ಆಕೆಯ ದರ್ಶನ ಮಾಡಲು ತವಕಿಸಿದರು; ಪ್ರಯತ್ನ ಪಟ್ಟು ಯಶಸ್ವಿ

ಗಳಾದರು. ವಿವಿಧ ಕೋನಗಳಿಂದ ಸತ್ಯವನ್ನು ಕಾಣಬೇಕೆಂಬುದಲ್ಲದೆ ಬೇರೆ ಯಾವ 'ಲಾಭ'ವೂ ಅವರಿಗೆ ಬೇಕಿರಲಿಲ್ಲ. ಅವರೇ ಒಮ್ಮೆ ಹೇಳುತ್ತಾರೆ, 'ಹೇಗೆ ಸಮುದ್ರದ ತೀರದಲ್ಲೇ ವಾಸಿಸುವ ವ್ಯಕ್ತಿಗೆ ಕೆಲವೊಮ್ಮೆ ಅದರ ಆಳದಲ್ಲಿ ಎಂತೆಂಥ ರತ್ನಗಳಿವೆ ಯೆಂದು ನೋಡುವ ಆಸೆಯಾಗುತ್ತದೆಯೋ ಹಾಗೆಯೇ ನನಗೂ ಕೂಡ . . .' ಎಂದು. ಹಿಂದೂಧರ್ಮದ ಮತ-ಪಂಥ-ಯೋಗಗಳಷ್ಟೇ ಅಲ್ಲದೆ, ಅದರ ಪರಿಧಿಯಾಚೆಗಿನ ಧರ್ಮಗಳ ವಿಷಯದಲ್ಲೂ ಈ ಮಾತು ಸತ್ಯವೆಂಬುದನ್ನು ಅವರು ಸ್ವತಃ ಪರೀಕ್ಷಿಸಿ ಕಂಡುಕೊಂಡರು; ತನ್ಮೂಲಕ ಇಡೀ ಜಗತ್ತಿಗೇ ತೋರಿಸಿಕೊಟ್ಟರು. ಹೀಗೆ ಅವರು ಕೇವಲ ಒಬ್ಬ ಜಿಜ್ಞಾಸುವಾಗಿ ಹಿಂದೂಧರ್ಮದ ವಿವಿಧ ಮಾರ್ಗಗಳನ್ನೂ ಕ್ರೈಸ್ತ-ಇಸ್ಲಾಂ ಧರ್ಮಗಳನ್ನೂ ಅನುಸರಿಸಿ ಸಾಧನೆ ಮಾಡಿದರಾದರೂ, ಕೊನೆಗೆ ಅದರಿಂದಾಗಿ ತಾನಾ ಗಿಯೇ ಲೋಕಹಿತಸಾಧನೆಯಾಯಿತು; ಏಕಂ ಸತ್ ವಿಪ್ರಾ ಬಹುಧಾ ವದಂತಿ ಎಂಬ ವೇದೋಕ್ತಿಯನ್ನು ಜಗತ್ತಿಗೆ ಮನಗಾಣಿಸುವ ಅವರ ಅವತಾರೋದ್ದೇಶ ಈಡೇರಿತು.

ಎರಡನೆಯದಾಗಿ, ಶ್ರೀರಾಮಕೃಷ್ಣರು ತಮ್ಮ ಜೀವನದಲ್ಲಿ ಏನೇನು ಮಾಡಿ ದರೋ ಏನೇನನ್ನು ಸಾಧಿಸಿದರೋ ಅವೆಲ್ಲವೂ ಇತರರಿಗಾಗಿಯೇ ಎಂಬ ಅಂಶವನ್ನು ನಾವಿಲ್ಲಿ ಗಮನಿಸದಿರುವಂತಿಲ್ಲ. ಅವರು ನಾನಾ ಮತ ಪಂಥ ಧರ್ಮಗಳನ್ನು ಅನುಷ್ಠಿಸಿ ಸಾಧನೆ ಮಾಡಿದ್ದೂ ಲೋಕಶಿಕ್ಷಣಕ್ಕಾಗಿಯೇ ಎಂಬುದು, ಮುಂದೆ ಅವರು ಸಾಧಕವರ್ಗಕ್ಕೆ ಮಾರ್ಗದರ್ಶನ ನೀಡುವ ವಿನ್ಯಾಸದಿಂದ ಸ್ಪಷ್ಟವಾಗಿ ವೇದ್ಯವಾಗುತ್ತದೆ. ಅವರು ಈ ವಿದೇಶೀಯ ಧರ್ಮಗಳನ್ನು ಅನುಸರಿಸಿ ಸಾಧನೆ ಮಾಡಿರದಿದ್ದಲ್ಲಿ, ವಿಧರ್ಮೀಯರಿಗೂ ಅಧಿಕಾರವಾಣಿಯಿಂದ ಆಧ್ಯಾತ್ಮಿಕ ಮಾರ್ಗದರ್ಶನ ಮಾಡುವ ಸಾಮರ್ಥ್ಯ ಅವರಿಗೆ ಬರುತ್ತಿತ್ತೆ? 'ಎಷ್ಟು ಮತ, ಅಷ್ಟು ಪಥ' ಎಂಬ ಅವರ ಮಾತು ಸಾರ್ವಕಾಲಿಕವಾಗಿ, ಸಾರ್ವತ್ರಿಕವಾಗಿ ಸ್ವೀಕೃತವಾಗಲು ಸಾಧ್ಯವಿತ್ತೆ? ಅಲ್ಲದೆ ಅವರ ಸಿದ್ಧಾಂತ-ಸಂದೇಶಗಳ ವ್ಯಾಪ್ತಿ ಹಿಂದೂಧರ್ಮಕ್ಕೆ ಮಾತ್ರ ಮೀಸಲು ಎಂದು ಯಾರಾ ದರೂ ಅರ್ಥೈಸಿದರೂ ಸಹಜವೇ ಆಗುತ್ತಿತ್ತು.

ಶ್ರೀರಾಮಕೃಷ್ಣರು ಕ್ರೈಸ್ತ-ಇಸ್ಲಾಂ ಧರ್ಮಗಳ ಅನುಷ್ಠಾನ ಮಾಡಿದುದಕ್ಕೆ ಇನ್ನೂ ಕೆಲವು ಕಾರಣಗಳನ್ನು ಸುಲಭವಾಗಿ ಗುರುತಿಸಬಹುದು. ಮುಂದೆ, ಎಂದರೆ ಇನ್ನು ಕೆಲಕಾಲದಲ್ಲೇ, ಅವರ ಬಳಿಗೆ ವಿವಿಧ ಜಾತಿ ಕುಲ ಮತಗಳಿಗೆ ಸೇರಿದ ನೂರಾರು ಭಕ್ತರು ಧಾವಿಸಿ ಬರುವುದನ್ನು ಕಾಣಲಿದ್ದೇವೆ. ಅವರ ಆಪ್ತಶಿಷ್ಯರಾಗಲಿರುವವರೂ ಕೂಡ ಇಂತಹ ವಿವಿಧ ಹಿನ್ನೆಲೆಗಳುಳ್ಳವರು. ಅವರೆಲ್ಲರ ಸ್ವಭಾವ, ಮನೋಭಾವ ಅಭಿರುಚಿ, ಸಾಧನಾಮಾರ್ಗ ಎಲ್ಲವೂ ಭಿನ್ನಭಿನ್ನ. ಅದರಲ್ಲೂ ಅವರ ಪ್ರಮುಖ ಶಿಷ್ ರಾಗಲಿರುವವರೆಲ್ಲ–ಒಬ್ಬಿಬ್ಬರನ್ನುಳಿದು–ಸುಶಿಕ್ಷಿತರು, ಜಗತ್ತಿನ ವಿವಿಧ ಧರ್ಮಗಳ ಬಗ್ಗೆ ಓದಿ ತಿಳಿದವರು, ಪಾಶ್ಚಾತ್ಯ ಚಿಂತನೆಯ ಪ್ರಭಾವಕ್ಕೆ ಒಳಗಾದವರು; ತೀಕ್ಷ್ ವಿಚಾರಬುದ್ಧಿಯ ತರುಣರು. ಸಹಜವಾಗಿಯೇ ಅವರೆಲ್ಲ ಕ್ರೈಸ್ತ ಮತ್ತಿತರ ಧರ್ಮಗಳ ಬಗ್ಗೆ ಗೌರವಾದರ ತಾಳಿದವರು. ಅಂತಹ ಶಿಷ್ಯರಿಗೆ ತಕ್ಕ ಗುರುವಾಗಬೇಕಾದವ ಸಾಮರ್ಥ್ಯವೆಂಥದಿರಬೇಕು? ಮುಖ್ಯವಾಗಿ ಅವನೆಂತಹ ಅನುಭವಿಯಾಗಿರಬೇಕು!

ಅಲ್ಲದೆ, ಮುಂದೆ ಅವರ ಶಿಷ್ಯರೇ ಅವರ ಸರ್ವಧರ್ಮ ಸಮನ್ವಯದ ಸಂದೇ ವನ್ನು ಸಮಸ್ತ ಜಗತ್ತಿಗೆ ಸಾರಿಹೇಳಬೇಕಾಗಿದೆ. ಅದಕ್ಕೆ ಬೇಕಾದ ಅನುಭವದ ಹಿನ್ನೆಲೆ ಆತ್ಮವಿಶ್ವಾಸ, ನೈತಿಕ ಶಕ್ತಿ ಎಂಥದು? ಆ ಶಿಷ್ಯರಲ್ಲಿ ಇಂತಹ ಗುಣಗಳೆಲ್ಲ ಸ್ಫುರಿಸ

ವಂತಾಗಲು ಶ್ರೀರಾಮಕೃಷ್ಣರು ಗೈದ ಈ ಬಗೆಯ ಸಾಧನೆಯೇ ಕಾರಣವೆಂದರೆ ತಪ್ಪಲ್ಲ. ಆ ಶಿಷ್ಯರು ಕೂಡ ಪ್ರಕಾಂಡ ಪಂಡಿತರೇ, ಅಸೀಮ ವಾಗ್ಮಿಗಳೇ. ಆದರೆ ಅವರೆಲ್ಲರ ಮೂಲಬಲ ಯಾವುದೆಂದರೆ, ಶ್ರೀರಾಮಕೃಷ್ಣರ ಈ ಅನುಭೂತಿ.

ಶ್ರೀರಾಮಕೃಷ್ಣರು ಬೌದ್ಧಧರ್ಮವನ್ನು ಅನುಷ್ಠಾನ ಮಾಡಿದ ಸಂಗತಿ ನಮಗೆ ತಿಳಿದುಬಂದಿಲ್ಲ. ಆದರೆ ಬುದ್ಧನ ಬಗ್ಗೆ ಅವರಿಗಿದ್ದ ಪ್ರೇಮ-ಭಕ್ತಿ ಅಪರಿಮಿತವಾದದ್ದು. ಪುರೀಧಾಮದ ತ್ರಿಮೂರ್ತಿಗಳಾದ ಶ್ರೀಜಗನ್ನಾಥ-ಸುಭದ್ರೆ-ಬಲರಾಮರಲ್ಲಿ ಭಗವಾನ್ ಬುದ್ಧನ ಮಹಿಮೆಯು ಪ್ರಕಾಶ ಇಂದಿಗೂ ಇದೆಯೆಂದು ಅವರು ಹೇಳುತ್ತಿದ್ದರು.

ಮುಂದೆ, ಅವರ ಪರಮಭಕ್ತನೂ ಬಂಗಾಳದ ವಿಖ್ಯಾತ ಕವಿ-ನಾಟಕಕಾರನೂ ಆದ ಗಿರೀಶ್ ಚಂದ್ರ ಘೋಷ್ 'ಬುದ್ಧಚರಿತೆ' ಎಂಬ ನಾಟಕವನ್ನು ರಚಿಸಿದ. ಇದರಲ್ಲಿ ಭಗವಾನ್ ಬುದ್ಧನ ಲೀಲಾಮಯ ಜೀವನದ ಅತ್ಯಂತ ಹೃದಯಂಗಮ ಚಿತ್ರಣವಿದೆ. ಈ ನಾಟಕವನ್ನು ಸ್ವತಃ ಗಿರೀಶನೇ ನಿರ್ದೇಶಿಸಿ ಪ್ರದರ್ಶಿಸಿದ. ಶ್ರೀರಾಮಕೃಷ್ಣರು ಅದನ್ನೊಮ್ಮೆ ವೀಕ್ಷಿಸಿ ಮನಸಾರೆ ಆನಂದಿಸಿದರು. ಆ ಸಂದರ್ಭದಲ್ಲಿ ಅವರು ತಮ್ಮ ಭಕ್ತರೊಂದಿಗೆ ಬುದ್ಧನ ಕುರಿತಾಗಿ ಮಾತನಾಡುತ್ತ ಹೇಳುತ್ತಾರೆ:

"ಬುದ್ಧದೇವನು ಭಗವಂತನ ಅವತಾರವೆಂಬುದು ಖಂಡಿತ. ಮತ್ತು ಅವನು ಸ್ಥಾಪಿಸಿದ ಮತಕ್ಕೂ ವೇದದ ಜ್ಞಾನಮಾರ್ಗಕ್ಕೂ ತತ್ತ್ವತಃ ಯಾವುದೇ ಭೇದವಿಲ್ಲ."

ಶ್ರೀರಾಮಕೃಷ್ಣರು ಯಾವ ಮಾತನ್ನೇ ಆದರೂ 'ಸುಮ್ಮನೆ' ಆಡಿದವರೇ ಅಲ್ಲ. ಆದ್ದರಿಂದ, 'ಬುದ್ಧ ಬೋಧಿಸಿದ ತತ್ತ್ವವು, ಹಿಂದೂಧರ್ಮ ಆದಾಗಲೇ ಬೋಧಿಸಿದ ತತ್ತ್ವಕ್ಕಿಂತ ಭಿನ್ನವಲ್ಲ' ಎಂಬಂತಹ ಈ ಗಮನಾರ್ಹವಾದ ಮಾತನ್ನು ಕೂಡ ಅವರು ಸುಮ್ಮನೆ ಹೇಳಿರಲು ಸಾಧ್ಯವಿಲ್ಲ. ಆದರ ಸತ್ಯತೆಯನ್ನು ಅವರು ತಮ್ಮ ಯೋಗದೃಷ್ಟಿಯಿಂದ ಕಂಡುಕೊಂಡಿದ್ದಿರಬೇಕು ಎಂಬುದು ನಿಶ್ಚಯ.

ಶ್ರೀರಾಮಕೃಷ್ಣರು ತಮ್ಮ ಜೀವನದ ಉತ್ತರಭಾಗದಲ್ಲಿ, ಜೈನಧರ್ಮ ಪ್ರವರ್ತಕರಾದ ಮಹಾವೀರನೇ ಮೊದಲಾದ ತೀರ್ಥಂಕರರ ವಿಷಯವಾಗಿ ಮತ್ತು ಗುರು ನಾನಕನಿಂದಾರಂಭಿಸಿ ಗುರು ಗೋವಿಂದಸಿಂಗನವರೆಗಿನ ಹತ್ತು ಸಿಖ್ ಗುರುಗಳ ಕುರಿತಾಗಿ ಹಲವಾರು ವಿಚಾರಗಳನ್ನು ಆಯಾ ಧರ್ಮಾವಲಂಬಿಗಳಿಂದ ಕೇಳಿತಿಳಿದರು. ಹಾಗೆ ತಿಳಿದಂತೆಲ್ಲ ಅವರಲ್ಲಿ ಆ ಧರ್ಮಪ್ರವರ್ತಕರ ಮೇಲೆ ವಿಶೇಷ ಶ್ರದ್ಧಾಭಕ್ತಿಗಳುಂಟಾದುವು. ಅವರ ಕೋಣೆಯಲ್ಲಿ ಇತರ ಅನೇಕ ದೇವದೇವಿಯರ ಚಿತ್ರಗಳೊಂದಿಗೆ ಏಸುಕ್ರಿಸ್ತನ ಚಿತ್ರವೂ, ಭಗವಾನ್ ಮಹಾವೀರನ ಒಂದು ಶಿಲಾ ವಿಗ್ರಹವೂ ಇದ್ದುವು. ಪ್ರತಿದಿನ ಪ್ರಾತಃಕಾಲ ಮತ್ತು ಸಾಯಂಕಾಲ ಅವರು ಆ ಎಲ್ಲ ಚಿತ್ರಗಳ ಮುಂದೆ ನಿಂತು, ಭಕ್ತಿಯಿಂದ ಧೂಪ ಹಾಕಿ ನಮಸ್ಕರಿಸುತ್ತಿದ್ದರು.

ನಾನಕನೇ ಮೊದಲಾದ ಹತ್ತು ಸಿಖ್ ಗುರುಗಳ ಬಗ್ಗೆ ಶ್ರೀರಾಮಕೃಷ್ಣರೆನ್ನುತ್ತಿದ್ದರು: "ಅವರೆಲ್ಲರೂ ಜನಕಋಷಿಯ ಅವತಾರರು. ಮುಕ್ತಿ ಪಡೆಯುವ ಮುನ್ನ ರಾಜರ್ಷಿ ಜನಕನ ಮನಸ್ಸಿನಲ್ಲಿ ಲೋಕಕಲ್ಯಾಣವನ್ನು ಸಾಧಿಸಬೇಕೆಂಬ ಇಚ್ಛೆಯುದಿಸಿತು. ಆದ್ದರಿಂದ ಅವನು ಆ ಹತ್ತು ಗುರುಗಳ ರೂಪದಿಂದ ಜನ್ಮವೆತ್ತಿ, ಸಿಖ್ ಧರ್ಮವನ್ನು ಸ್ಥಾಪನೆಗೊಳಿಸಿ, ಅನಂತರ ಮುಕ್ತಿ ಹೊಂದಿದ ಎಂದು ನಾನು ಸಿಕ್ಖರಿಂದ ಕೇಳಿದ್ದೇನೆ. ಅವರ ಈ ಮಾತು ಸುಳ್ಳಾಗಿರಲು ಕಾರಣವೇನೂ ಇಲ್ಲ."

ಶ್ರೀರಾಮಕೃಷ್ಣರು ಪತ್ನಿ ಶಾರದಾದೇವಿಯವರನ್ನೇ ಸಾಕ್ಷಾತ್ ಜಗನ್ಮಾತೆಯೆಂಬಂತೆ ಪೂಜಾಪೀಠದ ಮೇಲೆ ಕುಳ್ಳಿರಿಸಿ ಷೋಡಶೀಪೂಜೆಯನ್ನು ಸಲ್ಲಿಸಿದ ಅದ್ಭುತ ಘಟನೆಯ ವಿವರಗಳನ್ನು ಹಿಂದೆ ನೋಡಿದೆವು. ಇದಾದ ಕೆಲತಿಂಗಳಲ್ಲೇ, ಎಂದರೆ ೧೮೭೩ರ ಅಕ್ಟೋಬರಿನಲ್ಲಿ, ಶಾರದಾದೇವಿಯವರು ಅನಾರೋಗ್ಯದ ಕಾರಣ ತವರು ಮನೆಗೆ ಹಿಂದಿರುಗಿದರು.

ಇದೇ ವೇಳೆಗೆ ಶ್ರೀರಾಮಕೃಷ್ಣರ ಎರಡನೆಯ ಅಣ್ಣ ರಾಮೇಶ್ವರನ ಐಹಿಕ ಜೀವನವು ಮುಕ್ತಾಯದ ಹಂತವನ್ನು ಸಮೀಪಿಸುತ್ತಿತ್ತು. ಅವನಿಗೆ ಆಗ ಸುಮಾರು ನಲವತ್ತೇಳು ವರ್ಷವಷ್ಟೆ. ಕೆಲಕಾಲದಿಂದ ಆಮಶಂಕೆಗೆ ಗುರಿಯಾಗಿ ಬಳಲುತ್ತಿದ್ದ. ಇತ್ತ ದಕ್ಷಿಣೇಶ್ವರದಲ್ಲಿ ರಾಧಾಗೋವಿಂದರ ಅರ್ಚನೆ, ಅತ್ತ ಕಾಮಾರಪುಕುರದಲ್ಲಿ ತನ್ನ ಸಂಸಾರದ ಮತ್ತು ಜಮೀನಿನ ನಿರ್ವಹಣೆ—ಇವೆರಡು ಕೆಲಸಗಳೂ ಅವನ ಪಾಲಿಗೆ ಬಂದಿದ್ದುವು. ಆದ್ದರಿಂದ ಅವನು ಇಲ್ಲಿಂದಲ್ಲಿಗೆ ಓಡಾಡುತ್ತಲೇ ಇರಬೇಕಾಗಿತ್ತು.

ಕ್ಷುದಿರಾಮನ ಕುಟುಂಬವರ್ಗದ ಪ್ರತಿಯೊಬ್ಬರಲ್ಲೂ ಆಧ್ಯಾತ್ಮಿಕತೆಯು ಒಂದು ವಿಶೇಷ ಪ್ರಕಾಶ ವ್ಯಕ್ತವಾಗಿತ್ತು. ರಾಮೇಶ್ವರನಲ್ಲಿ ಅದು ಸರಳತೆ, ದೈವಭಕ್ತಿ ಮತ್ತು ಅಪೂರ್ವ ದಾನಶೀಲತೆಗಳ ರೂಪದಲ್ಲಿ ಪ್ರಕಟಗೊಂಡಿತ್ತು. ಇವನ ಶರೀರತ್ಯಾಗದ ಘಟನೆಯೂ ಕೂಡ ಅಲೌಕಿಕತೆಯ ಅಂಶವನ್ನೊಳಗೊಂಡ ಒಂದು ಉಲ್ಲೇಖನೀಯ ಪ್ರಸಂಗ.

ರಾಮೇಶ್ವರನು ದಕ್ಷಿಣೇಶ್ವರದಿಂದ ಕಾಮಾರಪುಕುರಕ್ಕೆ ಕೊನೆಯ ಬಾರಿ ಹೊರಟಾಗಲೇ, ಇವನಿನ್ನು ಮರಳಿ ಬರಲಾರ ಎಂಬುದು ಶ್ರೀರಾಮಕೃಷ್ಣರಿಗೆ ತಿಳಿದುಹೋಗಿತ್ತು. ಆಗ ಅವನಿಗೆ ಅವರೊಂದು ಎಚ್ಚರಿಕೆಯ ಮಾತನ್ನೂ ಹೇಳಿದ್ದರು:

"ಅಣ್ಣಾ, ನೀನು ಮನೆಗೆ ಹೋಗಬೇಕಾದರೆ ಹೋಗು, ಅಡ್ಡಿಯಿಲ್ಲ. ಆದರೆ, ನನ್ನ ಮಾತು ಕೇಳುವುದಾದರೆ, ದಯವಿಟ್ಟು ನಿನ್ನ ಹೆಂಡತಿಯೊಡನೆ ಶರೀರಸಂಬಂಧ ಇಟ್ಟುಕೊಳ್ಳಬೇಡ. ಹಾಗೇನಾದರೂ ಮಾಡಿದೆಯೋ ನೀನು ಬದುಕುವುದು ಕಷ್ಟ."

ರಾಮೇಶ್ವರನಿಗೆ ತಮ್ಮನ ಮೇಲಿದ್ದ ಪ್ರೀತಿ ವಿಶ್ವಾಸ ಅಪಾರ. ಆದರೂ ಅವನು ಅವರ ಈ ಮಾತನ್ನು ಹೇಗೆ ಸ್ವೀಕರಿಸಿದನೋ ತಿಳಿಯದು. ಅಥವಾ ಸಂಯಮವನ್ನು ತಂದುಕೊಳ್ಳುವಲ್ಲಿ ಅಸಮರ್ಥನಾದನೋ ಏನೋ, ಊರಿಗೆ ಹೋದ ಕೆಲದಿನಕ್ಕೇ ಅವನು ಕಾಯಿಲೆ ಬಿದ್ದನೆಂಬ ಸುದ್ದಿ ಬಂದಿತು. ಅದನ್ನು ಕೇಳಿ ಶ್ರೀರಾಮಕೃಷ್ಣರು ಹೃದಯನ ಮುಂದೆ ಉದ್ಗರಿಸಿದರು:

"ಓ ! ಅವನು ನನ್ನ ಮಾತನ್ನು ಕೇಳಲಿಲ್ಲವಪ್ಪ. ಇನ್ನು ಅವನ ಪ್ರಾಣ ಉಳಿಯುವುದು ಸಂದೇಹವೇ !"

ರಾಮೇಶ್ವರನಿಗೂ ತನ್ನ ಆಯುಷ್ಯ ಮುಗಿಯಿತೆಂಬುದು ಗೊತ್ತಾಗಿತ್ತು. ಸುಮಾರು ಆರೇಳು ದಿನಗಳ ಮೊದಲೇ ಅವನು ತನ್ನ ಮರಣಕಾಲವನ್ನು ಕಂಡುಕೊಂಡಿದ್ದ. ಅವನು ತನ್ನ ಬಂಧುಗಳಿಗೆಲ್ಲ ತಾನು ಇಂಥ ದಿನ ಸಾಯುತ್ತೇನೆ ಎಂದು ತಿಳಿಸಿ, ತನ್ನ

ಅಂತ್ಯಕ್ರಿಯೆಗೂ ಶ್ರಾದ್ಧಕ್ಕೂ ಬೇಕಾದ ಸಾಮಗ್ರಿಗಳನ್ನೆಲ್ಲ ತಂದಿರಿಸಿಬಿಟ್ಟಿದ್ದ! ಮನೆಯ ಮುಂದಿನ ಒಂದು ಮುದಿ ಮಾವಿನ ಮರವನ್ನು ಕಡಿಯುತ್ತಿದ್ದಾರೆ ಎಂದು ತಿಳಿದು ಬಂದಾಗ, "ಸರಿ, ಒಳ್ಳೆಯದಾಯಿತು! ಅದು ನನ್ನ ಶವಸಂಸ್ಕಾರಕ್ಕೆ ಬೇಕಾಗುತ್ತದೆ" ಎಂದು ಉದ್ಗರಿಸಿದ. ಮತ್ತು, "ನನ್ನ ಶರೀರವನ್ನು ಶ್ಮಶಾನದಲ್ಲಿ ದಹನ ಮಾಡಬೇಡಿ; ಅದರ ಪಕ್ಕದ ರಸ್ತೆಯಲ್ಲಿ ದಹನ ಮಾಡಿ" ಎಂದೂ ಹೇಳಿದ. ಈ ವಿಚಿತ್ರ ಇಚ್ಛೆಗೆ ಕಾರಣವೇನೆಂದು ಕೇಳಿದಾಗ ಅವನೆಂದ: "ಆ ರಸ್ತೆಯಲ್ಲಿ ಎಷ್ಟೋ ಜನ ಸಾಧು-ಸತ್ಪುರುಷರು ನಡೆದಾಡುತ್ತಾರೆ. ಅವರ ಪವಿತ್ರ ಪಾದಧೂಳಿಯ ಸ್ಪರ್ಶದಿಂದಲಾದರೂ ನನಗೆ ಮುಕ್ತಿ ಪ್ರಾಪ್ತವಾಗಲಿ!"

ರಾಮೇಶ್ವರನು ಮುಂಗಂಡಿದ್ದ ದಿನದಂದೇ ಆತನ ಪ್ರಾಣೋತ್ಕ್ರಮಣ ಕಾಲ ಸನ್ನಿಹಿತವಾಯಿತು. ಮೃತ್ಯುಶಯ್ಯೆಯ ಮೇಲೆ ಮಲಗಿದ್ದ ರಾಮೇಶ್ವರ, ತನ್ನ ಮನೆ ದೇವರಾದ ಶ್ರೀರಾಮಚಂದ್ರ ಪ್ರಭುವಿನ ಪವಿತ್ರ ನಾಮವನ್ನುಚ್ಚರಿಸಿದ. ಕೂಡಲೇ ಪ್ರಜ್ಞೆ ತಪ್ಪಿತು; ಬಳಿಕ ಸ್ವಲ್ಪ ಹೊತ್ತಿನಲ್ಲೇ ಅವನ ಪ್ರಾಣಪಕ್ಷಿ ಹಾರಿಹೋಯಿತು. ಆಗ ನಡು ರಾತ್ರಿ.

ಆ ಊರಿನಲ್ಲಿ ಗೋಪಾಲನೆಂಬವನೊಬ್ಬನಿದ್ದ. ಇವನಿಗೂ ರಾಮೇಶ್ವರನಿಗೂ ಬಹು ಕಾಲದಿಂದ ಗಾಢಸ್ನೇಹ. ರಾಮೇಶ್ವರನು ಶರೀರತ್ಯಾಗ ಮಾಡಿದ ಸಮಯದಲ್ಲಿ ಇವನು ತನ್ನ ಮನೆಯಲ್ಲಿ ನಿದ್ರಾವಶನಾಗಿದ್ದ. ಆಗ ಯಾರೋ ಬಾಗಿಲು ತಟ್ಟಿದ ಸದ್ದಾಯಿತು. ಗೋಪಾಲ ಮಲಗಿದ್ದಂತೆಯೇ ಕೇಳಿದ: "ಯಾರದು?"

"ನಾನು ರಾಮೇಶ್ವರ. ಗಂಗಾಸ್ನಾನಕ್ಕಾಗಿ ಹೋಗುತ್ತಿದ್ದೇನೆ. ಮನೆಯಲ್ಲಿ ರಘುವೀರನಿದ್ದಾನೆ. ಅವನ ಸೇವೆಗೆ ತೊಂದರೆಯಾಗದಂತೆ ನೋಡಿಕೊ!"

'ಓ, ರಾಮೇಶ್ವರನೇ!' ಎಂದುಕೊಂಡು ಗೋಪಾಲ ಎದ್ದು ಬಾಗಿಲು ತೆರೆಯಲು ಹೊರಟ. ಆಗ ಮತ್ತೆ ಆ ಧ್ವನಿ ಕೇಳಿಸಿತು:

"ಆದರೆ ನನಗೀಗ ಶರೀರವಿಲ್ಲ. ನೀನು ಬಾಗಿಲು ತೆರೆದರೂ ನನ್ನನ್ನು ಕಾಣಲಾರೆ!"

ಆಶ್ಚರ್ಯಚಕಿತನಾದ ಗೋಪಾಲ ಬಾಗಿಲು ತೆರೆದು ನೋಡಿದ. ಯಾರೂ ಕಾಣಲಿಲ್ಲ. ಸ್ವಲ್ಪವೂ ತಡಮಾಡದೆ ಅವನು ಗೆಳೆಯನ ಮನೆಗೆ ಧಾವಿಸಿದ. ಅಲ್ಲಿ, ನಿಜಕ್ಕೂ ಆತ ತೀರಿಕೊಂಡನೆಂಬುದು ತಿಳಿದುಬಂತು.

ರಾಮೇಶ್ವರನು ಅಸ್ವಸ್ಥನಾಗಿದ್ದಾನೆಂಬ ಸುದ್ದಿ ದಕ್ಷಿಣೇಶ್ವರಕ್ಕೆ ಬಂದ ಒಂದು ವಾರದಲ್ಲೇ ಅವನು ನಿಧನನಾದ ಸುದ್ದಿಯೂ ಬಂದಿತು. ಶ್ರೀರಾಮಕೃಷ್ಣರಿಗೇನೋ ಇದು ನಿರೀಕ್ಷಿತವೇ. ಆದ್ದರಿಂದ ಅವರಿಗೆ ಅಷ್ಟೊಂದು ದುಃಖವಾಗಲಿಲ್ಲ. ಆದರೆ ಈ ವಿಷಯ ತಮ್ಮ ವೃದ್ಧ ಮಾತೆಯ ಕಿವಿಗೆ ಬಿದ್ದರೆ ಅವಳಿಗೆ ಹೇಗಾದೀತು? 'ಮಕ್ಕಳೆಲ್ಲ ಒಬ್ಬೊಬ್ಬರಾಗಿ ಸಾಯುವುದನ್ನು ನೋಡಲು ನಾನಿನ್ನೂ ಬದುಕಿದ್ದೇನಲ್ಲಾ!' ಎಂದು ದುಃಖದಿಂದ ಎದೆಯೊಡೆದು ಸತ್ತಾಳು! ಹೀಗೆ ಯೋಚಿಸಿದ ಅವರು, ತಾಯಿಗೆ ಈ ಶೋಕ ತಟ್ಟದಿರಲೆಂದು ಜಗನ್ಮಾತೆಯ ಮುಂದೆ ವ್ಯಾಕುಲತೆಯಿಂದ ಮೊರೆಯಿಟ್ಟರು. 'ಈಗ ಅವಳನ್ನು ಸಮಾಧಾನ ಪಡಿಸುವುದು ಹೇಗಪ್ಪಾ' ಎಂದು ಕಳವಳ ಪಡುತ್ತಲೇ ವಾದ್ಯಕುಟೀರದಲ್ಲಿ ವಾಸವಾಗಿದ್ದ ತಾಯಿಯ ಬಳಿಗೆ ಹೋದರು. ಕಣ್ಣೀರ್ಗರೆಯುತ್ತ ಆಕೆಗೆ ಆ ಘೋರ ವಾರ್ತೆಯನ್ನು ಅರುಹಿದರು.

ಚಂದ್ರಮಣಿಗೇನೋ ಅದನ್ನು ಕೇಳಿ ದುಃಖವಾಯಿತು; ಆದರೆ ಶ್ರೀರಾಮಕೃಷ್ಣರು ಎಣಿಸಿದ್ದಷ್ಟಲ್ಲ. ನಿಜಕ್ಕೂ ಆ ಇಳಿವಯಸ್ಸಿನಲ್ಲಿ ಅದೊಂದು ದೊಡ್ಡ ಆಘಾತವಾಗಬಹುದಿತ್ತು. ಆದರೆ ಆಕೆ ತನ್ನ ಮನಸ್ಸಿನ ಸಮತೋಲನವನ್ನು ಕಾಯ್ದುಕೊಂಡು, ಸಮಾಧಾನ ತಂದುಕೊಳ್ಳುವ ಪ್ರಯತ್ನ ಮಾಡಿದಳು. ಅಲ್ಲದೆ, ತಾನೇ ಮಗನನ್ನು ಸಂತೈಸತೊಡಗಿದಳು. ಆ ಸನ್ನಿವೇಶವನ್ನು ಶ್ರೀರಾಮಕೃಷ್ಣರೇ ಬಣ್ಣಿಸುತ್ತಾರೆ:

"ಆ ಸುದ್ದಿಯನ್ನು ಕೇಳಿದೊಡನೆ ತಾಯಿ ಮೂರ್ಛೆ ತಪ್ಪುತ್ತಾಳೆ, ಆಮೇಲೆ ಅವಳು ಬದುಕುವುದೇ ದುಸ್ಸಾಧ್ಯ ಎಂದು ನಾನೆಣಿಸಿದ್ದೆ. ಆದರೆ, ನಿಜಕ್ಕೂ ಅದಕ್ಕೆ ವಿರುದ್ಧವಾದುದೇ ನಡೆಯಿತು. ಅವಳು ಅದನ್ನು ಕೇಳಿ ಸ್ವಲ್ಪ ದುಃಖಪಟ್ಟಳು. ಆದರೆ ತರುವಾಯ, 'ಈ ಸಂಸಾರ ಎಷ್ಟಾದರೂ ಅನಿತ್ಯವಷ್ಟೆ. ಮರಣವೆಂಬುದು ಎಲ್ಲರಿಗೂ ಕಟ್ಟಿಟ್ಟದ್ದೇ. ಆದ್ದರಿಂದ ಸುಮ್ಮನೆ ಗೋಳಾಡಿ ಪ್ರಯೋಜನವೇನು ?' ಎನ್ನುತ್ತ ನನ್ನನ್ನೇ ಸಾಂತ್ವನಗೊಳಿಸತೊಡಗಿದಳು. ಆಗ ನಾನೆಂದುಕೊಂಡೆ, 'ತಂಬೂರಿಯ ತಂತಿಯನ್ನು ಬಿಗಿ ಮಾಡಿದರೆ ಹೇಗೆ ಅದರ ಶ್ರುತಿ ಹೆಚ್ಚಾಗುತ್ತದೆಯೋ ಮತ್ತು ಒಳ್ಳೆಯ ನಾದ ಹೊಮ್ಮುತ್ತದೆಯೋ ಹಾಗೆಯೇ ಜಗನ್ಮಾತೆ ನನ್ನ ತಾಯಿಯ ಮನಸ್ಸನ್ನು ಮೇಲ್ಮಟ್ಟಕ್ಕೇರಿಸಿದ್ದಾಳೆ. ಆದ್ದರಿಂದಲೇ ಈ ಶೋಕ ಅವಳನ್ನು ಸೋಂಕಲಿಲ್ಲ' ಎಂದು. ಬಳಿಕ ನಾನು ನಿಶ್ಚಿಂತನಾದೆ. ನನ್ನ ಪ್ರಾರ್ಥನೆಯನ್ನು ಈಡೇರಿಸಿಕೊಟ್ಟದ್ದಕ್ಕಾಗಿ ಜಗನ್ಮಾತೆಗೆ ಮತ್ತೆಮತ್ತೆ ನಮಿಸಿದೆ."

ಕ್ಯಾಪ್ಟನ್ ವಿಶ್ವನಾಥ ಉಪಾಧ್ಯಾಯ ಎಂಬವನು ನೇಪಾಳ ರಾಜ್ಯದ ಹಿರಿಯ ಅಧಿಕಾರಿ. ಕಲ್ಕತ್ತದಲ್ಲಿ ಆ ಸರ್ಕಾರಕ್ಕೆ ಸೇರಿದ ಮರಮುಟ್ಟುಗಳ ದೊಡ್ಡ ಕೋಠಿ ಯೊಂದಿತ್ತು. ಅದಕ್ಕೆ ಇವನು ಮೇಲ್ವಿಚಾರಕ. ಈತನ ವಾಸ ಕಲ್ಕತ್ತಕ್ಕೆ ಇದಿರಾಗಿರುವ ಹೌರಾದಲ್ಲಿ. ಈತನ ತಂದೆ ಕರ್ನಲ್ ಶಿವಶಂಕರ ಉಪಾಧ್ಯಾಯ; ಮೊದಲು ಇಂಗ್ಲಿಷರ ಸೈನ್ಯದಲ್ಲಿದ್ದು, ಅನಂತರ ಕಲ್ಕತ್ತದಲ್ಲಿ ನೇಪಾಳ ಸರ್ಕಾರದ ರಾಯಭಾರಿಯಾಗಿದ್ದವನು. ಅತ್ಯಂತ ಸಂಪ್ರದಾಯಸ್ಥ ಬ್ರಾಹ್ಮಣ ಮನೆತನ ಅವನದು. ಧೈರ್ಯ, ಧರ್ಮನಿಷ್ಠೆ, ದೈವಭಕ್ತಿಯೇ ಮೊದಲಾದ ಸದ್ಗುಣಗಳು ವಿಶ್ವನಾಥನಲ್ಲಿ ವಂಶಗತವಾಗಿ ಬಂದಿದ್ದುವು. ಅವನು ವೇದ-ಶಾಸ್ತ್ರ ಪಾರಂಗತ. ಪೂಜೆಗೆ ಕುಳಿತನೆಂದರೆ ಭಕ್ತಿಭಾವಭರಿತನಾಗಿ ಸಂಪೂರ್ಣ ಮೈಮರೆಯುತ್ತಿದ್ದ.

ಒಮ್ಮೆ ಅವನಿಗೊಂದು ಅದ್ಭುತ ಕನಸಾಯಿತು. ದೇದೀಪ್ಯಮಾನವಾದ ಜ್ಯೋತಿ ಯಿಂದಾವೃತನಾದ ಸಾಧುಪುರುಷನೊಬ್ಬ ತನಗೆ ದಿವ್ಯ ಜ್ಞಾನವನ್ನು ಕರುಣಿಸಲು ಕೈಮಾಡಿ ಕರೆಯುತ್ತಿರುವಂತೆ ಅವನು ಕಂಡ. ಸ್ವಲ್ಪ ಹೊತ್ತಿಗೆಲ್ಲ ಅವನಿಗೆ ಎಚ್ಚರ ವಾಯಿತು. ಕನಸಿನಲ್ಲಿ ಕಂಡ ದೃಶ್ಯ ಮನಸ್ಸಿನಲ್ಲಿ ನಿಚ್ಚಳವಾಗಿತ್ತು. ಆ ಸಾಧುವಿನ ರೂಪ ಕಣ್ಣಿಗೆ ಕಟ್ಟಿದಂತಿತ್ತು. ಅವನಿಗೆ ಅದೊಂದು ಕನಸೆಂದು ಅನ್ನಿಸಲೇ ಇಲ್ಲ. ತಾನು ಕಂಡ ಆ ಮಹಾಪುರುಷ ನಿಜಕ್ಕೂ ಎಲ್ಲೋ ಇದ್ದಾನೆ, ಜೀವಂತವಾಗಿದ್ದಾನೆ ಎಂಬ ದೃಢವಾದ ನಂಬಿಕೆ ಅವನಲ್ಲಿ ಉಂಟಾಯಿತು. ಆತನನ್ನು ಕಣ್ಣಾರೆ ಕಂಡಹೊರತು ವಿಶ್ವ ನಾಥನಿಗೆ ಸಮಾಧಾನವಿಲ್ಲವಾಯಿತು. ಕಡೆಗೆ ಕನಸಿನಲ್ಲಾದರೂ ಅವನು ಮತ್ತೆ ದರ್ಶನ ನೀಡುವಂತಾಗಲೆಂದು ವ್ಯಾಕುಲತೆಯಿಂದ ಮೊರೆಯಿಡತೊಡಗಿದ.

ಈ ಘಟನೆಯಾಗಿ ಕೆಲಕಾಲವಾಗಿರಬಹುದು. ಆಗ ಅವನ ಕಿವಿಗೊಂದು ಸ್ವಾರ ಸ್ಯದ ಸುದ್ದಿ ಮುಟ್ಟಿತು—ದಕ್ಷಿಣೇಶ್ವರದ ಕಾಳೀದೇವಾಲಯದಲ್ಲಿ ಪರಮಹಂಸ ರಾಮ ಕೃಷ್ಣ ಎಂಬ ಸಂತನೊಬ್ಬ ವಾಸವಾಗಿದ್ದಾನಂತೆ; ಇಪ್ಪತ್ನಾಲ್ಕು ಗಂಟೆಯೂ ಭಗವದ್ಭಾವ ದಲ್ಲೇ ಮುಳುಗಿರುತ್ತಾನಂತೆ; ಅತ್ಯಂತ ಗಹನವಾದ ಆಧ್ಯಾತ್ಮಿಕ ತತ್ತ್ವಗಳನ್ನೂ ಅತಿ ಸರಳ ಭಾಷೆಯಲ್ಲಿ ಮನಮುಟ್ಟುವಂತೆ ತಿಳಿಸುತ್ತಾನಂತೆ—ಎಂದು.

ಶ್ರೀರಾಮಕೃಷ್ಣರು ಆಧ್ಯಾತ್ಮಿಕ ಜಗತ್ತಿನ ಇತಿಹಾಸದಲ್ಲೇ ಅಭೂತಪೂರ್ವವಾದ ಅಸಂಖ್ಯಾತ ಸಾಧನೆಗಳನ್ನು ಕೈಗೊಂಡು ಯಶಸ್ವಿಗಳಾಗಿದ್ದರೂ, ಭಾರತದ ಅಂದಿನ ರಾಜಧಾನಿಯಾದ ಕಲ್ಕತ್ತಾ ಮಹಾನಗರದ ಸನಿಹದಲ್ಲೇ ವಾಸವಾಗಿದ್ದರೂ, ಆಗ ಅವರ ಹೆಸರನ್ನು ಕೇಳಿದ್ದವರು ಅತಿ ವಿರಳ. ಮತ್ತು ಅವರನ್ನು ಕಂಡವರಲ್ಲೂ ಅವರ ನಿಜ ಮಹಿಮೆಯ ಪರಿಚಯವಿದ್ದವರು ಎಲ್ಲೋ ಕೆಲವರಷ್ಟೆ. ಶ್ರೀರಾಮಕೃಷ್ಣರ ಖ್ಯಾತಿ ಯನ್ನು ಕೇಳಿ, ಅವರ ಬಳಿಗೆ ಬರಲಾರಂಭಿಸಿದ ಭಕ್ತಸಮೂಹದಲ್ಲಿ ಮೊದಲಿಗ ರಲ್ಲೊಬ್ಬನು ವಿಶ್ವನಾಥ ಉಪಾಧ್ಯಾಯ.

ಶ್ರೀರಾಮಕೃಷ್ಣರ ವಿಷಯವನ್ನು ಕೇಳುತ್ತಿದ್ದಂತೆಯೇ ವಿಶ್ವನಾಥ ದಕ್ಷಿಣೇಶ್ವರಕ್ಕೆ ಧಾವಿಸಿದ. ಅಲ್ಲಿ ಅವರನ್ನು ಕಂಡನೊ ಇಲ್ಲವೊ, ಸ್ತಂಭಿತನಾಗಿ ನಿಂತುಬಿಟ್ಟ. ತಾನು

ಸ್ವಪ್ನದಲ್ಲಿ ಕಂಡ ವ್ಯಕ್ತಿ... ಇವರೇ ಅಲ್ಲವೆ! ಆ ಸಾಧುವಿಗೂ ಇವರಿಗೂ ಭೇದವೇ ಇಲ್ಲ! ಭಾವಾವೇಶದಿಂದ ಅವನು ಶ್ರೀರಾಮಕೃಷ್ಣರಿಗೆ ಮತ್ತೆಮತ್ತೆ ನಮಿಸಿದ. ಅವನ ಕಂಗಳಿಂದ ಆನಂದದ ಅಶ್ರುಧಾರೆ ಹರಿಯಿತು.

ಅವನ ಅಚ್ಚರಿಗೆ ತಕ್ಕಂತೆ ಶ್ರೀರಾಮಕೃಷ್ಣರೂ ಅವನನ್ನು ತಮ್ಮ ಹಳೆಯ ಪರಿಚಿತನೋ ಎಂಬಂತೆ ಅತ್ಯಂತ ಆತ್ಮೀಯತೆಯಿಂದ ಮಾತನಾಡಿಸಿದರು. ಅವರು ತೋರಿದ ವಿಶ್ವಾಸ, ಮೇಲಾಗಿ ಅವರ ಶಿಶುಸಹಜ ಭಾವ, ಭಗವಂತನ ಮೇಲಿನ ನಿರ್ಭರತೆ—ಇವುಗಳನ್ನೆಲ್ಲ ಕಂಡು ಅವನು ಮೂಕನಾದ. ತಾನು ಅಧ್ಯಯನ ಮಾಡಿದ ಶಾಸ್ತ್ರಗಳ ಸಾರವನ್ನೇ ಅವರು ಅನುಭವಪೂರ್ವಕವಾಗಿ ಹೇಳುವುದನ್ನು ಗಮನಿಸಿ, ಅವರೊಬ್ಬ ಸಿದ್ಧ ಮಹಾಪುರುಷರೆಂದು ಆಗಲೇ ನಿರ್ಧರಿಸಿಬಿಟ್ಟ. ಅವರ ಮಾತಿನ ಮೋಡಿಗೆ ಮರುಳಾಗಿ ಮೈಮರೆತ ವಿಶ್ವನಾಥ, ಆ ರಾತ್ರಿಯನ್ನು ಅಲ್ಲೇ ಕಳೆದ. ಸಹಜವಾಗಿಯೇ ಈ ಭೇಟಿ ಮುಂದಿನ ಭೇಟಿಗಳಿಗೆ ಅನುವು ಮಾಡಿಕೊಟ್ಟಿತು. ಪ್ರಥಮ ದರ್ಶನದಲ್ಲಿ ಅವನಲ್ಲುಂಟಾದ ಭಕ್ತಿ-ಶ್ರದ್ಧೆ ದಿನೇದಿನೇ ವೃದ್ಧಿಗೊಂಡಿತು. ವಿಶ್ವನಾಥನು ಗೀತೆ ಭಾಗವತ ವೇದಾಂತಗಳಲ್ಲಿ ಪರಿಣತನಾದ ಪಂಡಿತ. ಆದರೆ ಕೇವಲ ಒಣ ಪಂಡಿತನಲ್ಲ. ಪ್ರತಿದಿನವೂ ಅವನು ತನ್ನ ಇಷ್ಟದೇವತೆಯನ್ನು ಅತೀವ ಭಕ್ತಿಯಿಂದ ಪೂಜೆ ಮಾಡುತ್ತಿದ್ದ. ಶಾಸ್ತ್ರವಿಧಿ-ಆಚಾರಗಳಲ್ಲಿ ಅವನಿಗೆ ತುಂಬ ಶ್ರದ್ಧೆ. ಪೂಜೆ, ಜಪ, ಆರತಿ, ಮಂತ್ರಘೋಷ, ಶಾಸ್ತ್ರಾಧ್ಯಯನ—ಮುಂತಾದುವನ್ನೆಲ್ಲ ತಪ್ಪದೆ ಕ್ರಮಾಗತವಾಗಿ ನಡೆಸುತ್ತಿದ್ದ. ಅವನ ಈ ಗುಣಗಳೆಲ್ಲ ಶ್ರೀರಾಮಕೃಷ್ಣರಿಗೆ ಬಹಳ ಮೆಚ್ಚುಗೆಯಾಗಿದ್ದುವು. ಅವನನ್ನು ಅವರು ಸಲಿಗೆಯಿಂದ 'ಕೆಪ್ಟನ್' ಎಂದು ಕರೆಯುತ್ತಿದ್ದರು. ಅವನ ಹಾಗೂ ಅವನ ತಂದೆಯ ಕುರಿತಾಗಿ ಅವರೊಮ್ಮೆ ಭಕ್ತರೆದುರು ಹೇಳುತ್ತಾರೆ:

"ಕ್ಯಾಪ್ಟನ್ನನದು ಎಂಥ ಮಧುರ ಸ್ವಭಾವ! ಎಂಥ ಭಕ್ತಿ! ಮೊದಲು ಅವನು ಮೂರು ದೀಪಗಳ ಆರತಿ ಮಾಡುತ್ತಾನೆ. ಬಳಿಕ ಏಕಾರತಿ. ಕಡೆಯಲ್ಲಿ ಕರ್ಪೂರಾರತಿ ಮಾಡುತ್ತಾನೆ. ಪೂಜೆ ಮಾಡುವಾಗ ಅವನು ಮಾತನಾಡುವುದೇ ಇಲ್ಲ. ಮೊನ್ನೆ ನಾನು ಪೂಜೆಯ ವೇಳೆಗೆ ಅವನ ಮನೆಗೆ ಹೋಗಿದ್ದೆ. ನನಗೆ ಕುಳಿತುಕೊಳ್ಳುವಂತೆ ಸನ್ನೆಯಿಂದಲೇ ತಿಳಿಸಿದ. ಪೂಜೆ ಮಾಡುವಾಗ ಅವನ ಕಣ್ಣುಗಳು ಭಾವದಿಂದ ಬೀಗಿಕೊಳ್ಳುತ್ತವೆ, ಒಳ್ಳೇ ಕಣಜ ಕಡಿದಂತೆ ಕಾಣುತ್ತದೆ. ಅವನು ಬಹಳ ಸುಶ್ರಾವ್ಯವಾಗಿ ಮಂತ್ರ ಹೇಳುತ್ತಾನೆ. ತನ್ನ ತಾಯಿ ಎದುರಿಗಿದ್ದಾಗ ಅವನು ಆಕೆಗೆ ಎತ್ತರದ ಪೀಠವನ್ನು ಕೊಟ್ಟು ತಾನು ಕೆಳಗೆ ಕುಳಿತುಕೊಳ್ಳುತ್ತಾನೆ. ಅವನ ತಂದೆ ಹಿಂದೆ ಇಂಗ್ಲಿಷರ ಸೈನ್ಯದಲ್ಲಿ ಹವಾಲ್ದಾರನಾಗಿದ್ದ. ಯುದ್ಧಭೂಮಿಯಲ್ಲೂ ಅವನು, ಪೂಜಾವೇಳೆಯಲ್ಲಿ ಒಂದು ಕೈಯಲ್ಲಿ ಬಂದೂಕು ಹಿಡಿದು ಮತ್ತೊಂದು ಕೈಯಿಂದ ಶಿವನ ಪೂಜೆ ಮಾಡುತ್ತಿದ್ದ."

ವಿಶ್ವನಾಥನು ಶ್ರೀರಾಮಕೃಷ್ಣರನ್ನು ಸನಿಹದಿಂದ ಕಂಡು ಅರಿತಂತೆಲ್ಲ ದಕ್ಷಿಣೇಶ್ವರಕ್ಕೆ ಅವನ ಭೇಟಿಯೂ ಹೆಚ್ಚಾಯಿತು. ವಾರಕ್ಕೊಮ್ಮೆಯಾದರೂ ಅವರನ್ನು ಕಾಣದಿದ್ದರೆ ಅವನಿಗೆ ಸಮಾಧಾನವೇ ಇಲ್ಲ. ಮಾತ್ರವಲ್ಲ, ಶ್ರೀರಾಮಕೃಷ್ಣರನ್ನೇ ಆಗಾಗ ತನ್ನ ಮನೆಗೆ ಕರೆಯಿಸಿಕೊಳ್ಳುತ್ತಿದ್ದ. ಅವನಿಗೆ ತಕ್ಕಂತೆ ಅವನ ಹೆಂಡತಿಯೂ ಅತ್ಯಂತ ಭಕ್ತಿಮತಿ. ಬಾಲಗೋಪಾಲ ಅವಳ ಇಷ್ಟದೈವ. ದಂಪತಿಗಳಿರ್ವರೂ ಶ್ರೀರಾಮಕೃಷ್ಣರನ್ನು ಆದರಿಸುತ್ತಿದ್ದ ಬಗೆ ಒಂದು ಅಪೂರ್ವ ಮಾದರಿ.

ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದ ಕೆಲಕಾಲದಲ್ಲಿ ವಿಶ್ವನಾಥ ದೊಡ್ಡದೊಂದು

ವಿಪತ್ತಿಗೆ ಸಿಲುಕಿಕೊಂಡ. ಅವನು ಶಕ್ತಿಮೀರಿ ದುಡಿಯುತ್ತಿದ್ದರೂ ನೇಪಾಳ ಸರ್ಕಾರದ ಪರವಾಗಿ ಅವನು ನಡೆಸುತ್ತಿದ್ದ ಮರಮಟ್ಟು ವ್ಯಾಪಾರ ಎಷ್ಟೋ ವರ್ಷಗಳಿಂದಲೂ ನಷ್ಟದಲ್ಲೇ ನಡೆಯುತ್ತಿತ್ತು. ಇದಕ್ಕೊಂದು ಪ್ರಮುಖ ಕಾರಣವೆಂದರೆ, ಹಿಂದಿನ ಕೆಲ ವರ್ಷಗಳಲ್ಲಿ ಗಂಗೆಯಲ್ಲಿ ಪ್ರವಾಹ ಬಂದು ಎಷ್ಟೋ ದಿಮ್ಮಿಗಳು ಕೊಚ್ಚಿಹೋಗಿದ್ದುದು. ನಷ್ಟದ ಲೆಕ್ಕವನ್ನು ತೋರಿಸಲು ಮನಸ್ಸಿಲ್ಲದೆ ಅವನು ಸರ್ಕಾರಕ್ಕೆ ಲೆಕ್ಕ ಒಪ್ಪಿಸುವ ಕೆಲಸವನ್ನು ಮುಂದೂಡುತ್ತಲೇ ಇದ್ದ. ಈ ವರ್ಷವೋ ಬರುವ ವರ್ಷವೋ ವ್ಯಾಪಾರ ಸರಿಹೋದೀತು, ಲಾಭ ಬಂದೀತು ಎಂಬ ನಿರೀಕ್ಷೆ ಅವನದು. ಆದರೆ ಅಷ್ಟರಲ್ಲೇ ಯಾರೋ ಅವನ ಮೇಲೆ ಹಣ ದುರುಪಯೋಗದ ಆರೋಪ ಹೊರಿಸಿ ಸರ್ಕಾರಕ್ಕೆ ಪತ್ರ ಬರೆದರು. ನೇಪಾಳದ ಪ್ರಧಾನಮಂತ್ರಿ ಕೂಡಲೇ ಅವನಿಗೆ ಕರೆ ಕಳಿಸಿದ. ವಿಶ್ವನಾಥ ಹೆದರಿದ. ಇನ್ನು ತನ್ನ ಕಥೆ ಮುಗಿಯಿತೆಂದುಕೊಂಡ. ಬೇರೆ ದಾರಿಗಾಣದೆ, ಸೀದಾ ದಕ್ಷಿಣೇಶ್ವರಕ್ಕೆ ಓಡಿ ಶ್ರೀರಾಮಕೃಷ್ಣರ ಪಾದಕ್ಕೆ ಬಿದ್ದು ಕಣ್ಣೀರು ಸುರಿಸಿದ. ಶ್ರೀರಾಮಕೃಷ್ಣರು ಕರುಣೆಯಿಂದ ಕೇಳಿದರು: "ಏನಪ್ಪ, ಏನಾಯಿತು ? ಹೆದರಬೇಡ, ಹೇಳು."

ವಿಶ್ವನಾಥ ತನ್ನ ಅಳಲನ್ನು ತೋಡಿಕೊಂಡ. ಅದನ್ನು ಕೇಳಿ ಶ್ರೀರಾಮಕೃಷ್ಣರೆಂದರು: "ಇಷ್ಟೇನೆ ! ಚಿಂತಿಸದಿರು, ನಿನಗೇನೂ ತೊಂದರೆಯಾಗದು. ಸರ್ಕಾರದೆದುರು ಸತ್ಯವನ್ನು ಮರೆಮಾಚಬೇಡ. ಎಲ್ಲವನ್ನೂ ಇದ್ದುದಿದ್ದಂತೆ ಹೇಳಿಬಿಡು. ಕಾಳೀಮಾತೆಯ ಕೃಪೆಯಿಂದ ನೀನು ಬೇಗನೆಯೇ ಹಿಂದಿರುಗಿ ಬರುತ್ತೀಯೆ. ಹೋಗಿ ಬಾ !"

ಈಗ ವಿಶ್ವನಾಥ ಉಲ್ಲಸಿತ ಹೃದಯದಿಂದ ನಿರ್ಗಮಿಸಿದ. ಕಠಮಂಡುವಿಗೆ ಹೋಗಿ ಲೆಕ್ಕಪತ್ರವನ್ನೆಲ್ಲ ಒಪ್ಪಿಸಿದ. ನೇಪಾಳದ ಪ್ರಧಾನಮಂತ್ರಿ ಅದನ್ನು ಖುದ್ದಾಗಿ ಪರಿಶೀಲಿಸಿದ. ಅವನಿಗೆ ಸಂಪೂರ್ಣ ಸಮಾಧಾನವಾಯಿತು. ಅಷ್ಟೇ ಅಲ್ಲ, ವಿಶ್ವನಾಥನ ಋಜುತ್ವವನ್ನು ಕಂಡು ಅತ್ಯಂತ ಸಂತೋಷವಾಯಿತು. ಆತ ವಿಶ್ವನಾಥನನ್ನು ಕ್ಷಮಿಸಿದ ನಷ್ಟೇ ಅಲ್ಲ, ಅವನಿಗೆ ಕರ್ನಲ್ ಸ್ಥಾನಕ್ಕೆ ಬಡ್ತಿ ನೀಡಿ, ಕಲ್ಕತ್ತದಲ್ಲಿ ನೇಪಾಳ ಸರ್ಕಾರದ ರಾಯಭಾರಿಯಾಗಿ ನೇಮಿಸಿದ. ಮತ್ತು ಅವನ ಸಂಬಳವನ್ನು ನಾಲ್ಕು ಪಟ್ಟು ಹೆಚ್ಚಿಸಿದ.

ಕಲ್ಕತ್ತಕ್ಕೆ ಮರಳಿದ ವಿಶ್ವನಾಥ ಸೀದಾ ದಕ್ಷಿಣೇಶ್ವರಕ್ಕೆ ಓಡಿದ. ನಡೆದುದನ್ನೆಲ್ಲ ವಿವರಿಸಿದ. ಬಳಿಕ ಹೆಮ್ಮೆಯಿಂದ ಹೇಳಿಕೊಂಡ: "ನಾನೀಗ ಕರ್ನಲ್ !" ಶ್ರೀರಾಮಕೃಷ್ಣರು ಜೋರಾಗಿ ನಕ್ಕು ಕೇಳಿದರು: "ಎಂದರೆ ? ಹಾಗೆಂದರೇನು ?" 'ಕರ್ನಲ್' ಎಂಬುದು ಸೈನ್ಯದಲ್ಲಿ 'ಕ್ಯಾಪ್ಟನ್' ಎಂಬುದಕ್ಕಿಂತ ಮೇಲಿನ ಹುದ್ದೆ, ಗೌರವದ ಸ್ಥಾನ ಎಂದವನು ಹೇಳಿಕೊಂಡ. ಆಗ ಶ್ರೀರಾಮಕೃಷ್ಣರು ನುಡಿದರು: "ಅದೇನು ಬೇಕಾದರೂ ಇರಲಿ. ನಾನಂತೂ ನಿನ್ನನ್ನು ಕ್ಯಾಪ್ಟನ್ ಎಂದೇ ಕರೆಯುವುದು !"

ದಕ್ಷಿಣೇಶ್ವರಕ್ಕೆ ಮತ್ತೆಮತ್ತೆ ಬರುತ್ತಿದ್ದ ವಿಶ್ವನಾಥನಿಗೆ ಶ್ರೀರಾಮಕೃಷ್ಣರನ್ನು ನಿಕಟವಾಗಿ ಕಾಣುವ ಭಾಗ್ಯ ಲಭ್ಯವಾಗಿತ್ತು. ಅಲ್ಲದೆ ಅವನೂ ಸ್ವತಃ ನಿಷ್ಠಾವಂತ ಸಾಧಕ. ಆದ್ದರಿಂದ ಅವನು ಅವಕಾಶವಾದಾಗಲೆಲ್ಲ ಶ್ರೀರಾಮಕೃಷ್ಣರ ವಿವಿಧ ಭಾವಗಳನ್ನು ವಿವರವಾಗಿ ಪರಿಶೀಲಿಸಿ ನೋಡುತ್ತಿದ್ದ. ಒಮ್ಮೆ ಅವರು ಮೂರು ಹಗಲು ಮೂರು ರಾತ್ರಿಯ ಕಾಲ ನಿರಂತರವಾಗಿ ಸಮಾಧಿಸ್ಥಿತಿಯಲ್ಲಿದ್ದುದನ್ನೂ ಅವನು ಕಣ್ಣಾರೆ ಕಂಡಿದ್ದ. ವಿಶ್ವನಾಥನಿಗೆ ಹಠಯೋಗದಲ್ಲಿ ಸ್ವಲ್ಪ ಪ್ರವೇಶವಿತ್ತು. ಅದರಿಂದಾಗಿ ಅವನು ಸಮಾಧಿಯ ರಹಸ್ಯಗಳನ್ನು ಕೆಲಮಟ್ಟಿಗೆ ತಿಳಿದುಕೊಂಡಿದ್ದ. ಮತ್ತು ಶ್ರೀರಾಮಕೃಷ್ಣರು ಗಾಢ ಸಮಾಧಿಯಲ್ಲಿ ಮುಳುಗಿಬಿಟ್ಟಾಗ, ಆ ಸ್ಥಿತಿಯಿಂದ ಕೆಳಗಿಳಿದು ಬರಲು ಅವನು

ನೆರವಾಗುವುದಿತ್ತು. ಏಕೆಂದರೆ ಅವರ ಮನಸ್ಸು ತನ್ನ ಸಹಜ ನೆಲೆಗೇರಿಬಿಟ್ಟರೆ ಅಲ್ಲಿಯೇ ಇದ್ದುಬಿಡಲು ಇಚ್ಛಿಸುತ್ತಿತ್ತು! ಆದರೆ ಹಾಗಾದಾಗ ಶರೀರದ ಗತಿ? ಅಂಥ ಸಂದರ್ಭದಲ್ಲಿ ಅವನು ಅವರ ಕುತ್ತಿಗೆಯಿಂದ ಬೆನ್ನುಮೂಳೆಯ ಕೆಳತುದಿಯವರೆಗೆ ಮತ್ತು ಮೊಳಕಾಲಿನಿಂದ ಪಾದದವರೆಗೆ ಅಧೋಮುಖವಾಗಿ ಹಸುವಿನ ತುಪ್ಪವನ್ನು ತಿಕ್ಕುತ್ತಿದ್ದ. ಆಗ ಅವರ ಶರೀರ ಬಿಸಿಯೇರಿ ರಕ್ತಸಂಚಾರ ಚುರುಕಾಗುತ್ತಿತ್ತು; ಮನಸ್ಸು 'ನಾನು-ನನ್ನದು' ಎಂಬ ಪ್ರಜ್ಞಾಲೋಕಕ್ಕೆ ಮರಳುತ್ತಿತ್ತು.

ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಸ್ಥಿತಿಯ ಬಗ್ಗೆ ಅವನೊಮ್ಮೆ ಅವರಿಗೇ ಹೇಳುತ್ತಾನೆ: "ನಿಮ್ಮ ಆತ್ಮವು ಒಂದು ಸ್ವಚ್ಛಂದ ಹಕ್ಕಿಯಂತೆ ಹಾರಲು ಸಿದ್ಧವಾಗಿದೆ." ಮತ್ತೊಮ್ಮೆ ಹೇಳುತ್ತಾನೆ: "ನಿಮ್ಮ ಜೀವಾತ್ಮವು ಚಿದಾಕಾಶದಲ್ಲಿ ವಿಹರಿಸಲು ಹಾರಿಬಿಡುತ್ತದೆ. ಒಡನೆಯೇ ನೀವು ಸಮಾಧಿಸ್ಥರಾಗುತ್ತೀರಿ."

ವಿಶ್ವನಾಥನಲ್ಲಿ, ಅತಿಯಾದ ಸಂಪ್ರದಾಯಶೀಲತೆಯಿಂದಾಗಿ ಸಂಕುಚಿತ ಮನೋಭಾವದ ದೋಷವೂ ಸೇರಿಕೊಂಡಿತ್ತು. ಆಂಗ್ಲ ಸಂಸ್ಕೃತಿಯ ಪ್ರಭಾವಕ್ಕೊಳಗಾದ ಕೇಶವಚಂದ್ರ ಸೇನನಂತಹ ವ್ಯಕ್ತಿಗಳನ್ನು ಶ್ರೀರಾಮಕೃಷ್ಣರು ಭೇಟಿಯಾಗುವುದು ಅವನಿಗೆ ಸ್ವಲ್ಪವೂ ಹಿಡಿಸುತ್ತಿರಲಿಲ್ಲ. ಅಷ್ಟೇ ಅಲ್ಲ, ಶ್ರೀರಾಮಕೃಷ್ಣರು ಅಪರೂಪವಾಗಿ ಯಾವಾಗಲಾದರೂ ಒಂದೆರಡು ಆಂಗ್ಲ ಪದಗಳನ್ನು ಬಳಸಿದರೆ–ಅದೂ ಹಾಸ್ಯಕ್ಕೆ–ಅವನಿಗದು ಸಹ್ಯವಾಗುತ್ತಿರಲಿಲ್ಲ, ಕಸಿವಿಸಿಪಟ್ಟುಕೊಳ್ಳುತ್ತಿದ್ದ! ಇಂಗ್ಲಿಷ್ ಪುಸ್ತಕಗಳನ್ನು ಓದುತ್ತಾರೆ ಮತ್ತು ಆಹಾರದ ಬಗ್ಗೆ ಸಾಕಷ್ಟು ಎಚ್ಚರಿಕೆ ವಹಿಸುವುದಿಲ್ಲ ಎಂಬ ಕಾರಣಕ್ಕಾಗಿ ಅವನು ಶ್ರೀರಾಮಕೃಷ್ಣರ ತರುಣಶಿಷ್ಯರನ್ನು ಆಗಾಗ ತರಾಟೆಗೆ ತೆಗೆದುಕೊಳ್ಳುವುದಿತ್ತು.

ಶ್ರೀರಾಮಕೃಷ್ಣರು ಯಾವುದೇ ಬಗೆಯ ಸಂಕುಚಿತತೆಯನ್ನು ಒಪ್ಪುವವರಲ್ಲ. ವಿಶ್ವನಾಥನ ಈ ವಿಲಕ್ಷಣತೆಯನ್ನೂ ಅವರು ಸ್ವಲ್ಪಸ್ವಲ್ಪವಾಗಿ ಹೋಗಲಾಡಿಸಿದರು. ಇದಕ್ಕೆ ಉದಾಹರಣೆಯಾಗಿ ಒಂದು ಪ್ರಸಂಗವನ್ನು ನೋಡಬಹುದು:

ಅಂದು (ಆಗಸ್ಟ್ ೧೯, ೧೮೮೩) ಶ್ರೀರಾಮಕೃಷ್ಣರು ಕ್ಯಾಪ್ಟನ್ನನೂ ಸೇರಿದಂತೆ ಅನೇಕ ಭಕ್ತರೊಂದಿಗೆ ನಾನಾ ವಿಷಯಗಳ ಬಗ್ಗೆ ಸಂಭಾಷಿಸುತ್ತಿದ್ದರು. ಮಾತಿನ ಮಧ್ಯೆ ಏನನ್ನೋ ಹೇಳುತ್ತ, ಅವರೆಂದರು: "ಇದನ್ನೇ ನಾನು ಕೇಶವಸೇನನಿಗೂ ಹೇಳಿದೆ."

ಕ್ಯಾಪ್ಟನ್ (ಅಸಹನೆಯಿಂದ): "ಕೇಶವ ಆಚಾರವಂತ ಹಿಂದುವಲ್ಲ. ಅವನು ತನ್ನ ಮನಸ್ಸಿಗೆ ಬಂದಂತೆ ರೀತಿ ರಿವಾಜುಗಳನ್ನೆಲ್ಲ ಬದಲಾಯಿಸುತ್ತಾನೆ. ಅವನೊಬ್ಬ 'ಸಾಧು' ಅಲ್ಲ, 'ಬಾಬು'."

ಶ್ರೀರಾಮಕೃಷ್ಣರು (ಇತರ ಭಕ್ತರಿಗೆ): "ನಾನು ಕೇಶವನೊಂದಿಗೆ ಸೇರಬಾರದು ಅಂತ ಕ್ಯಾಪ್ಟನ್ ನಿಷೇಧಿಸುತ್ತಾನೆ."

ಕ್ಯಾಪ್ಟನ್: "ಆದರೆ, ಮಹಾಶಯರೆ, ನೀವು ಹೇಗಿದ್ದರೂ ನಿಮಗಿಷ್ಟ ಬಂದ ಹಾಗೆಯೇ ಮಾಡುವವರು. ನಾನು ಹೇಗೆ ತಡೆಯಲಿ ನಿಮ್ಮನ್ನು?"

ಈಗ ಶ್ರೀರಾಮಕೃಷ್ಣರು ಅವನಿಗೆ ಸ್ವಲ್ಪ ಕಟುವಾಗಿ ಹೇಳಬೇಕಾಯಿತು:

"ಅಲ್ಲಯ್ಯ, ನಾನು ಕೇಶವನನ್ನು ನೋಡಲು ಏಕೆ ಹೋಗಬಾರದು ಹೇಳು? ನೀನು ಬೇಕಾದರೆ ಗವರ್ನರ್ ಜನರಲ್‌ನ ಮನೆಗೂ ಹೋಗುತ್ತೀ*—ಅದೂ ಹಣ

*ಆಗಿನ ಕಾಲದಲ್ಲಿ ಹಿಂದೂ ಸಂಪ್ರದಾಯಸ್ಥರ ದೃಷ್ಟಿಯಲ್ಲಿ ಆಂಗ್ಲರೆಂದರೆ 'ಮ್ಲೇಚ್ಛ'ರು. ಮತ್ತು ಅವರ ಸಂಪರ್ಕ-ಸಹವಾಸ ಸರ್ವಥಾ ವರ್ಜ್ಯವೆಂದು ತಿಳಿದಿದ್ದರು.

ಕ್ಕಾಗಿ—ನಿನಗೆ ಅದೇನೂ ತಪ್ಪಲ್ಲ! ಕೇಶವನಾದರೋ ಸದಾ ಭಗವಚ್ಚಿಂತನೆ ಮಾಡುತ್ತಾನೆ. ಭಗವನ್ನಾಮೋಚ್ಚಾರ ಮಾಡುತ್ತಾನೆ. ನಾನು ಅಂಥವನ ಬಳಿಗೆ ಹೋದರೆ ತಪ್ಪು ಅಲ್ಲವೆ? *ಈಶ್ವರ ಮಾಯಾಜೀವಜಗತ್*—'ಭಗವಂತನೇ ಈ ಜೀವ-ಜಗತ್ತು ಎಲ್ಲವೂ ಆಗಿದ್ದಾನೆ' ಅಂತ ಹೇಳುವವನು ನೀನೇ ಅಲ್ಲವೇನಯ್ಯ? ಹಾಗಾದರೆ ಅವನು ಕೇಶವನಲ್ಲಿ ಮಾತ್ರ ವಾಸಿಸುವುದಿಲ್ಲವೋ?"

ಶ್ರೀರಾಮಕೃಷ್ಣರು ವಿಶ್ವನಾಥನ ಶಾಸ್ತ್ರಪರಿಣತಿಯನ್ನು ಮೆಚ್ಚಿ ಹೊಗಳುತ್ತಿದ್ದರು; ಆದರೆ ಕೆಲವೊಮ್ಮೆ ಶಾಸ್ತ್ರಗಳ ಕುರಿತಾಗಿ ಆತನಿಗಿದ್ದ ತಪ್ಪು ಗ್ರಹಿಕೆಯನ್ನು ತಿದ್ದುತ್ತಿದ್ದರು. ಪುಸ್ತಕವೋದುವ ಅತಿಗೀಳನ್ನು ಖಂಡಿಸುತ್ತ ಒಮ್ಮೆ ಅವರೆನ್ನುತ್ತಾರೆ: "ಅತಿಯಾದ ಓದುವಿಕೆ ನಿನ್ನ ತಲೆ ಕೆಡಿಸಿದೆ. ಇನ್ನು ಮೇಲೆ ನೀನು ಓದುವುದನ್ನು ಬಿಟ್ಟುಬಿಡು!"

ಶ್ರೀರಾಮಕೃಷ್ಣರ ಭಕ್ತರ ಪೈಕಿ, ಅವರೊಂದಿಗೆ ದೀರ್ಘಕಾಲದ ಸಂಪರ್ಕ ಹೊಂದಿದ್ದ ಭಾಗ್ಯಶಾಲಿಗಳಲ್ಲಿ ವಿಶ್ವನಾಥನೊಬ್ಬ. ಈ ಸಂಪರ್ಕ ಅವನ ವ್ಯಕ್ತಿತ್ವವನ್ನು ಕ್ರಮೇಣ ಮಾರ್ಪಾಟುಗೊಳಿಸಿತು; ಜೀವನಕ್ಕೆ ಸಾರ್ಥಕತೆ ಕೊಟ್ಟಿತು. ಅವನ ಆಂತರಿಕ ಬೆಳವಣಿಗೆಯನ್ನು ಗಮನಿಸುತ್ತಿದ್ದ ಶ್ರೀರಾಮಕೃಷ್ಣರು ಮುಂದೊಮ್ಮೆ (೧೮೮೪) ಉದ್ಗರಿಸುತ್ತಾರೆ: "ಆಹ್, ಕ್ಯಾಪ್ಟನ್ ಎಂಥ ಅದ್ಭುತ ಮನಸ್ಥಿತಿಯನ್ನು ಬೆಳೆಸಿಕೊಂಡಿದ್ದಾನೆ! ಅವನು ಪೂಜೆಗೆ ಕುಳಿತನೆಂದರೆ ಋಷಿಯಂತೆ ಕಾಣುತ್ತಾನೆ...!"

ಶ್ರೀರಾಮಕೃಷ್ಣರ ಮಹಿಮೆ ಮನವರಿಕೆಯಾದಂತೆಲ್ಲ, ವಿಶ್ವನಾಥನಿಗೆ ಇನ್ನೊಂದೆಡೆ ವಿಷಾದವೂ ಆಗುತ್ತಿತ್ತು—ಲೋಕದ ಲಕ್ಷಗಟ್ಟಲೆ ಜನರು ಅವರ ಈ ಮಹಿಮೆಯನ್ನು ಕಾಣದ ಕುರುಡರಾಗಿದ್ದಾರಲ್ಲ ಎಂಬುದು ಅವನ ಖೇದ. ಅದರಲ್ಲೂ ಕಲ್ಕತ್ತದ ಜನರ ಬಗ್ಗೆ ಅವನಿಗೆ ಹೆಚ್ಚಿನ ವ್ಯಸನ. ಅವನು ಹೇಳುತ್ತಿದ್ದ: "ಈ ಬಂಗಾಳಿಗಳೆಲ್ಲ ಮೂರ್ಖರು. ಅವರು ತಮ್ಮ ನಡುವೆಯೇ ಒಂದು ಅನರ್ಘ್ಯ ರತ್ನವನ್ನು ಇಟ್ಟುಕೊಂಡಿದ್ದಾರೆ. ಆದರೆ ಅವರಿಗೆ ಅದನ್ನು ಗುರುತಿಸುವ ಶಕ್ತಿಯಿಲ್ಲ."

ಶ್ರೀರಾಮಕೃಷ್ಣರು ಅವನಿಗೆ ತಮ್ಮ ಮತ್ತೊಬ್ಬ ಭಕ್ತನನ್ನು ಪರಿಚಯಿಸಿದ ಸಂದರ್ಭದಲ್ಲಿ ಅವನು ತನ್ನ ಗುರುವಿನ ಕುರಿತಾದ ಅಂತರಂಗದ ಭಾವವನ್ನು ಹೀಗೆ ತೋಡಿಕೊಳ್ಳುತ್ತಾನೆ: "ನಾನು ವೇದವೇದಾಂತಗಳನ್ನು ಸಾಕೆನಿಸುವಷ್ಟು ಓದಿದ್ದೇನೆ. ವಿವಿಧ ಸ್ಥಳಗಳಿಗೆ ಹೋಗಿ ನಾನಾ ರೀತಿಯ ಸಾಧುಸಂತರನ್ನೆಲ್ಲ ಬಹಳಷ್ಟು ಭೇಟಿಯಾಗಿದ್ದೇನೆ. ಆದರೆ ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದಮೇಲೆ ಮಾತ್ರವೇ ನನ್ನ ಅಧ್ಯಾತ್ಮ ಪಿಪಾಸೆ ತಣಿಯಿತು. ನಾನಿನ್ನೇನು ಹೇಳಲಿ? ಯಾವುದನ್ನು ನಾವು ವೇದಗಳಲ್ಲೂ ಕಾಣಲಾರೆವೋ ಅವನ್ನು ಅವರಲ್ಲಿ ಕಾಣುತ್ತೇವೆ. ವೇದಗಳಲ್ಲಿ ಮತ್ತು ಇತರೆಲ್ಲ ಶಾಸ್ತ್ರಗ್ರಂಥಗಳಲ್ಲಿ ಅಡಕವಾಗಿರುವ ಸತ್ಯಗಳ ಮೂರ್ತರೂಪವೇ ಅವರು ಎಂದು ನನಗನಿಸುತ್ತದೆ. ಶಾಸ್ತ್ರವಾಕ್ಯಗಳಿಗೆ ಜೀವಂತ ಸಾಕ್ಷ್ಯ ಅವರು."

ಅನಾರೋಗ್ಯದ ಕಾರಣದಿಂದಾಗಿ ತೌರುಮನೆಗೆ ಹೋಗಿದ್ದ ಶಾರದಾದೇವಿಯವರು ೧೮೭೪ರ ಏಪ್ರಿಲಿನಲ್ಲಿ ದಕ್ಷಿಣೇಶ್ವರಕ್ಕೆ ಮರಳಿ ಬಂದರು. ಇಲ್ಲಿ ಅವರ ವಾಸ ದೇವಾಲಯದ 'ನಹಬತ್ ಖಾನೆ' ಎಂದು ಕರೆಯಲ್ಪಡುವ ವಾದ್ಯಕುಟೀರದಲ್ಲಿ, ಅತ್ತೆ ಚಂದ್ರಮಣಿಯೊಂದಿಗೆ. ಆದರೆ ಇದೊಂದು ಸಣ್ಣ ಕೋಣೆ ಅಷ್ಟೆ. ಇದರಲ್ಲಿ ಒಬ್ಬರು ವಾಸವಾಡುವುದೇ ಕಷ್ಟ. ಇನ್ನು ಇಬ್ಬರು ಇರುವುದೆಂತು ! ಜೊತೆಗೆ ಇದರ ಬಾಗಿಲು ಬೇರೆ ಚಿಕ್ಕದು. ತಗ್ಗಿ ನಡೆಯದಿದ್ದರೆ ತಲೆಗೆ ಏಟು ಖಂಡಿತ. ಆದರೂ ಶಾರದಾದೇವಿಯವರು ತಮ್ಮ ಸ್ವಭಾವಕ್ಕನುಗುಣವಾಗಿ, ಅದಕ್ಕೇ ಹೊಂದಿಕೊಂಡು ವಾಸಿಸಲಾರಂಭಿಸಿದರು.

ಶ್ರೀರಾಮಕೃಷ್ಣರ ಭಕ್ತನಾದ ಶಂಭುಮಲ್ಲಿಕ ಇದನ್ನು ಕಂಡ. ಕೂಡಲೇ ಅವನು, ಅವರಿಗಾಗಿ ಬೇರೊಂದು ವ್ಯವಸ್ಥೆ ಮಾಡಬೇಕೆಂದು ನಿಶ್ಚಯಿಸಿ, ಕಾಳೀ ದೇವಾಲಯದ ಪಕ್ಕದ ನಿವೇಶನವೊಂದನ್ನು ಇನ್ನೂರೈವತ್ತು ರೂಪಾಯಿ ಕೊಟ್ಟು ಖರೀದಿಸಿದ. ಶಾರದಾದೇವಿಯವರಿಗಾಗಿ ಅಲ್ಲೊಂದು ಮನೆ ಕಟ್ಟಬೇಕೆಂಬ ಆತನ ಉದ್ದೇಶ, ವಿಶ್ವನಾಥ ಉಪಾಧ್ಯಾಯನಿಗೆ ತಿಳಿಯಿತು. ಅದಕ್ಕೆ ಬೇಕಾದ ಮರಮುಟ್ಟನ್ನೆಲ್ಲ ಒದಗಿಸಲು ಈತ ಮುಂದಾದ. ಅಂತೆಯೇ ಅದಕ್ಕಾಗಿ, ಗಂಗಾನದಿಯ ಆಚೆ ತೀರದ ಬೇಲೂರಿನ ಕೋಠಿಯಿಂದ ಸಾಲವೃಕ್ಷದ ಮೂರು ದಿಮ್ಮಿಗಳನ್ನು ಕಳಿಸಿಕೊಟ್ಟ. ಆದರೆ ಒಂದು ರಾತ್ರಿ ಗಂಗೆಯಲ್ಲಿ ನೆರೆ ಬಂದು ದಿಮ್ಮಿಯೊಂದು ಕೊಚ್ಚಿಹೋಯಿತು. ಇದು ಹೃದಯನಿಗೆ ತಿಳಿಯಿತು. ಆತ ಶಾರದಾದೇವಿಯವರನ್ನು, "ಇದೆಲ್ಲ ನಿನ್ನ ಹಣೆಬರಹ" ಎಂದು ಮೂದಲಿಸಿ ತನ್ನ ಬಾಯಿಚಪಲ ತೀರಿಸಿಕೊಂಡ. ಆದರೆ ದಿಮ್ಮಿ ನಷ್ಟವಾದುದಕ್ಕೆ ವಿಶ್ವನಾಥ ಸ್ವಲ್ಪವೂ ಬೇಸರಿಸದೆ ಮತ್ತೊಂದನ್ನು ಕಳಿಸಿಕೊಟ್ಟ. ಶಂಭುಮಲ್ಲಿಕ ತಾನೇ ನಿಂತು ಮನೆಯನ್ನು ಕಟ್ಟಿಸಿ ಪೂರೈಸಿದ.

ಈಗ ಶಾರದಾದೇವಿಯವರು ವಿಶಾಲವಾದ ಹೊಸ ಮನೆಗೆ ಬಂದರು. ಅವರ ಜೊತೆಗಿರಲು ಒಬ್ಬಳು ಸೇವಕಿಯನ್ನು ನೇಮಿಸಲಾಯಿತು. ಅವಳು ಅವರಿಗೆ ಮನೆಗೆಲಸಗಳಲ್ಲಿ ನೆರವಾಗುತ್ತಿದ್ದಳು. ಶಾರದಾದೇವಿಯವರು ಪತಿಯ ರುಚಿಗೆ-ಆರೋಗ್ಯಕ್ಕೆ ತಕ್ಕಂತೆ ಅಡಿಗೆ ಮಾಡಿ, ಅದನ್ನು ಅವರ ಕೋಣೆಗೆ ತಂದು ಬಡಿಸುತ್ತಿದ್ದರು. ಶ್ರೀರಾಮಕೃಷ್ಣರು ಕೂಡ ಪತ್ನಿಯ ಯೋಗಕ್ಷೇಮವನ್ನು ವಿಚಾರಿಸುವುದಕ್ಕಾಗಿ ಮಧ್ಯಾಹ್ನದ ವೇಳೆಯಲ್ಲಿ ಆ ಮನೆಗೆ ಹೋಗಿ ಸಂಜೆಯೊಳಗಾಗಿ ಬಂದುಬಿಡುತ್ತಿದ್ದರು. ಒಂದು ದಿನ ಮಾತ್ರ ಅವರು ಆ ಮನೆಗೆ ಹೋಗುತ್ತಿದ್ದಂತೆಯೇ ಜಡಿಮಳೆ ಹಿಡಿದುಕೊಂಡುಬಿಟ್ಟಿತು. ಸಂಜೆಯಾಯಿತು, ರಾತ್ರಿಯಾಯಿತು, ಎಷ್ಟು ಹೊತ್ತಾದರೂ ಮಳೆಯ ರಭಸ ಮಾತ್ರ ತಗ್ಗಲೇ ಇಲ್ಲ. ಕಡೆಗೆ ಶ್ರೀರಾಮಕೃಷ್ಣರು ಅಲ್ಲಿಯೇ ಊಟ ಮಾಡಿ ಮಲಗಬೇಕಾಯಿತು. ಅವರು ಪತ್ನಿಯೊಡನೆ ತಮಾಷೆಯಾಗಿ ಹೇಳಿದರು, "ಇದು ನೋಡು ಹೇಗಿದೆ ! ಕಾಳೀ ದೇವಸ್ಥಾನದ ಅರ್ಚಕರೆಲ್ಲ ರಾತ್ರಿ ತಮ್ಮತಮ್ಮ ಮನೆಗಳಿಗೆ ಹೋಗುವುದಿಲ್ಲವೆ ? ಹಾಗಿದೆ ಇದು ಕೂಡ !"

ಹೀಗೆ ಶ್ರೀರಾಮಕೃಷ್ಣರ ಎರಡನೆಯ 'ರಸದ್ದಾರ'ನಾದ ಶಂಭುಮಲ್ಲಿಕನ ನೆರವಿನಿಂದಾಗಿ, ಶಾರದಾದೇವಿಯವರಿಗೆ ವಾಸಕ್ಕೊಂದು ಮನೆಯಾಯಿತು. ಹಿಂದೆಯೇ ನೋಡಿದಂತೆ, ಇವನು ಶ್ರೀರಾಮಕೃಷ್ಣರ ಆಪ್ತರಲ್ಲೊಬ್ಬ. ಇವನ ಸಂಬಂಧವಾಗಿ ನಡೆದ ಒಂದು ಅತ್ಯಂತ ಸ್ವಾರಸ್ಯಕರ ಘಟನೆಯನ್ನು ಇಲ್ಲಿ ಹೇಳಬಹುದಾಗಿದೆ. ಸತ್ಯಸಂಧತೆ-ಪ್ರಾಮಾಣಿಕತೆಯೆಂಬುದು ಶ್ರೀರಾಮಕೃಷ್ಣರ ವ್ಯಕ್ತಿತ್ವದಲ್ಲಿ ಹೇಗೆ ರೂಢಮೂಲವಾಗಿ ಸೇರಿಹೋಗಿತ್ತು ಎಂಬುದಕ್ಕೆ ಸಾಕ್ಷ್ಯವಾಗಿದೆ ಈ ಘಟನೆ.

ಕಾಳೀದೇಗುಲದ ಸನಿಹದಲ್ಲೇ ಶಂಭುಮಲ್ಲಿಕನ ಒಂದು ತೋಟವಿತ್ತು. ಶ್ರೀರಾಮಕೃಷ್ಣರು ಈ ತೋಟದಲ್ಲಿ ಆತನೊಂದಿಗೆ ಆಧ್ಯಾತ್ಮಿಕ ವಿಚಾರವಾಗಿ ಮಾತುಕತೆಯಾಡುತ್ತ ಬಹು ಸಮಯವನ್ನು ಕಳೆಯುತ್ತಿದ್ದ ವಿಷಯವನ್ನು ಹಿಂದೆಯೇ ನೋಡಿದ್ದೇವೆ. ಇಲ್ಲಿ ಶಂಭುವಿಗೆ ಸೇರಿದ ಒಂದು ಉಚಿತ ಔಷಧಾಲಯವೂ ಇತ್ತು.

ಒಂದು ದಿನ ಹೀಗೆಯೇ ಇಬ್ಬರೂ ಮಾತನಾಡುತ್ತಿದ್ದಾರೆ. ಆ ದಿನಗಳಲ್ಲಿ ಶ್ರೀರಾಮಕೃಷ್ಣರು ಪದೇಪದೇ ಆಮಶಂಕೆಗೆ ಗುರಿಯಾಗಿ ಹೊಟ್ಟೆನೋವಿನಿಂದ ನರಳುತ್ತಿದ್ದರು. ಮಾತಿನ ಮಧ್ಯೆ, ಅವರ ಈ ವ್ಯಾಧಿಯ ವಿಷಯ ಶಂಭುವಿಗೆ ತಿಳಿಯಿತು. ಆಗ ಅವನು, ನೋವಿನ ಉಪಶಮನಕ್ಕಾಗಿ ಪ್ರತಿದಿನ ಒಂದು ಚಿಟಿಕೆ ಅಫೀಮು ಸೇವಿಸುವಂತೆ ಸಲಹೆ ಮಾಡಿದ. ಮತ್ತು, ಕೋಣೆಗೆ ಹಿಂದಿರುಗುವ ಮುನ್ನ ತನ್ನ ಕೈಯಿಂದ ಅದನ್ನು ಪಡೆದುಕೊಂಡು ಹೋಗುವಂತೆ ಹೇಳಿದ. ಶ್ರೀರಾಮಕೃಷ್ಣರು ಒಪ್ಪಿದರು. ಆದರೆ, ಮಾತಿನ ಮಧ್ಯೆ ಇಬ್ಬರಿಗೂ ಆ ವಿಷಯ ಮರೆತುಹೋಯಿತು.

ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರು ಶಂಭುವಿನಿಂದ ಬೀಳ್ಗೊಂಡು ರಸ್ತೆಯವರೆಗೆ ಹೋದರು. ಆಗ ಅಫೀಮಿನ ವಿಚಾರ ನೆನಪಾಯಿತು. ಸರಿ, ಅದಕ್ಕಾಗಿ ವಾಪಸು ಬಂದರು. ಆದರೆ ಶಂಭು ತನ್ನ ಒಳಕೋಣೆಗೆ ಹೊರಟುಹೋಗಿದ್ದ. ಈ ಸಣ್ಣ ವಿಚಾರಕ್ಕಾಗಿ ಅವನನ್ನು ಕರೆದು ತೊಂದರೆ ಕೊಡುವುದೇಕೆ ಎಂದುಕೊಂಡು ಅಲ್ಲಿದ್ದ ಗುಮಾಸ್ತೆಯನ್ನೇ ಕೇಳಿದರು. ಆತ ಒಂದು ನಾಲ್ಕಾಣೆ ಬೆಲೆ ಬಾಳುವ ಅಫೀಮನ್ನು ಪೊಟ್ಟಣ ಕಟ್ಟಿಕೊಟ್ಟ. ಶ್ರೀರಾಮಕೃಷ್ಣರು ಅದನ್ನು ತೆಗೆದುಕೊಂಡು ಹೊರಟರು.

ಆದರೆ ಅವರು ರಸ್ತೆಯ ಬಳಿಗೆ ಬಂದರೋ ಇಲ್ಲವೋ, ಏಕೋ ತಲೆ ಸುತ್ತಿತು; ಕಣ್ಣು ಮಬ್ಬಾಯಿತು. ರಸ್ತೆಯೇ ಕಾಣುತ್ತಿಲ್ಲ! ಕಾಲುಗಳು ರಸ್ತೆಬದಿಯ ಚರಂಡಿಯತ್ತ ಎಳೆಯುತ್ತಿವೆ! ಅವರಿಗೆ ತಬ್ಬಿಬ್ಬಾಯಿತು. 'ಇದೇನಿದು ಹೀಗಾಗುತ್ತಿದೆ! ಇದು ರಸ್ತೆಯಲ್ಲ! ನಾನೇಕೆ ಇತ್ತ ಹೋಗುತ್ತಿದ್ದೇನೆ?' ಎಂದು ಆಲೋಚಿಸಿದರು. ಏನೂ ಹೊಳೆಯಲಿಲ್ಲ. ಎಷ್ಟು ಕಣ್ಣುಜ್ಜಿಕೊಂಡರೂ ರಸ್ತೆ ಕಾಣಲೇ ಇಲ್ಲ.

'ನಾನೆಲ್ಲೊ ತಪ್ಪುದಾರಿಗೆ ಬಂದಿರಬೇಕು' ಎಂದು ಭಾವಿಸುತ್ತ ಹಿಂದಿರುಗಿ ನೋಡಿದರು. ಶಂಭುವಿನ ತೋಟಕ್ಕೆ ಹೋಗುವ ರಸ್ತೆ ಸ್ಫುಟವಾಗಿ ಕಂಡಿತು! ಒಂದು ನಿಮಿಷ ನಿಂತು ಆಲೋಚಿಸಿ ತೋಟದ ಗೇಟಿಗೇ ವಾಪಸು ಬಂದರು. ಇಲ್ಲಿ ನಿಂತು ರಸ್ತೆಯನ್ನೆಲ್ಲ ಸರಿಯಾಗಿ ನೋಡಿ ಖಚಿತ ಪಡಿಸಿಕೊಂಡು ಮತ್ತೆ ಕಾಳೀದೇವಸ್ಥಾನದತ್ತ ಹೆಜ್ಜೆ ಹಾಕಿದರು. ಹೀಗೆ ನಾಲ್ಕಾರು ಹೆಜ್ಜೆ ಹಾಕುವಷ್ಟರಲ್ಲಿ ಮತ್ತೆ ಅದೇ ವಿಭ್ರಮೆ! ಮುಂದಿನ ರಸ್ತೆ ಕಾಣದು; ಕಾಲುಗಳು ಎತ್ತೆತ್ತಲೋ ಎಳೆಯುತ್ತಿವೆ!

ಇದು ಹೀಗೆಯೇ ಇನ್ನೂ ಎರಡು ಮೂರು ಬಾರಿ ಆಯಿತು. ಆಗ ಇದ್ದಕ್ಕಿದ್ದಂತೆ ಅವರಿಗೆ ಕಾರಣ ಹೊಳೆಯಿತು: ಶಂಭು ಹೇಳಿದ್ದೇನು? ಅಫೀಮನ್ನು ತನ್ನಿಂದ ತೆಗೆದು

ಕೊಳ್ಳುವಂತೆ. ಆದರೆ ತಾವು ಮಾಡಿದ್ದೇನು? ಅವನ ಬದಲಾಗಿ ಅವನ ಗುಮಾಸ್ತನಿಂದ ಸ್ವೀಕರಿಸಿದ್ದು—ಅದೂ ಅವನಿಗೆ ಹೇಳದೆ! ಇದರಿಂದಾಗಿ ತಮ್ಮಿಂದ ಎರಡು ದೋಷ ಗಳಾದುವು—ಅವನಿಂದ ತೆಗೆದುಕೊಳ್ಳುವುದಾಗಿ ಹೇಳಿ, ಹಾಗೆ ಮಾಡದದ್ದರಿಂದ ಸುಳ್ಳಾ ಡಿದ ದೋಷ; ಅವನ ಅರಿವಿಗೆ ಬಾರದಂತೆ ಗುಮಾಸ್ತನಿಂದ ತೆಗೆದುಕೊಂಡದ್ದರಿಂದ ಕಳ್ಳತನದ ದೋಷ! ಇಷ್ಟು ಅಪರಾಧ ಸಾಲದೆ? ಆದ್ದರಿಂದಲೇ ಜಗನ್ಮಾತೆ ತಮಗೆ ದಾರಿ ಕಾಣದಂತೆ ಮಾಡಿದಳು!

ಶ್ರೀರಾಮಕೃಷ್ಣರು ತಮ್ಮ ಬಗ್ಗೆಯೇ ಜುಗುಪ್ಸೆ ಪಟ್ಟುಕೊಳ್ಳುತ್ತ ಔಷಧಾಲಯಕ್ಕೆ ವಾಪಸು ಬಂದರು. ಆದರೆ ಅಫೀಮನ್ನು ಹಿಂದಿರುಗಿಸೋಣವೆಂದರೆ ಆ ಗುಮಾಸ್ತೆ ಎಲ್ಲೂ ಕಾಣಲಿಲ್ಲ. ಆದ್ದರಿಂದ ಅವರು ಕಿಟಿಕಿಯ ಮೂಲಕ ಆ ಪೊಟ್ಟಣವನ್ನು ಒಳಗೆ ಬಿಸಾಡಿ 'ಅಯ್ಯಾ, ನಿನ್ನ ಆಫೀಮನ್ನು ಇಲ್ಲೇ ಹಾಕಿದ್ದೇನೆ, ನೋಡಿಕೊ' ಎಂದು ಗಟ್ಟಿ ಯಾಗಿ ಕೂಗಿ ಹೇಳಿ ಅಲ್ಲಿಂದ ಹೊರಟರು.

ಈ ಸಲ ಅವರ ಕಣ್ಣು ಮಬ್ಬಾಗಲಿಲ್ಲ, ತಲೆ ಸುತ್ತಲಿಲ್ಲ. ರಸ್ತೆ ಎಂದಿನಂತೆ ಸ್ಪಷ್ಟ ವಾಗಿ ಕಾಣಿಸಿತು. ಯಾವ ಅಡಚಣೆಯೂ ಇಲ್ಲದೆ ಅವರು ತಮ್ಮ ಕೋಣೆಯನ್ನು ತಲುಪಿ ಸಮಾಧಾನದ ನಿಟ್ಟುಸಿರೆಳೆದರು!

ಶ್ರೀರಾಮಕೃಷ್ಣರ ಜೀವನದಲ್ಲಿ ಇಂತಹ ಘಟನೆಗಳು ಲೆಕ್ಕವಿಲ್ಲದಷ್ಟು. ಇವುಗಳಲ್ಲಿ ಕೆಲವನ್ನು ನಾವು ಸಂದರ್ಭಾನುಸಾರ ಮುಂದೆ ನೋಡಲಿದ್ದೇವೆ. ಅವರು ಬಾಯ್ತಪ್ಪಿ ಆಡಿದ ಮಾತು ಕೂಡ, ಹೇಗೋ ನಿಜವಾಗಿಯೇ ಪರಿಣಮಿಸುತ್ತಿತ್ತು. ಅವರ ಮನಸ್ಸಿ ನಲ್ಲಿ ಯಾವುದಾದರೊಂದು ಇಚ್ಛೆ ಮೂಡಿತೆಂದರೆ ಅದು ಈಡೇರುವವರೆಗೂ ಅವರು ವಿಶ್ರಮಿಸುವಂತಿರಲಿಲ್ಲ. ಹೀಗಾಗಿ ಅತ್ಯಂತ ಸಾಮಾನ್ಯ ವಿಚಾರದಲ್ಲೂ ಅವರು ಅಪ್ರಾಮಾಣಿಕರಾಗಿರಲು ಅಥವಾ ತಮ್ಮ ನಂಬಿಕೆಗೆ ವಿರುದ್ಧವಾದ ಮಾತನಾಡಲು ಸಾಧ್ಯವೇ ಇರಲಿಲ್ಲ. ಇದಕ್ಕೆ ಕಾರಣವೇನೆಂಬುದನ್ನು ಅವರೇ ತಿಳಿಸುತ್ತಾರೆ:

"ನಾನು ಜಗನ್ಮಾತೆಯಲ್ಲಿ ಸಂಪೂರ್ಣ ಶರಣಾದವನಲ್ಲವೆ? ಆದ್ದರಿಂದಲೇ ಆಕೆ ನನ್ನ ಕೈಯನ್ನು ಗಟ್ಟಿಯಾಗಿ ಹಿಡಿದಿದ್ದಾಳೆ. ನಾನು ಒಂದೇ ಒಂದು ತಪ್ಪು ಹೆಜ್ಜೆ ಹಾಕಲೂ ಆವಳು ಬಿಡುವುದಿಲ್ಲ."

ಶಂಭುಮಲ್ಲಿಕ ದೈವಭಕ್ತ ಮಾತ್ರವಲ್ಲ, ಒಬ್ಬ ಕರ್ಮಯೋಗಿ. ಶ್ರೀರಾಮಕೃಷ್ಣರ ಪ್ರಭಾವಕ್ಕೆ ಬಂದಮೇಲಂತೂ ಅವನು ಮತ್ತಷ್ಟು ನಿಃಸ್ವಾರ್ಥಿಯಾದ. ವೈರಾಗ್ಯ ಮತ್ತಷ್ಟು ಬಲಿಯಿತು. ಅವನ ದಾನಪ್ರಿಯತೆಯನ್ನು, ಉಪಕಾರಬುದ್ಧಿಯನ್ನು ಶ್ರೀರಾಮ ಕೃಷ್ಣರು ಬಹಳವಾಗಿ ಮೆಚ್ಚಿದ್ದರು. ಮತ್ತು ಯಾವಾಗಲೂ ಇತರರೆದುರು ಅದನ್ನು ಎತ್ತಿಹೇಳಿ ಕೊಂಡಾಡುತ್ತಿದ್ದರು. ಆದರೆ ಅವನ ವ್ಯಕ್ತಿತ್ವದಲ್ಲಿ ರಾಜಸಿಕ ಅಂಶವಿನ್ನೂ ಪ್ರಧಾನವಾಗಿ ಉಳಿದಿತ್ತು. ಶ್ರೀರಾಮಕೃಷ್ಣರು ಅವನ ಮನೋಭಾವವನ್ನು ತಿದ್ದಿ ಉದಾತ್ತೀಕರಿಸುವ ಪ್ರಯತ್ನ ಮಾಡಿದರು. ಒಂದು ದಿನ ಅವನು ತನ್ನ ಮನದಾಸೆ ಯನ್ನು ಅವರೆದುರು ಹೀಗೆ ತೋಡಿಕೊಂಡ: "ಸ್ವಾಮಿ, ನಾನು ನನ್ನ ಈ ಸಮಸ್ತ ಸಂಪತ್ತನ್ನು ಸದ್ವಿನಿಯೋಗ ಮಾಡುವಂತಾಗಲೆಂದು ಹರಸಿ! ಬಾವಿಗಳನ್ನು ತೋಡಿಸ ಬೇಕು, ರಸ್ತೆಗಳನ್ನು ನಿರ್ಮಿಸಬೇಕು, ಆಸ್ಪತ್ರೆ-ಅನ್ನಸತ್ರಗಳನ್ನು ಕಟ್ಟಿಸಬೇಕು, ತನ್ಮೂಲಕ ಜನಕೋಟಿಗೆ ಉಪಕಾರ ಮಾಡಬೇಕು ಎಂಬುದೇ ನನ್ನ ಆಸೆ. ಅದು ಈಡೇರುವಂತಾ ಗಲಿ ಎಂದು ದಯವಿಟ್ಟು ಆಶೀರ್ವದಿಸಿ!"

ಶ್ರೀರಾಮಕೃಷ್ಣರು: "ನಿನ್ನ ಈ ಅಭಿಲಾಷೆ ತುಂಬ ಒಳ್ಳೆಯದೇ. ಆದರೆ ಈ ಸೇವಾಕಾರ್ಯವನ್ನೆಲ್ಲ ಸಂಪೂರ್ಣ ನಿರ್ಲಿಪ್ತಭಾವದಿಂದ ಮಾಡಲು ಸಾಧ್ಯವಾದಾಗ ಮಾತ್ರ ಒಳ್ಳೆಯದು. ಆದರೆ ಅದೇನೂ ಸುಲಭಸಾಧ್ಯವಲ್ಲ. ನೀನು ಯಾವ ಕೆಲಸವನ್ನು ಬೇಕಾದರೂ ಮಾಡು, ಆದರೆ ಒಂದನ್ನು ಮಾತ್ರ ನೆನಪಿಡು. ಏನೆಂದರೆ, ಈ ಜೀವನದ ಅಂತಿಮ ಉದ್ದೇಶ, ಭಗವಂತನನ್ನು ಪಡೆದುಕೊಳ್ಳುವುದೇ ಹೊರತು ಆಸ್ಪತ್ರೆ-ಅನ್ನಸತ್ರಗಳನ್ನು ಕಟ್ಟುವುದಲ್ಲ. ಒಂದುವೇಳೆ ಆ ದೇವರು ನಿನ್ನ ಮುಂದೆ ಪ್ರತ್ಯಕ್ಷವಾಗಿ, 'ಏನು ವರ ಬೇಕೋ ಕೇಳಿಕೊ' ಎಂದರೆ, 'ಓ ದೇವರೇ! ನನಗಾಗಿ ಕೆಲವಾರು ಆಸ್ಪತ್ರೆ-ಕಟ್ಟಡಗಳನ್ನು ಕಟ್ಟಿಸಿಕೊಡು' ಎನ್ನುತ್ತೀಯೋ ಅಥವಾ, 'ನಿನ್ನ ಪಾದಪದ್ಮಗಳಲ್ಲಿ ಪರಿಶುದ್ಧ ಭಕ್ತಿಯನ್ನು ದಯಪಾಲಿಸು! ನಿರಂತರವೂ ನಿನ್ನ ದರ್ಶನಭಾಗ್ಯವನ್ನು ಕರುಣಿಸು!' ಎಂದು ಪ್ರಾರ್ಥಿಸಿಕೊಳ್ಳುತ್ತೀಯೋ? ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಮೇಲೆ, ಆತನ ಕೃಪೆಯಿಂದ, ಹತ್ತಾರು ಆಸ್ಪತ್ರೆಗಳನ್ನು, ಔಷಧಾಲಯಗಳನ್ನು ಕಟ್ಟೋಣ!"

ಶಂಭು ತುಂಬ ಉದಾರಿಯೆನ್ನುವುದೇನೋ ನಿಜವೇ. ಆದರೆ ಅವನು ಯಾರೆಂದರವರಿಗೆ ಕೊಟ್ಟುಬಿಡುತ್ತಿರಲಿಲ್ಲ. ಯಾಚಕರ ಪಾತ್ರತೆಯನ್ನು ಖಾತ್ರಿ ಪಡಿಸಿಕೊಂಡ ಮೇಲಷ್ಟೇ ದಾನ ಮಾಡುತ್ತಿದ್ದ. ಒಂದು ದಿನ ಹೃದಯ ಬಂದು ಅವನ ಹತ್ತಿರ ಸ್ವಲ್ಪ ಹಣ ಕೇಳಿದ. ಅದಕ್ಕೆ ಶಂಭು ಹೇಳಿದ್ದೇನು? "ನಾನೇಕೆ ನಿನಗೆ ದುಡ್ಡು ಕೊಡಬೇಕಪ್ಪ? ನೀನು ಸಾಕಷ್ಟು ಗಟ್ಟಿಮುಟ್ಟಾಗಿಯೇ ಇದ್ದೀಯ. ನೀನೇ ನಿನ್ನ ಹಣವನ್ನು ದುಡಿದುಕೊಳ್ಳಬಹುದು. ಮತ್ತು, ಈಗಲೂ ಸಂಪಾದಿಸುತ್ತಲೇ ಇದ್ದೀಯ. ಏನೋ ತೀರಾ ನಿರ್ಗತಿಕನಾದರೆ ಬೇರೆ ಕತೆ. ಅಥವಾ ಕುಂಟನಿಗೋ ಕುರುಡನಿಗೋ ಕೊಟ್ಟರೆ ಒಂದು ಲೆಕ್ಕ. ಅಂಥವರಿಗಾದರೆ ಸಂತೋಷದಿಂದ ಕೊಟ್ಟೇನು."

ತಕ್ಷಣ ಹೃದಯ ಕೈಮುಗಿದು ಹೇಳಿದ: "ರಾಯರೇ, ಆ ಮಾತನ್ನು ಮಾತ್ರ ಆಡಬೇಡಿ! ನನಗೆ ನಿಮ್ಮ ಕಾಸು ಖಂಡಿತ ಬೇಕಿಲ್ಲ. ಸದ್ಯ! ನಾನು ಕುಂಟನೋ ಕುರುಡನೋ ನಿರ್ಗತಿಕನೋ ಆಗದಂತೆ ದೇವರು ನನ್ನನ್ನು ಕಾಪಾಡಲಿ. ನೀವು ದುಡ್ಡು ಕೊಡಲೂ ಬೇಡಿ, ನಾನು ತೆಗೆದುಕೊಳ್ಳುವುದೂ ಇಲ್ಲ. ಬರುತ್ತೇನೆ ನಾನು."

ಶಂಭುಮಲ್ಲಿಕ ಶ್ರೀರಾಮಕೃಷ್ಣರನ್ನೂ ಶ್ರೀಶಾರದಾದೇವಿಯವರನ್ನೂ ಸುಮಾರು ನಾಲ್ಕು ವರ್ಷಗಳ ಕಾಲ ಪರಮಭಕ್ತಿಯಿಂದ ಕಂಡು ಸೇವೆ ಸಲ್ಲಿಸಿದ. ಕ್ರಮೇಣ ಅವನು ಸಕ್ಕರೆಕಾಯಿಲೆಗೆ ಗುರಿಯಾಗಿ ಹಾಸಿಗೆ ಹಿಡಿದ. ಅವನು ರುಗ್ಣಶಯ್ಯೆಯಲ್ಲಿ ಮಲಗಿದ್ದರೂ ಹಸನ್ಮುಖನಾಗಿದ್ದ. ಅವನಿಗೆ ಮೃತ್ಯುಭೀತಿಯಿರಲಿಲ್ಲ. ಹೃದಯನೊಡನೆ ಅವನೊಮ್ಮೆ ಹಾಸ್ಯವಾಗಿ ಹೇಳಿದ: "ನಾನು ಗಂಟುಮೂಟೆ ಕಟ್ಟಿಯಾಯಿತು. ಪ್ರಯಾಣಕ್ಕೆ ನಾನಿನ್ನು ಸಿದ್ಧ!"

ಶ್ರೀರಾಮಕೃಷ್ಣರು ಒಂದು ದಿನ ಹೃದಯನನ್ನು ಕರೆದುಕೊಂಡು ಆತನನ್ನು ನೋಡಲು ಹೋದರು. ಬರುವಾಗ ಅವರೆಂದರು: "ಹೃದೂ, ಶಂಭುವಿನ ದೀಪದಲ್ಲಿ ಎಣ್ಣೆ ತೀರಿಹೋಗಿದೆ...."

ಇದಾದ ಕೆಲದಿನಗಳಲ್ಲೇ—೧೮೭೭ರಲ್ಲಿ—ಸಾರ್ಥಕ ಬದುಕನ್ನು ಬಾಳಿದ ಶಂಭು ತೀರಿಕೊಂಡ.

ಶ್ರೀರಾಮಕೃಷ್ಣರ ವ್ಯಕ್ತಿತ್ವ ನಡೆನುಡಿ ವರ್ತನೆಗಳ ಕುರಿತಾಗಿ ಆಲೋಚಿಸಹೊರಟಾಗ ಅವು ಇನ್ನಷ್ಟು ಮತ್ತಷ್ಟು ವಿಚಿತ್ರವಾಗಿ ಅದ್ಭುತವಾಗಿ ತೋರುತ್ತವೆ. ಇದಕ್ಕೆ ಒಂದು ಕಾರಣವೆಂದರೆ, ಪರಸ್ಪರ ವಿರುದ್ಧವೆಂಬಂತೆ ಕಾಣಬಹುದಾದ ಗುಣಗಳು ಅವರಲ್ಲಿ ಸಹಜವಾಗಿ ಸಂಗಮಗೊಂಡಿದ್ದುದು. ಒಂದು ದೃಷ್ಟಿಯಲ್ಲಿ ಅವರು ಸಂಸಾರಿ, ಮತ್ತೊಂದು ದೃಷ್ಟಿಯಲ್ಲಿ ಸಂನ್ಯಾಸಿ! ಶಾಸ್ತ್ರೋಕ್ತವಾಗಿ ದೀಕ್ಷೆ ಪಡೆದು ಸಂನ್ಯಾಸಿಗಳಾದರೂ ಮತ್ತೆ ಪತ್ನಿಯೊಂದಿಗೇ ಜೀವಿಸಿದ ಸಂಸಾರಿ! ಪರಬ್ರಹ್ಮದೃಷ್ಟಿಯಿಂದ ಸಮಸ್ತ ಸೃಷ್ಟಿಯನ್ನೇ ಮಿಥ್ಯೆಯೆಂದರಿತರೂ ಲೋಕದ ಜನರಿಗೆಲ್ಲ ದಾರಿ ತೋರುವ ರೀತಿಯಲ್ಲಿ ನಡೆಸಿದ ಸಾಂಸಾರಿಕ ಜೀವನ! ಸುತ್ತಲಿನ ವ್ಯಕ್ತಿಗಳೊಂದಿಗೆ ಅವರಿಗಿದ್ದ ಸಂಬಂಧ ಎನ್ನುವುದು ಕಮಲದೆಲೆಯ ಮೇಲಿನ ಜಲಬಿಂದುವಿನಂತೆ; ಮೇಲ್ನೋಟಕ್ಕೆ ಪರಮ ಪ್ರೇಮದ ಸಂಬಂಧ, ಒಳಹೊಕ್ಕು ನೋಡಿದರೆ ಅದ್ವೈತಭಾವ, ವೈರಾಗ್ಯಮೂರ್ತಿ!

ಈ ಸಂಬಂಧಗಳ ವಿಷಯವಾಗಿ ಹೇಳುವಾಗ ತಮ್ಮ ತಾಯಿಯೊಂದಿಗಿನ ಅವರ ಬಾಂಧವ್ಯದ ಬಗ್ಗೆ ವಿಶೇಷವಾಗಿ ಹೇಳಬೇಕಾಗುತ್ತದೆ. ಏಕೆಂದರೆ ಹೆತ್ತ ತಾಯಿಯನ್ನು ಮಕ್ಕಳು ಪ್ರೀತಿ-ಗೌರವದಿಂದ ಕಾಣುವುದು ಲೋಕರೂಢಿಯೇ ಆದರೂ ಶ್ರೀರಾಮಕೃಷ್ಣರು ತಮ್ಮ ತಾಯಿಯನ್ನು ನೋಡಿಕೊಂಡ ರೀತಿ ಅತ್ಯಂತ ಆಪ್ಯಾಯಮಾನ ಸಂಗತಿ.

ವೃದ್ಧೆ ಚಂದ್ರಮಣಿ ತನ್ನ ಜೀವನಾಂತ್ಯವನ್ನು ಗಂಗಾತೀರದಲ್ಲಿ ಕಳೆಯಲೆಂದು ದಕ್ಷಿಣೇಶ್ವರಕ್ಕೆ ಬಂದು ನೆಲಸಿದಾಗ ಶ್ರೀರಾಮಕೃಷ್ಣರು ಅದನ್ನು ತಮ್ಮ ಭಾಗ್ಯವಿಶೇಷವೆಂದು ಪರಿಗಣಿಸಿ ಆಕೆಯ ಸೇವೆಗೈಯಲು ಮುಂದಾದರು. ಸರ್ವವಿಧದಿಂದಲೂ ಅವಳ ಮನಸ್ಸಂತೋಷ ಪಡಿಸಲು ಶ್ರಮಿಸಿದರು. ತಾವು ಸದಾ ದೈವೀ ಭಾವೋನ್ಮತ್ತರಾಗಿ ಇಹಲೋಕದ ಪರಿವೆಯೇ ಇಲ್ಲದಂತಿದ್ದಾಗಲೂ, ಮಾತೆಯ ಯೋಗಕ್ಷೇಮವನ್ನು ಮಾತ್ರ ಮರೆಯಲಿಲ್ಲ. ಆಕೆಗೆ ನೆರವಾಗಲೆಂದು ಹೆಣ್ಣಾಳೊಬ್ಬಳನ್ನು ಗೊತ್ತುಮಾಡಿದರು. ಅಲ್ಲದೆ ಶಾರದಾದೇವಿಯವರಂತೂ ವೃದ್ಧೆ ಅತ್ತೆಯ ಸೇವೆ ಮಾಡಲು ಸದಾ ಸನ್ನದ್ಧರಾಗಿದ್ದರು; ತಮ್ಮ ಅನನುಕೂಲತೆಯೊಂದನ್ನೂ ಲೆಕ್ಕಿಸದೆ, ಪರಮ ಶ್ರದ್ಧಾಭಕ್ತಿಗಳಿಂದ ಸೇವೆ ಸಲ್ಲಿಸಿ ಆಕೆಯ ಹೃದಯವನ್ನು ತಣಿಸಿದರು.

ತಾನು ಆರೋಗ್ಯದಿಂದಿದ್ದಷ್ಟು ಕಾಲ ಚಂದ್ರಮಣಿಯೂ ತನ್ನ ಮಗ-ಸೊಸೆಯರನ್ನು ಮಮತೆಯಿಂದ ನೋಡಿಕೊಂಡಳು. ಆಕೆಯ ವ್ಯಕ್ತಿತ್ವ ಬಲು ಮಧುರ. ಎತ್ತರದ ನಿಲುವಿನ ಸುಂದರ ಸ್ತ್ರೀ ಆಕೆ. ಆದರೆ ಬಹಳ ಸಂಕೋಚದ ಪ್ರವೃತ್ತಿ. ತನ್ನ ಕಿರಿಮಗನ ಮುಂದೆಯೂ ಮುಖಕ್ಕೆ ಸೆರಗು ಅಡ್ಡ ಮಾಡಿಕೊಂಡೇ ಮಾತನಾಡುವುದು! ಅವರಿಬ್ಬರೂ ಮಾತನಾಡುವುದೇ ಒಂದು ಹರ್ಷದಾಯಕ ನೋಟ.

ಆ ದಿನಗಳಲ್ಲಿ ಶ್ರೀರಾಮಕೃಷ್ಣರ ಹೊಟ್ಟೆಯ ಸ್ಥಿತಿ ಅಷ್ಟಕ್ಕಷ್ಟೆ. ಆಮಶಂಕೆ ಮತ್ತಿತರ ತೊಂದರೆಗಳಿಂದಾಗಿ ಅದು ಬಹಳ ದುರ್ಬಲವಾಗಿತ್ತು. ಹಿಂದೆ ಅವರು ಕಾಳೀದೇವಾಲಯದ ಪ್ರಸಾದವನ್ನೇ ಅವಲಂಬಿಸಿದ್ದುದು. ಆದರೆ ಅದಕ್ಕೆ ಖಾರ-ಮಸಾಲೆ ಜೋರು. ಈಗ ಅದು ಅವರಿಗೆ ಒಗ್ಗುವಂತಿಲ್ಲ. ಆದ್ದರಿಂದ ಶಾರದಾದೇವಿಯವರೇ

ಕಟ್ಟುಸಾರು-ಅನ್ನ ಮಾಡಿಹಾಕುತ್ತಿದ್ದರು. ಈ ಪರಿಸ್ಥಿತಿಯಲ್ಲೂ ಅವರು ತಮ್ಮ ಮುದಿ ತಾಯಿಯ ಯೋಗಕ್ಷೇಮ ವಿಚಾರಿಸಲು ಹೋಗುತ್ತಿದ್ದರು. ಆಗ ಚಂದ್ರಮಣಿ ಮಗನನ್ನು ಕೇಳುತ್ತಿದ್ದಳು:

"ಏನಪ್ಪ, ಇವತ್ತು ಹೇಗಿದೆ ಹೊಟ್ಟೆ ?"

"ಅದೇ ? ಹಾಗೇ ಇದೆ. ಅಷ್ಟೇನೂ ಹಿತವಾಗಿಲ್ಲ."

"ಹಾಗಾದರೆ ದೇವಸ್ಥಾನದ ಪ್ರಸಾದ ತೆಗೆದುಕೊಳ್ಳಬೇಡ. ಹೊಟ್ಟೆ ಸರಿಹೋಗುವವರೆಗೂ ಶಾರದೆ ಮಾಡುವ ಅನ್ನ-ಸಾರನ್ನೇ ತೆಗೆದುಕೊ."

ಆದರೆ ಈ ಪಥ್ಯದೂಟವನ್ನೇ ಮಾಡಿಮಾಡಿ ಶ್ರೀರಾಮಕೃಷ್ಣರಿಗೆ ಆಗಾಗ ನಾಲಿಗೆ ಜಡ್ಡು ಹಿಡಿಯುತ್ತಿತ್ತು. ಆಗ ಅವರು ತಾಯಿಯ ಬಳಿಗೆ ಹೋಗಿ, "ಅಮ್ಮಾ, ನೀನು ಊರಿನಲ್ಲಿ ಮಾಡುತ್ತಿದ್ದೆಯಲ್ಲ, ಅಂಥ ಅಡಿಗೆಯನ್ನೇನಾದರೂ ಮಾಡು ಇವತ್ತು" ಎಂದು ಕೇಳಿಕೊಳ್ಳುತ್ತಿದ್ದರು. ಆ ದಿವಸಗಳಂದು ಚಂದ್ರಮಣಿ ತಾನೇ ನಿಂತು ಅಡಿಗೆ ಮಾಡಿ ಬಡಿಸುತ್ತಿದ್ದಳು. ತಾಯ ಕೈಯಡುಗೆಗಿಂತ ಯಾವ ರುಚಿ ?

ಆದರೆ ವರ್ಷಗಳುರುಳಿದಂತೆ ವಯೋಧರ್ಮಕ್ಕನುಗುಣವಾಗಿ ಚಂದ್ರಮಣಿಯ ಶರೀರ ಮನಸ್ಸುಗಳು ಶಿಥಿಲಗೊಂಡುವು. ಅದರಲ್ಲೂ ತನ್ನ ಇಬ್ಬರು ಮಕ್ಕಳು ಹಾಗೂ ಮೊಮ್ಮಗನ ಸಾವು ಅವಳನ್ನು ಬಹಳಷ್ಟು ಹಣ್ಣುಮಾಡಿತ್ತು. ಕಡೆಯ ಕೆಲವು ವರ್ಷ ಆಕೆಯ ಬುದ್ಧಿ ಅಷ್ಟಾಗಿ ಸ್ವಾಧೀನದಲ್ಲಿರಲಿಲ್ಲ. ಪ್ರತಿದಿನ ಮಧ್ಯಾಹ್ನ, ಸಮೀಪದ ಆಲಂಬಜಾರಿನ ಸೆಣಬು ಕಾರ್ಖಾನೆಯಿಂದ ಸೈರನ್ನಿನ ಶಬ್ದ ಕೇಳಿಬರುತ್ತಿತ್ತು. ಈಕೆ ಅದನ್ನು ವೈಕುಂಠದ ಶಂಖಧ್ವನಿ ಎಂದು ನಂಬಿಕೊಂಡಳು. ಆ ಸದ್ದು ಕೇಳಿಸಿದ ಹೊರತು ಊಟ ಮಾಡುತ್ತಿರಲಿಲ್ಲ. "ವೈಕುಂಠದಲ್ಲಿ ಲಕ್ಷ್ಮೀನಾರಾಯಣನಿಗೆ ನೈವೇದ್ಯವಾಗದೆ ನಾನು ಊಟ ಮಾಡುವುದೆ ? ಸಾಧ್ಯವೇ ಇಲ್ಲ !" ಎನ್ನುತ್ತಿದ್ದಳು. ಇದರಿಂದ ಒಂದು ತೊಂದರೆ ಉದ್ಭವಿಸಿತು. ಭಾನುವಾರ ಮುಂತಾದ ರಜಾದಿನಗಳಲ್ಲಿ ಸೈರನ್ ಕೂಗುತ್ತಿರಲಿಲ್ಲ. ಆ ದಿನಗಳಲ್ಲಿ ಅವಳಿಗೆ ಊಟ ಮಾಡಿಸಬೇಕಾದರೆ ಉಳಿದವರಿಗೆಲ್ಲ ಸಾಕುಬೇಕಾಗುತ್ತಿತ್ತು. ತಾಯಿ ಹಸಿದಿರುವುದನ್ನು ಕಂಡು ಶ್ರೀರಾಮಕೃಷ್ಣರು, "ಅಯ್ಯೋ ! ಮೊದಲೇ ಆಕೆ ಸೊರಗಿಹೋಗಿದ್ದಾಳೆ. ಇನ್ನು ಉಪವಾಸ ಮಾಡಿದರೆ ಏನು ಗತಿ ?" ಎಂದು ಕೊರಗುತ್ತಿದ್ದರು. ಅದಕ್ಕೆ ಹೃದಯರಾಮ ತನಗೆ ತೋಚಿದಂತೆ ಅವರನ್ನು ಸಮಾಧಾನ ಪಡಿಸುತ್ತಿದ್ದ: "ಹೋಗಲಿ ಬಿಡು ಮಾವ, ಅಷ್ಟೆಲ್ಲ ಕೊರಗಬೇಡ. ತುಂಬ ಹಸಿವಾಯಿತೆಂದರೆ ಅಜ್ಜಿ ತಾನೇ ಊಟ ಮಾಡುತ್ತಾಳೆ !" ಅದಕ್ಕೆ ಶ್ರೀರಾಮಕೃಷ್ಣರೆನ್ನುತ್ತಿದ್ದರು: "ಓಹ್ ! ಅದು ಹೇಗಾದೀತು ? ನಾನು ಅವಳ ಮಗನಲ್ಲವೆ ? ವಯಸ್ಸಾದ ತಾಯಿಯನ್ನು ನೋಡಿಕೊಳ್ಳುವುದು ನನ್ನ ಕರ್ತವ್ಯ !" ಅಂತೂ ಬಹಳ ಕಷ್ಟಪಟ್ಟು ಅವರು ತಾಯಿಗೆ ಊಟ ಮಾಡಿಸುತ್ತಿದ್ದರು.

ಒಂದು ದಿನ ಚಂದ್ರಮಣಿ, ಇನ್ನೂ 'ಶಂಖಧ್ವನಿ'ಯಾಗಲಿಲ್ಲವೆಂದು ಹೀಗೇ ಉಪವಾಸ ಕುಳಿತಿದ್ದಾಳೆ. ಆಗ ಹೃದಯರಾಮ ದೂರದಲ್ಲಿ ನಿಂತು ಒಂದು ಕೊಳವೆಯನ್ನು ಜೋರಾಗಿ ಊದಿ ಕೀರಲು ಶಬ್ದ ಮಾಡಿದ. ಬಳಿಕ ಒಳಗೆ ಬಂದು ಹೇಳಿದ: "ಅಗೊ, ಅಜ್ಜಿ ! ಕೇಳಿಸಿತೆ ? ವೈಕುಂಠದಲ್ಲಿ ಶಂಖ ಊದಿಯಾಯಿತು !"

ಆದರೆ ಅವನ ಉಪಾಯ ಫಲಿಸಲಿಲ್ಲ. ಕೂಡಲೇ ಅವಳೆಂದಳು: "ಏಯ್ ಕಳ್ಳ ! ನನಗೆ ಗೊತ್ತಾಯಿತು--ನೀನೇ ಕೊಳವೆ ಊದಿ ಬರಿಸಿದ್ದು ಆ ಶಬ್ದ !"

ಅಲ್ಲಿದ್ದವರೆಲ್ಲ ಜೋರಾಗಿ ನಕ್ಕರು.

ತನ್ನ ಕಡೆದಿನಗಳಲ್ಲಿ ಚಂದ್ರಮಣಿಗೆ ಏಕೋ ಏನೋ, ಹೃದಯುನನ್ನು ಕಂಡರೆ ಆಗುತ್ತಿರಲಿಲ್ಲ. ಆವಳಿಗೆ ತನ್ನ ಮೊಮ್ಮಗ ಅಕ್ಷಯುನನ್ನು ಕೊಂದವನು ಇವನೇ ಎಂಬ ಭ್ರಾಂತಿಯುಂಟಾಗಿಬಿಟ್ಟಿತ್ತು. ಅಲ್ಲದೆ ಈಗ ತನ್ನ ಕಿರಿಮಗನನ್ನೂ ಸೊಸೆಯನ್ನೂ ಕೊಲ್ಲಲು ಹೊಂಚುಹಾಕುತ್ತಿದ್ದಾನೆ ಎಂಬ ಅನುಮಾನ ಬೇರೆ! ಆದ್ದರಿಂದ ಹೃದಯುನನ್ನು ದೂರವೇ ಇಟ್ಟಿರುವಂತೆ ಅವರಿಬ್ಬರನ್ನೂ ಎಚ್ಚರಿಸುತ್ತಲೇ ಇದ್ದಳು. ಚಂದ್ರಮಣಿಗೆ ಅರಳುಮರುಳಾಗಿದ್ದುದೇನೋ ನಿಜವೇ ಆದರೂ ಹೃದಯುನ ದುಷ್ಟತನ-ದುರ್ಬುದ್ಧಿ ಹೆಚ್ಚಾಗುತ್ತಿದ್ದುದೂ ಸುಳ್ಳೇನಲ್ಲ!

ತಮ್ಮ ತಾಯಿ ಹೀಗೆ ನಿಶ್ಶಕ್ತಳಾಗಿ, ಬುದ್ಧಿಸ್ಥಿಮಿತ ಇಲ್ಲದಂತಿದ್ದಾಗಲೂ ಶ್ರೀರಾಮಕೃಷ್ಣರು ಮಾತ್ರ ಒಂದು ಕ್ಷಣವೂ ಆಕೆಯನ್ನು ಅನಾದರಿಸಲಿಲ್ಲ, ಅಲಕ್ಷಿಸಲಿಲ್ಲ. ಮಕ್ಕಳು ಏನು ಮಾಡಿದರೂ ತಂದೆತಾಯಂದಿರ ಋಣವನ್ನು ತೀರಿಸಲು ಸಾಧ್ಯವಿಲ್ಲ ಎಂದು ಅವರು ದೃಢವಾಗಿ ನಂಬಿದ್ದರು. ಅದರಲ್ಲೂ ಅವರ ದೃಷ್ಟಿಯಲ್ಲಿ ತಾಯಿಯ ತೂಕ ಒಂದು ಪಟ್ಟು ಹೆಚ್ಚು. ಅವರು ಪ್ರತಿದಿನ ಬೆಳಗ್ಗೆ ತಾಯಿಗೆ ನಮಸ್ಕರಿಸುತ್ತಿದ್ದರು. ತಮ್ಮಿಂದಾದ ಪ್ರತಿಯೊಂದು ಸೇವೆಯನ್ನೂ ಪರಮಪ್ರೀತಿಯಿಂದ ನೆರವೇರಿಸುತ್ತಿದ್ದರು.

೧೮೬೭ರಲ್ಲಿ ದಕ್ಷಿಣೇಶ್ವರಕ್ಕೆ ಬಂದ ಚಂದ್ರಮಣೀ ದೇವಿ, ೧೮೭೬ರ ವರೆಗೂ ಅಲ್ಲಿ ವಾಸಿಸಿದಳು. ಇದೀಗ ಅಸ್ತಮಾನಕಾಲ ಸನ್ನಿಹಿತವಾಗಿದೆ. ಅವಳಿಗೀಗ ಎಂಬತ್ತೈದು ವರ್ಷ. ಕಡೆಗಾಲದಲ್ಲಿ ಕೆಲಕಾಲ ಅಸ್ವಸ್ಥಳಾಗಿದ್ದ ಆಕೆ, ಕಡೆಯ ಮೂರು ದಿನ ಪ್ರಜ್ಞಾಶೂನ್ಯಳಾಗಿದ್ದಳು. ಪ್ರಾಣೋತ್ಕ್ರಮಣಕಾಲ ಸಮೀಪಿಸಿದಾಗ ಅವಳನ್ನು ಆಕೆಯ ಇಚ್ಛೆಯಂತೆ, ಗಂಗಾತೀರಕ್ಕೊಯ್ದು, ಪಾದಗಳನ್ನು ಗಂಗಾಜಲದಲ್ಲಿ ಮುಳುಗಿಸಿಡಲಾಯಿತು. ಇದಕ್ಕೆ 'ಅಂತರ್ಜಲಿ' ಎನ್ನುತ್ತಾರೆ. ಚಂದ್ರಮಣಿ ಈ ಸ್ಥಿತಿಯಲ್ಲೇ ಪ್ರಾಣತ್ಯಾಗ ಮಾಡಿದಳು. ಅಂದು ೧೮೭೬ರ ಫೆಬ್ರವರಿ ೨೭. ಹಿಂದೂ ಪಂಚಾಂಗದ ಪ್ರಕಾರ ಶ್ರೀರಾಮಕೃಷ್ಣರ ನಲವತ್ತನೇ ಜನ್ಮದಿನ.

ಶ್ರೀರಾಮಕೃಷ್ಣರು ಹೂ ಗಂಧ ತುಲಸೀಪತ್ರಗಳಿಂದ ತಾಯಿಗೆ ಅಂಜಲಿಯನ್ನಿತ್ತು ಪ್ರಣಾಮ ಮಾಡಿದರು. ಅವರು ಸಂನ್ಯಾಸ ಸ್ವೀಕರಿಸಿದ್ದವರಾದ್ದರಿಂದ ಶವಸಂಸ್ಕಾರ, ಪಿಂಡಪ್ರದಾನ ಮುಂತಾದ ಯಾವುದೇ ಕರ್ಮಗಳನ್ನು ತಾವು ಮಾಡದೆ ಅಣ್ಣನ ಮಗ ರಾಮಲಾಲನಿಂದ ಅವನ್ನೆಲ್ಲ ಮಾಡಿಸಿದರು. ಅಶೌಚದ ಸಮಯ ತೀರಿದ ಮೇಲೆ ಸಂಪ್ರದಾಯದಂತೆ ರಾಮಲಾಲನಿಂದ ಒಂದು ಎತ್ತನ್ನು ದಾನ ಕೊಡಿಸಿದರು.

ತಾಯಿ ತೀರಿಹೋದಾಗ ಶ್ರೀರಾಮಕೃಷ್ಣರು ಏಕಾಂತದಲ್ಲಿ ಕುಳಿತು ಆಕೆಗಾಗಿ ಬಹುವಾಗಿ ಅತ್ತು ಕಣ್ಣೀರು ಸುರಿಸಿದರು. ಅದು ಅವರ ನಿಷ್ಠಾಯುತ ಮಾತೃಪ್ರೇಮದ ಪರಿಪೂರ್ಣ ಪ್ರತೀಕ. ಜಗತ್ತಿನಲ್ಲಿ, ಸತ್ತವರಿಗಾಗಿ ಯಾರಾದರೂ ಅಷ್ಟೊಂದು ಅಳುವುದು ಅಪರೂಪವೇ ಸರಿ! ಆ ಕುರಿತಾಗಿ ಮುಂದೆ ಅವರು ತಮ್ಮ ಶಿಷ್ಯರಿಗೆ ಹೇಳುತ್ತಿದ್ದರು:

"ಅಪ್ಪಾ! ಈ ಜಗತ್ತಿನಲ್ಲಿ ತಾಯ್ತಂದೆಯರೆಂದರೆ ಪರಮಪೂಜ್ಯರು. ಅವರು ಜೀವಂತವಾಗಿರುವವರೆಗೆ ಮಕ್ಕಳು ತಮ್ಮ ಕೈಲಾದ ಮಟ್ಟಿಗೆ ಅವರ ಸೇವೆ ಮಾಡಬೇಕು. ಮತ್ತು ಅವರು ಸತ್ತಮೇಲೆ, ತಮ್ಮ ಯೋಗ್ಯತಾನುಸಾರ ಶ್ರಾದ್ಧ ಮಾಡಬೇಕು. ಬಡವರು, ನಿರ್ಗತಿಕರು, ಶ್ರಾದ್ಧ ಮಾಡಲು ಅನುಕೂಲವಿಲ್ಲದವರು—ಇಂಥವರೂ

ಕೂಡ ಏಕಾಂತಕ್ಕೆ ಹೋಗಿ ಅವರನ್ನು ಸ್ಮರಿಸಿಕೊಂಡು ಅವರಿಗಾಗಿ ಕಣ್ಣೀರು ಹಾಕಬೇಕು. ಆಗಲೇ ಮಕ್ಕಳ ಪಾಲಿನ ಕರ್ತವ್ಯ ಪೂರ್ಣವಾಗುವುದು. ದೇವರ ಸಲುವಾಗಿ ಮಾತ್ರ ತಾಯ್ತಂದೆಯರ ಮಾತನ್ನು ಮೀರಬಹುದು. ಅದು ತಪ್ಪಾಗುವುದಿಲ್ಲ. ಉದಾಹರಣೆಗೆ, ತನ್ನ ತಂದೆ ಎಷ್ಟೇ ಪ್ರತಿರೋಧಿಸಿದರೂ ಪ್ರಹ್ಲಾದನು ಹರಿಸ್ಮರಣೆ ಮಾಡುವುದನ್ನು ಬಿಡಲಿಲ್ಲ. ಧ್ರುವನು ತನ್ನ ತಾಯಿ ತಡೆಗಟ್ಟಿದರೂ ತಪಸ್ಸು ಮಾಡಲು ಕಾಡಿಗೆ ಹೋದ. ಆದರಿಂದ ಅವರಿಗೇನೂ ದೋಷ ತಟ್ಟಲಿಲ್ಲ.''

ಶ್ರೀರಾಮಕೃಷ್ಣರು ಸಂನ್ಯಾಸಧರ್ಮದ ನಿಯಮಗಳಿಗನುಸಾರವಾಗಿ, ತಮ್ಮ ತಾಯಿ ತೀರಿಹೋದಾಗ ಶ್ರಾದ್ಧ-ಅಶೌಚವೇ ಮೊದಲಾದ ಯಾವ ನಿಯಮವನ್ನೂ ಅನುಸರಿಸಲಿಲ್ಲವಾದರೂ ಕೆಲಕಾಲವಾದ ಮೇಲೆ ಅವರ ಮನದಲ್ಲಿ ಏನೋ ಒಂದು ಬಗೆಯ ದುಗುಡ ಉಂಟಾಯಿತು. ಒರ್ವ ಮಗನಾಗಿ ತಾನು ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸದೆ ತಪ್ಪು ಮಾಡಿದೆನೋ ಎಂಬ ಶಂಕೆ. ಆಗ ಅವರು ಗಂಗೆಗೆ ಹೋಗಿ ತಾಯಿಗೆ ತರ್ಪಣ ಕೊಡಲು ಸಿದ್ಧರಾಗಿ ಬೊಗಸೆಯಿಂದ ನೀರನ್ನು ತೆಗೆದುಕೊಂಡರು. ಆದರೆ ಏನಾಶ್ಚರ್ಯ! ತಕ್ಷಣವೇ ಅವರಿಗೆ ಭಾವಾವೇಶವುಂಟಾಗಿ, ಕೈಬೆರಳುಗಳು ಜೋಮು ಹಿಡಿದಂತೆ ಸೆಟೆದುಕೊಂಡುವು. ಕೈಯಲ್ಲಿ ಹನಿ ನೀರೂ ನಿಲ್ಲದಾಯಿತು! ಎಷ್ಟು ಬಾರಿ ಪ್ರಯತ್ನಿಸಿದರೂ ಅದೇ ಕತೆ. ಆಗ ಅವರು, ''ಅಮ್ಮಾ, ನನ್ನಿಂದ ನಿನಗೆ ಈ ಒಂದು ಸೇವೆಯೂ ಸಲ್ಲದಂತಾಯಿತು! ನಾನೇನು ತಾನೆ ಮಾಡಲಿ?'' ಎಂದು ಅಳುತ್ತ ತಮ್ಮ ಹೃದಯವನ್ನು ನಿವೇದಿಸಿಕೊಂಡರು.

ಮುಂದೊಮ್ಮೆ ಶಾಸ್ತ್ರಜ್ಞರಾದ ಪಂಡಿತರೊಬ್ಬರಿಗೆ ಈ ವಿಷಯ ತಿಳಿದಾಗ ಅವರು, ''ಕರ್ಮಬಂಧನಗಳು ಉದುರಿಹೋದರೆ, ಅಥವಾ ಆಧ್ಯಾತ್ಮಿಕ ಉನ್ನತಿಯಿಂದ ಕರ್ಮವು ಪೂರ್ತಿ ನಿಂತುಹೋದರೆ ಸಹಜವಾಗಿಯೇ ಹಾಗಾಗುತ್ತದೆ. ಆ ಸ್ಥಿತಿಯಲ್ಲಿ ಯಾವುದೇ ಕರ್ಮವನ್ನು ಮಾಡದಿರುವುದರಿಂದ ದೋಷವೇನೂ ಆಗುವುದಿಲ್ಲ'' ಎಂದು ಸಮಾಧಾನ ಹೇಳಿದರು.

ಈ ನಡುವೆ ಶ್ರೀರಾಮಕೃಷ್ಣರ ಸತಿ ಶಾರದಾದೇವಿಯವರ ಜೀವನ ಹೇಗೆ ಸಾಗುತ್ತಿತ್ತೆಂಬುದರ ಕಡೆಗೆ ನಮ್ಮ ದೃಷ್ಟಿ ಹರಿಸೋಣ. ನಿಜಕ್ಕೂ ಅವರ ಜೀವನವು ಮೇಲ್ನೋಟಕ್ಕೆ ಕಷ್ಟಕೋಟಲೆಗಳ ಸರಮಾಲೆಯೇ ಸರಿ. ಆ ಕಷ್ಟಗಳನ್ನಷ್ಟೇ ನೋಡಿದರೆ, ಅದು ಯಾವ ಸಾಮಾನ್ಯ ಸ್ತ್ರೀಯ ಜೀವನಕ್ಕಿಂತಲೂ ಉತ್ತಮವಾಗಿಯೇನೂ ಕಾಣಲಾರದು! ಆದರೆ ಒಳಹೊಕ್ಕು ನೋಡಿದಾಗಷ್ಟೇ ಅವರ ಅಂತಸ್ಸತ್ವವೇನು, ಅವರ ನಿಜಸ್ವರೂಪವೇನು, ಅವರ ಕಷ್ಟ-ಸುಖಗಳ ನಿಜವಾದ ಮಹತ್ವವೇನು ಎಂಬುದು ತಿಳಿದೀತು. ಇದನ್ನು ನಾವು ಮುಂದೆ ಸಾಕಷ್ಟು ಸ್ಪಷ್ಟವಾಗಿ, ವಿವರವಾಗಿ ಕಾಣಲಿದ್ದೇವೆ. ಒಂದು ಮಾತನ್ನು ಮಾತ್ರ ಇಲ್ಲಿ ಹೇಳಬಹುದು. ಏನೆಂದರೆ, ಯುಗಾವತಾರಪುರುಷನ ಲೀಲಾಸಹಚಾರಿಣಿ ಅವರು; ಅಂಥವನ ಮಹಿಮಾಮಯ ಜೀವನಕ್ಕೆ ಸರಿದೂಗುವಂತಹ ಜೀವನ ಅವರದು.

ಷೋಡಶೀಪೂಜೆಯ ಘಟನೆಯಾದ ಒಂದು ವರ್ಷದ ಮೇಲೆ ಶಾರದಾದೇವಿಯವರು ತವರೂರಿಗೆ ಹೋಗಿ ಸುಮಾರು ಒಂದು ವರ್ಷಕಾಲ ಇದ್ದರು. ಈ ಅವಧಿಯಲ್ಲಿ ಅವರು ಇಬ್ಬರು ಹಿರಿಯರ ವಿಯೋಗದುಃಖವನ್ನು ಅನುಭವಿಸಬೇಕಾಯಿತು. ಮೊದಲನೆಯದಾಗಿ, ಕಾಮಾರಪುಕುರದಲ್ಲಿ ಶ್ರೀರಾಮಕೃಷ್ಣರ ಅಣ್ಣ ರಾಮೇಶ್ವರನ ನಿಧನ. ಇದಾದ ಕೆಲತಿಂಗಳಿಗೇ ತಮ್ಮ ತಂದೆ ರಾಮಚಂದ್ರ ಮುಖರ್ಜಿಯ ನಿರ್ಯಾಣ. ಈತನ ಕಿಂಚಿತ್ ಸಂಪಾದನೆಯಿಂದ ಅಷ್ಟು ದಿನವೂ ಸಂಸಾರರಥ ಹೇಗೋ ಸಾಗುತ್ತಿತ್ತು. ಮೊದಲೇ ದೊಡ್ಡ ಕುಟುಂಬ—ಶಾರದಾದೇವಿಯವರಲ್ಲದೆ ಇನ್ನೊಬ್ಬ ಹೆಣ್ಣುಮಗಳು ಮತ್ತು ನಾಲ್ವರು ಗಂಡು ಮಕ್ಕಳು; ಎಲ್ಲರೂ ಚಿಕ್ಕವರು. ಸಂಸಾರದ ಹೊಣೆ ಈಗ ತಾಯಿ ಶ್ಯಾಮಸುಂದರಿಯದಾಯಿತು. ಪಾಪ, ಹೆಣ್ಣುಹೆಂಗಸು, ಏನು ಮಾಡಿಯಾಳು? ನೆರೆಹೊರೆಯವರಿಗೆ ಬತ್ತ ಕುಟ್ಟಿಕೊಟ್ಟು ಹಣ ಸಂಪಾದಿಸಿ ಮಕ್ಕಳ ಹೊಟ್ಟೆ ತುಂಬಿಸುವ ಯತ್ನ ಮಾಡಿದಳು. ಆದರೆ ಇದು ಎಷ್ಟು ದಿನ ಸಾಗೀತು? ಕಡೆಗೆ, ಸಮೀಪದ ಊರುಗಳಲ್ಲೇ ಇದ್ದ ಆಕೆಯ ಬಂಧುಗಳೆಲ್ಲರೂ ತಲಾ ಒಬ್ಬೊಬ್ಬ ಹುಡುಗನನ್ನು ನೋಡಿಕೊಳ್ಳಲು ಒಪ್ಪಿ ಕರೆದುಕೊಂಡು ಹೋದರು. ಅಂತೂ ಆ ಸಂಸಾರಕ್ಕೆ ಹೇಗೋ ಒಂದು ಗತಿ ಆಯಿತು.

ತಂದೆ ತೀರಿಹೋದ ಕೆಲದಿನಗಳಲ್ಲೇ ಶಾರದಾದೇವಿಯವರು ಆ ದುಃಖವನ್ನು ಮರೆಯಲು ದಕ್ಷಿಣೇಶ್ವರಕ್ಕೆ ಬಂದುಬಿಟ್ಟರು. ಆದರೆ ಇಲ್ಲಿಗೆ ಬರುತ್ತಿದ್ದಂತೆಯೇ ಆಮಶಂಕೆ ಹತ್ತಿಕೊಂಡಿತು. ಶಂಭುಮಲ್ಲಿಕ ಅವರ ಚಿಕಿತ್ಸೆಗಾಗಿ ಬಹಳ ಪ್ರಯತ್ನಪಟ್ಟ. ಖ್ಯಾತ ವೈದ್ಯರನ್ನು ನೇಮಿಸಿದ. ಆದರೆ ಕಾಯಿಲೆ ಬೇಗ ವಾಸಿಯಾಗಲಿಲ್ಲ. ಶಾರದಾದೇವಿಯವರು ಹೇಗೋ ಕಾಯಿಲೆಯೊಂದಿಗೆ ಏಗುತ್ತಲೇ, ಪತಿಯ ಹಾಗೂ ಅತ್ತೆಯ ಸೇವೆಯನ್ನು ಮಾಡಿಕೊಂಡುಬಂದರು. ಹೀಗೆ ಒಂದು ವರ್ಷ ಉರುಳಿತು. ಕ್ರಮೇಣ ಆರೋಗ್ಯ ಸುಧಾರಣೆಗೊಂಡು ಸ್ವಲ್ಪ ಶಕ್ತಿ ಮರಳಿತು. ಈಗ ಅವರು ಒಮ್ಮೆ ತಮ್ಮ ತಾಯಿಯನ್ನು ನೋಡಿಕೊಂಡು ಬರೋಣವೆಂದು ಊರಿಗೆ ಹೊರಟರು. ಆದರೆ

ಊರಿಗೆ ಬಂದರೋ ಇಲ್ಲವೋ, ಕಾಯಿಲೆ ಹಿಂದೆಂದಿಗಿಂತ ಪ್ರಬಲವಾಗಿ ಮರುಕಳಿಸಿತು. ದಿನದಿನಕ್ಕೂ ಹೆಚ್ಚಾಯಿತು. ಯಾವ ಔಷಧಿಗೂ ಪಥ್ಯಕ್ಕೂ ಜಗ್ಗದಾಯಿತು. ಅತ್ಯಂತ ನಿಶ್ಶಕ್ತಿಯಿಂದ ಅವರು ಹಾಸಿಗೆ ಹಿಡಿದರು. ಕೊನೆಗೆ ಜೀವ ಉಳಿಯುವುದೇ ಸಂದೇಹ ಎಂಬ ಸ್ಥಿತಿ ಬಂದೊದಗಿತು.

ಈ ಸುದ್ದಿ ದಕ್ಷಿಣೇಶ್ವರಕ್ಕೂ ಮುಟ್ಟಿತು. ಸಹಜವಾಗಿಯೇ ಶ್ರೀರಾಮಕೃಷ್ಣರು ಅತ್ಯಂತ ವ್ಯಾಕುಲಿತರಾದರು. ಆದರೆ ಅವರ ಆತಂಕಕ್ಕೆ ಕಾರಣ ಮಾತ್ರ, ತಾವು ತಮ್ಮ ಹರೆಯದ ಪತ್ನಿಯನ್ನು ಕಳೆದುಕೊಂಡು ವಿಧುರರಾಗಬೇಕಾಗಬಹುದೆ?—ಎಂಬ ಭೀತಿಯಲ್ಲ. ಬದಲಾಗಿ, ತನ್ನ ಜೀವನೋದ್ದೇಶ ಈಡೇರುವಷ್ಟರಲ್ಲೇ ಅವಳು ಇಹ ಲೋಕಯಾತ್ರೆಯನ್ನು ಮುಗಿಸಿಬಿಟ್ಟರೆ? ಎಂಬ ಶಂಕೆ. ಅವರು ಹೃದಯನ ಮುಂದೆ ಉದ್ಗರಿಸಿದರು: "ಹೃದೆ, ಇದೇನು ಹೀಗಾಗುತ್ತಿದೆಯಲ್ಲ! ಮಾನವಜನ್ಮಕ್ಕೆ ಯೋಗ್ಯವಾದ ದ್ದೇನನ್ನೂ ಸಾಧಿಸದೆ ಸುಮ್ಮನೆ ಬಂದುಹೋಗುವುದೇ ಅವಳ ವಿಧಿಯೇ?"

ಆಮಶಂಕೆಯು ಪರಿಣಾಮವಾದ ರಕ್ತಹೀನತೆಯಿಂದಾಗಿ ಶಾರದಾದೇವಿಯವರ ಶರೀರ ಜರ್ಝರಿತವಾಯಿತು. ಇನ್ನು ಈ ಹಳ್ಳಿಯಲ್ಲಿ ಅವರ ಔಷಧೋಪಚಾರ ಕ್ಕಾದರೂ ಯಾವ ವ್ಯವಸ್ಥೆಯಿದೆ? ಮತ್ತೆಮತ್ತೆ ಹೊರಗೆ ಹೋಗಿಬರುವುದು ಕಷ್ಟ ವಾದ್ದರಿಂದ ಅವರು ಕೆರೆಯ ದಂಡೆಯ ಮೇಲೆಯೇ ಒರಗಿಕೊಂಡಿರುತ್ತಿದ್ದರು. ಒಮ್ಮೆ ಅವರು ಕೆರೆಯ ನೀರಿನಲ್ಲಿ ತಮ್ಮ ಪ್ರತಿಬಿಂಬವನ್ನು ನೋಡಿಕೊಳ್ಳುತ್ತಾರೆ—ಶರೀರವು ಕೇವಲ ಚರ್ಮ-ಮೂಳೆಗಳ ಹಂದರವಾಗಿಬಿಟ್ಟಿದೆ! ಆಗ ಅವರಿಗನ್ನಿಸಿತು: 'ಛೆ! ಹಾಳಾಗಿಹೋಗಲಿ ಈ ಶರೀರ! ಇಷ್ಟೇ ತಾನೆ ಕಡೆಗೆ ಇದರ ಗತಿ? ಮತ್ತೆ ಇದಕ್ಕಿನ್ನೇನು ಉಪಚಾರ? ನಾನಿದನ್ನು ಇಲ್ಲೇ ಬಿಟ್ಟುಬಿಡುತ್ತೇನೆ.'

ಅವರ ಕಷ್ಟವನ್ನೆಲ್ಲ ನೋಡುತ್ತಿದ್ದ ಸೋದರ ಉಮೇಶನಿಗೊಂದು ಆಲೋಚನೆ ಬಂದಿತು. ಅವನೆಂದ:

"ಅಕ್ಕ, ಇಲ್ಲಿ ಸಿಂಹವಾಹಿನೀ ದೇವಿ ಇದ್ದಾಳಲ್ಲ, ಅವಳ ಮುಂದೆ ಕುಳಿತು ವ್ರತ ಪ್ರಾರಂಭಿಸಿ ನೋಡು. ಅದರಿಂದಲಾದರೂ ಕಾಯಿಲೆ ವಾಸಿಯಾದೀತು."

ಸಿಂಹವಾಹಿನಿ ಜಯರಾಂಬಾಟಿಯ ಗ್ರಾಮದೇವತೆ. ಆಕೆಯ ಪುಟ್ಟ ಗುಡಿ ಯೊಂದು ಸಮೀಪದಲ್ಲೇ ಇತ್ತು. ಶಾರದಾದೇವಿಯವರು ಸೋದರನ ಸಲಹೆಗೆ ಒಪ್ಪಿ ದರು. ಆತನ ಕೈಹಿಡಿದುಕೊಂಡು ಮೆಲ್ಲನೆ ನಡೆದು ದೇವಿಯ ಮುಂದೆ ಒರಗಿಕೊಂಡರು. ಆ ದಿನಗಳಲ್ಲಿ ಅವರ ಕಣ್ಣು-ಕಿವಿಗಳಿಂದ ದ್ರವ ಸೋರುತ್ತಲೇ ಇದ್ದು, ಕಣ್ಣಂತೂ ಪೂರ್ಣ ಮಬ್ಬಾಗಿಬಿಟ್ಟಿತ್ತು. ಆ ಸ್ಥಿತಿಯಲ್ಲೇ ಅವರು ದೇವಿಯ ಮುಂದೆ ಮಲಗಿ ಕೊಂಡು ನಿರಶನ ವ್ರತ ಹಿಡಿದರು. ಹೀಗೆ ಕೆಲಕಾಲ ಕಳೆಯುವಷ್ಟರಲ್ಲಿ ವ್ರತ ಫಲಿಸಿತು. ಅವರ ತಾಯಿ ಶ್ಯಾಮಸುಂದರಿಗೆ ಸ್ವಪ್ನದಲ್ಲಿ ದೇವಿಯು ಕಮ್ಮಾರ ಬಾಲಕಿಯ ರೂಪದಲ್ಲಿ ದರ್ಶನ ಕೊಟ್ಟು ಔಷಧಿಯೊಂದನ್ನು ಹೇಳಿದಳು. ಅಲ್ಲದೆ ಶಾರದಾದೇವಿಯವರಿಗೂ ದರ್ಶನವಿತ್ತು, ಕಣ್ಣಿಗೆ ಹಾಕಿಕೊಳ್ಳಲು ಒಂದು ರಸವನ್ನು ಸೂಚಿಸಿದಳು. ಸ್ವಲ್ಪವೂ ತಡ ಮಾಡದೆ ಆ ಚಿಕಿತ್ಸೆಯನ್ನು ಪ್ರಯೋಗಿಸಲಾಯಿತು. ಒಡನೆಯೇ ಅವರ ಕಾಯಿಲೆ ಮಂಗಮಾಯವಾಯಿತು; ದೃಷ್ಟಿಯೂ ಸರಿಹೋಯಿತು.

ಈ ಹಠಾತ್ ಸುಧಾರಣೆಯನ್ನು ಕಂಡ ಗ್ರಾಮಸ್ಥರೆಲ್ಲ ಅತ್ಯಾಶ್ಚರ್ಯಪಟ್ಟರು. "ಇದೆಲ್ಲ ಸಿಂಹವಾಹಿನಿಯ ಕೃಪೆ" ಎಂದು ತಿಳಿದಾಗ, ಆಕೆ ಈಗ ಜಾಗೃತ ದೇವತೆ

ಯಾಗಿದ್ದಾಳೆ ಎಂದರಿತು ಸಂತಸಗೊಂಡರು. ಅಂದಿನಿಂದ ಸಿಂಹವಾಹಿನಿಯ ಕೀರ್ತಿ ಎಲ್ಲೆಡೆಗೂ ಹರಡಿ ಕ್ರಮೇಣ ದೂರದೂರದ ಊರುಗಳಿಂದಲೂ ನೂರಾರು ಯಾತ್ರಿಕರು ಬರಲಾರಂಭಿಸಿದರು.

ಶಾರದಾದೇವಿಯವರು ಸಂಪೂರ್ಣ ಗುಣಮುಖರಾದ ಮೇಲೆ ಮರಳಿ ದಕ್ಷಿಣೇಶ್ವರಕ್ಕೆ ಹೊರಟರು. ಈ ಪ್ರಯಾಣಕಾಲದಲ್ಲಿ ನಡೆದ ಒಂದು ಘಟನೆ ರೋಮಾಂಚಕಾರಿಯಾಗಿದೆ.

ಪುಣ್ಯದಿನವೊಂದರಂದು ಗಂಗಾಸ್ನಾನ ಮಾಡಲೆಂದು ಹೊರಟಿದ್ದ ಊರಿನ ಹೆಂಗಳೆಯರೊಂದಿಗೆ ಶಾರದಾದೇವಿಯವರೂ ಸೇರಿಕೊಂಡರು. ಜೊತೆಯಲ್ಲಿ ರಾಮೇಶ್ವರನ ಮಕ್ಕಳಾದ ಶಿವರಾಮ ಮತ್ತು ಲಕ್ಷ್ಮಿ ಇವರೂ ಇದ್ದರು. ಅದು ಸುದೀರ್ಘ ಕಾಲ್ನಡಿಗೆಯ ಪ್ರಯಾಣವಾದ್ದರಿಂದ ಎಲ್ಲೆಲ್ಲಿ ತಂಗಬೇಕೆಂದು ಮೊದಲೇ ಯೋಜನೆ ಹಾಕಿಕೊಂಡಿದ್ದರು. ಕಾಮಾರಪುಕುರದಿಂದ ಎಂಟು ಮೈಲಿ ದೂರದಲ್ಲಿರುವ ಆರಾಮ್‌ಬಾಗ್‌ನ ವರೆಗೆ ನಡೆದು ರಾತ್ರಿ ವಿಶ್ರಮಿಸಿ ಬೆಳಗ್ಗೆ ಪ್ರಯಾಣ ಮುಂದುವರಿಸುವುದು ಅವರ ಯೋಜನೆ. ಏಕೆಂದರೆ ಅಲ್ಲಿಂದ ಮುಂದಿನದು ಒಂದು ಭಯಂಕರ ಬಯಲು ಪ್ರದೇಶ. ತೇಲೋಭೇಲೋ ಎಂದು ಅದರ ಹೆಸರು. ಡಕಾಯಿತರಿಗೆ, ಕಳ್ಳಕಾಕರಿಗೆ ಹೆಸರಾದ ಜಾಗ. ಆ ದಾರಿಯಾಗಿ ಬೆಳಗಿನ ಹೊತ್ತಿನಲ್ಲಿ ಕೂಡ ಯಾರೂ ಏಕಾಂಗಿಯಾಗಿ ಓಡಾಡುತ್ತಿರಲಿಲ್ಲ. ಇನ್ನು ರಾತ್ರಿಯ ವಿಷಯ ಕೇಳಬೇಕೆ ?

ಶಾರದಾದೇವಿಯವರ ಯಾತ್ರಿಕ ತಂಡ ಆರಾಮ್‌ಬಾಗಿಗೆ ಬಂದಾಗ ಸಂಜೆಯಾಗಲು ಇನ್ನೂ ಬಹಳ ಹೊತ್ತಿತ್ತು. ಮಾಮೂಲು ನಡಿಗೆಯಲ್ಲೇ ನಡೆದರೂ ರಾತ್ರಿಯೊಳಗಾಗಿ ಮುಂದಿನ ಊರಾದ ತಾರಕೇಶ್ವರವನ್ನು ತಲುಪಲು ಸಾಧ್ಯವಿತ್ತು. ಆದ್ದರಿಂದ ಸುಮ್ಮನೆ ಸಮಯವನ್ನೇಕೆ ವ್ಯರ್ಥ ಮಾಡುವುದೆಂದು ಆಲೋಚಿಸಿ ಪ್ರಯಾಣಿಕರೆಲ್ಲ ಅಲ್ಲಿ ನಿಲ್ಲದೆ ನಡೆದೇಬಿಟ್ಟರು.

ಆದರೆ ಅಷ್ಟು ಜನರಲ್ಲಿ ಶಾರದಾದೇವಿಯವರು ಮಾತ್ರ ದಣಿದಿದ್ದರು. ಅವರಿಗೆ ವಿಶ್ರಾಂತಿ ಬೇಕಿತ್ತು. ಆದರೂ ತಮ್ಮ ಅನುಕೂಲಕ್ಕಾಗಿ ಇತರರನ್ನು ತಡೆದು ನಿಲ್ಲಿಸಲು ಮನವಿಲ್ಲದೆ ತಾವೂ ಹೆಜ್ಜೆ ಹಾಕಿದರು. ಹೇಗೋ ಮಾಡಿ ನಡೆದುಬಿಡೋಣ ಎಂದು ಭಾವಿಸಿದರೋ ಏನೊ. ಆದರೆ ಅದು ಸಾಧ್ಯವಾಗಲಿಲ್ಲ. ಅವರ ನಡಿಗೆ ನಿಧಾನವಾಯಿತು. ಸಂಗಡಿಗರೆಲ್ಲ ಅವರಿಗಾಗಿ ಅಲ್ಲಲ್ಲಿ ನಿಂತು, ಅವರು ತಮ್ಮನ್ನು ಕೂಡಿಕೊಳ್ಳಲು ಕಾದರು. ಆದರೆ ಕಡೆಗೆ ಎಲ್ಲರಿಗೂ ಖಚಿತವಾಯಿತು—ಇವರಿಗಾಗಿ ತಾವೂ ನಿಧಾನವಾಗಿ ನಡೆದರೆ ಎಲ್ಲರೂ ಅಪಾಯಕ್ಕೆ ಸಿಕ್ಕಿಕೊಳ್ಳುವುದೇ ನಿಶ್ಚಯ ಎಂದು. ಪರಿಸ್ಥಿತಿಯನ್ನು ಅರ್ಥಮಾಡಿಕೊಂಡ ಶಾರದಾದೇವಿಯವರು, "ನೀವು ಯಾರೂ ನನಗಾಗಿ ಕಾಯಬೇಡಿ. ನಾನು ಹೇಗೋ ಮಾಡಿ ಬಂದು ತಾರಕೇಶ್ವರದಲ್ಲಿ ನಿಮ್ಮನ್ನು ಸೇರಿಕೊಳ್ಳುತ್ತೇನೆ. ನೀವೀಗ ಹೊರಟುಬಿಡಿ" ಎಂದು ಎಲ್ಲರನ್ನೂ ಕಳಿಸಿಬಿಟ್ಟರು. ಶಿವರಾಮ, ಲಕ್ಷ್ಮಿ ಕೂಡ, ಅದಾವ ಕಾರಣಕ್ಕೋ ಏನೋ, ಆ ತಂಡದೊಂದಿಗೇ ಹೊರಟುಬಿಟ್ಟರು. ಈಗ ಶಾರದಾದೇವಿಯವರೊಬ್ಬರೇ ಮೆಲ್ಲನೆ ಹೆಜ್ಜೆ ಹಾಕುತ್ತ ನಡೆದರು.

ಮುಚ್ಚಂಜೆಯಾಯಿತು; ಕತ್ತಲು ಮುಸುಕಿತು. ನಿರ್ಜನ-ಘೋರ ಮೈದಾನ. ಶಾರದಾದೇವಿಯವರೋ ಅಬಲೆ, ಏಕಾಂಗಿ. ಆದರೂ ನಿಲ್ಲದೆ ಮುನ್ನಡೆಯುತ್ತಲೇ ಇದ್ದಾರೆ. ಹೃದಯದಲ್ಲಿ ಅಂಜಿಕೆ. ಆದರೆ ಮಾಡುವುದೇನು ?

ಶಾರದಾದೇವಿಯವರು ಹೀಗೆ ನಡೆಯುತ್ತಿದ್ದಾಗ ಒಮ್ಮೆ ಮುಂದೆ ನೋಡು ತ್ತಾರೆ—ಯಾರೋ ಒಬ್ಬ ಧಾಂಡಿಗ ತಮ್ಮತ್ತಲೇ ಬರುತ್ತಿದ್ದಾನೆ! ಆತ ಇನ್ನಷ್ಟು ಸನಿಹಕ್ಕೆ ಬಂದ—ಕಾಡಿಗೆಯಂತೆ ಕಗ್ಗಿನ ಆಸಾಮಿ, ಉದ್ದನೆಯ ತಲೆಗೂದಲು; ಸೊಂಟ ದಲ್ಲೊಂದು ಬೆಳ್ಳಿ ಪಟ್ಟಿ, ಕೈಯಲ್ಲಿ ದಪ್ಪನೆಯ ದೊಣ್ಣೆ. ನೋಡಿದೊಡನೆ ಎದೆ ತಲ್ಲಣಿಸು ವಂಥ ರೂಪ. ಶಾರದಾದೇವಿಯವರು ಮುಂದಕ್ಕೆ ಅಡಿಯಿಡಲಿಲ್ಲ. ಹೆದರುತ್ತ ನಿಂತ ಸ್ತ್ರೀ ಆಕೃತಿಯನ್ನು ಕಂಡ ಡಕಾಯಿತ ತನ್ನ ಕರ್ಕಶ ದನಿಯಲ್ಲಿ ಕೂಗಿದ:

"ಏಯ್! ಯಾರಲ್ಲಿ? ಎಲ್ಲಿಗೆ ಹೋಗುತ್ತಿದ್ದೀಯ?"

ಶಾರದಾದೇವಿಯವರು ಧೈರ್ಯ ತಂದುಕೊಂಡು ಉತ್ತರಿಸಿದರು: "ಪೂರ್ವದ ಕಡೆಗೆ." ಡಕಾಯಿತ ಗರ್ಜಿಸಿದ: "ಅಲ್ಲಿಗೆ ಹೋಗುವುದಕ್ಕೆ ಇದಲ್ಲ ದಾರಿ!"

ಹಾಗೆನ್ನುತ್ತ ಆತ ಎದುರಿಗೇ ಬಂದು ನಿಂತುಬಿಟ್ಟ. ಶಾರದಾದೇವಿಯವರು ಮರು ಮಾತನಾಡಲಿಲ್ಲ. ಸುಮ್ಮನೆ ನೆಟ್ಟದೃಷ್ಟಿಯಿಂದ ಆತನನ್ನೇ ನೋಡಿದರು. ಆ ನೋಟ ದಲ್ಲಿ ಅವನೇನನ್ನು ಕಂಡನೊ! ಬುದ್ಧ ಭಗವಂತನನ್ನು ಕಂಡ ಅಂಗುಲಿಮಾಲನಂತೆ ಇದ್ದಕ್ಕಿದ್ದಹಾಗೆ ಮೆತ್ತಗಾಗಿಬಿಟ್ಟ. ಅವನ ವ್ಯಕ್ತಿತ್ವವೇ ಬದಲಾದಂತೆ ತೋರಿತು. ತಗ್ಗಿದ ದನಿಯಲ್ಲಿ ನುಡಿದ:

"ಹೆದರಿಕೊಳ್ಳಬೇಡ . . . ನನ್ನ ಹೆಂಡತಿ ಈ ಕಡೆಗೇ ಬರುತ್ತಿದ್ದಾಳೆ . . ."

ಶಾರದಾದೇವಿಯವರು ನೋಡಿದರು, ಅನತಿ ದೂರದಲ್ಲೇ ಹೆಂಗಸೊಬ್ಬಳು ಬರುತ್ತಿರುವುದು ಕಂಡಿತು. ಇನ್ನಷ್ಟು ಧೈರ್ಯ ಬಂತು. ಮೃದುಕಂಠದಿಂದ ನುಡಿದರು:

"ಅಪ್ಪಾ, ನನ್ನ ಜೊತೆ ಇದ್ದವರೆಲ್ಲ ಮುಂದೆ ಹೊರಟುಹೋದರು. ನಾನೊಬ್ಬಳೇ ಹಿಂದುಳಿದುಬಿಟ್ಟೆ. ಈಗ . . . ನಾನು ದಾರಿತಪ್ಪಿದ್ದೇನೆಂದು ಕಾಣುತ್ತಿದೆ. ದಯವಿಟ್ಟು ನನ್ನನ್ನು ಅವರ ಬಳಿಗೆ ಕರೆದುಕೊಂಡು ಹೋಗುತ್ತೀಯಾ? ನಿನ್ನ 'ಅಳಿಯಂದಿರು' ದಕ್ಷಿಣೇಶ್ವರದ ಕಾಳೀ ದೇವಾಲಯದಲ್ಲಿ ವಾಸವಾಗಿದ್ದಾರೆ. ನಾನು ಅಲ್ಲಿಗೇ ಹೊರಟಿದ್ದೆ. ನೀನು ನನ್ನನ್ನು ಅವರ ಬಳಿಗೆ ಕರೆದುಕೊಂಡುಹೋಗಿ ಬಿಟ್ಟರೆ ಅವರು ನಿನ್ನನ್ನು ತುಂಬ ವಿಶ್ವಾಸದಿಂದ ನೋಡಿಕೊಳ್ಳುತ್ತಾರೆ."

ಡಕಾಯಿತ ತಬ್ಬಿಬ್ಬಾದ. 'ಅಪ್ಪ'?! ಇಂಥ ಸಂಬೋಧನೆಯನ್ನು, ಇಂಥ ಪ್ರೀತಿಯ ಮಾತನ್ನು ಅವನೆಂದಾದರೂ ಕೇಳಿದ್ದನೋ ಇಲ್ಲವೋ! ಏನು ಹೇಳಲೂ ತೋಚದೆ ಬೆಪ್ಪಾಗಿ ನಿಂತ. ಅಷ್ಟುಹೊತ್ತಿಗೆ ಅವನ ಹೆಂಡತಿಯೂ ಅಲ್ಲಿಗೆ ಬಂದಳು. ಶಾರದಾದೇವಿಯವರು ಕೂಡಲೇ ಓಡಿಹೋಗಿ ಅವಳ ಕೈಹಿಡಿದುಕೊಂಡು ಅತ್ಯಂತ ವಿಶ್ವಾಸದಿಂದ ನುಡಿದರು:

"ಅಮ್ಮಾ! ನಾನು ನಿನ್ನ ಮಗಳು, ಶಾರದೆ! ನನ್ನ ಜೊತೆ ಬರುತ್ತಿದ್ದವರೆಲ್ಲ ನನ್ನನ್ನು ಬಿಟ್ಟು ಮುಂದೆ ನಡೆದದ್ದರಿಂದ ನಾನಿಲ್ಲಿ ಸಿಕ್ಕಿಕೊಂಡುಬಿಟ್ಟೆ. ಸದ್ಯ, ನನ್ನ ಅದೃಷ್ಟ ಚೆನ್ನಾಗಿತ್ತು. ನೀನೂ ತಂದೆಯೂ ಕಾಣಸಿದಿರಿ. ಇಲ್ಲದೆಹೋಗಿದ್ದರೆ ನನ್ನ ಗತಿ ಏನಾಗುತ್ತಿತ್ತೋ!"

ಆ ಹೆಂಗಸು ಗಂಡನ ಮುಖವನ್ನು ನೋಡಿದಳು. ಅವನೂ ಮುಗುಳ್ನಗುತ್ತ ಅವಳತ್ತ ತಿರುಗಿದ. ತಮ್ಮನ್ನು 'ಅಪ್ಪ, ಅಮ್ಮ' ಎನ್ನುವ ಈ ಮಗಳು . . . ! ಆಹ್! ಈಕೆಯ ಮಾತಿನ ಮುಗ್ಧತೆಯೇನು! ನಿಷ್ಕಾಪಟ್ಯವೇನು! ಅವರಿಗೇ ಅರಿವಿಲ್ಲದಂತೆ ಅವರೆದೆಯೊಳಗೆ ವಾತ್ಸಲ್ಯದ ಚಿಲುಮೆಯೊಂದು ಚಿಮ್ಮಿತು. ಕ್ಷಣಮಾತ್ರದಲ್ಲಿ ಆ ಕಠಿಣ

ಹೃದಯಗಳು ಕರಗಿಹೋದುವು. ಆ ತಾಯಿ ನುಡಿದಳು:

"ಶಾರದಾ, ನೀನೇನೂ ಹೆದರಬೇಡ. ಬೆಳಗಾದ ಮೇಲೆ ಹೋದರಾಯಿತು. ರಾತ್ರಿ ನಮ್ಮ ಮನೆಯಲ್ಲೇ ಇರುವಿಯಂತೆ. ನಿನಗೆ ತುಂಬ ಆಯಾಸವಾಗಿರಬೇಕು. ಬಾ, ಊಟ ಮಾಡಿ ಮಲಗು."

ಶಾರದಾದೇವಿಯವರು ನಿಶ್ಚಿಂತರಾಗಿ ಈ ಡಕಾಯಿತದಂಪತಿಗಳೊಂದಿಗೆ ನಡೆದರು. ಮೂವರೂ ಅಲ್ಲೇ ಹತ್ತಿರದಲ್ಲಿದ್ದ ಅವರ ಚಿಕ್ಕ ಅಂಗಡಿಮನೆಗೆ ಬಂದರು. 'ಮಗಳಿ'ಗಾಗಿ ಡಕಾಯಿತ ಎಲ್ಲಿಂದಲೋ ಒಂದಷ್ಟು ಪುರಿ ತಂದುಕೊಟ್ಟ. ಅವನ ಹೆಂಡತಿ ನೆಲದ ಮೇಲೆ ಹುಲ್ಲು ಹರಡಿ ಅದರ ಮೇಲೆ ತನ್ನ ಬಟ್ಟೆಯನ್ನೇ ಹಾಸಿ ಒಂದು 'ಹಾಸಿಗೆ' ಸಿದ್ಧಪಡಿಸಿದಳು. ಶಾರದಾದೇವಿಯವರು ಪುರಿಯ ಊಟ ಮುಗಿಸಿ ಹಾಯಾಗಿ ನಿದ್ರಿಸಿದರು. ಡಕಾಯಿತ ತನ್ನ ಬಡಿಗೆ ಹಿಡಿದು ಆಚೆ ಕಾವಲು ನಿಂತ.

ಬೆಳಕು ಹರಿಯಿತು. ಶಾರದಾದೇವಿಯವರು ಹೊರಡಲು ಅನುವಾದರು. ಈಗ ಅವರನ್ನು ತಾರಕೇಶ್ವರಕ್ಕೆ ಬಿಟ್ಟುಬರಲು ದಂಪತಿಗಳು ತಾವೂ ಹೊರಟರು! ದಾರಿಯ ಇಕ್ಕೆಲಗಳ ಹೊಲದಲ್ಲಿ ಬಟಾಣಿಯ ಗಿಡಗಳು ಬೆಳೆದು ನಿಂತಿದ್ದುವು. ಆ ಹೆಂಗಸು ತನ್ನ ಪ್ರೀತಿಯ ಮಗಳಿಗಾಗಿ ಒಂದಿಷ್ಟು ಎಳೆಯ ಬಟಾಣಿಗಳನ್ನು ಬಿಡಿಸಿಕೊಂಡು ಬಂದಳು. ಮಧ್ಯಾಹ್ನದ ವೇಳೆಗೆ ಮೂವರೂ ತಾರಕೇಶ್ವರವನ್ನು ತಲುಪಿ, ಸತ್ರವೊಂದರಲ್ಲಿ ಇಳಿದುಕೊಂಡರು.

ಡಕಾಯಿತ ಹೆಂಡತಿಯ ಮಾತಿನಂತೆ ಶಾರದಾದೇವಿಯವರಿಗಾಗಿ ಎಲ್ಲಿಂದಲೋ ಹಣ್ಣುಹಂಪಲು ತಂದುಕೊಟ್ಟ. ಅಷ್ಟುಹೊತ್ತಿಗೆ ಅವರ ಸ್ತ್ರೀಸಂಗಾತಿಯರು ಅವರನ್ನು ಹುಡುಕುತ್ತ ಅಲ್ಲಿಗೇ ಬಂದರು. ಈಗ ಎಲ್ಲರೂ ಸಂತೋಷದಿಂದ ಕಲ್ಕತ್ತದತ್ತ ಹೊರಟರು. ಈ ದಂಪತಿಗಳು ತಮ್ಮ ಮಗಳನ್ನು ಬಿಡಲಾರದೆ ಅವರೊಂದಿಗೆ ಮತ್ತೂ ಸ್ವಲ್ಪ ದೂರ ನಡೆದರು! ಒಂದು ರಾತ್ರಿ ಕಳೆಯುವುದರೊಳಗಾಗಿ ಅವರ ನಡುವೆ ಅಂಥ ವಾತ್ಸಲ್ಯದ ಬಂಧ ಉಂಟಾಗಿಬಿಟ್ಟಿದೆ! ಕಡೆಗೆ ತಮ್ಮ 'ಮಗಳ'ನ್ನು ಬೀಳ್ಕೊಡುವಾಗ, ಅವರಿಬ್ಬರಿಗೂ ಕಣ್ಣೀರು ತಡೆಯಲು ಸಾಧ್ಯವೇ ಆಗಲಿಲ್ಲ. ಶಾರದಾದೇವಿಯವರು ತಮ್ಮ ಡಕಾಯಿತ 'ತಂದೆತಾಯಿ'ಗಳನ್ನು ಒತ್ತಾಯಿಸಿ ಒಮ್ಮೆ ದಕ್ಷಿಣೇಶ್ವರಕ್ಕೆ ಬರುವಂತೆ ಮಾತು ತೆಗೆದುಕೊಂಡರು.

ತಮ್ಮ ಮಾತಿನ ಪ್ರಕಾರವೇ ಈ ದಂಪತಿಗಳು ಒಮ್ಮೆ ಮಾತ್ರವಲ್ಲ, ಮುಂದೆ ಅನೇಕ ಬಾರಿ ದಕ್ಷಿಣೇಶ್ವರಕ್ಕೆ ಭೇಟಿ ಕೊಟ್ಟರು. ಶಾರದಾದೇವಿಯವರು ತಮ್ಮ ಪತಿಗೆ ಈ 'ತಂದೆತಾಯಿ'ಗಳ ಪರಿಚಯ ಮಾಡಿಕೊಟ್ಟರು. ಶ್ರೀರಾಮಕೃಷ್ಣರೂ ಅವರೊಂದಿಗೆ, ಅಳಿಯನಂತೆಯೇ ವಿಶ್ವಾಸದಿಂದ ನಡೆದುಕೊಂಡರು. ದಕ್ಷಿಣೇಶ್ವರಕ್ಕೆ ಬರುವಾಗಲೆಲ್ಲ ಅವರು ತಮ್ಮ ಮಗಳಿಗಾಗಿ ಏನಾದರೊಂದು ಉಡುಗೊರೆಯನ್ನು ತರುತ್ತಿದ್ದರು. ಆ ಡಕಾಯಿತ ದಂಪತಿಗಳ ಯಾವ ಜನ್ಮದ ಸುಕೃತವೋ, ಹೀಗೆ ಫಲ ಕೊಟ್ಟಿತು.

ಹತ್ತೊಂಬತ್ತನೆಯ ಶತಮಾನವು ನವಭಾರತದ ಚರಿತ್ರೆಯಲ್ಲಿ ಸಂಕ್ರಮಣ ಕಾಲ. ಶತಮಾನಗಳ ದಾಸ್ಯದ ಪರಿಣಾಮವಾಗಿ ಭಾರತದ ಸಮಸ್ತ ಜನಜೀವನವನ್ನೇ ಆವರಿಸಿದ್ದ ಅಂಧಕಾರದ ಆವರಣವು ಕರಗಿ ಹೊಸ ಬೆಳಕು ಮೂಡಲಾರಂಭಿಸಿದ ಕಾಲ. ಹಿಂದೂ ಸಮಾಜದಲ್ಲಿ ಮಹಾಕ್ಷೋಭೆಯುಂಟಾಗಿ ಸಾಮಾಜಿಕ ಸಾಂಸ್ಕೃತಿಕ ಶೈಕ್ಷಣಿಕ ರಾಜಕೀಯ—ಇತ್ಯಾದಿ ಸಕಲ ರಂಗಗಳಲ್ಲೂ ನವಾಂದೋಲನಗಳು ಉಂಟಾದ ಕಾಲ. ಈ ಎಲ್ಲ ಆಂದೋಲನಗಳ ಕೇಂದ್ರವೆಂದರೆ ವಂಗದೇಶ. ಕಾರಣ, ಆಂಗ್ಲ ಆಡಳಿತದ, ಪಾಶ್ಚಾತ್ಯ ನಾಗರಿಕತೆಯ ಪ್ರಭಾವ ಮೊದಲು ತಟ್ಟಿದ್ದು ಅಂದಿನ ರಾಜಧಾನಿಯಾದ ಕಲ್ಕತ್ತಕ್ಕೆ.

ಆಂಗ್ಲರ ಸುದೀರ್ಘ ಆಡಳಿತದ ಪರಿಣಾಮವಾಗಿ ದೇಶದಲ್ಲಿ ಆದಾಗಲೇ ಹಲವಾರು ಬದಲಾವಣೆಗಳಾಗಿದ್ದುವು. ಕಳೆದೆರಡು ಶತಮಾನಗಳಲ್ಲಿ ಜನರ ಧರ್ಮಶ್ರದ್ಧೆ, ವೇದಗಳ ಮೇಲಣ ನಂಬಿಕೆ ಮೆಲ್ಲನೆ ಮಣ್ಣುಪಾಲಾಗುತ್ತ ಬಂದಿತ್ತು. ಪಾಶ್ಚಾತ್ಯರ ಥಳಕಿನ ನಾಗರಿಕತೆಯ ಮುಂದೆ ಹಿಂದೂ ಜೀವನವಿಧಾನಗಳೆಲ್ಲ ಶಿಥಿಲವಾಗಿ-ನಿಸ್ತೇಜವಾಗಿ ತೋರಲಾರಂಭಿಸಿದ್ದುವು. ಇನ್ನುಳಿದವರ ಪಾಲಿಗೋ, ಅವು 'ಅಜ್ಜ ನೆಟ್ಟ ಆಲದ ಮರ'ವಲ್ಲದೆ ಬೇರೇನೂ ಆಗಿರಲಿಲ್ಲ. ನಿಜವಾದ ಧರ್ಮವೆಂಬುದು ಮೃತಪ್ರಾಯವೇ ಆಗಿತ್ತು. ಕ್ರೈಸ್ತ ಮಿಷನರಿಗಳ ಅಪಪ್ರಚಾರವೂ ಈ ಸ್ಥಿತಿಗೆ ಒಂದು ಮುಖ್ಯ ಕಾರಣವಾಗಿತ್ತು.

ಇಂತಹ ಪರಿಸ್ಥಿತಿಯಲ್ಲಿ ಲಾರ್ಡ್ ಬೆಂಟಿಂಕ್, ಮೆಕಾಲೆ ಮುಂತಾದ ಆಂಗ್ಲ ಅಧಿಕಾರಿಗಳ ಪ್ರಯತ್ನದಿಂದಾಗಿ ಭಾರತದಲ್ಲಿ ಆಂಗ್ಲ ವಿದ್ಯಾಭ್ಯಾಸ ಜಾರಿಗೆ ಬಂದು, ಜೇನುಗೂಡಿಗೆ ಕಲ್ಲೆಸೆದಂತಾಯಿತು. ಈ ವಿದ್ಯಾಭ್ಯಾಸವನ್ನು ಪಡೆದವರು ಪಾಶ್ಚಾತ್ಯರ ಅನುಕರಣೆಯಲ್ಲೇ ಜೀವನದ ಸಾರ್ಥಕ್ಯವೆಂದು ನಂಬಿದರು. ಭಾರತೀಯವಾದ ಪ್ರತಿಯೊಂದನ್ನೂ ಆಂಗ್ಲರ ದೃಷ್ಟಿಯಿಂದಲೇ—ತಿರಸ್ಕಾರದಿಂದಲೇ—ನೋಡಲು ಕಲಿತರು. 'ಹ್ಯಾಮ್ಲೆಟ್', 'ಪ್ಯಾರಡೈಸ್ ಲಾಸ್ಟ್' ಮುಂತಾದ ಪುಸ್ತಕಗಳನ್ನು ಯಾರು ಉದಾಹರಿಸಿ ಮಾತನಾಡಬಲ್ಲರೋ ಅವರೇ ಮಹಾ ವಿದ್ಯಾವಂತರೆಂಬ ನಂಬಿಕೆ ಬೆಳೆಯಿತು. ತಿಂಗಳಿಗೆ ಐವತ್ತೋ ನೂರೋ ರೂಪಾಯಿನ ಸಂಬಳ ತರುವ ಗುಮಾಸ್ತೆಗಿರಿ, ಹೆಚ್ಚೆಂದರೆ ವಕೀಲಿ ವೃತ್ತಿ—ಇದೇ ಪ್ರತಿಯೊಬ್ಬ 'ವಿದ್ಯಾವಂತ'ನ ಪರಮಧ್ಯೇಯವಾಯಿತು. ಬಹುತೇಕ ಜನರಿಗೆ ವಿದ್ಯಾಭ್ಯಾಸದಿಂದ ಬುದ್ಧಿಶಕ್ತಿಯಾಗಲಿ ಸ್ವಸಾಮರ್ಥ್ಯವಾಗಲಿ ಹೆಚ್ಚಲಿಲ್ಲ. ಅಧಃಪಾತಳಕ್ಕೆ ಕುಸಿಯುತ್ತಿರುವ ತಮ್ಮ ದೇಶಕ್ಕಾಗಿ ತಾವು ಏನನ್ನಾದರೂ ಮಾಡಬೇಕೆಂಬ ಪ್ರಜ್ಞೆಯೂ ಅವರಲ್ಲಿ ಉದಿಸಲಿಲ್ಲ. ಅಸಡ್ಡೆ, ಸ್ವೇಚ್ಛಾಚಾರ—ಇವು ವಿದ್ಯಾವಂತರೆನ್ನಿಸಿಕೊಂಡವರ ಲಕ್ಷಣಗಳಾದುವು. ನೈತಿಕ ಕಟ್ಟುಪಾಡುಗಳನ್ನು ಕಳಚಿಕೊಂಡ ಇವರು ಜನಸಾಮಾನ್ಯರ ತಿರಸ್ಕಾರಕ್ಕೆ ಗುರಿಯಾದರು; ಮಾತ್ರವಲ್ಲ, ಯಾರನ್ನು ಇವರು ಅನುಸರಿಸಹೊರಟಿದ್ದರೋ ಆ ಆಂಗ್ಲೇಯರಿಂದಲೇ ಅವಹೇಳನಕ್ಕೆ ಈಡಾದರು.

ಆದರೆ, ಈ ಆಂಗ್ಲ ವಿದ್ಯಾಭ್ಯಾಸದಿಂದ ಕೆಲವು ಸತ್ಪರಿಣಾಮಗಳೂ ಆಗದಿರಲಿಲ್ಲ.

ಬಂಗಾಳದಲ್ಲಿ ರಾಜಾ ರಾಮಮೋಹನರಾಯ್, ರಾಜಾ ರಾಧಾಕಾಂತದೇವ ಮುಂತಾದ ವಿದ್ಯಾವಂತ ದೇಶಪ್ರೇಮಿಗಳನೇಕರು ರೂಪುಗೊಂಡರು. ನಾನಾ ರೀತಿಯ ಸಂಘಸಂಸ್ಥೆಗಳು ಜನ್ಮತಾಳಿದುವು. ಜನರಲ್ಲಿ ಸಾಮಾಜಿಕ-ರಾಜಕೀಯ ಪ್ರಜ್ಞೆ ಹೆಚ್ಚಾಯಿತು. ಯುವ ಜನಾಂಗದಲ್ಲಿ ಹೊಸ ಉತ್ಸಾಹವುಂಟಾಯಿತು. ಭಾರತೀಯರು ಕೆಲವು ವೃತ್ತಪತ್ರಿಕೆಗಳನ್ನು ಪ್ರಾರಂಭಿಸಿದರು. ವೈದಿಕಧರ್ಮದ ತಳಹದಿಯ ಬಗ್ಗೆ, ಅದರ ರೀತಿನೀತಿಗಳ ಬಗ್ಗೆ ಮುಕ್ತ ಚರ್ಚೆ ಪ್ರಾರಂಭವಾಯಿತು.

ಆದರೆ ಈ ಬಗೆಯ ಚರ್ಚೆಗಳಿಂದ ಲಭಿಸಿದ್ದು ಮಿಶ್ರಫಲವೆನ್ನಬೇಕು. ಸಹಗಮನ-ಬಾಲ್ಯವಿವಾಹವೇ ಮೊದಲಾದ ಅಂದಿನ ಸಾಮಾಜಿಕ ಅನಿಷ್ಟಗಳ ವಿರುದ್ಧವಾಗಿ ಜನಾಭಿಪ್ರಾಯ ರೂಪುಗೊಂಡದ್ದು, ಜನರ ದೃಷ್ಟಿಕೋನ ಕೆಲಮಟ್ಟಿಗೆ ವಿಶಾಲವಾದದ್ದು ಇವೇ ಮುಂತಾದ ಸ್ವಾಗತಾರ್ಹ ಬದಲಾವಣೆಗಳೇನೋ ಆದುವು. ಆದರೆ ಇದರೊಂದಿಗೆ ಹಿಂದೂಧರ್ಮದ ಕುರಿತಾದ ಪಾಶ್ಚಾತ್ಯರ ವಿಕೃತದೃಷ್ಟಿಕೋನವನ್ನೂ ಭಾರತೀಯರು ಮೈಗೂಡಿಸಿಕೊಂಡರು. ಹಿಂದೂಗಳ ಅಸಂಖ್ಯ ದೇವದೇವಿಯರನ್ನು, ಆ ದೇವತೆಗಳ ಅಸಂಖ್ಯ ರೂಪ ವೈವಿಧ್ಯವನ್ನು, ಅದಕ್ಕೆ ತಕ್ಕಂತಹ ಆರಾಧನಾ ಕ್ರಮಗಳನ್ನು ಕಂಡ ಆಂಗ್ಲರು, ಅವುಗಳ ತಲೆಬುಡವೊಂದೂ ಅರ್ಥವಾಗದೆ ವಿಭ್ರಾಂತರಾದರು. ಅವುಗಳ ಸಂಕೇತಾರ್ಥವನ್ನಾಗಲಿ, ನಿಗೂಢ ತತ್ತ್ವಗಳನ್ನಾಗಲಿ ತಿಳಿಯಲಾರದೆಹೋದರು. ಕಡೆಗೆ ಎಲ್ಲವನ್ನೂ ಒಟ್ಟಿಗೆ 'ಮೂಢನಂಬಿಕೆ', 'ಕಂದಾಚಾರ' ಎಂದು ಕರೆದು ಮೂಟೆ ಕಟ್ಟಿದರು. ಪೂಜಾವಿಧಾನಗಳ ಮರ್ಮವನ್ನರಿಯದೆ, 'ಹಿಂದೂಗಳು ಕಲ್ಲುಗಳಿಗೂ ಮರಗಳಿಗೂ ತಲೆಬಾಗುತ್ತಾರೆ' ಎಂದು ನಿಂದಿಸಿದರು. ಕ್ರಮೇಣ ಅವರ ಈ ಮಾತನ್ನೇ ವಿದ್ಯಾವಂತ ಭಾರತೀಯರು ಸ್ವೀಕರಿಸಿ 'ಧನ್ಯ'ರಾದರು.

ಈ ನಡುವೆ ಹಿಂದೂಧರ್ಮವನ್ನೂ ಭಾರತರಾಷ್ಟ್ರವನ್ನೂ ದುಸ್ಥಿತಿಯಿಂದ ಪಾರುಮಾಡಿ, ಅದಕ್ಕೊಂದು ಹೊಸ ಜೀವವನ್ನೂ ರೂಪವನ್ನೂ ಕೊಡಲು ಉದ್ಯುಕ್ತರಾದ ವಿದ್ಯಾವಂತರ ವರ್ಗವೊಂದು ನಿರ್ಮಾಣವಾಗುತ್ತಿತ್ತು. ಪಾಶ್ಚಾತ್ಯರು ಭಾರತವನ್ನು ರಾಜಕೀಯವಾಗಿ ಗೆದ್ದಿದ್ದರೂ ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕವಾಗಿ ಗೆಲ್ಲಲು ಬಿಡಬಾರದು ಎಂದು ಇವರು ನಿರ್ಧರಿಸಿ ಆ ದಿಸೆಯಲ್ಲಿ ಕಾರ್ಯೋದ್ಯುಕ್ತರಾದರು.

ಇಂತಹ ಸುಧಾರಕರ ಪೈಕಿ ಮೊದಲಿಗರೂ ಪ್ರಮುಖರೂ ಆದವರಲ್ಲೊಬ್ಬರು ರಾಮಮೋಹನ್ ರಾಯ್. ೧೭೭೪ರಲ್ಲಿ ಸಂಪ್ರದಾಯಸ್ಥ ಬ್ರಾಹ್ಮಣಕುಲದಲ್ಲಿ ಇವರ ಜನನ. ಬಾಲ್ಯದಿಂದಲೂ ಇವರದು ಸ್ವತಂತ್ರ ಮನೋವೃತ್ತಿ. ಹದಿನಾರನೇ ವಯಸ್ಸಿನಲ್ಲೇ, ವಿಗ್ರಹಾರಾಧನೆಯ ವಿರುದ್ಧವಾಗಿ ತಮ್ಮ ಅಭಿಪ್ರಾಯಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಿದ ಇವರು ಕ್ರಮೇಣ ಬೌದ್ಧ ಕ್ರೈಸ್ತ ಇಸ್ಲಾಂ ಧರ್ಮಗಳನ್ನೂ ಸಂಸ್ಕೃತ ಪಾಲಿ ಪಾರಸಿ ಹಾಗೂ ಇಂಗ್ಲಿಷ್ ಮತ್ತಿತರ ಐರೋಪ್ಯ ಭಾಷೆಗಳ ಸಾಹಿತ್ಯವನ್ನೂ ಆಳವಾಗಿ ಅಧ್ಯಯನ ಮಾಡಿ ಪ್ರಕಾಂಡ ಪಾಂಡಿತ್ಯವನ್ನು ಗಳಿಸಿದರು. ಹಿಂದೂಧರ್ಮದ ಹಾಗೂ ಭಾರತದೇಶದ ಉದ್ಧಾರಕ್ಕಾಗಿ ಆಳವಾದ ಚಿಂತನೆ ನಡೆಸಿ, ಕಡೆಗೆ ಆ ಕುರಿತಾದ ಯೋಜನೆಗಳನ್ನೆಲ್ಲ ಕಾರ್ಯರೂಪಕ್ಕೆ ತರುವ ಉದ್ದೇಶದಿಂದ ೧೮೨೮ರಲ್ಲಿ ಬ್ರಾಹ್ಮ ಸಮಾಜವನ್ನು ಸ್ಥಾಪಿಸಿದರು.

ರಾಮಮೋಹನರು ಈ ಸಂಸ್ಥೆಯ ಮೂಲಕ, ಭಗವಂತನ ಕುರಿತಾಗಿ ಸಕಲ ಜಾತಿ-ಮತಾತೀತವಾದ ತಮ್ಮ ಕಲ್ಪನೆಯೊಂದನ್ನು ಮುಂದಿಟ್ಟರು. ಮುಖ್ಯವಾಗಿ

ಹಿಂದೂ, ಮುಸಲ್ಮಾನ ಹಾಗೂ ಕ್ರೈಸ್ತ ಧರ್ಮತತ್ತ್ವಗಳನ್ನು ಆಧರಿಸಿದ ಈ ಸಿದ್ಧಾಂತದ ಪ್ರಕಾರ, ದೇವರೊಬ್ಬನೇ. ಇವನು ವಿಶ್ವಸೃಷ್ಟಿಕರ್ತ, ಸನಾತನ, ಅಪ್ರಮೇಯ, ನಿರ್ವಿಕಾರ, ನಿರಾಕಾರ ಮತ್ತು ಅತುಲ ಶಕ್ತಿವಂತ. ನಿರಾಕಾರನಾದರೂ ಈತ ನಿರ್ಗುಣನಲ್ಲ; ಜಗತ್ಪಿತನಾದ್ದರಿಂದ ತಂದೆಯಂತೆ ವಾತ್ಸಲ್ಯ, ಕರುಣೆ ಮುಂತಾದ ಸದ್ಗುಣಗಳುಳ್ಳವನು. ಈ ಭಗವಂತನ ಆರಾಧನೆಯೇ ಬ್ರಾಹ್ಮಸಮಾಜೀಯರು ತೊಡುವ ದೀಕ್ಷೆ.

ಬ್ರಾಹ್ಮಸಮಾಜದ ಸದಸ್ಯರಾಗಲು ಮತಧರ್ಮ ಪರಿಗಣನೆಯಿಲ್ಲದೆ ಸಕಲರಿಗೂ ಸ್ವಾಗತವಿತ್ತು. ರಾಮಮೋಹನರಾಯರ ವೈಯಕ್ತಿಕ ಪ್ರಭಾವದಿಂದಲೂ, ಸಮಾಜದ ಬೋಧನೆಗಳ ನವೀನತೆಯಿಂದಲೂ ಆಕರ್ಷಿತರಾಗಿ ನೂರಾರು ಜನ ಅದರ ಆಶ್ರಯಕ್ಕೆ ಬಂದರು. ಅವರ ಉತ್ಸಾಹವನ್ನು ನೋಡಿದರೆ, ಇದು ಸನಾತನ ಹಿಂದೂಧರ್ಮಕ್ಕೆ ಸಮಾನಾಂತರವಾದ ಹಾಗೂ ಅದಕ್ಕೆ ಸವಾಲಾದ ಹೊಸಧರ್ಮವೇ ಆಗಿಬಿಡುತ್ತದೆಯೋ ಎಂಬಂತೆಯೂ ಕಂಡಿತು. ಆದರೆ ಅದರ ಪ್ರಭಾವ ಅಷ್ಟರ ಮಟ್ಟಿಗೆ ಹೆಚ್ಚಲಿಲ್ಲ. ಹಿಂದೂಧರ್ಮದಲ್ಲಿ ಯಾವುವನ್ನು ಲೋಪದೋಷಗಳೆಂದು ಬ್ರಿಟಿಷರು ಟೀಕಿಸುತ್ತಿದ್ದರೋ ಅವುಗಳನ್ನು ಪರಿಷ್ಕಾರ ಪಡಿಸುವಷ್ಟಕ್ಕೆ ಅದರ ಕಾರ್ಯವ್ಯಾಪ್ತಿ ಸೀಮಿತವಾಯಿತು. ಬಾಲ್ಯವಿವಾಹ, ಸಹಗಮನ, ಜಾತಿವ್ಯವಸ್ಥೆ—ಮುಂತಾದ ಪದ್ಧತಿಗಳನ್ನು ನಿರ್ಮೂಲನ ಮಾಡುವ ಮತ್ತು ವಿಧವಾ ವಿವಾಹ, ಸ್ತ್ರೀಯರಿಗೆ ಶಿಕ್ಷಣ—ಇವುಗಳನ್ನು ಜಾರಿಗೆ ತರುವ ದಿಸೆಯಲ್ಲಿ ಅದು ಶ್ರಮಿಸಿತು.

ರಾಜಾ ರಾಮಮೋಹನರಾಯರು ೧೮೩೩ರಲ್ಲಿ, ಎಂದರೆ ಶ್ರೀರಾಮಕೃಷ್ಣರ ಜನನಕ್ಕೆ ಮೂರು ವರ್ಷ ಮೊದಲು ಕಾಲವಾದರು. ಇದಾಗಿ ಎಂಟು ವರ್ಷಗಳ ಮೇಲೆ ದೇವೇಂದ್ರನಾಥ ಟಾಗೋರರು ಬ್ರಾಹ್ಮಸಮಾಜದ ಮುಖ್ಯಸ್ಥರಾದರು. ಆ ಹೊತ್ತಿಗೆ ಸಮಾಜದ ಪ್ರಭಾವ ಇಳಿದುಹೋಗಿತ್ತು. ಟಾಗೋರರ ನಿರಂತರ ಶ್ರಮದ ಫಲವಾಗಿ ಅದು ಕ್ರಮೇಣ ತನ್ನ ಶಕ್ತಿಯುತ ಸ್ಥಾನವನ್ನು ಮತ್ತೆ ಗಳಿಸಿಕೊಂಡಿತು.

ಟಾಗೋರರ ಪ್ರಭಾವಕ್ಕೊಳಗಾಗಿ ೧೮೫೭ರಲ್ಲಿ ಬ್ರಾಹ್ಮಸಮಾಜವನ್ನು ಸೇರಿದ ಕೇಶವಚಂದ್ರ ಸೇನನು ಶೀಘ್ರದಲ್ಲೇ ಮೇಲುಮೇಲಕ್ಕೇರುತ್ತ ತನ್ನ ವರ್ಚಸ್ಸನ್ನು ಬೀರಲಾರಂಭಿಸಿದ. ಆದರೆ ತಾತ್ತ್ವಿಕವಾಗಿ ಟಾಗೋರರಿಗೂ ಸೇನನಿಗೂ ಬಹಳ ಭಿನ್ನಾಭಿಪ್ರಾಯಗಳಿದ್ದುವು. ಕ್ರಿಸ್ತನನ್ನೂ ಕ್ರೈಸ್ತಧರ್ಮವನ್ನೂ ಬಹುವಾಗಿ ಆದರಿಸುತ್ತಿದ್ದವನು ಕೇಶವ ಸೇನ. ಮತ್ತು ಆ ಧರ್ಮದ ಹಲವಾರು ತತ್ತ್ವಗಳನ್ನು ಬ್ರಾಹ್ಮಸಮಾಜದೊಳಕ್ಕೆ ತರಬೇಕೆಂಬುದು ಆತನ ಆಶಯ. ದೇವೇಂದ್ರನಾಥರೋ ಹಿಂದೂ ಶಾಸ್ತ್ರಗಳನ್ನೇ ಸಂಪೂರ್ಣವಾಗಿ ಅವಲಂಬಿಸಿ ಸಂಸ್ಥೆಯನ್ನು ಬೆಳೆಸಿದ್ದವರು. ಸಹಜವಾಗಿಯೇ ಇಬ್ಬರ ಧೋರಣೆಗಳಲ್ಲಿ ಹೊಂದಿಕೆಯಾಗಲಿಲ್ಲ. ಬರಬರುತ್ತ ಈ ವಿರೋಧ ಬೆಳೆಯಿತು. ಸಂಸ್ಥೆಯ ಉತ್ಸಾಹೀ ತರುಣರೆಲ್ಲ ಕೇಶವನ ಪರವಾಗಿ ನಿಂತರು. ಕಡೆಗೆ ೧೮೬೬ರಲ್ಲಿ ಸಂಸ್ಥೆ ಒಡೆಯಿತು. ತಮ್ಮ ಶಾಖೆಯನ್ನು ಟಾಗೋರರು 'ಆದಿ ಬ್ರಾಹ್ಮಸಮಾಜ' ಎಂದು ಕರೆದುಕೊಂಡರು. ಕೇಶವಚಂದ್ರ ಸೇನನ ಗುಂಪಿಗೆ 'ಭಾರತವರ್ಷೀಯ ಬ್ರಾಹ್ಮಸಮಾಜ' ಎಂಬ ಹೆಸರಾಯಿತು. ಶ್ರೀರಾಮಕೃಷ್ಣರು ಟಾಗೋರರನ್ನು ಭೇಟಿಯಾದುದು ಈ ವಿಭಜನೆಗೆ ಎರಡು ವರ್ಷ ಮೊದಲು.

೧೮೭೦ರಲ್ಲಿ ಇಂಗ್ಲೆಂಡಿಗೆ ಭೇಟಿಯಿತ್ತ ಕೇಶವಚಂದ್ರನಿಗೆ ಸಂಭ್ರಮದ ಸ್ವಾಗತ ದೊರೆಯಿತು. ಅದರಲ್ಲೂ 'ಯೂನಿಟೇರಿಯನ್' ಎಂಬ ಪಂಥದ ಕ್ರೈಸ್ತಮತದವರು

ಆತನನ್ನು ವಿಶೇಷವಾಗಿ ಆದರಿಸಿದರು. ಇಂಗ್ಲೆಂಡಿನ ನಾನಾ ಸ್ಥಳಗಳಲ್ಲಿ ಸಾರ್ವಜನಿಕ ಸಭೆಗಳನ್ನುದ್ದೇಶಿಸಿ ಮಾತನಾಡಿ ತನ್ನ ಪ್ರಚಂಡ ವಾಕ್ಸಾಮರ್ಥ್ಯದಿಂದಲೂ ಕ್ರೈಸ್ತಭಕ್ತಿಯಿಂದಲೂ ಅಲ್ಲಿನ ನಾಗರಿಕರ ವಿಶ್ವಾಸಪೂರ್ಣ ಬೆಂಬಲವನ್ನು ಗೆದ್ದುಕೊಂಡ. ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಅವನು ತರಬೇಕೆಂದಿದ್ದ ಸುಧಾರಣೆಗಳಿಗೆ ಬ್ರಿಟಿಷ್ ಸರ್ಕಾರದ ಮನ್ನಣೆ ಪಡೆಯುವಲ್ಲಿ ಇದು ಬಹಳಷ್ಟು .ನೆರವಾಯಿತು. ಇಂಗ್ಲೆಂಡಿನ ಚಕ್ರವರ್ತಿನಿ ಸ್ವಯಂ ವಿಕ್ಟೋರಿಯಾಳೇ ಆತನನ್ನು ಆಸ್ಥಾನಕ್ಕೆ ಕರೆಸಿ ಸನ್ಮಾನಿಸಿದಳು.

ಇವೆಲ್ಲದರಿಂದಾಗಿ, ಭಾರತದಲ್ಲಿ ಕೇಶವಸೇನನ ವರ್ಚಸ್ಸು ಬಹುವಾಗಿ ಹೆಚ್ಚಿತು. ಅವನು ಬಂಗಾಳದ ಯುವಜನತೆಯ ಆರಾಧ್ಯದೈವನಾದ. 'ಭಾರತವರ್ಷೀಯ ಬ್ರಾಹ್ಮ ಸಮಾಜ'ದ ಪ್ರಭಾವವೂ ವೃದ್ಧಿಗೊಳ್ಳುತ್ತ ಬಂದಿತು.

೧೮೭೫ರ ಮಾರ್ಚ್—ಅಂದು ಶ್ರೀರಾಮಕೃಷ್ಣರ ಅವತಾರೋದ್ದೇಶವನ್ನು ಪೂರ್ಣಗೊಳಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದ ಘಟನೆಯೊಂದು ನಡೆಯಿತು. ಅದೇ ಶ್ರೀರಾಮಕೃಷ್ಣ-ಕೇಶವಸೇನರ ಭೇಟಿ. ಕೇಶವಸೇನನ ಮತ್ತು ಅವನ ಸಂಸ್ಥೆಯ ಕೀರ್ತಿಪತಾಕೆ ಆಗಸದೆತ್ತರದಲ್ಲಿ ಕುಣಿದಾಡುತ್ತಿದ್ದ ಕಾಲವದು. ಅವನ ಕೀರ್ತಿ ಶ್ರೀರಾಮಕೃಷ್ಣರ ಕಿವಿಗೂ ಮುಟ್ಟಿತು. ಕೂಡಲೇ ಅವರು ಆತನನ್ನು ಕಾಣಲು ಉತ್ಸುಕರಾದರು.

ಒಂದು ದೃಷ್ಟಿಯಿಂದ ಶ್ರೀರಾಮಕೃಷ್ಣರಿಗೆ ಕೇಶವನು ಅಪರಿಚಿತನೇನೂ ಅಲ್ಲ. ಅವನನ್ನು ಅವರು ಈಗಾಗಲೇ ಎರಡು ಬಾರಿ ಕಂಡಿದ್ದರು. ಒಮ್ಮೆ, ಬಹು ಹಿಂದೆ ೧೮೬೪ರಲ್ಲಿ, ಬ್ರಾಹ್ಮಸಮಾಜದ ವಾರ್ಷಿಕೋತ್ಸವದ ಸಂದರ್ಭದಲ್ಲಿ. ಆ ಕುರಿತಾಗಿ ಅವರೇ ಒಮ್ಮೆ ಹೇಳುತ್ತಾರೆ:

"ಅನೇಕ ವರ್ಷಗಳ ಕೆಳಗೆ, ಅದೊಂದು ಬುಧವಾರ ನಾನು (ಮಥುರನೊಂದಿಗೆ) ಜೊರಾಸಂಕೋದಲ್ಲಿನ ಬ್ರಾಹ್ಮಸಮಾಜಕ್ಕೆ ಹೋಗಿದ್ದೆ. ಅಲ್ಲಿ ತರುಣ ಕೇಶವನು ನೂರಾರು ಜನ ಅನುಯಾಯಿಗಳ ನಡುವೆ ಕುಳಿತು ಭಜನೆ-ಪ್ರವಚನಗಳನ್ನು ನಿರ್ವಹಿಸುತ್ತಿದ್ದುದನ್ನು ಕಂಡೆ. (ಆಗಿನ್ನೂ ಆತ ಇಪ್ಪತ್ತಾರು ವರ್ಷದ ಯುವಕ.) ನಾನು ಎವೆಯಿಕ್ಕದೆ ಅವನನ್ನೇ ನೋಡಿದೆ. ಅವನ ಮನಸ್ಸು ಭಗವಂತನಲ್ಲಿ ಲೀನವಾಗಿತ್ತೆಂದು ಕಂಡುಕೊಂಡೆ. ಅಂದಿನಿಂದಲೇ ನನ್ನ ಮನಸ್ಸು ಅವನೆಡೆಗೆ ಸೆಳೆಯಲ್ಪಟ್ಟಿತು. ಆದರೆ ಆ ಸಭೆಯಲ್ಲಿದ್ದ ಇತರರೆಲ್ಲ ಆಯುಧಗಳನ್ನು ಹಿಡಿದು ಕುಳಿತಂತಿತ್ತು! ಅವರ ಮುಖಗಳನ್ನು ನೋಡುತ್ತಲೇ ಅವರೊಳಗೆ ಲೌಕಿಕ ಪ್ರವೃತ್ತಿ, ಅಹಂಕಾರ, ಕಾಮನೆಗಳು—ಇವೆಲ್ಲ ಬಲವಾಗಿರುವುದನ್ನು ಕಾಣಬಹುದಾಗಿತ್ತು."

ಮತ್ತೊಮ್ಮೆ ಶ್ರೀರಾಮಕೃಷ್ಣರು ಕೇಶವನನ್ನು ಕಂಡದ್ದು ತಮ್ಮ ಒಂದು ದರ್ಶನದಲ್ಲಿ. ತಮಗಾದ ಆ ದರ್ಶನವನ್ನು ಅವರೇ ಹೀಗೆ ಬಣ್ಣಿಸುತ್ತಾರೆ:

"ನಾನು ಕೇಶವನನ್ನು ಪ್ರತ್ಯಕ್ಷವಾಗಿ ಭೇಟಿಯಾಗುವ ಮುನ್ನವೇ ನನ್ನ ಸಮಾಧಿಸ್ಥಿತಿಯಲ್ಲಿ ಅವನನ್ನೂ ಅವನ ಗುಂಪನ್ನೂ ಕಂಡಿದ್ದೆ. ನನ್ನ ಮುಂದೆ ಒಂದು ಕೋಣೆ ತುಂಬ ಜನರಿದ್ದರು. ಕೇಶವನು ಗರಿಗೆದರಿದ ಮಯೂರದಂತೆ ಕಂಡ. ಅವನ ಅನುಯಾಯಿಗಳೇ ಆ ಗರಿಗಳು. ಅವನ ತಲೆಯಲ್ಲಿ ಒಂದು ಕೆಂಪು ಮಣಿ ಇತ್ತು. ಅದು ಅವನ ರಜೋಗುಣದ ಸಂಕೇತ. ಅವನು ತನ್ನ ಅನುಚರರಿಗೆ, 'ದಯವಿಟ್ಟು ಇವರ (ಶ್ರೀರಾಮಕೃಷ್ಣರ) ಮಾತನ್ನು ಆಲಿಸಿ' ಎಂದು ಹೇಳಿದ. ನಾನು ಜಗನ್ಮಾತೆಯನ್ನು ಕೇಳಿದೆ, 'ಅಮ್ಮಾ, ಇವರೆಲ್ಲ 'ಇಂಗ್ಲಿಷ್ ಮೆನ್ನು'ಗಳ ದೃಷ್ಟಿಕೋನ ಹೊಂದಿದವರು. ಇವರೊಂದಿಗೆ ನಾನೇಕೆ ಮಾತನಾಡಬೇಕು?' ಎಂದು. ಆಗ ಜಗನ್ಮಾತೆ, 'ಕಲಿಯುಗದಲ್ಲಿ ನಡೆಯುವುದು ಹೀಗೆಯೇ' ಎಂದು ವಿವರಿಸಿದಳು."

ಈಗ ಕೇಶವನನ್ನು ಕಾಣಬೇಕೆಂಬ ಇಚ್ಛೆಯುದಿಸಿದಾಗ ಶ್ರೀರಾಮಕೃಷ್ಣರು ಮೊದಲಿಗೆ, ಆಗಿನ್ನೂ ದಕ್ಷಿಣೇಶ್ವರದಲ್ಲೇ ಇದ್ದ ನಾರಾಯಣ ಶಾಸ್ತ್ರಿಯನ್ನು ಕಳಿಸಿ, ಅವನನ್ನು ಮಾತನಾಡಿಸಿಕೊಂಡು ಬರುವಂತೆ ಹೇಳಿದರು. ಇದಕ್ಕೆ ಕಾರಣ, ನಾವು ಈಗಾಗಲೇ ಕಂಡಂತೆ, ಅವರ ಬಾಲಸಹಜ ಭೀತಿ, ಸಂಕೋಚಪ್ರವೃತ್ತಿ. ಶಾಸ್ತ್ರಿಯು ಕೇಶವನನ್ನು ನೋಡಿಕೊಂಡು ಬಂದು ಅವನ ಕುರಿತಾಗಿ ತನ್ನ ಅಭಿಪ್ರಾಯವನ್ನು ತಿಳಿಸಿದ: "ಕೇಶವಸೇನನು ಜಪಸಿದ್ಧ. ಅವನ ಜನ್ಮನಕ್ಷತ್ರ ಬಹಳ ಶ್ರೇಷ್ಠವಾದುದು . . ."

ಮರುದಿನ ಶ್ರೀರಾಮಕೃಷ್ಣರು ಕೇಶವಚಂದ್ರ ಸೇನನ ಭೇಟಿಗೆ ಹೋಗಲು ಅನುವಾದರು. ಜೊತೆಯಲ್ಲಿ ಹೃದಯರಾಮನಿದ್ದ. ಟಾಂಗಾದಲ್ಲಿ ಕುಳಿತುಕೊಳ್ಳುವುದಕ್ಕೆ

ಮೊದಲು ಶ್ರೀರಾಮಕೃಷ್ಣರಿಗೆ ಭಾವಾವಸ್ಥೆಯುಂಟಾಯಿತು. ತಮ್ಮಷ್ಟಕ್ಕೆ, "ಅಮ್ಮಾ ನೀನು ಹೋಗುತ್ತೀಯಾ ? ಕೇಶವನನ್ನು ನೋಡಲು ಹೋಗುತ್ತೀಯಾ ?" ಎಂದು ಮತ್ತೆಮತ್ತೆ ಮಟಗುಟ್ಟಿಕೊಂಡರು. ಪ್ರತಿಬಾರಿಯೂ ತಾವೇ ಅದಕ್ಕೆ ಉತ್ತರವನ್ನು ಹೇಳಿಕೊಂಡರು: "ಹೌದು, ಹೋಗುತ್ತೇನೆ." ದಾರಿಯುದ್ದಕ್ಕೂ ಅವರು ಅದೇ ಭಾವ ದಲ್ಲಿದ್ದರು.

ಕೇಶವನಿದ್ದುದು ಕಲ್ಕತ್ತದ ಬೇಲ್ಘರಿಯಾ ಎಂಬಲ್ಲಿ. ಅವನು ಜಯಗೋಪಾಲ ಸೇನ ಎಂಬವನ ಉದ್ಯಾನಗೃಹದಲ್ಲಿ ಕೆಲವು ಅನುವರ್ತಿಗಳೊಂದಿಗೆ ಇಳಿದುಕೊಂಡಿದ್ದ.

ಗಾಡಿ ಬಂದು ನಿಂತಿತು. ಶ್ರೀರಾಮಕೃಷ್ಣರು ಹೃದಯನಿಗೆ, "ನೀನು ಮೊದಲು ಹೋಗಿ ನೋಡಿಕೊಂಡು ಬಾ" ಎಂದರು. ಅದರಂತೆ ಹೃದಯ ಗಾಡಿಯಿಂದಿಳಿದು ಒಳಗೆ ಹೋದ. ಅಲ್ಲೊಂದು ದೊಡ್ಡ ಕೊಳ; ಕೇಶವನೂ ಮತ್ತಿತರರೂ ಬೆಳಗಿನ ಪ್ರವಚನಾದಿಗಳನ್ನು ಮುಗಿಸಿ ಸ್ನಾನಕ್ಕೆ ಅಣಿಯಾಗುತ್ತಿದ್ದರು. ಕೇಶವಸೇನನ ಬಳಿಗೆ ಹೋಗಿ ಹೃದಯ ಹೇಳಿದ:

"ಸ್ವಾಮಿ, ನನ್ನ ಸೋದರಮಾವ ನಿಮ್ಮ ಸಂದರ್ಶನಕ್ಕಾಗಿ ಬಂದಿದ್ದಾರೆ. ರಾಮ ಕೃಷ್ಣರು ಎಂದು ಅವರ ಹೆಸರು. ಅವರು ಬಹಳ ದೊಡ್ಡ ಭಕ್ತರು, ಸಾಧಕರು. ಭಜನೆ, ಭಗತ್ಸಲ್ಲಾಪಗಳನ್ನು ಕೇಳಿದರೆ ಭಾವಾವಿಷ್ಟರಾಗುತ್ತಾರೆ. ನೀವೂ ಕೂಡ ಭಗವದ್ಭಕ್ತರೆಂಬ ವಿಷಯ ಕೇಳಿ ನಿಮ್ಮನ್ನು ಕಾಣಲು, ನಿಮ್ಮ ಮಾತುಗಳನ್ನು ಆಲಿಸಲು ಬಂದಿದ್ದಾರೆ. ಅವರನ್ನು ಇಲ್ಲಿಗೆ ಕರೆತರಲೆ ?"

"ಆಗಲಿ, ಈಗಲೇ ಕರೆತನ್ನಿ" ಎಂದು ಸಮ್ಮತಿ ಕೊಟ್ಟ ಕೇಶವಸೇನ.

ಹೃದಯ ಶ್ರೀರಾಮಕೃಷ್ಣರನ್ನು ಮೆಲ್ಲನೆ ಗಾಡಿಯಿಂದಿಳಿಸಿ ಕರೆದುಕೊಂಡು ಬಂದ. ಎಲ್ಲರೂ ಅವರ ಬರವನ್ನೇ ನೋಡುತ್ತ ಕೊಳದ ಬದಿಯ ಘಟ್ಟದ ಮೇಲೆ ಕುಳಿತಿದ್ದರು. ಶ್ರೀರಾಮಕೃಷ್ಣರನ್ನು ಕಂಡೊಡನೆ ಎಲ್ಲರ ದೃಷ್ಟಿಗಳು ಅವರಲ್ಲೇ ಸ್ಥಿರೀಕೃತವಾದುವು.

ಶ್ರೀರಾಮಕೃಷ್ಣರು ಒಂದು ಕೆಂಪಂಚಿನ ಧೋತರವನ್ನು ಮಾತ್ರ ಉಟ್ಟಿದ್ದಾರೆ. ಅದನ್ನು ಬಿಟ್ಟರೆ ಷರಟಾಗಲಿ ಶಲ್ಯವಾಗಲಿ ಇಲ್ಲ. ಧೋತರದ ಅಂಚನ್ನೇ ಎಡಗಡೆ ಹೆಗಲ ಮೇಲೆ ಇಳಿಬಿಟ್ಟುಕೊಂಡಿದ್ದಾರೆ. ಸಣಕಲ ಶರೀರ, ಹದಮಾಡದ ಕುರುಚಲು ಗಡ್ಡ, ಕೆದರಿದ ತಲೆಗೂದಲು, ಬರಿಗಾಲು; ವಯಸ್ಸು ಸುಮಾರು ನಲವತ್ತು. ನೋಡಿ ದವರಿಗೆ, ಅವರು ಹೆಚ್ಚೇನೂ ಲೌಕಿಕವನ್ನರಿತಂತೆ ಕಾಣಲಿಲ್ಲ; ಆಧ್ಯಾತ್ಮಿಕ ವ್ಯಕ್ತಿಯ ಲಕ್ಷಣಗಳೂ ತೋರಿಬರಲಿಲ್ಲ. 'ಯಾರೀ ವಿಲಕ್ಷಣ ವ್ಯಕ್ತಿ ?' ಎಂದು ಎಲ್ಲರೂ ಅವ ರನ್ನೇ ದಿಟ್ಟಿಸುತ್ತಿದ್ದಾರೆ.

ಶ್ರೀರಾಮಕೃಷ್ಣರು ತಮ್ಮ ಸ್ವಭಾವಕ್ಕನುಗುಣವಾಗಿ, ಕೇಶವಸೇನನಿಗೂ ಇತರ ರಿಗೂ ವಿನಯದಿಂದ ನಡುಬಾಗಿ ನಮಿಸಿದರು. ಆದರೆ ಆ ಕಾಲದಲ್ಲಿ ವಿದ್ಯಾವಂತರೆನ್ನಿಸಿ ಕೊಂಡವರಿಗೆ, ಆ ರೀತಿಯಲ್ಲಿ ನಮಸ್ಕರಿಸುವ ಅಭ್ಯಾಸವಿರಲಿಲ್ಲ. ಆದ್ದರಿಂದ ಅಲ್ಲಿದ್ದವರಿ ಗೆಲ್ಲ ಸ್ವಲ್ಪ ಕಸಿವಿಸಿಯಾಗಿದ್ದರೂ ಆಶ್ಚರ್ಯವಿಲ್ಲ. ಅವರೆಲ್ಲ ಸುಮ್ಮನೆ ಕೈಜೋಡಿಸಿ ಮರುವಂದಿಸಿದರು. ಶ್ರೀರಾಮಕೃಷ್ಣರಿಗೂ ಹೃದಯನಿಗೂ ಕುಳಿತುಕೊಳ್ಳಲು ಜಮ ಖಾನೆ ಹಾಸಲಾಯಿತು.

ಶ್ರೀರಾಮಕೃಷ್ಣರು ತಾವಾಗಿಯೇ ಮಾತಿಗಾರಂಭಿಸಿದರು. ಮಾತಿನಲ್ಲಿ ಗ್ರಾಮ್ಯ ಭಾಷೆಯ ಸೊಗಡು ಎದ್ದುಕಾಣುತ್ತಿತ್ತು. ಕೇಳುಗರಿಗೆ ಬಹಳ ಹಿತವಾದ ಸುಲಭ-ಸಹಜ

ಶೈಲಿ. ಉತ್ಸಾಹ, ಕಾತರ ತುಂಬಿದ ದನಿಯಲ್ಲಿ ಅವರು ಕೇಳಿದರು: "ಅಯ್ಯಾ ಭಕ್ತ ಜನರೆ, ನಿಮಗೆ ಭಗವಂತನ ದರ್ಶನವಾಗಿದೆಯೆಂದು ಕೇಳಿದೆ. ಅದು ನಿಜವೆ? ಹಾಗಾದರೆ, ಅದರ ಬಗ್ಗೆ ತಿಳಿದುಕೊಳ್ಳಬೇಕೆಂಬ ಆಶೆ ನನ್ನದು. ಅದಕ್ಕಾಗಿಯೇ ತಮ್ಮನ್ನು ನೋಡಲು ಬಂದಿದ್ದೇನೆ."

ಕೇಶವ ಇವಕ್ಕೇನು ಹೇಳಿದನೋ ತಿಳಿಯದು. ಮತ್ತೆ ಅದೇ ಧಾಟಿಯಲ್ಲಿ ಮಾತನಾಡುತ್ತ ಶ್ರೀರಾಮಕೃಷ್ಣರು ದಿವ್ಯಭಾವಾನ್ವಿತರಾಗಿ ಮಧುರ ಕಂಠದಿಂದ ತಮ್ಮ ಮೆಚ್ಚಿನ ಹಾಡೊಂದನ್ನು ಹಾಡತೊಡಗಿದರು:

*ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು?...*

'ಜಗನ್ಮಾತೆಯ ಸ್ವರೂಪವನ್ನು ವೇದಶಾಸ್ತ್ರಗಳೂ ತಿಳಿಸಿಕೊಡಲಾರವು; ಅದು ಬುದ್ಧಿಶಕ್ತಿಗೆ ಮೀರಿದ್ದು' ಎಂಬ ಭಾವಾರ್ಥದ ಈ ಹಾಡನ್ನು ಹಾಡುತ್ತಲೇ ಶ್ರೀರಾಮಕೃಷ್ಣರು ಆ ಭಾವದಲ್ಲಿ ಲೀನರಾಗಿ ಗಾಢ ಸಮಾಧಿಸ್ಥರಾದರು. ಶರೀರ ಸ್ಥಿರವಾಗಿದೆ; ಹೊರಜಗತ್ತಿನ ಪರಿವೆಯೇ ಇದ್ದಂತಿಲ್ಲ. ಉಸಿರಾಟ ನಿಂತೇ ಹೋದಂತಿದೆ. ಕಣ್ರೆಪ್ಪೆಗಳು ಮಿಸುಕುತ್ತಿಲ್ಲ. ಕಪೋಲಗಳ ಮೇಲೆ ಆನಂದಾಶ್ರು ತೊಟ್ಟಿಕ್ಕುತ್ತಿದೆ. ನಡುನಡುವೆ ಮುಖದ ಮೇಲೊಂದು ಮಂದಹಾಸ ಮಿಂಚಿಹೋಗುತ್ತಿದೆ.

ಬ್ರಾಹ್ಮಸಮಾಜೀಯರೆಲ್ಲ ಈ ಅಪೂರ್ವ-ವಿಚಿತ್ರ ದೃಶ್ಯವನ್ನು ಕಂಡು ಆಶ್ಚರ್ಯಚಕಿತರಾದರು. ಆದರೆ ಅವರಾರಿಗೂ ಇದೊಂದು ದಿವ್ಯಾವಸ್ಥೆಯೆಂಬ ಭಾವನೆಯುಂಟಾಗಲಿಲ್ಲ. 'ಇದು ಬರಿಯ ನಾಟಕ' ಎಂದು ಕೆಲವರು ಅಂದುಕೊಂಡರೆ, 'ಇದೊಂದು ಬಗೆಯ ಹುಚ್ಚೋ, ನರದೌರ್ಬಲ್ಯವೋ ಇರಬೇಕು' ಎಂದು ಉಳಿದವರು ಊಹಿಸಿದರು. ಹೀಗೆ ಕೆಲನಿಮಿಷಗಳಾದುವು. ಈಗ ಹೃದಯರಾಮ ಶ್ರೀರಾಮಕೃಷ್ಣರ ಕಿವಿಯಲ್ಲಿ ಗಟ್ಟಿಯಾಗಿ ಓಂಕಾರವನ್ನು ಉಚ್ಚರಿಸತೊಡಗಿದ. ಕ್ರಮೇಣ ಅವರು ಬಾಹ್ಯಪ್ರಜ್ಞೆಗೆ ಮರಳಿದರು.

ಅವರ ಮುಖದಲ್ಲೀಗ ಮತ್ತೆ ಹಿಂದಿನ ಸರಳ ಮನಮೋಹಕ ಮಂದಹಾಸ ನಲಿಯತೊಡಗಿತು. ದಿವ್ಯ ಭಾವವಿನ್ನೂ ಅವರನ್ನು ಪೂರ್ತಿಯಾಗಿ ಬಿಟ್ಟಿರಲಿಲ್ಲ. ಆ ಭಾವದಲ್ಲೇ ಅವರು ನಿರರ್ಗಳವಾಗಿ ಮಾತನಾಡುತ್ತ ಭಗವಂತನ ಕುರಿತಾಗಿ ತಿಳಿಸತೊಡಗಿದರು. ಎಲ್ಲರೂ ಮಂತ್ರಮುಗ್ಧರಾದವರಂತೆ ಮರುಮಾತಿಲ್ಲದೆ ಆಲಿಸುತ್ತ ಕುಳಿತರು.

"ನೋಡಿ, ಭಗವಂತನ ಸ್ವರೂಪ ಒಬ್ಬೊಬ್ಬರಿಗೆ ಒಂದೊಂದು ಬಗೆಯಾಗಿ ವ್ಯಕ್ತವಾಗುತ್ತದೆ. ಒಂದು ಕಥೆ ಕೇಳಿ:

"ಒಮ್ಮೆ ಒಬ್ಬ ಮನುಷ್ಯ ಕಾಡಿಗೆ ಹೋದ. ಅಲ್ಲಿ ಒಂದು ಮರದ ಮೇಲೆ ಕೆಂಪು ಬಣ್ಣದ ಪುಟ್ಟ ಪ್ರಾಣಿಯೊಂದನ್ನು ಕಂಡ. ಆಮೇಲೆ ಅವನು ವಾಪಸ್ಸು ಹೋಗಿ ತನ್ನ ಸ್ನೇಹಿತನಿಗೆ ತಾನು ಕಂಡ ಪ್ರಾಣಿಯನ್ನು ಬಣ್ಣಿಸಿದ. ಆಗ ಆ ಸ್ನೇಹಿತ ಹೇಳಿದ, 'ನಾನೂ ಕಾಡಿನಲ್ಲಿ ಆ ಪ್ರಾಣಿಯನ್ನು ಕಂಡಿದ್ದೇನೆ. ಆದರೆ ನೀನು ಅದರ ಬಣ್ಣ ಕೆಂಪು ಅನ್ನುತ್ತೀಯಲ್ಲ? ಅದು ಕೆಂಪಲ್ಲ, ಹಸಿರು!' ಆಗ ಅಲ್ಲಿದ್ದ ಇನ್ನೊಬ್ಬ ಹೇಳಿದ, 'ನೀವಿಬ್ಬರು ಹೇಳಿದ್ದೂ ಸರಿಯಲ್ಲ. ನಿಜಕ್ಕೂ ಅದರ ಬಣ್ಣ ಹಳದಿ.' ಅಷ್ಟು ಹೊತ್ತಿಗೆ ಇನ್ನೂ ಕೆಲವರು ಅಲ್ಲಿಗೆ ಬಂದರು. ಇವರ ವಾಗ್ವಾದವನ್ನು ಕೇಳಿ, ತಾವೂ ತಲಾ ಒಂದೊಂದು ಅಭಿಪ್ರಾಯ ಕೊಟ್ಟರು. ಅದರ ಬಣ್ಣ ನೀಲಿ, ಬೂದು, ನೇರಳೆ ಎಂದು

ಒಬ್ಬೊಬ್ಬರು ಒಂದೊಂದು ಬಗೆಯಾಗಿ ಹೇಳಿದರು. ಒಬ್ಬರು ಹೇಳಿದ್ದನ್ನು ಇನ್ನೊಬ್ಬರು ಒಪ್ಪಲಿಲ್ಲ. ಕಡೆಗೆ ತಮ್ಮ ವಿವಾದವನ್ನು ಬಗೆಹರಿಸಿಕೊಳ್ಳಲು ಅಲ್ಲಿಗೇ ಹೋಗಿ ನೋಡು ವುದೆಂದು ತೀರ್ಮಾನಿಸಿದರು. ಸರಿ, ಹೋದರು. ಅಲ್ಲಿ ಆ ಮರದ ಕೆಳಗೆ ಯಾರೋ ಒಬ್ಬ ಕುಳಿತಿದ್ದ. ಇವರನ್ನೆಲ್ಲ ಕಂಡು, ವಿಷಯವೇನೆಂದು ಕೇಳಿತಿಳಿದ. ಬಳಿಕ ಅವನೆಂದ, 'ಓಹೋ ಗೊತ್ತಾಯಿತು ಬಿಡಿ. ನೀವು ಕಂಡದ್ದು ಗೋಸುಂಬೆಯನ್ನು! ನನಗೆ ಅದರ ವಿಷಯ ಚೆನ್ನಾಗಿ ಗೊತ್ತು. ನಾನು ಇಲ್ಲೇ ವಾಸವಾಗಿರುವವನು. ನೋಡಿ, ನೀವು ಪ್ರತಿ ಯೊಬ್ಬರು ಹೇಳಿದ್ದೂ ಸರಿಯೇ. ಅದು ಒಮ್ಮೊಮ್ಮೆ ಕೆಂಪಾಗಿ ಕಾಣುತ್ತದೆ. ಇನ್ನು ಕೆಲ ವೊಮ್ಮೆ ಹಳದಿಯಾಗಿ, ನೀಲಿಯಾಗಿ, ನೇರಳೆಯಾಗಿ, ಹೀಗೆ ನಾನಾ ಬಣ್ಣಗಳಿಂದ ಕಾಣಿಸಿ ಕೊಳ್ಳುತ್ತದೆ. ಅಷ್ಟೇ ಅಲ್ಲ, ಎಷ್ಟೋ ಬಾರಿ ಅದಕ್ಕೆ ಬಣ್ಣವೇ ಇರುವುದಿಲ್ಲ!'

"ಅದೇ ರೀತಿ, ಯಾರು ಭಗವಂತನ ಕುರಿತು ನಿರಂತರವಾಗಿ ಭಾವಿಸುತ್ತಾರೋ ಅವರು ಆತನ ನಿಜಸ್ವರೂಪವನ್ನು ಕಂಡುಕೊಳ್ಳಬಲ್ಲರು. ಭಗವಂತನು ತನ್ನ ಭಕ್ತರಿಗೆ ನಾನಾ ರೂಪಗಳಿಂದ ವ್ಯಕ್ತನಾಗುತ್ತಾನೆ ಎಂಬುದು ಅವನಿಗೆ ಮಾತ್ರ ಗೊತ್ತು. ಭಗವಂತ ಸಗುಣನೂ ಹೌದು, ನಿರ್ಗುಣನೂ ಹೌದು. ಆದರೆ ಆತನ ಸ್ವರೂಪವನ್ನು ಏನೂ ಅರಿಯದವರು ಮಾತ್ರ ವ್ಯರ್ಥ ಚರ್ಚೆಯಲ್ಲಿ ತೊಡಗಿ ಬಳಲುತ್ತಾರೆ."

ಕೇಶವನೂ ಅವನ ಅನುಯಾಯಿಗಳೂ ಶ್ರೀರಾಮಕೃಷ್ಣರ ಮಾತಿನ ಮೋಡಿಗೆ ಸಿಲುಕಿ ನಿಶ್ಶಬ್ದರಾಗಿದ್ದಾರೆ. ಆ ಮಾತುಗಳು ನೇರವಾಗಿ ತಮ್ಮ ಹೃದಯವನ್ನು ಹೊಗು ತ್ತಿರುವಂತೆ ಅವರಿಗೆ ಅನುಭವವಾಗುತ್ತಿದೆ. ಶ್ರೀರಾಮಕೃಷ್ಣರು ಮುಂದುವರಿಸಿದರು:

"ಒಮ್ಮೆ ಕೆಲವು ಕುರುಡರಿಗೆ ಒಬ್ಬ ಮಾವಟಿಗ ತನ್ನ ಆನೆಯನ್ನು ತೋರಿಸಿ, 'ಇದೇ ಆನೆ' ಎಂದ. ಅವರೆಲ್ಲ ಅದನ್ನು ಮುಟ್ಟಿಮುಟ್ಟಿ ನೋಡಿದರು. ಆಮೇಲೆ ಯಾರೋ ಅವರನ್ನು ಕೇಳಿದರು, 'ಆನೆ ಹೇಗಿದೆ?' ಎಂದು. ಆಗ ಒಬ್ಬ ಕುರುಡ ಹೇಳಿದ, 'ಆನೆ ಒಳ್ಳೇ ಕಂಬದ ಹಾಗೆ ಇದೆ' ಎಂದು. ಅವನು ಆನೆಯ ಕಾಲನ್ನು ಮಾತ್ರ ಮುಟ್ಟಿನೋಡಿದ್ದ! ಇನ್ನೊಬ್ಬ ಕುರುಡ ಹೇಳಿದ, 'ಆನೆ ಬೀಸಣಿಗೆಯ ಹಾಗಿದೆ.' ಅವನು ಅದರ ಕಿವಿಯನ್ನು ಮುಟ್ಟಿದ್ದ. ಇನ್ನೊಬ್ಬ, ಆನೆಯ ಹೊಟ್ಟೆಯನ್ನು ಮುಟ್ಟಿ ನೋಡಿದವನು, 'ಆನೆ ಗುಡಾಣದಂತಿದೆ' ಎಂದ. ಆನೆಯ ಬಾಲವನ್ನು ಮುಟ್ಟಿದ ಕುರುಡ ಹೇಳಿದ, 'ಆನೆ ಹಗ್ಗವಿದ್ದಂತೆ ಇದೆ.' ಹೀಗೆ ಒಬ್ಬೊಬ್ಬರು ಒಂದೊಂದು ರೀತಿ ಯಾಗಿ ಬಣ್ಣಿಸಿದರು! ಹಾಗೆಯೇ, ದೇವರ ಒಂದು ಅಂಶವನ್ನು ಮಾತ್ರ ಅರಿತವನು, 'ದೇವರು ಎಂದರೆ ಇಷ್ಟೇ' ಎಂದು ಅಷ್ಟಕ್ಕೇ ಸಂಕ್ಷೇಪಿಸಿಬಿಡುತ್ತಾನೆ. ದೇವರು ತಾನು ಕಂಡ ರೀತಿಯಲ್ಲಲ್ಲದೆ ಇನ್ನು ಯಾವ ಬಗೆಯಾಗಿಯೂ ಇರಲಾರ ಎಂದು ಆತ ತೀರ್ಮಾನಿಸಿಬಿಡುತ್ತಾನೆ."

ಶ್ರೀರಾಮಕೃಷ್ಣರ ಅಪೂರ್ವ ಮಂದಹಾಸಪೂರಿತ ಮುಖವನ್ನೇ ದಿಟ್ಟಿಸುತ್ತ ಕುಳಿತ ಬ್ರಾಹ್ಮೋಗಳು ಅವರಾಡುತ್ತಿದ್ದ ಮಾತುಗಳ ಬೆಳಕಿನಲ್ಲಿ ತಮ್ಮ ಅಜ್ಞಾನವನ್ನು ಕಾಣುತ್ತ ಮೌನ ತಾಳಿದರು.

"ಒಮ್ಮೆ ಒಂದು ಇರುವೆ ಸಕ್ಕರೆಯ ಬೆಟ್ಟಕ್ಕೆ ಹೋಯಿತು. ಒಂದು ಸಕ್ಕರೆಕಣ ವನ್ನು ತಿನ್ನುವಷ್ಟರಲ್ಲೇ ಅದಕ್ಕೆ ಹೊಟ್ಟೆ ತುಂಬಿಹೋಯಿತು. ಇನ್ನೊಂದು ಕಣಕ್ಕೆ ಅಲ್ಲಿ ಜಾಗವೇ ಇರಲಿಲ್ಲ. ಹಾಗೆಯೇ, ಭಗವಂತನ ವಿಷಯವಾಗಿ ಎಲ್ಲವನ್ನೂ ತಿಳಿದು ಕೊಂಡು ಬಿಡಲು ಯಾರಿಂದ ತಾನೆ ಸಾಧ್ಯ? ಅಲ್ಲದೆ ಆತನ ಕೃಪೆಯಿಲ್ಲದೆ ಯಾರೂ

ಅವನನ್ನು ಅರಿಯಲಾರರು."

ಹೀಗೆ ಶ್ರೀರಾಮಕೃಷ್ಣರು ಮನಮುಟ್ಟುವ ಉಪಮೆಗಳನ್ನು ಪೋಣಿಸುತ್ತ ತಮ್ಮ ಮಾತನ್ನು ಮುಂದುವರಿಸಿದರು. ಕೇಳುಗರ ಕುತೂಹಲ ಹೆಚ್ಚಾಗುತ್ತ ಹೋಯಿತೇ ಹೊರತು ಕಡಿಮೆಯಾಗಲಿಲ್ಲ.

ಈಗ ಶ್ರೀರಾಮಕೃಷ್ಣರ ದೃಷ್ಟಿ ಕೇಶವನತ್ತ ಹರಿಯಿತು. ಅವರು ಕೇಳಿದರು:

"ನೀನು ಬೆಂಡಿನಿಂದ ಮಾಡಿದ ಸೀತಾಫಲವನ್ನು ನೋಡಿದ್ದೀಯಾ ?"

"ಹೌದು ಸ್ವಾಮಿ."

"ಅದನ್ನು ನೋಡಿದಾಕ್ಷಣ ನಿಜವಾದ ಸೀತಾಫಲದ ನೆನಪೇ ಬರುವುದಿಲ್ಲವೆ ? ಹಾಗೆಯೇ ಮಣ್ಣಿಂದ ಮಾಡಿದ ಕಾಳಿಯ ವಿಗ್ರಹವು ಭಕ್ತನ ಮನಸ್ಸಿನಲ್ಲಿ ನಿಜವಾದ ಆನಂದಮಯಿ ಕಾಳಿಯ ನೆನಪನ್ನೇ ತಂದುಕೊಡುತ್ತದೆ."

ಬ್ರಾಹ್ಮಸಮಾಜೀಯರು ವಿಗ್ರಹಪೂಜೆಯ ಪ್ರಬಲ ವಿರೋಧಿಗಳು. ಆದ್ದರಿಂದ ಶ್ರೀರಾಮಕೃಷ್ಣರ ಈ ಮಾತು.

"ನೋಡು, ಆಧ್ಯಾತ್ಮಿಕ ಸಾಧನೆಯ ಪ್ರಾರಂಭದಲ್ಲಿ ಬಹಳಷ್ಟು ತಯಾರಿ ಬೇಕಾಗುತ್ತದೆ. ಆದರೆ ಕ್ರಮೇಣ ಈ ಪ್ರಾರಂಭಿಕ ಕರ್ಮಗಳು ಅನಗತ್ಯವಾಗುತ್ತವೆ. ಲೂಚಿಯನ್ನು (ಪೂರಿಯಂಥ ತಿನಿಸು) ಬಿಸಿ ತುಪ್ಪದ ಬಾಣಲೆಗೆ ಹಾಕಿದಾಗ ಅದು ಮೊದಲಿಗೆ ಬಹಳಷ್ಟು ಚಟಗುಟ್ಟುತ್ತದೆ. ಆದರೆ ಅದು ಬೆಂದಹಾಗೆಲ್ಲ ಶಬ್ದ ನಿಂತು ಹೋಗುತ್ತದೆ. ಹಾಗೆಯೇ ತಿಳಿವಳಿಕೆ ಬಲಿತು ಪಕ್ವವಾದಾಗ ವಿಗ್ರಹವೇ ಮೊದಲಾದ ಬಾಹ್ಯ ಸಾಧನಗಳು ಬೇಕಾಗುವುದಿಲ್ಲ.

"ಸಾಧಕರಲ್ಲಿ ಎರಡು ವಿಧ. ಒಂದು ವರ್ಗದವರ ಸ್ವಭಾವ ಕೋತಿಮರಿಯ ಹಾಗೆ, ಇನ್ನೊಂದು ವರ್ಗದವರದು ಬೆಕ್ಕಿನ ಮರಿಯ ಹಾಗೆ. ಕೋತಿಮರಿ ತನ್ನ ತಾಯಿ ಯನ್ನು ಬಹಳ ಎಚ್ಚರಿಕೆಯಿಂದ ಬಿಗಿಯಾಗಿ ಹಿಡಿದುಕೊಂಡಿರುತ್ತದೆ. ಹಾಗೆಯೇ ಕೆಲವು ಸಾಧಕರು ಭಾವಿಸುತ್ತಾರೆ—ಭಗವಂತನನ್ನು ಪಡೆದುಕೊಳ್ಳಬೇಕಾದರೆ ತಾವು ಆತನ ನಾಮವನ್ನು ಇಂತಿಷ್ಟು ಸಲ ಜಪ ಮಾಡಬೇಕು, ಇಂತಿಷ್ಟು ಹೊತ್ತು ಧ್ಯಾನ ಮಾಡ ಬೇಕು, ಇಂತಿಂಥ ತಪಸ್ಸನ್ನು ಆಚರಿಸಬೇಕು ಎಂದು. ಈ ಬಗೆಯ ಸಾಧಕರು ದೇವ ರನ್ನು ಹಿಡಿದುಕೊಳ್ಳಲು ಬಹಳ ಪ್ರಯತ್ನ ಪಡುತ್ತಾರೆ. ಆದರೆ ಬೆಕ್ಕಿನ ಮರಿ ಇದೆಯಲ್ಲ, ಅದು ತನ್ನ ತಾಯಿಯನ್ನು ತಾನಾಗಿಯೇ ಹಿಡಿದುಕೊಳ್ಳಲಾರದು. ಅದು ಸುಮ್ಮನೆ ಒಂದು ಕಡೆ ಬಿದ್ದುಕೊಂಡು 'ಮಿಯಾಂವ್ ಮಿಯಾಂವ್'ಗುಡುತ್ತಿರುತ್ತದೆ. ಆಗ ತಾಯಿಬೆಕ್ಕು ತಾನೇ ಬಂದು ಅದನ್ನು ತನ್ನ ಬಾಯಲ್ಲಿ ಕಚ್ಚಿಕೊಂಡು ಅಲ್ಲಿ ಇಲ್ಲಿ ಸುತ್ತಾಡುತ್ತದೆ; ಎಲ್ಲಿ ಬೇಕೋ ಅಲ್ಲಿ ಮಲಗಿಸುತ್ತದೆ. ಅದೇ ರೀತಿಯಲ್ಲಿ ಕೆಲವು ಸಾಧ ಕರು, ಎಷ್ಟು ಸಲ ಜಪ ಮಾಡಬೇಕು ಎಂಬುದನ್ನೆಲ್ಲ ಲೆಕ್ಕ ಹಾಕಲಾರರು. ಅವರು ಮಾಡುವುದೇನಿದ್ದರೂ, ವ್ಯಾಕುಲ ಹೃದಯದಿಂದ ದೇವರನ್ನು ಅತ್ತು ಕರೆಯುವುದು. ಪರಮಾತ್ಮ ಅವರ ಅಳಲನ್ನು ಕೇಳುತ್ತಾನೆ. ಆಮೇಲೆ ಅವನಿಂದ ಸುಮ್ಮನಿರಲು ಸಾಧ್ಯ ವಾಗುವುದಿಲ್ಲ. ಅವರ ಕೈಹಿಡಿದು ಮುನ್ನಡೆಸುತ್ತಾನೆ; ಅವರಿಗೆ ಮೈದೋರುತ್ತಾನೆ."

ತಮ್ಮ ಕಣ್ಣುಕಿವಿಗಳನ್ನು ಶ್ರೀರಾಮಕೃಷ್ಣರಲ್ಲೇ ಕೀಲಿಸಿಕೊಂಡು ಕುಳಿತಿದ್ದ ಬ್ರಾಹ್ಮೋಗಳಿಗೆ ಮಧ್ಯಾಹ್ನದ ಊಟದ ಸಮಯ ಯಾವಾಗಲೋ ಮೀರಿಹೋಗಿ, ಅನಂತರದ ಪ್ರಾರ್ಥನೆಯ ಹೊತ್ತೂ ಕಳೆದುಹೋಗುವುದರಲ್ಲಿದೆ ಎಂಬುದರ ಪರಿ

ವೆಯೇ ಇಲ್ಲ! ಪರಮಾನುಕಂಪೆಯಿಂದ ಕೂಡಿದ, ಔದಾರ್ಯಪೂರ್ಣವಾದ ಆ ಮಾತುಗಳನ್ನು ಹೃತ್ಪೂರ್ವಕವಾಗಿ ಹೀರುತ್ತ ಕುಳಿತಿದ್ದಾರೆ! ಅವರೆಲ್ಲರ ಮುಖಂಡನೂ ಪ್ರಚಂಡ ವಾಕ್ಪಟುವೂ ಆದ ಕೇಶವಸೇನನಂತೂ ಅಜ್ಜನ ಮಡಿಲಲ್ಲಿ ಕುಳಿತು ಕಥೆ ಕೇಳುತ್ತಿರುವ ಶಿಶುವಿನಂತಾಗಿಬಿಟ್ಟಿದ್ದಾನೆ! ಆನಂದಾಶ್ಚರ್ಯಗಳಿಂದ ಮಿನುಗುತ್ತಿದ್ದ ಅವರ ಮುಖಗಳನ್ನು ಕಂಡು ಶ್ರೀರಾಮಕೃಷ್ಣರು ಮುಗುಳ್ನಗುತ್ತ ನುಡಿದರು:

"ಹಸುಗಳ ಹಿಂಡಿಗೆ ಬೇರೆ ಯಾವುದಾದರೂ ಪ್ರಾಣಿ ಬಂದಿತೆಂದರೆ ಅವು ಅದನ್ನು ಹಾಯ್ದು ಓಡಿಸಿಬಿಡುತ್ತವೆ. ಆದರೆ ಮತ್ತೊಂದು ಹಸು ಬಂದರೆ ಅದರ ಮೈನೆಕ್ಕಿ ಸ್ವಾಗತಿಸಿ, ತಮ್ಮ ಹಿಂಡಿಗೆ ಸೇರಿಸಿಕೊಳ್ಳುತ್ತವೆ. ಇಂದು ನನಗೆ ದೊರೆತ ಸ್ವಾಗತ ಇಂಥದು."

ಇದನ್ನು ಕೇಳಿ ಅಲ್ಲಿದ್ದವರೆಲ್ಲ ಗಟ್ಟಿಯಾಗಿ ನಕ್ಕರು. 'ಆ ಮಾತು ಅದೆಷ್ಟು ಸತ್ಯ!' ಎನಿಸದಿರಲಿಲ್ಲ.

ಈಗ ಶ್ರೀರಾಮಕೃಷ್ಣರು ಅಲ್ಲಿಂದ ಹೊರಡಲು ಅನುವಾಗಿ ಎದ್ದುನಿಂತರು. ಕೇಶವನತ್ತ ಬೆರಳು ಮಾಡಿ ಹೇಳಿದರು:

"ನಿಮ್ಮಲ್ಲೆಲ್ಲ ಬಾಲ ಬಿದ್ದುಹೋಗಿರುವುದೆಂದರೆ ಇವನೊಬ್ಬನಿಗೇ!"

ಈ ವಿಚಿತ್ರ ಟೀಕೆಯನ್ನು ಕೇಳಿ ಕೆಲವರು ನಕ್ಕರು. ಆದರೆ ಅದರ ಅರ್ಥವೇನೆಂದು ಯಾರಿಗೂ ತಿಳಿಯಲಿಲ್ಲ. ಕೇಶವಸೇನ ನುಡಿದ:

"ತಾಳಿ ತಾಳಿ, ನಗಬೇಡಿ. ಅದರಲ್ಲೇನೋ ಗೂಢಾರ್ಥವಿದೆ. ಅದೇನೆಂದು ಅವರನ್ನೇ ಕೇಳೋಣ."

ಶ್ರೀರಾಮಕೃಷ್ಣರು ಮುಗುಳ್ನಗುತ್ತ ಅದನ್ನು ವಿವರಿಸಿದರು:

"ನೀವು ಗೊದಮೊಟ್ಟೆ(ಕಪ್ಪೆಮರಿ)ಯನ್ನು ನೋಡಿಲ್ಲವೆ? ಎಲ್ಲಿಯವರೆಗೆ ಅದಕ್ಕೆ ಬಾಲ ಇರುತ್ತದೆಯೋ ಅಲ್ಲಿಯವರೆಗೆ ಅದು ನೀರಿನಲ್ಲಿ ಮಾತ್ರ ಇರಬಲ್ಲುದು. ಅದು ಆಗ ನೆಲದ ಮೇಲೆ ಬರಲಾರದು. ಆದರೆ ಅದರ ಬಾಲ ಉದುರಿಹೋದೊಡನೆ ಅದು ದಡದ ಮೇಲೆ ಜಿಗಿಯುತ್ತದೆ. ಆಮೇಲೆ ಅದು ನೆಲ-ಜಲಗಳೆರಡರಲ್ಲೂ ವಾಸಿಸ ಬಲ್ಲುದು. ಹಾಗೆಯೇ ಮನುಷ್ಯ ತನ್ನ ಅಜ್ಞಾನವೆಂಬ ಬಾಲವನ್ನು ಕಳಚಿಕೊಳ್ಳುವ ತನಕ, ಸಂಸಾರವೆಂಬ ನೀರಿನಲ್ಲಿ ಮಾತ್ರ ವಾಸಿಸಬಲ್ಲ. ಆ ಬಾಲವನ್ನು ಅವನು ಕಳಚಿ ಕೊಂಡ ಮೇಲೆ, ಎಂದರೆ ಭಗವದ್‌ಜ್ಞಾನವನ್ನು ಗಳಿಸಿಕೊಂಡ ಮೇಲೆ, ಅವನು ಬೇಕೆಂದರೆ ಸಂಸಾರದಲ್ಲೂ ಇರಬಲ್ಲ; ಅಥವಾ ಭಗವಂತನಲ್ಲೂ ಇರಬಲ್ಲ. ಕೇಶವ, ನಿನ್ನ ಮನಸ್ಸೀಗ ಅಂಥ ಸ್ಥಿತಿಯಲ್ಲಿದೆ. ನೀನು ಸಂಸಾರದಲ್ಲಿದ್ದೂ ಭಗವದಾನಂದವನ್ನು ಸವಿಯಬಲ್ಲೆ."

ತಮ್ಮ ಮುಖಂಡನ ಕುರಿತಾಗಿ ಶ್ರೀರಾಮಕೃಷ್ಣರು ವ್ಯಕ್ತಪಡಿಸಿದ ಅಭಿಪ್ರಾಯ ದಿಂದ ಬ್ರಾಹ್ಮೊಗಳೆಲ್ಲ ಸಂತುಷ್ಟರಾದರೆಂದು ಹೇಳಬೇಕಾಗಿಯೇ ಇಲ್ಲ.

ಹೀಗೆ ಶ್ರೀರಾಮಕೃಷ್ಣರು ಕೇಶವ ಮತ್ತು ಅವನ ಅನುಯಾಯಿಗಳೊಂದಿಗೆ ಸುಮಾರು ನಾಲ್ಕು ಗಂಟೆಗಳಷ್ಟು ಕಾಲವಿದ್ದು ದಕ್ಷಿಣೇಶ್ವರಕ್ಕೆ ಮರಳಿದರು.

ಶ್ರೀರಾಮಕೃಷ್ಣರೊಂದಿಗಿನ ಈ ಭೇಟಿ ಕೇಶವಚಂದ್ರ ಸೇನನ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು. ಅವರ ಮಾತುಗಳಿನ್ನೂ ಅವನ ಕಿವಿಯಲ್ಲಿ ಮಾರ್ದನಿಗೊಳ್ಳು ತ್ತಿದ್ದುವು. ಆ ಕುರಿತಾಗಿ ಆಲೋಚಿಸಿದಂತೆಲ್ಲ, 'ಎಷ್ಟು ಸತ್ಯ! ಎಷ್ಟು ಸತ್ಯ!' ಎನ್ನಿಸು

ತ್ತಿತ್ತು. ಅವರ ವ್ಯಕ್ತಿತ್ವವಂತೂ ಅವನನ್ನು ಸಂಪೂರ್ಣವಾಗಿ ಸೆರೆ ಹಿಡಿದುಬಿಟ್ಟಿತ್ತು.

ಆದರೆ ಅವನು ಮತ್ತೆಮತ್ತೆ ತನ್ನನ್ನೇ ಕೇಳಿಕೊಂಡ: 'ನಾನು ಅವರನ್ನು ನಂಬಿದ್ದು ಸರಿಯೆ ? ನಿಜಕ್ಕೂ ಅವರಲ್ಲಿ ಅಂಥ ಸತ್ತ್ವ ಇದೆಯೆ ?' ಎಂದು. ಅವರನ್ನು ಇನ್ನಷ್ಟು ಚೆನ್ನಾಗಿ ಪರೀಕ್ಷೆ ಮಾಡಿ ನೋಡಬೇಕೆನಿಸಿತು. ತನ್ನ ಕೆಲವು ಅನುಯಾಯಿಗಳನ್ನು ದಕ್ಷಿಣೇಶ್ವರಕ್ಕೆ ಕಳಿಸಿ, ಅವರನ್ನು ಸೂಕ್ಷ್ಮವಾಗಿ ಗಮನಿಸಿ ಅವರ ಬಗ್ಗೆ ವರದಿ ಒಪ್ಪಿಸುವಂತೆ ಹೇಳಿದ. ಅವರ ಆಧ್ಯಾತ್ಮಿಕ ಸಿದ್ಧಿಯ ಬಗ್ಗೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ತಿಳಿದುಕೊಂಡ. ಅವರ ಪ್ರಾಮಾಣಿಕತೆಯನ್ನು ಒರೆಹಚ್ಚಿ ನೋಡಿದ.

ಇಷ್ಟೆಲ್ಲ ಆದಮೇಲೂ ಅವನೊಳಗಿನ ತಳಮಳ ನಿಲ್ಲಲಿಲ್ಲ. ಬಹುಕಾಲದಿಂದಲೂ ಅವನು ನಂಬಿಕೊಂಡಿದ್ದ, ಬೆಳೆಸಿದ್ದ ಸಿದ್ಧಾಂತಗಳಿಗೂ ಶ್ರೀರಾಮಕೃಷ್ಣರು ಅವನೆದುರಿಗಿಟ್ಟ ಹೊಸ ವಿಚಾರಗಳಿಗೂ ಸಾಕಷ್ಟು ಘರ್ಷಣೆ ನಡೆಯಿತು. ಕ್ರಮೇಣ ಈ ಘರ್ಷಣೆ ಕಡಮೆಯಾಗುತ್ತ ಬಂದಿತು. ಶ್ರೀರಾಮಕೃಷ್ಣರ ಪ್ರಭಾವ ಅವನ ಮೇಲೆ ಚಿರಸ್ಥಾಯಿಯಾಯಿತು.

ಶ್ರೀರಾಮಕೃಷ್ಣರ ಪರಿಚಯವಾದ ಕೆಲದಿನಗಳಲ್ಲೇ ಕೇಶವ ದಕ್ಷಿಣೇಶ್ವರಕ್ಕೆ ಭೇಟಿ ನೀಡಿದ. ಬರಬರುತ್ತ ಇರ್ವರ ನಡುವಣ ಸ್ನೇಹ, ವಿಶ್ವಾಸ, ಪ್ರೇಮ ವರ್ಧಿಸಿತು. ಪರಸ್ಪರರ ಭೇಟಿ ಬಹು ಸಾಮಾನ್ಯವಾಯಿತು. ಶ್ರೀರಾಮಕೃಷ್ಣರ ಸನ್ನಿಧಿಗೆ ಬರುವಾಗಲೆಲ್ಲ ಕೇಶವನು ಮರೆಯದೆ ಫಲಪುಷ್ಪಗಳನ್ನು ತಂದು ಅರ್ಪಿಸುತ್ತಿದ್ದ. ವಿನೀತ ಶಿಷ್ಯನಂತೆ ನೆಲದ ಮೇಲೆ ಕುಳಿತು ಅವರ ಮಾತುಗಳೆಂಬ ಮಕರಂದವನ್ನು ಹೀರುತ್ತಿದ್ದ. ಸಾಧ್ಯವಾದಾಗಲೆಲ್ಲ ಕಲ್ಕತ್ತದಲ್ಲಿದ್ದ ತನ್ನ 'ಕಮಲಕುಟೀರ'ವೆಂಬ ಮನೆಗೆ ಬರಬೇಕೆಂದು ಅವರಿಗೆ ಆಹ್ವಾನವಿತ್ತಿದ್ದ. ಶ್ರೀರಾಮಕೃಷ್ಣರು ಎಷ್ಟೋ ಬಾರಿ ಅಲ್ಲಿಗೆ ಹೋಗಿ ಹಲವು ಗಂಟೆಗಳ ಕಾಲವನ್ನು ಆನಂದದಿಂದ ಕಳೆದು ಬರುತ್ತಿದ್ದರು.

ಇನ್ನು ಕೆಲವೊಮ್ಮೆ ಕೇಶವನು ತನ್ನ ಆಪ್ತ ಸ್ನೇಹಿತರನ್ನು ಜೊತೆ ಮಾಡಿಕೊಂಡು, ಬಾಡಿಗೆಗೆ ತೆಗೆದುಕೊಂಡ ಉಗಿಹಡಿಗಿನಲ್ಲಿ ಶ್ರೀರಾಮಕೃಷ್ಣರೊಂದಿಗೆ ಗಂಗಾನದಿಯಲ್ಲಿ ವಿಹರಿಸುವುದಿತ್ತು.

ಶ್ರೀರಾಮಕೃಷ್ಣರಿಂದ ತಾನು ಕಲಿತ ಪಾಠವನ್ನು, ಕಂಡುಕೊಂಡ ಸತ್ಯಗಳನ್ನು ಇತರರಿಗೂ ತಿಳಿಸಲು ಕೇಶವ ಉತ್ಸುಕನಾದ. ಅವರ ಕುರಿತಾಗಿ ತನ್ನ ಸಂಸ್ಥೆಯ ವೇದಿಕೆಯ ಮೇಲೆ ಮಾತನಾಡಿದ. ತಾನೇ ನಡೆಸುತ್ತಿದ್ದ 'ಇಂಡಿಯನ್ ಮಿರರ್' ಮುಂತಾದ ಪತ್ರಿಕೆಗಳಲ್ಲಿ ಅವರ ಸಂದೇಶಗಳನ್ನು ಬಿತ್ತರಿಸಿದ; ಅವರನ್ನು ಮುಕ್ತಕಂಠದಿಂದ ಕೊಂಡಾಡಿದ. ಬ್ರಾಹ್ಮಸಮಾಜದ ತತ್ತ್ವ-ಧೋರಣೆಗಳನ್ನು ಇನ್ನಷ್ಟು ವಿಶಾಲ ದೃಷ್ಟಿಕೋನದ ಆಧಾರದ ಮೇಲೆ ಪುನರ್ರೂಪಿಸಲು ಯತ್ನಿಸಿದ.

ಶ್ರೀರಾಮಕೃಷ್ಣರ ಜೀವಿತಾವಧಿಯಲ್ಲೇ ಅವರ ಹೆಸರು ಬಂಗಾಳದಲ್ಲಿ ಮನೆ ಮಾತಾಗುವಂತಾದುದು ಕೇಶವ ಸೇನನ ಪ್ರಚಾರದಿಂದಲೇ ಎಂಬುದು ನಿಸ್ಸಂಶಯ.

ಒಂದು ದಿನ ಶ್ರೀರಾಮಕೃಷ್ಣರು ಮಾತಿನ ಸಂದರ್ಭದಲ್ಲಿ ಕೇಶವನಿಗೆ ಹೇಳಿದರು:

"ಒಬ್ಬನು ಬ್ರಹ್ಮದ ಅಸ್ತಿತ್ವವನ್ನು ಒಪ್ಪಿಕೊಂಡರೆ, ಅದರ ಶಕ್ತಿಯನ್ನೂ ಒಪ್ಪಿಕೊಳ್ಳಬೇಕು. ಏಕೆಂದರೆ ಬ್ರಹ್ಮ, ಅದರ ಶಕ್ತಿ—ಇವೆರಡೂ ಒಂದೇ. ಅವು ಅವಿನಾಭಾವದಿಂದ ಪರಸ್ಪರ ಸೇರಿಕೊಂಡಿರುವಂಥವು. ಇದು ಹೇಗೆಂದರೆ, ಬೆಂಕಿ ಮತ್ತು ಅದರ ಸುಡುವ ಗುಣದಂತೆ; ಎರಡೂ ಸತ್ಯ."

ಕೇಶವ ಆಲೋಚಿಸಿದ. ಕಡೆಗೆ, "ನೀವೆನ್ನುವುದು ನಿಜ" ಎಂದು ಒಪ್ಪಿಕೊಂಡ.

ಬಳಿಕ ಶ್ರೀರಾಮಕೃಷ್ಣರು ಮತ್ತೊಂದು ವಿಚಾರವನ್ನೆತ್ತಿಕೊಂಡು ವಿವರಿಸಿದರು:

"ಹಾಗೆಯೇ, ಭಗವಂತ ಬೇರೆಯಲ್ಲ, ಅವನ ಮಾತುಗಳೇ ಆದ ಶಾಸ್ತ್ರಗಳು ಬೇರೆಯಲ್ಲ. ಮತ್ತು ಭಗವಂತನೂ ಆತನ ಭಕ್ತನೂ ಬೇರೆಬೇರೆಯಲ್ಲ. ಆದ್ದರಿಂದ 'ಭಾಗವತ-ಭಕ್ತ-ಭಗವಾನ್' ಇವು ಮೂರೂ ಒಂದೇ ವಸ್ತು; ಪರಸ್ಪರ ಅಭೇದ."

ಕೇಶವನಿಗೆ ಈ ಮಾತೂ ಒಪ್ಪಿಗೆಯಾಯಿತು. ಈಗ ಶ್ರೀರಾಮಕೃಷ್ಣರೆಂದರು:

"ಅಷ್ಟು ಮಾತ್ರವಲ್ಲ; ಗುರು-ದೇವರು-ಭಕ್ತ—ಈ ಮೂವರೂ ಬೇರೆಬೇರೆಯಲ್ಲ, ಒಂದೇ."

ಈಗ ಮಾತ್ರ ಕೇಶವನಿಗೆ ತಳಮಳವಾಯಿತು! ಅಷ್ಟೊಂದು ಹೊಸ ವಿಚಾರಗಳಿಗೆ ಅವನ ತಲೆಯಲ್ಲಿ ಒಮ್ಮೆಗೇ ಅವಕಾಶವಿರಲಿಲ್ಲ. ಅವನು ಕೈಜೋಡಿಸಿ ನುಡಿದ:

"ಸ್ವಾಮಿ, ಈಗ ನನ್ನ ಬುದ್ಧಿ ಇನ್ನಾವುದನ್ನೂ ಒಪ್ಪುವ ಸ್ಥಿತಿಯಲ್ಲಿಲ್ಲ. ಆದ್ದರಿಂದ ಈ ವಿಷಯವನ್ನು ಇಂದು ಇಲ್ಲಿಗೇ ನಿಲ್ಲಿಸೋಣ."

ಶ್ರೀರಾಮಕೃಷ್ಣರು: "ಆಯಿತು ಬಿಡು, ಇದನ್ನು ಇಲ್ಲಿಗೇ ನಿಲ್ಲಿಸೋಣ!"

ಕೇಶವಸೇನನು ಪ್ರಚಂಡ ವಾಗ್ಮಿಯೆಂದು ವಿಖ್ಯಾತನಾಗಿದ್ದವನು. ಅವನ ಉಪನ್ಯಾಸಗಳಿಗೆ, ಪ್ರವಚನಗಳಿಗೆ ಯಾವಾಗಲೂ ಜನ ಕಿಕ್ಕಿರಿದೇ ಇರುತ್ತಿದ್ದರು. ಅಂಥವನು ಕೂಡ ಶ್ರೀರಾಮಕೃಷ್ಣರ ಸಮ್ಮುಖದಲ್ಲಿದ್ದಾಗ ಹೆಚ್ಚಾಗಿ ಮೌನವನ್ನೇ ಅವಲಂಬಿಸಿರುತ್ತಿದ್ದ. ಅಲ್ಲಿ ಅವನ ಕೆಲಸವೇನಿದ್ದರೂ ಆಲಿಸುವುದಷ್ಟೇ! ಅವರ ಅಮೃತೋಪಮ ವಾಗ್ಧಾರೆಯನ್ನು ಹೃದಯಕಲಶದಲ್ಲಿ ತುಂಬಿಕೊಂಡು ಹೋಗುವುದು. ಅವನ ವಿನೀತ ವರ್ತನೆಯನ್ನು ಕಂಡು ಅವರೊಮ್ಮೆ ವಿನೋದದಿಂದ ಹೇಳಿದರು:

"ಕೇಶವ, ನೀನು ನಿನ್ನ 'ಲೆಕ್ಚರು'ಗಳಿಂದ ಅಷ್ಟೊಂದು ಜನರನ್ನು ಸಂತೋಷಪಡಿಸುತ್ತೀಯೆ. ಎಲ್ಲಿ, ನನ್ನ ಮುಂದೆಯೂ ಅಂಥದೊಂದು 'ಲೆಕ್ಚರು' ಮಾಡು ನೋಡೋಣ. ಅದನ್ನು ಕೇಳಬೇಕು ಅಂತ ನನಗೆ ತುಂಬ ಆಸೆಯಾಗಿದೆ."

"ಮಹಾಶಯರೇ, ಇದೊಳ್ಳೇ ಚೆನ್ನಾಯಿತು! ಬೆಟ್ಟಕ್ಕೆ ಕಲ್ಲು ಹೊರುವ ಕೆಲಸ ಮಾಡಲೆ ನಾನು? ನಿಜವಾಗಿ ನೋಡಿದರೆ, ನಾನು ನಿಮ್ಮ ಮಾತುಗಳನ್ನು ಆಲಿಸಬೇಕು. ನನ್ನ ಉಪನ್ಯಾಸದಲ್ಲಿ ನಿಮ್ಮ ಮಾತುಗಳನ್ನು ಸೇರಿಸಿ ವಿವರಿಸಿದಾಗ ಜನ ಬಹಳವಾಗಿ ಮೆಚ್ಚಿಕೊಳ್ಳುವುದು ನಿಮ್ಮ ಮಾತುಗಳನ್ನೇ, ಗೊತ್ತೆ!"

## 'ಬ್ರಹ್ಮಜ್ಞಾನಿ'ಗಳಿಗೆ ಬುದ್ಧಿವಾದ* ೪೯

೧೮೭೮ನೆಯ ಇಸವಿಯಲ್ಲಿ ಕೇಶವಸೇನನ ವ್ಯಕ್ತಿತ್ವಕ್ಕೂ ಸಂಸ್ಥೆಗೂ ವಿಘಾತಕವಾಗಿ ಪರಿಣಮಿಸಿದ ಘಟನೆಯೊಂದು ನಡೆಯಿತು. ಅದು ಕೂಚ್‌ಬಿಹಾರ್ ಸಂಸ್ಥಾನದ ರಾಜನೊಂದಿಗೆ ಕೇಶವನ ಮಗಳ ವಿವಾಹದ ಪ್ರಕರಣ. ಈ ಸಂಬಂಧ ಕೂಡಿಬಂದುದು ಆಂಗ್ಲ ಸರ್ಕಾರದ ಮಧ್ಯಸ್ಥಿಕೆಯಿಂದ. ಮತ್ತು ಅದರಲ್ಲಿ ಸರ್ಕಾರದ ಸ್ವಾರ್ಥೋದ್ದೇಶಗಳೂ ಕೆಲವಿದ್ದುವು. ಮೊದಲಿಗೆ ಕೇಶವನೂ ಈ ವಿವಾಹಕ್ಕೆ ಸಮ್ಮತಿಸಲು ಬಹುವಾಗಿ ಹಿಂದೇಟು ಹಾಕಿದ. ಏಕೆಂದರೆ ಮೊದಲನೆಯದಾಗಿ, ಅವನೇ ಪ್ರಾರಂಭಿಸಿದ್ದ ಚಳುವಳಿಯ ಪರಿಣಾಮವಾಗಿ ದೇಶದಲ್ಲಿ ವಧೂವರರ ಕನಿಷ್ಠ ವಯೋಮಾನವನ್ನು ನಿಯಂತ್ರಿಸುವ ಕಾಯಿದೆ ಜಾರಿಗೆ ಬಂದಿತ್ತು. ಅದರ ಪ್ರಕಾರ ವಧೂವರರಿಗೆ ಕ್ರಮವಾಗಿ ಹದಿನಾಲ್ಕು ಮತ್ತು ಹದಿನೆಂಟು ವರ್ಷಗಳಾಗಬೇಕಿತ್ತು. ಆದರೆ ಈ ಸಂದರ್ಭದಲ್ಲಿ ವಧೂವರರಿಬ್ಬರೂ ಆ ವಯೋಮಿತಿಯನ್ನು ತಲುಪಿರಲಿಲ್ಲ! ಅಲ್ಲದೆ ಬ್ರಾಹ್ಮೋಗಳು ಬ್ರಾಹ್ಮೋಗಳೊಂದಿಗೆ ಮಾತ್ರ ವಿವಾಹವಾಗಬಹುದಾಗಿತ್ತು. ಕೂಚ್‌ಬಿಹಾರದ ರಾಜ ಬ್ರಾಹ್ಮೋ ಅಲ್ಲ. ಹೀಗಿರುವಾಗ ಬ್ರಾಹ್ಮಸಮಾಜದ ಧುರೀಣನೇ ನಿಯಮಗಳನ್ನು ಮುರಿದರೆ? ಕಡೆಗೆ ಎಲ್ಲ ವಿಷಯಗಳಲ್ಲೂ ಹೇಗೋ ಒಂದು ಹೊಂದಾಣಿಕೆಯಾಯಿತು. ರಾಜ ತನ್ನನ್ನು ಬ್ರಾಹ್ಮೊ ಎಂದು ಘೋಷಿಸಿಕೊಳ್ಳುವುದು ಮತ್ತು ಸದ್ಯಕ್ಕೆ 'ಕೊಟ್ಟು-ತಂದು' ಮಾಡುವ ಶಾಸ್ತ್ರವನ್ನು ಮುಗಿಸಿ ಮುಂದೆ ವಿಧಿಯುಕ್ತ ವಿವಾಹ ಮಾಡುವುದು ಎಂದು ಒಪ್ಪಂದವಾಯಿತು. ತನ್ನ ಮಗಳ ಹಿತದೃಷ್ಟಿಯಿಂದಲೂ, ಬ್ರಾಹ್ಮಸಮಾಜಕ್ಕೆ ಒಂದು ಸಂಸ್ಥಾನದ ಬೆಂಬಲ ಸಿಗುವುದೆಂಬ ಆಶಯದಿಂದಲೂ ಕೇಶವ ಈ ವಿವಾಹಕ್ಕೆ ಒಪ್ಪಿಬಿಟ್ಟ.

ಆದರೆ ಇದರ ಪರಿಣಾಮ ಮಾತ್ರ ವಿಪರೀತವಾಯಿತು. ಸಮಾಜದ ಒಂದು ದೊಡ್ಡ ಗುಂಪು ಕೇಶವನಿಗೆ ವಿರುದ್ಧವಾಗಿ ಸಿಡಿದು ನಿಂತಿತು. ಅವನನ್ನು ಸಮಯಸಾಧಕನೆಂದೂ ಆಷಾಢಭೂತಿಯೆಂದೂ ನಿಂದಿಸಿತು. ಇದು ಸಾಲದೆಂಬಂತೆ ವಿವಾಹವೂ ಕೂಡ ಕೇಶವನ ಇಚ್ಛೆಗೂ ಬ್ರಾಹ್ಮಸಮಾಜದ ನಿಯಮಗಳಿಗೂ ಸಂಪೂರ್ಣ ವಿರುದ್ಧ ರೀತಿಯಲ್ಲಿ ನಡೆದುಹೋಯಿತು. ಪರಿಸ್ಥಿತಿಯ ತೀವ್ರ ಒತ್ತಡಕ್ಕೆ ಸಿಲುಕಿದ ಕೇಶವನಿಗೆ ಅದರಿಂದ ಬಿಡಿಸಿಕೊಳ್ಳುವ ಮಾರ್ಗ ತೋರಲಿಲ್ಲ. ಈ ಸಂದರ್ಭದಲ್ಲಿ ಅವನ ಕೆಲವು ಆಪ್ತ ಸ್ನೇಹಿತರೂ ಸೇರಿದಂತೆ ಸಮಾಜದ ಪ್ರಮುಖರನೇಕರು 'ಭಾರತವರ್ಷೀಯ ಬ್ರಾಹ್ಮಸಮಾಜ'ದಿಂದ ಬೇರ್ಪಟ್ಟು 'ಸಾಧಾರಣ ಬ್ರಾಹ್ಮಸಮಾಜ'ವೆಂಬ ಸಂಘವನ್ನು ಕಟ್ಟಿಕೊಂಡರು.

ಬ್ರಾಹ್ಮಸಮಾಜದಲ್ಲಿ ತಲೆದೋರಿದ ಈ ಒಡಕನ್ನು ಕಂಡು ಶ್ರೀರಾಮಕೃಷ್ಣರು ಬಹಳ ಖಿನ್ನರಾದರು. ಯಾವುದೋ ಸಣ್ಣ ವಿಚಾರಕ್ಕಾಗಿ ಇಂಥ ಸಂಘ ಒಡೆಯು

*ಶ್ರೀರಾಮಕೃಷ್ಣರು ಬ್ರಾಹ್ಮಸಮಾಜೀಯರನ್ನು 'ಆಧುನಿಕ ಬ್ರಹ್ಮಜ್ಞಾನಿಗಳು' ಎಂದು ಕರೆಯುತ್ತಿದ್ದರು. ಆದರೆ ಅವರು ಹಾಗೆ ಕರೆಯುತ್ತಿದ್ದುದು ಹಾಸ್ಯಕ್ಕಾಗಲಿ ವ್ಯಂಗ್ಯಾರ್ಥದಲ್ಲಾಗಲಿ ಅಲ್ಲ.

ವಂತಾದುದು ಅವರಿಗೆ ದುಃಖ ತಂದಿತು. ಮೊದಲನೆಯದಾಗಿ, ವಿವಾಹದ ವಯೋಮಿತಿಯು ಕಾಯಿದೆಯನ್ನು ತರಲು ಕೇಶವನು ನಡೆಸಿದ ಪ್ರಚಾರವನ್ನೇ ಅವರೆಂದೂ ಸರಿಯೆಂದು ಒಪ್ಪಿದವರಲ್ಲ. "ಜನನ ಮರಣ ವಿವಾಹ—ಇವೆಲ್ಲ ಭಗವದಿಚ್ಛೆಯಂತೆ ನಡೆಯುವ ವ್ಯಾಪಾರಗಳು. ಇವುಗಳ ವಿಚಾರದಲ್ಲಿ ನಾವು ಕಟ್ಟುನಿಟ್ಟಿನ ನಿಯಮಗಳನ್ನು ಮಾಡಲಾಗದು. ಕೇಶವನು ಹೀಗೆಲ್ಲ ಮಾಡಲು ಹೋಗುವುದೇತಕ್ಕೆ?" ಎನ್ನುತ್ತಿದ್ದರು ಅವರು. ಈಗ 'ಕೂಚ್‌ಬಿಹಾರ್ ವಿವಾಹ'ದ ಪ್ರಸಂಗದಲ್ಲಿ ಅವರು ಕೇಶವನು ಮಾಡಿದ್ದೇ ಸರಿಯೆಂದು ಸಮರ್ಥಿಸಿದರು. ತಮ್ಮ ಸಮ್ಮುಖದಲ್ಲಿ ಯಾರಾದರೂ ಆ ವಿಷಯವನ್ನೆತ್ತಿ ಕೇಶವನನ್ನು ಟೀಕಿಸಿದರೆ ಅವರೆನ್ನುತ್ತಿದ್ದರು: "ಏಕೆ, ಕೇಶವ ಮಾಡಿದ್ದರಲ್ಲಿ ಅಂಥ ನಿಂದ್ಯವಾದದ್ದೇನಿದೆ? ಅವನೊಬ್ಬ ಗೃಹಸ್ಥನಲ್ಲವೆ? ತನ್ನ ಮಕ್ಕಳ ಹಿತವನ್ನು ಸಾಧಿಸಬೇಕಾದದ್ದು ಅವನ ಕರ್ತವ್ಯವಲ್ಲವೆ? ಮಕ್ಕಳಿಗೆ ಯಾವುದು ಶ್ರೇಯಸ್ಕರವೆಂಬುದು ತಂದೆಗೆ ಗೊತ್ತು. ಕೇಶವ ತನ್ನ ಗೃಹಸ್ಥಧರ್ಮವನ್ನು ಪಾಲಿಸಿದ್ದಾನಷ್ಟೇ."

ಆದರೆ ಈ ದೃಷ್ಟಿಕೋನದಿಂದ ನೋಡುವವರು ಹೆಚ್ಚು ಮಂದಿ ಇರಲಿಲ್ಲ, ವಿರೋಧದ ಸುಳಿಗಾಳಿಗೆ ಸಿಲುಕಿದ ಕೇಶವಸೇನ ಬಹಳಷ್ಟು ಕುಗ್ಗಿಹೋದ. ಆತ ಹೆಚ್ಚೆಚ್ಚು ಅಂತರ್ಮುಖಿಯಾಗತೊಡಗಿದ. ಮತ್ತಷ್ಟು ಶ್ರದ್ಧೆಯಿಂದ ಆಧ್ಯಾತ್ಮಿಕ ಸಾಧನೆಗಳತ್ತ ಗಮನವಿತ್ತ. ಶ್ರೀರಾಮಕೃಷ್ಣರ ಸಂಗ ಮತ್ತಷ್ಟು ಪ್ರಿಯವಾಯಿತು. ಹಿಂದಿನಿಂದಲೂ ಅವನು ಯಾವುದನ್ನು ಗೊಡ್ಡುನಂಬಿಕೆಗಳೆಂದು ಭಾವಿಸಿದ್ದನೋ ಅವುಗಳಲ್ಲಿ ಹೊಸ ಅರ್ಥ ಕಂಡಿತು. ಯಜ್ಞಯಾಗಗಳು, ಮುಂಡನ, ಕಾಷಾಯವಸ್ತ್ರಧಾರಣೆ—ಮುಂತಾದ ಬಾಹ್ಯ ವಿಧಿಗಳ ಮಹತ್ವ ಮನವರಿಕೆಯಾಯಿತು. ಅಷ್ಟೇ ಅಲ್ಲ, ತಾನೂ ಇಂಥ ಕೆಲವು ವಿಧಿಗಳನ್ನು ಅನುಸರಿಸತೊಡಗಿದ. ಪ್ರತಿಯೊಂದು ಧರ್ಮವೂ ಭಗವಂತನೆಡೆಗೆ ಸಾಗುವ ಒಂದೊಂದು ಮಾರ್ಗ ಎಂಬ ಶ್ರೀರಾಮಕೃಷ್ಣರ ಬೋಧನೆಯನ್ನು ಹೃದ್ಗತಗೊಳಿಸಿಕೊಂಡು ಅದಕ್ಕನುಸಾರ ನಡೆಯಲು ಶ್ರಮಿಸಿದ.

ಕೇಶವಸೇನನ ಮನೋಭಾವ-ಧೋರಣೆಗಳಲ್ಲುಂಟಾದ ಸುಧಾರಣೆಗಳ ಪ್ರಭಾವವು ಸಹಜವಾಗಿಯೇ ಅವನ ಸಂಸ್ಥೆಯಲ್ಲೂ ವ್ಯಕ್ತವಾಯಿತು. ತನ್ನ ಸಂಸ್ಥೆಯನ್ನು ಅವನು 'ನವವಿಧಾನ' ಎಂದು ಕರೆದ. ಆದಾಗಲೇ ಎರಡು ವರ್ಷಗಳಿಂದ ಅವನು 'ನವವಿಧಾನ'ವೆಂಬ ಹೆಸರಿನ ಪತ್ರಿಕೆಯೊಂದನ್ನು ನಡೆಸಿಕೊಂಡುಬರುತ್ತಿದ್ದ. ಅದರಲ್ಲಿ ಶ್ರೀರಾಮಕೃಷ್ಣರ ಬೋಧನೆಗಳಿಗೆಂದೇ ಒಂದು ಪುಟವನ್ನು ಮೀಸಲಾಗಿರಿಸಿದ. "ಶ್ರೀರಾಮಕೃಷ್ಣರ ಉಪದೇಶವನ್ನು ನಾನು ಅರ್ಥ ಮಾಡಿಕೊಂಡ ರೀತಿಯಲ್ಲಿ ತಿಳಿಸುತ್ತಿದ್ದೇನೆ" ಎಂದು ವಿನಯದಿಂದ ಬರೆದ.

ದಿನದಿನಕ್ಕೂ ಶ್ರೀರಾಮಕೃಷ್ಣರ ಮೇಲಿನ ಕೇಶವನ ಅಭಿಮಾನ ಅಧಿಕತರವಾಯಿತು. ಯಾರನ್ನು ಅವನು ಹಿಂದಿನಿಂದಲೂ ಪರಮ ಭಕ್ತಿಯಿಂದ ತನ್ನ ಹೃದಯದಲ್ಲಿ ಸ್ಥಾಪಿಸಿಕೊಂಡಿದ್ದನೋ ಆ ಏಸುಕ್ರಿಸ್ತನನ್ನು ಶ್ರೀರಾಮಕೃಷ್ಣರು ಆರಾಧಿಸಿ ಒಲಿಸಿಕೊಂಡ ಬಗೆಯನ್ನು ತಿಳಿದ ಮೇಲಂತೂ ಅವನ ಆ ಅಭಿಮಾನ-ಆದರಕ್ಕೆ ಎಣೆಯಿಲ್ಲದಾಯಿತು. ಎಲ್ಲಕ್ಕಿಂತ ಹೆಚ್ಚಾಗಿ, ನುಡಿದಂತೆ ನಡೆದ ಮಹಾತ್ಮರು ಎಂದು ಅವರ ಉದಾಹರಣೆಯನ್ನು ಕೊಟ್ಟು ಪತ್ರಿಕೆಯಲ್ಲಿ ಪ್ರಶಂಸಿಸಿದ. ದಕ್ಷಿಣೇಶ್ವರಕ್ಕೆ ಹೋದಾಗಲೆಲ್ಲ, "ನವವಿಧಾನಕ್ಕೆ ಜಯವಾಗಲಿ! ರಾಮಕೃಷ್ಣಪಂಥಕ್ಕೆ ಜಯವಾಗಲಿ! ರಾಮಕೃಷ್ಣ ವಿಧಾಯಕಕ್ಕೆ ಜಯವಾಗಲಿ!" ಎಂದು ಘೋಷಿಸಿ ಉದ್ದಂಡ ನಮಸ್ಕಾರ ಮಾಡಿ

ಅವರ ಪಾದಧೂಳಿಯನ್ನು ಶಿರಸಾ ಧರಿಸುತ್ತಿದ್ದ. ಬ್ರಾಹ್ಮಸಮಾಜದ ಸಭೆ ನಡೆಯುತ್ತಿರುವಾಗ ಅವರು ಮಧ್ಯೆ ಆಗಮಿಸಿದರೆ, ತನ್ನ ಪ್ರವಚನವನ್ನು ಅಲ್ಲಿಗೇ ನಿಲ್ಲಿಸಿ, ಎದ್ದುಹೋಗಿ ಅವರಿಗೆ ನಮಿಸಿ ಬರಮಾಡಿಕೊಳ್ಳುತ್ತಿದ್ದ. ಒಮ್ಮೆ ಅವರನ್ನು ತನ್ನ ವಾಸಗೃಹಕ್ಕೆ ಕರೆದೊಯ್ದು ಅಲ್ಲಿ ತಾನು ಓದಿಕೊಳ್ಳುವ, ವಿಶ್ರಮಿಸುವ, ಧ್ಯಾನ ಮಾಡುವ ಸ್ಥಳಗಳೆಲ್ಲವನ್ನೂ ತೋರಿಸಿ, ಅವುಗಳನ್ನು ಪುನೀತಗೊಳಿಸುವಂತೆ, ಅವು ತನ್ನಲ್ಲಿ ಸಚ್ಚಿಂತನೆ-ಸದಾಲೋಚನೆಗಳನ್ನೇ ಸ್ಫುರಿಸಲೆಂದು ಹರಸುವಂತೆ ಬೇಡಿಕೊಂಡ. ಮತ್ತೊಂದು ದಿನ ಅವರನ್ನು ತನ್ನ ಪೂಜಾಗೃಹದಲ್ಲಿ ಕುಳ್ಳಿರಿಸಿ ಪುಷ್ಪಗಳಿಂದ ಪೂಜಿಸಿದ !

ಕೇಶವನ ನಾಯಕತ್ವದ 'ನವವಿಧಾನ' ಮಾತ್ರವಲ್ಲದೆ ಅವನಿಂದ ದೂರವಾದವರು ಕಟ್ಟಿಕೊಂಡ 'ಸಾಧಾರಣ ಬ್ರಾಹ್ಮಸಮಾಜ'ವೂ ಶ್ರೀರಾಮಕೃಷ್ಣರ ವಿಶ್ವಾಸಕ್ಕೆ ಪಾತ್ರವಾಗಿತ್ತು. ಈ ಎರಡು ಸಂಸ್ಥೆಗಳ ಮೇಲೂ ಅವರ ಪ್ರಭಾವ ಸುವ್ಯಕ್ತವಾಗಿತ್ತು. ಅವರು ನಿರ್ಭಿಡೆಯಿಂದ ಎರಡೂ ಸಂಘಗಳ ಕಲಾಪಗಳಲ್ಲಿ ಹಾಗೂ ಭಜನೆ-ಸಂಕೀರ್ತನೆಗಳಲ್ಲಿ ಭಾಗವಹಿಸುತ್ತಿದ್ದರು. ಆದ್ದರಿಂದ ಆ ಇರ್ವರೂ ಅವರನ್ನು ತಮ್ಮವರನ್ನಾಗಿಯೇ ಭಾವಿಸಿ ಅಭಿಮಾನ ಪಡುತ್ತಿದ್ದರು.

ಭಗವತ್ಸಾಕ್ಷಾತ್ಕಾರದ ಪ್ರತಿಯೊಂದು ದಾರಿಯ ಪ್ರತಿಯೊಂದು ಹೆಜ್ಜೆಯನ್ನೂ ಬಲ್ಲ ಶ್ರೀರಾಮಕೃಷ್ಣರು ಭಕ್ತರನ್ನು ಅವರವರಿಗೆ ಉಚಿತವಾದ ಮಾರ್ಗದಲ್ಲೇ ಮುನ್ನಡೆಯಲು ಪ್ರೋತ್ಸಾಹಿಸುತ್ತಿದ್ದರು. ಆದರೆ ಅವರಿಗೆ ಮನುಷ್ಯಸ್ವಭಾವ ತಿಳಿಯದ್ದೇನಲ್ಲ. ಅಲ್ಲದೆ ತಮ್ಮಿಂದ ಈ ಬ್ರಾಹ್ಮಸಮಾಜೀಯರು ಅತಿ ಹೆಚ್ಚಿನದೇನನ್ನೂ ಪಡೆದುಕೊಳ್ಳಲಾರರು ಎಂಬುದೂ ಅವರಿಗೆ ತಿಳಿದಿತ್ತು. ಆದ್ದರಿಂದ ಸಮಾಜದ ಸದಸ್ಯರನ್ನುದ್ದೇಶಿಸಿ ಮಾತನಾಡುವಾಗ ಅವರೆನ್ನುತ್ತಿದ್ದರು: "ನೋಡಿ, ನಾನು ನನಗೆ ಸರಿಯೆಂದು ತೋರಿದ್ದನ್ನೆಲ್ಲ ನಿಮ್ಮ ಮುಂದಿಟ್ಟಿದ್ದೇನೆ. ಅವೆಲ್ಲವನ್ನೂ ನೀವು ಕೇಳಬೇಕೆಂದೇನೂ ಇಲ್ಲ. ಅದರಲ್ಲಿ ನಿಮಗೆ ಬೇಕಾದ್ದನ್ನು, ನಿಮಗೆ ಸರಿಕಂಡದ್ದನ್ನು ಮಾತ್ರ ಸ್ವೀಕರಿಸಿದರೂ ಸಾಕು. ನನ್ನ ಮಾತುಗಳ ತಲೆ-ಬಾಲಗಳನ್ನು* ಬಿಟ್ಟು, ಏನಾದರೂ ಹುರುಳಿದ್ದರೆ ಅದನ್ನು ಮಾತ್ರ ಇಟ್ಟುಕೊಳ್ಳಿ."

ಶ್ರೀರಾಮಕೃಷ್ಣರು ಹೀಗೆ ವಿನಯವನ್ನು ವ್ಯಕ್ತಪಡಿಸಿದರೂ ತಮಗೆ ಹೇಳಬೇಕೆನ್ನಿಸಿದ್ದನ್ನು ಅವರು ನಿಸ್ಸಂಕೋಚವಾಗಿ ಹೇಳದೆ ಬಿಡುತ್ತಿರಲಿಲ್ಲ. ಬಹುವರ್ಷಗಳ ಅನಂತರ ಅವರೊಂದು ಘಟನೆಯನ್ನು ಬಣ್ಣಿಸುತ್ತ ಹೀಗೆಂದರು:

"ನಾನೊಮ್ಮೆ ಕೇಶವನ ಮನೆಗೆ ಪ್ರಾರ್ಥನಾಸಭೆಗೆಂದು ಹೋಗಿದ್ದೆ. ಪ್ರಾರ್ಥನೆಯಾದ ಮೇಲೆ ಪ್ರವಚನ. ಬಳಿಕ ಪ್ರವಚನಕಾರರು ಸ್ವಲ್ಪಹೊತ್ತು ಭಗವನ್ಮಹಿಮೆಯನ್ನು ಬಣ್ಣಿಸಿ ಕಡೆಗೆ, 'ಈಗ ನಾವು ಭಗವಂತನನ್ನು ಧ್ಯಾನಿಸೋಣ' ಎಂದರು. ಈ ಬ್ರಾಹ್ಮಸಮಾಜೀಯರು ಅದೆಷ್ಟು ಹೊತ್ತು ಧ್ಯಾನ ಮಾಡುವರೋ ನೋಡೋಣ ಎಂದು ನನಗೆ ಕುತೂಹಲ ಹುಟ್ಟಿತು. ಆದರೆ, ಆಹಾ ! ಕಣ್ಣನ್ನು ಮುಚ್ಚಿ ಎರಡು

---

*ಬಂಗಾಳದಲ್ಲಿ, ಒಂದು ಬಗೆಯ ಮೀನಿನ ತಲೆಯನ್ನೂ ಬಾಲವನ್ನೂ ಬಿಟ್ಟು ಉಳಿದ ಭಾಗವನ್ನಷ್ಟೇ ಅಡಿಗೆಗೆ ಉಪಯೋಗಿಸುವುದಿದೆ. ಇದರ ಆಧಾರದ ಮೇಲೆಯೇ 'ತಲೆ-ಬಾಲಗಳನ್ನು ಬಿಟ್ಟು' ಎಂಬ ನುಡಿಗಟ್ಟು ಅಲ್ಲಿ ರೂಢಿಗೆ ಬಂದಿದೆ.

ನಿಮಿಷವಾಗಿಲ್ಲ, ಆಗಲೇ ಬ್ರಹ್ಮದರ್ಶನವಾದ ತೃಪ್ತಿಯಿಂದ ಕಣ್ತೆರೆದುಬಿಟ್ಟರು! ಅವರ ಧ್ಯಾನಾವಧಿ ಅಷ್ಟು ಅಲ್ಪ! ಈ ಬಗೆಯ ಧ್ಯಾನಕ್ಕೆಲ್ಲ ಭಗವಂತ ಒಲಿದಾನೆಯೆ? ಅವರು ಧ್ಯಾನ ಮಾಡುತ್ತಿದ್ದಾಗ ನಾನು ಅವರ ಮುಖಗಳನ್ನೇ ಗಮನಿಸಿ ನೋಡಿದೆ. ಆಮೇಲೆ ಕೇಶವನಿಗೆ ಹೇಳಿದೆ: 'ಅಯ್ಯಾ, ನಿಮ್ಮಲ್ಲಿ ಕೆಲವರು ಧ್ಯಾನಮಗ್ನರಾಗಿರುವುದನ್ನು ನೋಡಿದೆನಪ್ಪ. ಅದನ್ನು ಕಂಡು ನನಗೇನು ನೆನಪಾಯಿತು ಗೊತ್ತೆ? ನಮ್ಮ ದಕ್ಷಿಣೇಶ್ವರದಲ್ಲಿ ಗುಂಪಾಗಿ ಹೊರಟ ಮಂಗಗಳು ಕೆಲವೊಮ್ಮೆ ಸುಮ್ಮನೆ ಗಂಭೀರವಾಗಿ ಕುಳಿತುಬಿಡುತ್ತವೆ—ಧ್ಯಾನ ಮಾಡುವವರಂತೆ. ಆದರೆ ಅವು ಹಾಗೆ ಧ್ಯಾನಿಸುವುದೇನನ್ನು ಬಲ್ಲೆಯಾ? ಯಾವ ಜಾಗದಲ್ಲಿ ಯಾವ ಹಣ್ಣು ಪಕ್ವವಾಗಿರಬಹುದು, ಇಂದು ಎಲ್ಲಿ ಯಾವ ತರಕಾರಿ ಸಿಗಬಹುದು—ಇಂಥದನ್ನೇ! ಹೀಗೆ ಸ್ವಲ್ಪ ಹೊತ್ತು ಕುಳಿತಿದ್ದು, ಇದ್ದಕ್ಕಿದ್ದಂತೆ ಅವು ಬಹಿರ್ಮುಖವಾಗುತ್ತವೆ. ಮತ್ತು ಕೂಗುತ್ತ ನೆಗೆಯುತ್ತ ಪಕ್ಕದ ತೋಟಕ್ಕೆ ಹೊರಟುಬಿಡುತ್ತವೆ. ಹಾಗಿತ್ತು ಅವರ ಧ್ಯಾನವೂ.' ನಾನು ಹೀಗೆ ವರ್ಣಿಸಿದ್ದನ್ನು ಕೇಳಿ ಅವರೆಲ್ಲ ನಕ್ಕರು."

ಪ್ರಾತಃಕಾಲ-ಸಾಯಂಕಾಲಗಳಲ್ಲಿ ಸ್ತೋತ್ರಪಠಣಾದಿಗಳನ್ನು ಮಾಡುವುದು ಬ್ರಾಹ್ಮಸಮಾಜೀಯರ ಸಂಪ್ರದಾಯ. ಆದರೆ ಸಾಧಕರಾದವರು ಸದಾ ಭಗವದ್ಭಾವದಲ್ಲೇ ಮುಳುಗಿರಬೇಕೆಂಬುದು ಶ್ರೀರಾಮಕೃಷ್ಣರ ನಿಶ್ಚಿತ ಅಭಿಮತ. ಹಾಗಿರುವಾಗ ಈ ಬಗೆಯ ಮೇಲುಮೇಲಿನ ಸಾಧನೆ ಅವರಿಗೆ ಮೆಚ್ಚುಗೆಯಾದೀತೆ? ಒಂದು ದಿನ ಅವರ ಶಿಷ್ಯಾಗ್ರಣಿಯಾದ ನರೇಂದ್ರನಾಥ ಅವರ ಸಮ್ಮುಖದಲ್ಲಿ ಬ್ರಾಹ್ಮಸಮಾಜದ ಹಾಡೊಂದನ್ನು ಹಾಡುತ್ತಿದ್ದ. ನರೇಂದ್ರ ಬ್ರಾಹ್ಮಸಮಾಜದ ಸದಸ್ಯ; ಅದರ ಕಟ್ಟಾ ಅಭಿಮಾನಿ. ಅವನು ಹಾಡುತ್ತಿದ್ದ ಹಾಡಿನ ಅರ್ಥ ಹೀಗಿತ್ತು: 'ಆ ನಿರಂಜನನಾದ ಪುರಾಣಪುರುಷನಲ್ಲಿ ನಿರಂತರವೂ ಚಿತ್ತವನ್ನು ಲೀನಗೊಳಿಸು; ನಿರಂತರವೂ ಭಗವಂತನ ಸಾಧನೆ-ಭಜನೆಗಳನ್ನು ಮಾಡು . . .'

ನರೇಂದ್ರ ತನ್ನ ಮಧುರಕಂಠದಿಂದ ಭಾವಪೂರ್ಣವಾಗಿ ಹಾಡಲಾರಂಭಿಸಿದ; ಆಗ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ ಉದ್ಗರಿಸಿದರು:

"ಹಾಗಲ್ಲ ಅದು, 'ಸಾಧನೆ-ಭಜನೆಗಳನ್ನು ದಿನಕ್ಕೆ ಎರಡು ಬಾರಿ ಮಾಡು' ಅಂತ ಹೇಳಬೇಕು. ಅದನ್ನು ಬಿಟ್ಟು 'ನಿರಂತರವೂ' ಅಂತ ಏಕೆ ಹೇಳುವೆ—ನೀನು ಹಾಗೆ ಮಾಡದಿದ್ದಮೇಲೆ!"

ಇದನ್ನು ಕೇಳಿ ಎಲ್ಲರೂ ಘೊಳ್ಳೆಂದು ನಕ್ಕರು. ನರೇಂದ್ರನಿಗೆ ಏನು ಹೇಳಲೂ ತೋಚದೆ ಸ್ವಲ್ಪ ಹೊತ್ತು ತಬ್ಬಿಬ್ಬಾಗಿ ಕುಳಿತ.

ಬ್ರಾಹ್ಮಸಮಾಜೀಯರು ಹೆಚ್ಚಾಗಿ ಹಾಡುತ್ತಿದ್ದುದು ಭಗವಂತನ ಮಹಿಮೆಯನ್ನು ಹಾಗೂ ಆತನ ಸೃಷ್ಟಿವೈಭವವನ್ನು ಬಣ್ಣಿಸುವ ಹಾಡುಗಳನ್ನು. ಇದರಲ್ಲಿ ಅಸಹಜತೆಯೇನೂ ಇಲ್ಲ ಅಥವಾ ತಪ್ಪೂ ಇಲ್ಲ. ಆದರೆ ಕೇವಲ ಈ ಬಗೆಯ ಗುಣಗಾನದಿಂದ ಪ್ರಯೋಜನವಿಲ್ಲವೆಂಬುದು ಶ್ರೀರಾಮಕೃಷ್ಣರ ಅಭಿಮತ. ಆದ್ದರಿಂದ ಅವರೊಮ್ಮೆ ಬ್ರಾಹ್ಮೊಗಳಿಗೆ ಹೇಳುತ್ತಾರೆ:

"ನೀವು ಭಗವಂತನ ನಾನಾ ಶಕ್ತಿ-ವಿಭೂತಿಗಳನ್ನು ಅಷ್ಟೊಂದು ಹಾಡಿ ಹೊಗಳುತ್ತೀರಲ್ಲ, ಅದೇಕೆ? ಮಗುವೊಂದು ತಂದೆಯ ಮಡಿಲಲ್ಲಿ ಕುಳಿತಾಗ, 'ನಮ್ಮಪ್ಪನ ಹತ್ತಿರ ಎಷ್ಟೊಂದು ಆಸ್ತಿಪಾಸ್ತಿಯಿದೆ! ಎಷ್ಟೊಂದು ಹಸುಕರುಗಳಿವೆ!' ಎಂದು

ಆಲೋಚಿಸುತ್ತದೆಯೆ ? ಅಥವಾ ಹಾಗೆ ಹೇಳಿ ಅವನನ್ನು ಹೊಗಳುತ್ತದೆಯೆ ? ಅದು ಅಪ್ಪನನ್ನು ಪ್ರೀತಿಸುತ್ತದೆ, ಹಾಗೆಯೇ ಅಪ್ಪ ತನ್ನನ್ನು ಪ್ರೀತಿಸಲಿ, ಮುದ್ದುಗೈಯಲಿ ಎಂದು ಆಸೆ ಪಡುತ್ತದೆ. ತಂದೆಯಾದವನು ತನ್ನ ಮಗುವಿಗೆ ಬೇಕಾದ ಅನ್ನ ಬಟ್ಟೆಗಳನ್ನು ಕೊಡುತ್ತಾನೆ. ಆದರೆ ಅದರಲ್ಲಿ ಅತಿಶಯವೇನಿದೆ ? ಆದ್ದರಿಂದ ನಾವು ಅವನಲ್ಲಿ, 'ನಮ್ಮ ಮೇಲೆ ಕರುಣೆದೋರು, ಕೃಪೆಮಾಡು' ಎಂದು ಗೋಗರೆಯಬೇಕಿಲ್ಲ. ನಿಜವಾದ ಭಕ್ತನು ತನ್ನ ಪ್ರೀತಿಯಿಂದ ಭಗವಂತನನ್ನು ತನ್ನವನನ್ನಾಗಿ ಮಾಡಿಕೊಂಡು, 'ನೀನು ನನ್ನ ಪ್ರಾರ್ಥನೆಯನ್ನು ಮನ್ನಿಸಲೇಬೇಕು, ನನಗೆ ದರ್ಶನ ನೀಡಲೇಬೇಕು' ಎಂದು ಮಗುವಿನಂತೆ ಹಟ ಹಿಡಿದು ಅವನನ್ನು ಗೆದ್ದುಕೊಳ್ಳುತ್ತಾನೆ. ಹಾಗಲ್ಲದೆ ನಾವು ಭಗವಂತನ ಮಹಿಮೆ-ವಿಭೂತಿಗಳನ್ನೇ ಕಂಡು ಬೆರಗುಗೊಂಡು ಆ ಕುರಿತಾಗಿಯೇ ಆಲೋಚಿಸುತ್ತಿದ್ದರೆ ಅವನನ್ನು ನಮ್ಮವನನ್ನಾಗಿ ಮಾಡಿಕೊಳ್ಳಲಾಗುವುದಿಲ್ಲ. 'ಅಬ್ಬಾ ! ಅವನೆಷ್ಟು ದೊಡ್ಡವನು ! ನನ್ನಿಂದ ಎಷ್ಟು ದೂರದಲ್ಲಿದ್ದಾನೋ ?' ಎಂಬ ಭಾವನೆ ಹುಟ್ಟುತ್ತದೆ. 'ಅವನು ನನ್ನವನೇ' ಎಂದು ಭಾವಿಸಿ; ಆಗ ಅವನನ್ನು ಪಡೆಯಬಹುದು."

ಶ್ರೀರಾಮಕೃಷ್ಣರ ಸಂಪರ್ಕದಿಂದಾಗಿ ಬ್ರಾಹ್ಮೋಗಳ ದೃಷ್ಟಿಕೋನದಲ್ಲಿ ಮಹತ್ತರ ಬದಲಾವಣೆಯಾಯಿತು. ಸಾಕಾರಮೂರ್ತಿಯ ಪೂಜೆಯೆಂದರೆ ಹಿಂದೆ ಬ್ರಾಹ್ಮೋಗಳು ಉರಿದುಬೀಳುತ್ತಿದ್ದರು. ಅದು ಹಿಂದೂಧರ್ಮಕ್ಕೊಂದು ದೊಡ್ಡ ಪಿಡುಗು ಎಂದೇ ಅವರು ನಂಬಿದ್ದರು. ಮತ್ತು 'ವಿಗ್ರಹಾರಾಧನೆ'ಯೆಂದರೆ ಪಾಪವೆಂದು ಭಾವಿಸಿದ್ದರು. ಅಂತಹ ಪ್ರಬಲ ಜನಾಭಿಪ್ರಾಯವನ್ನು ಶ್ರೀರಾಮಕೃಷ್ಣರು ತಮ್ಮ ಸರಳ ದೃಷ್ಟಾಂತವೊಂದರಿಂದಲೇ ತಳ್ಳಿಹಾಕಿದರು: "ನೋಡಿ, ನೀರಿಗೆ ಆಕಾರವಿಲ್ಲವೆಂಬುದು ನಿಜ. ಆದರೆ ಅದು ಹೆಪ್ಪುಗಟ್ಟಿ ಮಂಜುಗಡ್ಡೆಯಾದಾಗ ಅದಕ್ಕೊಂದು ನಿರ್ದಿಷ್ಟ ರೂಪ ಉಂಟಾಗುವುದಿಲ್ಲವೆ ? ಪುನಃ ಅದೇ ಮಂಜು ಮತ್ತೆ ಕರಗಿ ನೀರಾಗುವುದಿಲ್ಲವೆ ? ಹಾಗೆಯೇ ನಿರಾಕಾರವಾದ ಬ್ರಹ್ಮವು, ಸಾಧಕನ ಇಚ್ಛಾನುಸಾರ ನಾನಾ ರೂಪಗಳನ್ನು ಧರಿಸುತ್ತದೆ. ಆಟದ ಹಣ್ಣು ನಮ್ಮ ಮನಸ್ಸಿಗೆ ನಿಜವಾದ ಹಣ್ಣನ್ನೇ ನೆನಪಿಸಿಕೊಡುವಂತೆ ಅಥವಾ ವ್ಯಕ್ತಿಯ ಭಾವಚಿತ್ರವೊಂದು ಅವನ ನೆನಪು ತಂದುಕೊಡುವಂತೆ, ವಿಗ್ರಹಗಳು ಅಥವಾ ಚಿತ್ರಗಳು ಭಕ್ತನಿಗೆ ಭಗವಂತನ ನಿಜಸ್ವರೂಪವನ್ನೇ ಕಾಣಲು ನೆರವಾಗುತ್ತವೆ."

'ದೇವರಿಗೆ ಯಾವುದೇ ರೂಪವಿಲ್ಲ, ಆತ ನಿರಾಕಾರ' ಎಂದು ಹೇಳುವವರು ಇರುವಂತೆಯೇ 'ದೇವರು ನಿರಾಕಾರನಲ್ಲ, ಅವನು ಸಾಕಾರ. ಅಷ್ಟೇ ಅಲ್ಲ, ಅವನು ಒಂದು ನಿರ್ದಿಷ್ಟ ಆಕಾರದಿಂದ ಮಾತ್ರ ಇರುತ್ತಾನೆ' ಎಂದು ಅಷ್ಟೇ ಪ್ರಬಲವಾಗಿ ವಾದಿಸುವವರೂ ಇರುತ್ತಾರೆ. ಶ್ರೀರಾಮಕೃಷ್ಣರು ಎರಡೂ ಬಗೆಯ ಅತಿರೇಕವನ್ನು ಖಂಡಿಸಿದರು: "'ದೇವರ ಬಗ್ಗೆ ನಾನು ಎಲ್ಲವನ್ನೂ ತಿಳಿದುಕೊಂಡುಬಿಟ್ಟಿದ್ದೇನೆ' ಎಂದು ಹೇಳಿ ಯಾರೂ ಆತನನ್ನು ಸೀಮಿತಗೊಳಿಸಲಾಗದು. ಅವನಿಗೆ ಆಕಾರವಿರುವುದೂ ನಿಜ, ಇಲ್ಲದಿರುವುದೂ ನಿಜ. ಮತ್ತು ಈ ಸಾಕಾರ-ನಿರಾಕಾರಗಳೇ ಅಲ್ಲದೆ ಅವನು ಮತ್ತಿನ್ನೇನಾಗಿರುವನೋ ಬಲ್ಲವರಾರು !"

ಬ್ರಾಹ್ಮಸಮಾಜೀಯರ ಸಂಪರ್ಕದಿಂದ ಶ್ರೀರಾಮಕೃಷ್ಣರಿಗೂ ಒಂದು ಲಾಭವಾಯಿತು. ಹಳ್ಳಿಯಲ್ಲೇ ಹುಟ್ಟಿಬೆಳೆದ ಅವರಿಗೆ ನಗರಜೀವನದ ವೈಚಿತ್ರ್ಯಗಳ ಪರಿಚಯ

ವಿರಲಿಲ್ಲ. ಪಾಶ್ಚಾತ್ಯ ಆಡಳಿತದ ಪ್ರಭಾವಕ್ಕೊಳಗಾದ ನೂತನ ಸಂಸ್ಕೃತಿಯನ್ನು ಕಾಣುವ ಅವಕಾಶ ಅವರಿಗಿರಲಿಲ್ಲ. ತಮ್ಮ ತಾರುಣ್ಯದಲ್ಲಿ ಅವರು ಕಲ್ಕತ್ತಕ್ಕೆ ಸಮೀಪವೇ ಬಂದು ನೆಲಸಿದರೂ, ಸಾಧನೆಗಳ ಚಂಡಮಾರುತದಲ್ಲಿ ಸಿಲುಕಿ ದೇಶಕಾಲಗಳ ಪರಿವೆಯೇ ಅವರಿಗಿಲ್ಲವಾಗಿತ್ತು. ಇದೀಗ ಬ್ರಾಹ್ಮಸಮಾಜದ ಸಂಪರ್ಕಕ್ಕೆ ಬಂದಾಗ ಅವರಿಗೆ ನೂತನ ಸುಶಿಕ್ಷಿತ ಯುವಜನಾಂಗದ ರೀತಿನೀತಿಗಳ ಸ್ಪಷ್ಟ ಪರಿಚಯವಾಯಿತು. ಜನತೆಯ ಆಲೋಚನಾ ಲಹರಿ ಯಾವ ದಿಕ್ಕಿನಲ್ಲಿ ಹರಿಯುತ್ತಿದೆಯೆಂಬುದನ್ನು ಅವರು ಕಂಡುಕೊಂಡರು. ಆಧುನಿಕ ಭಾರತೀಯರು ತಮ್ಮ ಸನಾತನ ಋಷಿಗಳಿಗಿಂತ, ಉಪನಿಷತ್ತುಗಳಿಗಿಂತ ಪಾಶ್ಚಾತ್ಯ ಚಿಂತಕರ ವಿಚಾರಗಳಲ್ಲಿ ಹೆಚ್ಚು ವಿಶ್ವಾಸವನ್ನೂ ಆದರವನ್ನೂ ತೋರಲಾರಂಭಿಸಿರುವುದನ್ನು ಅರಿತರು. ಯೋಗ-ಭೋಗಗಳ ಸಮ್ಮಿಶ್ರಣದ ಹೊಸ ತತ್ತ್ವವೊಂದು ಜನಪ್ರಿಯವಾಗುತ್ತಿರುವುದನ್ನು ಕಂಡು ಬೆರಗಾದರು. ಆದರೂ ಇವೆಲ್ಲ ಭಗವದಿಚ್ಛೆಯೆಂದು ತಿಳಿದು, ಅವರು ಧೃತಿಗೆಡಲಿಲ್ಲ. ಮತ್ತು ಈ ಹಿನ್ನೆಲೆಯಲ್ಲಿ ತಾವು ನೀಡಬೇಕಾದ ಸಂದೇಶವೇನೆಂಬುದು ಅವರೊಳಗೆ ಸ್ಫುರಿಸಿತು. ಈ ಯುಗದ ಅಗತ್ಯಕ್ಕನುಗುಣವಾಗಿ ಸರ್ವಧರ್ಮ ಸಮನ್ವಯದ, ಕಾಮಕಾಂಚನತ್ಯಾಗದ, ಪರಿಶುದ್ಧ ಪ್ರೇಮದ, ಪರಿಶುದ್ಧ ಆನಂದದ, ಭಗವತ್ಸಾಕ್ಷಾತ್ಕಾರದ ದಿವ್ಯ ಸಂದೇಶಗಳನ್ನು ಸ್ವಯಂ ತಮ್ಮ ಜೀವನ-ವ್ಯಕ್ತಿತ್ವಗಳ ಬೆಳಕಿನಲ್ಲಿ ಸಕಲ ಜಗತ್ತಿಗೆ ಸಾರಬೇಕೆಂಬ ಇಚ್ಛೆಯುದಿಸಿತು ಅವರಲ್ಲಿ.

ಶ್ರೀರಾಮಕೃಷ್ಣರ ಪ್ರಭಾಜಾಲಕ್ಕೆ ಸಿಲುಕಿ ಅವರಿಂದ ತಮ್ಮ ಜೀವನಗತಿಯನ್ನೇ ಮಾರ್ಪಡಿಸಿಕೊಂಡ ಆಧುನಿಕರ ಪೈಕಿ ಬ್ರಾಹ್ಮಸಮಾಜೀಯರೇ ಮೊದಲಿಗರೆನ್ನ ಬಹುದು. ಇವರಲ್ಲಿ ಕೇಶವಸೇನನಲ್ಲದೆ, ಹೆಸರಿಸಬಹುದಾದ ಪ್ರಮುಖರು ಅನೇಕರು.

ಇಂಥವರಲ್ಲಿ ಅಗ್ರಗಣ್ಯನಾದವನು ವಿಜಯಕೃಷ್ಣ ಗೋಸ್ವಾಮಿ.

ಇವನು ಶ್ರೀಚೈತನ್ಯದೇವನ ಸಂಗಡಿಗನಾದ ಅದ್ವೈತಗೋಸ್ವಾಮಿಯ ವಂಶಸ್ಥ. ಸಂಪ್ರದಾಯಸ್ಥ ಪರಿಸರದಲ್ಲೇ ಬೆಳೆದ ಇವನಿಗೆ ಮೊದಲಿನಿಂದಲೇ ಆಧ್ಯಾತ್ಮಿಕ ಜೀವನ ದಲ್ಲಿ ಒಲವುಂಟಾಯಿತು. ಆ ಕಾಲದ ಹಲವಾರು ಜಿಜ್ಞಾಸುಗಳಂತೆ ಇವನು ದೇವೇಂದ್ರ ನಾಥ ಟಾಗೋರರ ಸಂಪರ್ಕಕ್ಕೆ ಬಂದ. ಅನಂತರ ಕೇಶವಸೇನನಿಂದ ಬಹುವಾಗಿ ಆಕ ರ್ಷಿತನಾಗಿ ಬ್ರಾಹ್ಮಸಮಾಜದೊಂದಿಗೆ ನಿಕಟ ಸಂಪರ್ಕವನ್ನು ಬೆಳೆಸಿಕೊಂಡ. ಇದರ ಪರಿಣಾಮವಾಗಿ ತನ್ನ ಬ್ರಾಹ್ಮಣ್ಯದ ಹೆಮ್ಮೆಯನ್ನೂ ಸಮಾಜಸ್ಥರ ಮನ್ನಣೆಯನ್ನೂ ತ್ಯಜಿಸಬೇಕಾಯಿತು. ಆದರೂ ಸತ್ಯಾನ್ವೇಷಣೆಯ ಒಂದೇ ಹಂಬಲದಿಂದ ಇತರೆಲ್ಲ ಆಮಿಷಗಳನ್ನೂ ಬದಿಗೊತ್ತಿ ಬಂದು ಬ್ರಾಹ್ಮಸಮಾಜದ ಕಟ್ಟಾ ಸದಸ್ಯರಲ್ಲೊಬ್ಬನಾದ. ಆದರೆ ಕೂಚ್‌ಬಿಹಾರ್ ವಿವಾಹಪ್ರಸಂಗದಲ್ಲಿ ಅವನು ಸತ್ಯಕ್ಕಾಗಿ ತನ್ನ ಗುರುಸ್ವರೂಪ ನಾದ ಕೇಶವನಿಂದಲೂ ದೂರವಾಗಿ, 'ಸಾಧಾರಣ ಬ್ರಾಹ್ಮಸಮಾಜ'ದ ನಾಯಕನಾದ.

ನಿಷ್ಠಾವಂತ ಸಾಧಕನಾದ ವಿಜಯಕೃಷ್ಣನಲ್ಲಿ ಭಗವತ್ಸಾಕ್ಷಾತ್ಕಾರದ ಹಂಬಲ ನಿರಂತರವಾಗಿ ತುಡಿಯುತ್ತಿತ್ತು. ಈ ವೇಳೆಗೆ ಅವನಿಗೆ ಶ್ರೀರಾಮಕೃಷ್ಣರ ಪರಿಚಯ ವಾಗಿ, ಆ ಹಂಬಲ ಮತ್ತಷ್ಟು ಭುಗಿಲೆದ್ದಿತು. ಅವರ ವ್ಯಕ್ತಿತ್ವ ಅವನನ್ನು ಸಂಪೂರ್ಣ ಸೆರೆ ಹಿಡಿಯಿತು. ಶೀಘ್ರದಲ್ಲೇ ಇಬ್ಬರೂ ಪರಮಾಪ್ತರಾದರು. ಶ್ರೀರಾಮಕೃಷ್ಣರನ್ನು ಕಾಣಲು ಅವನು ಸಮಯವಾದಾಗಲೆಲ್ಲ ದಕ್ಷಿಣೇಶ್ವರಕ್ಕೆ ಬರಲಾರಂಭಿಸಿದ. ಅವರ ನಿರ್ದೇಶನದಲ್ಲಿ ತನ್ನ ಸಾಧನೆಗಳನ್ನು ತೀವ್ರಗೊಳಿಸಿದ. ಅವನಿಗೆ ಅನೇಕ ಆಧ್ಯಾತ್ಮಿಕ ಅನುಭವಗಳೂ ಆದುವು. ಬ್ರಾಹ್ಮಸಮಾಜದ ಪ್ರಭಾವದಿಂದಾಗಿ ಅವನು ಭಗವಂತನ ವಿವಿಧ ರೂಪಗಳ ಕಲ್ಪನೆಯನ್ನು ಮೌಢ್ಯವೆಂದು ಪರಿಗಣಿಸಿದ್ದ. ಆದರೆ ಅವೆಲ್ಲವೂ ಸತ್ಯವೆಂಬುದನ್ನು ಈ ಅನುಭವಗಳು ಅವನಿಗೆ ತಿಳಿಸಿಕೊಟ್ಟುವು. ಶ್ರೀರಾಮಕೃಷ್ಣರ ವಿಷಯದಲ್ಲಿ ಅವನ ಭಕ್ತಿ ವಿಶ್ವಾಸ ದಿನದಿನಕ್ಕೂ ಹೆಚ್ಚುತ್ತ ಬಂದಿತು. ಅವರ ಮಹಿಮೆ ಯನ್ನಾತ ಸ್ಪಷ್ಟವಾಗಿ ಅರಿಯಲಾರಂಭಿಸಿದ. ಕಂಡಕಂಡವರೊಡನೆಲ್ಲ, "ನೀವು ಶ್ರೀರಾಮ ಕೃಷ್ಣ ಪರಮಹಂಸರನ್ನು ಕಂಡಿದ್ದೀರಾ ? ಭಾರತದ ಅತಿ ದೊಡ್ಡ ಮಹಾತ್ಮರವರು !" ಎನ್ನುತ್ತಿದ್ದ. ಅಷ್ಟೇ ಅಲ್ಲ, ಈ ನಿಚ್ಚಳ ಸತ್ಯವನ್ನಿನ್ನೂ ಅರಿಯದವರ ಮೌಢ್ಯಕ್ಕಾಗಿ ಮರುಗುತ್ತಿದ್ದ. ಶ್ರೀರಾಮಕೃಷ್ಣರ ಮುಂದೆಯೇ ಅವನೆನ್ನುತ್ತಿದ್ದ:

"ನಮ್ಮ ಭಾಗ್ಯ—ದಕ್ಷಿಣೇಶ್ವರವು ಕಲ್ಕತ್ತಕ್ಕೆ ಇಷ್ಟು ಹತ್ತಿರದಲ್ಲಿದೆ; ಬೇಕಾದಷ್ಟು ಗಾಡಿಗಳೂ ದೋಣಿಗಳೂ ಇವೆ. ನಾವು ಯಾವಾಗೆಂದರೆ ಆಗ ಬಂದು ನಿಮ್ಮನ್ನು ನೋಡಬಹುದು. ಆದರೆ, ಈಗ ಅದೇ ಕಷ್ಟಕ್ಕೆ ಬಂದಿರುವುದು—ನೀವಿಷ್ಟು ಸುಲಭ ದಲ್ಲಿ ಸಿಗುತ್ತಿರುವುದರಿಂದಲೇ ನಮಗೆ ನಿಮ್ಮ ಬೆಲೆ ಗೊತ್ತಾಗುತ್ತಿಲ್ಲ! ನೀವು ಬಂದು

ಪರ್ವತಶಿಖರದ ತುದಿಯಲ್ಲಿ ಕುಳಿತಿರಬೇಕಾಗಿತ್ತು; ನಾವು ನಿಮ್ಮನ್ನು ನೋಡಬೇಕೆಂದರೆ ಎಷ್ಟೋ ಮೈಲಿಗಟ್ಟಲೆ ಕಾಡಿನ ದಾರಿಯಾಗಿ ಉಪವಾಸದಲ್ಲೇ ನಡೆದು, ಮರದ ಬಿಳಲುಗಳನ್ನು ಹಿಡಿದುಕೊಂಡು ಜಗಿದು, ಶಿಖರಗಳನ್ನೇರಿ ಬರುವಂತಾಗಬೇಕಿತ್ತು; ಆಗ ಮಾತ್ರವೇ ನಮಗೆ ನಿಮ್ಮ ನಿಜವಾದ ಬೆಲೆ ಗೊತ್ತಾಗುತ್ತಿತ್ತು! ಈಗೇನಾಗಿದೆಯೆಂದರೆ, ನಿಮಗಿಂತ ಒಳ್ಳೊಳ್ಳೆಯ ಎಷ್ಟೋ ಗುರುಗಳೆಲ್ಲ ದೂರದೂರದ ಸ್ಥಳಗಳಲ್ಲಿರಬೇಕು ಎಂದು ನಾವು ಭಾವಿಸುತ್ತೇವೆ. ಹಾಗೆ ಭಾವಿಸಿ ಅಂಥವರನ್ನು ಹುಡುಕಿಕೊಂಡು ವ್ಯರ್ಥವಾಗಿ ಅತ್ತಿಂದಿತ್ತ ಅಲೆದಾಡುತ್ತೇವೆ; ಅನಗತ್ಯವಾಗಿ ಕಷ್ಟಗಳ ಸರಮಾಲೆಯನ್ನೇ ತಂದುಕೊಳ್ಳುತ್ತೇವೆ.”

ಇದನ್ನು ಕೇಳಿ ಶ್ರೀರಾಮಕೃಷ್ಣರು ಸುಮ್ಮನೆ ಮುಗುಳ್ನಗುತ್ತಿದ್ದರಷ್ಟೆ.

ಬಹು ವರ್ಷಗಳಿಂದಲೂ ವಿಜಯ-ಕೇಶವರು ಆತ್ಮೀಯ ಗೆಳೆಯರಾಗಿದ್ದವರು. ಆದರೆ ಕೂಚ್‌ಬಿಹಾರ್ ವಿವಾಹಪ್ರಸಂಗದಿಂದಾಗಿ ವಿರಸ ತಲೆದೋರಿದಮೇಲೆ ಇಬ್ಬರ ನಡುವಣ ಬಾಂಧವ್ಯ ಮಾಸಿತು. ಒಬ್ಬರೊಡನೊಬ್ಬರು ಮುಖಕೊಟ್ಟು ಮಾತನಾಡುವುದು ನಿಂತಿತು. ಆದರೆ ಇವರಿಬ್ಬರಿಗೂ ಶ್ರೀರಾಮಕೃಷ್ಣರು ಬೇಕು; ಶ್ರೀರಾಮಕೃಷ್ಣರಿಗೆ ಇಬ್ಬರೂ ಬೇಕು! ಇಬ್ಬರೂ ದಕ್ಷಿಣೇಶ್ವರಕ್ಕೆ ಆಗಿಂದಾಗ್ಗೆ ಭೇಟಿ ನೀಡುತ್ತಲೇ ಇದ್ದವರು. ಆದ್ದರಿಂದ ಒಂದಿಲ್ಲೊಂದು ದಿನ ಇವರಿಬ್ಬರ ಸಮಾಗಮ ಏರ್ಪಡಲೇಬೇಕಿತ್ತು. ಕಡೆಗೊಂದು ದಿನ ಅದು ಏರ್ಪಟ್ಟಾಗ ಆ ಸನ್ನಿವೇಶಕ್ಕೆ ಸಾಕ್ಷಿಯಾಗಿದ್ದ ‘ಮಾಸ್ಟರ್ ಮಹಾಶಯ’ ತನ್ನ ಸುಪ್ರಸಿದ್ಧ ದಿನಚರಿಯಾದ ‘ಶ್ರೀರಾಮಕೃಷ್ಣ ವಚನವೇದ’ದಲ್ಲಿ ಅದನ್ನು ಸುಂದರವಾಗಿ ಬಣ್ಣಿಸಿದ್ದಾನೆ:

ಅದು ೧೮೮೨ರ ಅಕ್ಟೋಬರ್ ೨೭. ಶ್ರೀರಾಮಕೃಷ್ಣರು ತಮ್ಮ ಕೋಣೆಯಲ್ಲಿ ವಿಜಯಕೃಷ್ಣ ಮತ್ತಿತರರೊಂದಿಗೆ ಮಾತನಾಡುತ್ತ ಕುಳಿತಿದ್ದಾರೆ. ಆಗ ಕೇಶವನ ಅನುಯಾಯಿಗಳು ಕೆಲವರು ಅಲ್ಲಿಗೆ ಬಂದರು. ಶ್ರೀರಾಮಕೃಷ್ಣರೊಂದಿಗೆ ಗಂಗಾನದಿಯ ಮೇಲೆ ಕೆಲಕಾಲ ನೌಕಾಯಾನ ಮಾಡಲು ಉದ್ದೇಶಿಸಿ, ಕೇಶವ ಒಂದು ಸ್ಟೀಮರನ್ನು ಗೊತ್ತುಮಾಡಿ ತಂದಿದ್ದ. ಆದ್ದರಿಂದ ತಮ್ಮನ್ನೀಗ ಕೂಡಿಕೊಳ್ಳಬೇಕೆಂದು ಶ್ರೀರಾಮಕೃಷ್ಣರನ್ನು ಆಹ್ವಾನಿಸಲು ಇವರು ಬಂದಿದ್ದರು. ಶ್ರೀರಾಮಕೃಷ್ಣರು ಅದಕ್ಕೊಪ್ಪಿ ವಿಜಯನನ್ನೂ ತಮ್ಮೊಡನೆ ಕರೆದರು. ಒಲ್ಲೆ ಎನ್ನಲಾರದೆ ಅವನೂ ಅವರೊಂದಿಗೆ ಹೊರಟ.

ಹಡಗು ನದೀಘಟ್ಟದಿಂದ ತುಸುದೂರದಲ್ಲಿ ಲಂಗರು ಹಾಕಿತ್ತು. ಪಯಣಿಗರನ್ನು ಆ ಹಡಗಿನ ಬಳಿಗ ಕರೆದೊಯ್ಯಲು ಒಂದು ದೋಣಿ ಸಿದ್ಧವಾಗಿತ್ತು. ದೋಣಿಯೇರುತ್ತಿದ್ದಂತೆಯೇ ಶ್ರೀರಾಮಕೃಷ್ಣರು ಭಾವಸ್ಥರಾದರು. ಅವರನ್ನು ಹಡಗಿಗೆ ಹತ್ತಿಸಬೇಕಾದರೆ ಬಹಳ ಕಷ್ಟವಾಯಿತು. ಅಮೇಲೂ ಅವರಿಗೆ ಬಾಹ್ಯಪ್ರಜ್ಞೆ ಬೇಗ ಮರಳಲಿಲ್ಲ. ಅಂಗಾಂಗಗಳು ಸ್ವಾಧೀನದಲ್ಲಿರಲಿಲ್ಲ. ಆ ಸ್ಥಿತಿಯಲ್ಲೇ ಅವರನ್ನು ಮೆಲ್ಲಗೆ ನಡೆಸಿಕೊಂಡು ಹೋಗಿ ಹಡಗಿನ ಕ್ಯಾಬಿನ್ನಿನಲ್ಲಿ ಕುಳ್ಳಿರಿಸಲಾಯಿತು. ಎಲ್ಲರೂ ಅವರಿಗೆ ಪ್ರಣಾಮ ಮಾಡಿದರು. ಕೇಶವನೂ ವಿಜಯನೂ ಬಳಿಯಲ್ಲೇ ಕುಳಿತರು. ಸಾಧ್ಯವಾದಷ್ಟು ಜನ ಕೋಣೆಯೊಳಕ್ಕೆ ನುಸುಳಿದರು. ಉಳಿದವರು ಕಿಟಕಿ ಬಾಗಿಲುಗಳಿಂದ ಇಣಕಿ ನೋಡುವಷ್ಟು ಅನುಕೂಲ ಮಾಡಿಕೊಂಡರು. ಆದರೆ ಎಲ್ಲರೂ ಮೌನ; ಎಲ್ಲರಿಗೂ ಶ್ರೀರಾಮಕೃಷ್ಣರ ಮುಖದಿಂದ ಉದುರುವ ಒಂದೊಂದು ನುಡಿಮುತ್ತನ್ನೂ ಆಯ್ದುಕೊಳ್ಳುವ ಆತುರ. ಆದರೆ ಶ್ರೀರಾಮಕೃಷ್ಣರು ಮತ್ತೆ ಸಮಾಧಿಸ್ಥರಾಗಿಬಿಟ್ಟರು!

ವಿಜಯ-ಕೇಶವರಿಬ್ಬರಿಗೂ ವಿಪರೀತ ಕಸಿವಿಸಿ, ಮುಜುಗರ! ಮಾತನಾಡುವಂತಿಲ್ಲ, ಆಡದಿರುವಂತಿಲ್ಲ. 'ಈಗ ಏನಾಗಬಹುದು?' ಎಂದು ಕುತೂಹಲದಿಂದ ಇದನ್ನು ನೋಡುತ್ತಿರುವ ವೀಕ್ಷಕರು ಬೇರೆ!

ಕೆಲನಿಮಿಷಗಳಲ್ಲಿ ಶ್ರೀರಾಮಕೃಷ್ಣರು ಕ್ರಮೇಣ ಪ್ರಕೃತಿಸ್ಥರಾದರು. ಹಾಗೆಯೇ ಅರ್ಧಪ್ರಜ್ಞಾವಸ್ಥೆಯಲ್ಲಿ ಸುತ್ತ ನೆರೆದಿದ್ದ ಜನರನ್ನು ಅರೆಬಿರಿದ ಕಂಗಳಿಂದ ನೋಡುತ್ತ ಮಗುವಿನಂತೆ ತಮ್ಮಷ್ಟಕ್ಕೇ ಹೇಳಿಕೊಂಡರು:

“ಅಮ್ಮಾ, ನನ್ನನ್ನೇಕೆ ಇಲ್ಲಿಗೆ ಕರೆತಂದೆ? ಇವರೆಲ್ಲ ಬೇಲಿಯೊಳಗೆ ಸಿಕ್ಕಿಹಾಕಿಕೊಂಡುಬಿದ್ದಾರೆ. ಇವರನ್ನು ಬಿಡಿಸಲು ನನ್ನಿಂದ ಸಾಧ್ಯವೆ?”

ಈಗ ಒಬ್ಬ ಬ್ರಾಹ್ಮಭಕ್ತ ಅವರೊಡನೆ ಮಾತನಾಡಲಾರಂಭಿಸಿದ. ಗಾಜೀಪುರದಲ್ಲಿ ವಾಸವಾಗಿದ್ದ ಪವಾಹಾರಿ ಬಾಬಾ ಎಂಬ ಪ್ರಖ್ಯಾತ ಸಂತರ ವಿಷಯವಾಗಿ ಹೇಳುತ್ತ, ಅವರು ತಮ್ಮ ಕೋಣೆಯಲ್ಲಿ ಶ್ರೀರಾಮಕೃಷ್ಣರ 'ಫೋಟೋ' ಇಟ್ಟುಕೊಂಡಿರುವ ವಿಷಯವನ್ನು ತಿಳಿಸಿದ. ಶ್ರೀರಾಮಕೃಷ್ಣರ ಮುಖದಲ್ಲೊಂದು ಕಿರುನಗೆ ಹಾದು ಹೋಯಿತು. ತಮ್ಮ ಶರೀರದತ್ತ ಬೆರಳು ಮಾಡಿ ಮೆಲ್ಲನೆ ನುಡಿದರು: “ಇದೊಂದು ದಿಂಬಿನ ಚೀಲ, ಅಷ್ಟೆ!”

ಇದೀಗ ಅವರು ಮತ್ತಷ್ಟು ಬಹಿರ್ಮುಖಿಯಾದರು. ಮಾತುಗಳು ಸುಲಲಿತವಾಗಿ ಹರಿದುಬರತೊಡಗಿದುವು. ಭಕ್ತನೆದೆಯೇ ಭಗವಂತನ ನೆಚ್ಚಿನ ಆವಾಸಸ್ಥಾನ ಎಂಬುದರ ಕುರಿತಾಗಿ ಹೇಳಿದರು; ಕಾಳೀತತ್ತ್ವವನ್ನು ವಿವರಿಸಿದರು; 'ದೇವನೊಬ್ಬ, ನಾಮ ಹಲವು' ಎಂಬುದನ್ನು ಅರ್ಥಮಾಡಿಸಿದರು; ಮನಸ್ಸೇ ಎಲ್ಲಕ್ಕೂ ಕಾರಣ—ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ ಎಂಬುದನ್ನು ತಿಳಿಯಪಡಿಸಿದರು. ಕ್ರೈಸ್ತರ ಉಪದೇಶದ ಬಗ್ಗೆ ಪ್ರಸ್ತಾಪಿಸಿ ಪಾಪದ ಕುರಿತಂತೆ ಅತಿಯಾಗಿ ಹೇಳುವುದನ್ನು ಖಂಡಿಸಿದರು. “ಯಾರು ಹಗಲಿರುಳೂ 'ನಾನು ಪಾಪಿ, ನಾನು ಪಾಪಿ' ಎಂದು ಹೇಳುತ್ತಿರುತ್ತಾನೋ ಅವನು ಪಾಪಿಯೇ ಆಗಿಬಿಡುತ್ತಾನೆ” ಎಂದರು. ಈ ಸಂಬಂಧವಾಗಿ ಅವರು ಬ್ರಾಹ್ಮಸಮಾಜವನ್ನೂ ಟೀಕಿಸಿದರು. ಭಗವಂತನ ನಾಮವನ್ನು ಜಪಿಸುತ್ತಿದ್ದರೆ ಮನುಷ್ಯನ ಮನಸ್ಸು ಶುದ್ಧವಾಗಿಬಿಡುತ್ತದೆ ಎಂದು ತಿಳಿಸಿಕೊಟ್ಟರು. ಹೀಗೆ ಹಲವು ಹದಿನೆಂಟು ವಿಷಯಗಳ ಬಗ್ಗೆ ಮಾತು ನಡೆಯಿತು.

ಶ್ರೀರಾಮಕೃಷ್ಣರ ಅಮೃತವಾಹಿನಿಯಲ್ಲಿ ತೇಲುತ್ತಿದ್ದವರಿಗೆ ಸಮಯದ ಪರಿವೆಯೇ ಇಲ್ಲವಾಗಿತ್ತು. ಆದರೆ ಈ ನಡುವೆ ವಿಜಯ-ಕೇಶವರ ಮಧ್ಯೆ ಮಾತ್ರ ಸೌಹಾರ್ದವಿನ್ನೂ ಉಂಟಾಗದೆ ಇಬ್ಬರೂ ಪರಸ್ಪರ ಮೌನಭಾವ ತಾಳಿರುವುದನ್ನು ಗಮನಿಸಿ ಶ್ರೀರಾಮಕೃಷ್ಣರೊಂದು ಚಟಾಕಿ ಸಿಡಿಸಿದರು:

“ನಿಮ್ಮಿಬ್ಬರ ನಡುವಿನ ವಿವಾದವನ್ನು ನೋಡಿದರೆ ಶಿವನಿಗೂ ರಾಮನಿಗೂ ನಡೆದ ಜಗಳದಂತಿದೆ. ಶಿವನು ರಾಮನ ಇಷ್ಟದೇವತೆ; ರಾಮನು ಶಿವನ ಇಷ್ಟದೇವತೆ. ಯಾವುದೋ ಕಾರಣಕ್ಕಾಗಿ ಇವರಿಬ್ಬರಲ್ಲಿ ಮನಸ್ತಾಪ ಬಂದಿತು. ಇಬ್ಬರಿಗೂ ಯುದ್ಧವಾಯಿತು; ಬೇಗನೆ ಅದು ನಿಂತೂ ಹೋಗಿ ಒಪ್ಪಂದಕ್ಕೂ ಬಂದುಬಿಟ್ಟರು. ಆದರೆ ಶಿವನ ಭೂತಗಣಗಳಿಗೂ ರಾಮನ ಕಪಿಸೈನ್ಯಕ್ಕೂ ಪ್ರಾರಂಭವಾಗಿದ್ದ ಕಚ್ಚಾಟ ಬಡಿದಾಟ ಮಾತ್ರ ಏನು ಮಾಡಿದರೂ ನಿಲ್ಲದು. ಅದು ಇನ್ನೂ ನಡೆಯುತ್ತಲೇ ಇದೆ! (ಎಲ್ಲರೂ ಗಟ್ಟಿಯಾಗಿ ನಕ್ಕರು.) ತಾಯಿ-ಮಗಳು ತಮ್ಮತಮ್ಮ ಶ್ರೇಯಸ್ಸು ಬೇರೆಬೇರೆಯೇನೋ

ಎಂಬಂತೆ ಪ್ರತ್ಯೇಕಪ್ರತ್ಯೇಕವಾಗಿ ಮಂಗಳಗೌರೀವ್ರತ ಆಚರಿಸುವುದಿಲ್ಲವೆ? ಆದರೆ ವಾಸ್ತವವಾಗಿ ಅವಳ ಮಂಗಳದಿಂದ ಇವಳ ಮಂಗಳ; ಇವಳ ಶ್ರೇಯಸ್ಸಿನಿಂದ ಅವಳಿಗೂ ಶ್ರೇಯಸ್ಸು. ಹಾಗೆಯೇ ನಿನಗೊಂದು ಸಮಾಜ ಇದೆ, ವಿಜಯನು ತಾನೂ ಒಂದು ಸಮಾಜವನ್ನು ಕಟ್ಟಿಕೊಂಡಿರುವುದಾಗಿ ತಿಳಿದಿದ್ದಾನೆ. (ನಗು)

"ಆದರೆ ಇವೆಲ್ಲ ಇರಬೇಕು. ಸಾಕ್ಷಾತ್ ಭಗವಂತ ಶ್ರೀಕೃಷ್ಣನೇ ಬೃಂದಾವನದಲ್ಲಿ ಗೋಪಿಯರೊಂದಿಗೆ ರಾಸಕ್ರೀಡೆಯಲ್ಲಿ ತೊಡಗಿರುವಾಗ ಜಟಿಲೆ-ಕುಟಿಲೆಯರೆಂಬ ಇಬ್ಬರು ತಂಟೆಕೋರಿಯರು ಅಲ್ಲಿಗೆ ಬಂದು ಉಪದ್ರವ ಕೊಡುತ್ತಾರೆ! ಅವರೇಕೆ ಬರಬೇಕಾಗಿತ್ತು ಅಲ್ಲಿಗೆ ಎಂದರೆ, ಅವರಿಲ್ಲದಿದ್ದರೆ ಕ್ರೀಡೆ ಕಳೆಕಟ್ಟುವುದಿಲ್ಲ! (ನಗು)

"ಹಾಗೆಯೇ, ರಾಮಾನುಜಾಚಾರ್ಯರು ವಿಶಿಷ್ಟಾದ್ವೈತವಾದಿಗಳು; ಆದರೆ ಅವರ ಗುರುಗಳು ಅದ್ವೈತಿಗಳು. ಕೊನೆಗೆ ಅವರಿಬ್ಬರಿಗೂ ಭಿನ್ನಾಭಿಪ್ರಾಯ ಹತ್ತಿಕೊಂಡಿತು. ಗುರುಶಿಷ್ಯರು ಪರಸ್ಪರ ಮತಖಂಡನೆ ಮಾಡತೊಡಗಿದರು. ಹೀಗೂ ಆಗುವುದುಂಟು. ಆದರೆ ಗುರುವಿಗೆ ಶಿಷ್ಯ ಎಂದಿಗೂ ತನ್ನವನೇ."

ಶ್ರೀರಾಮಕೃಷ್ಣರ ಹಾಸ್ಯಪೂರ್ಣವಾದ, ವಿವೇಕಯುತವಾದ ಮಾತುಗಳಿಂದ ವಾತಾವರಣ ಬಹಳ ಮಧುರವಾಯಿತು. ಕೇಶವ-ವಿಜಯಕೃಷ್ಣರ ನಡುವಿನ ಬಿಗುಮಾನದ ಕಟ್ಟೆ ಸಡಿಲಗೊಂಡು ಇಬ್ಬರ ಮುಖದಲ್ಲೂ ನಗುವರಳಿತು. ತದನಂತರ ಅವರಿಬ್ಬರ ವೈಯಕ್ತಿಕ ಬಾಂಧವ್ಯ ಎಷ್ಟೋ ಸುಧಾರಿಸಿತು. ಆದರೆ ಶ್ರೀರಾಮಕೃಷ್ಣರು ಹೇಳಿದ್ದಂತೆ, ಅವರ ಅನುಯಾಯಿಗಳ ಕದನ ಮಾತ್ರ ಭೂತಗಣ-ಕಪಿವಿಂಡುಗಳ ಜಗಳದಂತೆ ಹಾಗೆಯೇ ಮುಂದುವರಿಯಿತು!

'ಸಾಧಾರಣ ಬ್ರಾಹ್ಮಸಮಾಜ'ದ ಮುಖಂಡನಾಗಿ ವಿಜಯಕೃಷ್ಣನು ಕೆಲಕಾಲ ಕಾರ್ಯ ನಿರ್ವಹಿಸಿದ. ಆದರೆ ಅವನಲ್ಲಿ ಈ ಬಗೆಯ ಸಾಂಘಿಕ ಜೀವನದ ಆಸಕ್ತಿ ಕುಗ್ಗಿತು. ಅಲ್ಲದೆ ಸ್ವಭಾವತಃ ಭಕ್ತನಾದ, ಸಾಕಾರಭಗವಂತನ ಆರಾಧಕನಾದ ಅವನು ತನ್ನ ಭಕ್ತಿ-ವಿಶ್ವಾಸವನ್ನು ಮುಚ್ಚಿಡಲಾರದವನಾದ. ಒಂದಾನೊಂದು ದಿನ ತನ್ನ 'ಸಾಧಾರಣ ಸಮಾಜ'ವನ್ನೂ ತ್ಯಜಿಸಿ ತೀವ್ರತರ ಆಧ್ಯಾತ್ಮಿಕ ಸಾಧನೆಯಲ್ಲಿ ನಿರತನಾದ. ಅವನು ಬಿಟ್ಟುಹೋದುದನ್ನು ಕಂಡು ಇನ್ನೂ ಹಲವಾರು ಜಿಜ್ಞಾಸುಗಳು 'ಸಮಾಜ'ವನ್ನು ತ್ಯಜಿಸಿದರು. ಇದರ ಪರಿಣಾಮವಾಗಿ 'ಸಮಾಜ'ದಲ್ಲಿ ಆಧ್ಯಾತ್ಮಿಕ ವಾತಾವರಣ ತಗ್ಗಿ ಕೇವಲ ಸಾಮಾಜಿಕ ಸುಧಾರಣೆಯ ಕಾರ್ಯಚಟುವಟಿಕೆಗಳು ಹೆಚ್ಚಿಕೊಂಡವು.

ವಿಜಯಕೃಷ್ಣ ಗೋಸ್ವಾಮಿಯ ಮೇಲೆ ಶ್ರೀರಾಮಕೃಷ್ಣರು ಹರಿಸಿದ ಕೃಪೆ ಅತ್ಯಮೋಘವಾದುದು. ಒಮ್ಮೆ ಅವನು ಶ್ರೀರಾಮಕೃಷ್ಣರ ಹಾಗೂ ಅವರ ಶಿಷ್ಯರ ಮುಂದೆ ನಿವೇದಿಸಿದ ತನ್ನ ಒಂದು ದಿವ್ಯಾನುಭವ ನಮ್ಮನ್ನು ಅವಾಕ್ಕಾಗಿಸದಿರದು. ಅವನೆನ್ನುತ್ತಾನೆ:

"ಕೆಲದಿನಗಳ ಹಿಂದೆ ನಾನು ಢಾಕಾದಲ್ಲಿದ್ದಾಗ ಒಂದು ದಿನ ನನ್ನ ಕೋಣೆಯಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದೆ. ಆಗ ಅಲ್ಲಿ ಇದ್ದಕ್ಕಿದ್ದಂತೆ ಠಾಕೂರರು (ಶ್ರೀರಾಮಕೃಷ್ಣರು) ಪ್ರತ್ಯಕ್ಷವಾದುದನ್ನು ಕಂಡು ಬೆರಗಾದೆ. ಇದು ನನ್ನ ಭ್ರಾಂತಿಯಿರಬಹುದೇ ಎಂದು ಶಂಕಿಸಿದೆ. ಕಣ್ಣನ್ನು ಸಂಪೂರ್ಣ ಅಗಲಿಸಿಕೊಂಡು ನೋಡಿದೆ. ಹೌದು, ಸಾಕ್ಷಾತ್ ಠಾಕೂರರು! ಅವರ ಅಂಗಪ್ರತ್ಯಂಗವನ್ನೂ ಬಹಳ ಹೊತ್ತು ಕೈಯಿಂದ ಒತ್ತಿಒತ್ತಿ ನೋಡಿದೆ. ನಿಜ, ಖಂಡಿತ ಅವರು ಠಾಕೂರರೆ!... ಸತ್ಯವಾಗಿ ಹೇಳುತ್ತೇನೆ—ನಾನು ದೇಶ

ದೇಶಾಂತರಗಳಲ್ಲಿ, ಗಿರಿಗುಹೆಗಳಲ್ಲಿ ಅನೇಕ ಸಾಧುಸಂತರನ್ನು ನೋಡಿದ್ದೆ. ಆದರೆ (ಶ್ರೀರಾಮಕೃಷ್ಣರನ್ನು ತೋರಿಸುತ್ತ, ಅವರ ಶಿಷ್ಯರೊಡನೆ) ಇಂತಹ ವ್ಯಕ್ತಿಯನ್ನು ಮಾತ್ರ ನಾನೆಲ್ಲೂ ಕಾಣಲಿಲ್ಲ. ಇವರಲ್ಲಿ ರೂಪಾಯಿಗೆ ಪೂರ್ಣ ಹದಿನಾರಾಣೆಯಷ್ಟು ಆಧ್ಯಾತ್ಮಿಕ ಶಕ್ತಿ ವ್ಯಕ್ತವಾಗಿದ್ದರೆ, ಇತರ ಸಂತರಲ್ಲಿ ಕೇವಲ ಎರಡಾಣೆ ಅಥವಾ ಒಂದಾಣೆಯಷ್ಟು ಪ್ರಕಾಶವನ್ನು ಕಾಣಬಹುದು. ಇನ್ನು ಕೆಲವೆಡೆಗಳಲ್ಲಿ ಒಂದು ಪೈಸೆ ಅಥವಾ ಅರ್ಧ ಪೈಸೆಯಷ್ಟು ಮಾತ್ರ. ಆದರೆ ನಾಲ್ಕಾಣೆಯಷ್ಟು ಪ್ರಕಾಶವನ್ನು ಕೂಡ ನಾನೆಲ್ಲೂ ಕಾಣಲಿಲ್ಲ."

ವಿಜಯಕೃಷ್ಣನ ಮಾತುಗಳನ್ನು ಆಲಿಸುತ್ತಿದ್ದ ಶ್ರೀರಾಮಕೃಷ್ಣರು ಮಂದಮಂದವಾಗಿ ಮುಗುಳ್ನಗುತ್ತ, "ಏನೇನೋ ಹೇಳುತ್ತಿದ್ದಾನೆ !" ಎಂದರು.

ಆದರೆ ವಿಜಯಕೃಷ್ಣ ಅಷ್ಟು ಸುಲಭವಾಗಿ ಸುಮ್ಮನಾಗುವವನೆ ? ಅಪರಿಮಿತ ವಿಶ್ವಾಸದಿಂದ ನುಡಿದ:

"ಅಂದು ನಾನು ನಿಮ್ಮನ್ನು ಎಷ್ಟು ಖಚಿತವಾಗಿ, ಎಷ್ಟು ಸ್ಪಷ್ಟವಾಗಿ ಕಂಡೆನೆಂದರೆ ನೀವು 'ಇಲ್ಲ ಇಲ್ಲ' ಎಂದು ಎಷ್ಟೇ ಹೇಳಿ, ನಾನಂತೂ ಒಪ್ಪುವವನಲ್ಲ."

ವಿಜಯಕೃಷ್ಣನ ಮೇಲೆ ಉಂಟಾಗಿದ್ದ ಪ್ರಭಾವ ಅಷ್ಟು ಗಾಢ !

ಶ್ರೀರಾಮಕೃಷ್ಣರಿಗೆ ಅತ್ಯಂತ ಪ್ರಿಯನಾದ ಮತ್ತೊಬ್ಬ ಬ್ರಾಹ್ಮಮುಖಂಡನೆಂದರೆ ಪಂಡಿತ ಶಿವನಾಥ ಶಾಸ್ತ್ರಿ. ಇವನು ಶ್ರೀರಾಮಕೃಷ್ಣರನ್ನು ಮೊದಲು ಸಂಧಿಸಿದುದು ೧೮೭೫ ರಲ್ಲಿ; ಕೇಶವ-ಶ್ರೀರಾಮಕೃಷ್ಣರ ಸಮಾಗಮದ ಕೆಲವೇ ದಿನಗಳ ಬಳಿಕ. ಆಗಿನ್ನೂ ಇವನು ಇಪ್ಪತ್ತೆಂಟು ವರ್ಷದ ಯುವಕ.

ಶಿವನಾಥನದು ಅತ್ಯಂತ ಪ್ರಭಾವಶಾಲೀ ವ್ಯಕ್ತಿತ್ವ. ವಿಜಯಕೃಷ್ಣನಂತೆ ಇವನೂ ಸಂಪ್ರದಾಯಸ್ಥ ಬ್ರಾಹ್ಮಣಕುಟುಂಬಕ್ಕೆ ಸೇರಿದವನು. ಆದರೂ ಸಂಪ್ರದಾಯದ ಕಟ್ಟಳೆಯಿಂದ ಹೊರಬಂದು, ತನ್ನ ಬುದ್ಧಿ-ಮನಸ್ಸು-ಹೃದಯಗಳಿಗೆ ಒಪ್ಪಿಗೆಯಾಗಬಲ್ಲ, ತೃಪ್ತಿತರಬಲ್ಲ ಹೊಸ ಧರ್ಮವೊಂದನ್ನು ಅರಸುತ್ತ, ಕೊನೆಗೆ ಬ್ರಾಹ್ಮಸಮಾಜಕ್ಕೆ ಸೇರಿದ. ಸಂಸ್ಕೃತದಲ್ಲಿ ಉನ್ನತ ಶಿಕ್ಷಣ ಪಡೆದು 'ಶಾಸ್ತ್ರಿ' ಎಂಬ ಪದವಿಗೆ ಅರ್ಹನಾದ. ಪ್ರತಿಭಾಸಂಪನ್ನನೂ ವಾಗ್ಮಿಯೂ ಆದ ಈತ ಶೀಘ್ರದಲ್ಲೇ ಬ್ರಾಹ್ಮಸಮಾಜದಲ್ಲಿ ಉನ್ನತ ಸ್ಥಾನಕ್ಕೇರಿದ. ಮುಂದೆ ಸಮಾಜವು ಇಬ್ಭಾಗವಾಗಿ 'ಸಾಧಾರಣ ಸಮಾಜ'ದ ಸ್ಥಾಪನೆಯಾದಾಗ ಅದರ ಆಚಾರ್ಯರಲ್ಲೊಬ್ಬನಾದ.

ಶ್ರೀರಾಮಕೃಷ್ಣರ ಬಗ್ಗೆ ಆದಾಗಲೇ ಕೇಳಿತಿಳಿದಿದ್ದ ಶಿವನಾಥ, ಅವರನ್ನು ಪ್ರತ್ಯಕ್ಷ ಕಂಡಾಗ ಅವರಿಂದ ಆಳವಾಗಿ ಪ್ರಭಾವಿತನಾದ. ಶಿವನಾಥನನ್ನು ನೋಡುತ್ತಿದ್ದಂತೆಯೇ ಶ್ರೀರಾಮಕೃಷ್ಣರು ಅತ್ಯಂತ ಆನಂದಿತರಾದರು. ಅವನಲ್ಲಿ ಸುಪ್ತವಾಗಿದ್ದ ಆಧ್ಯಾತ್ಮಿಕ ಪ್ರವೃತ್ತಿಯನ್ನು, ಆತನ ಶಕ್ತಿ-ಸಾಮರ್ಥ್ಯಗಳನ್ನು ಅವರು ನಿಚ್ಚಳವಾಗಿ ಕಂಡರು. ಅವನ ಸತ್ವಯುತ ವ್ಯಕ್ತಿತ್ವ ಅವರನ್ನು ಬಹಳ ಸಂತಸಗೊಳಿಸಿತು. ತಮ್ಮ ಆ ಸಂತಸವನ್ನು ಅವರು ಮುಚ್ಚಿಡಲಿಲ್ಲ. "ನಿನ್ನನ್ನು ನೋಡಿ ನನಗೆಷ್ಟು ಖುಷಿಯಾಯಿತು ಗೊತ್ತೆ! ನಿನಗೆ ಸಾಧ್ಯವಾದಾಗಲೆಲ್ಲ ಇಲ್ಲಿಗೆ ಬರುತ್ತಿರು. ಏನು, ಬರುವೆ ತಾನೆ? ಬರದೆ ಇರಬೇಡ!" ಎಂದು ಮತ್ತೆಮತ್ತೆ ಹೇಳಿದರು.

ಶ್ರೀರಾಮಕೃಷ್ಣರನ್ನು ಕಂಡು ಶಿವನಾಥನಿಗೂ ಆದ ಸಂತಸ ಅಪಾರ. ಮತ್ತು ಅಷ್ಟೇ ಅಚ್ಚರಿ ಕೂಡ. ಅದೆಂಥ ನಿಷ್ಕಪಟತೆ! ಅದೆಂಥ ಸರಳತೆ! ಎಂಥ ಅದ್ಭುತ ವ್ಯಕ್ತಿತ್ವ! ಅಪರಿಚಿತನಾದ ತನ್ನ ಮೇಲೆ ಅವರ ಪ್ರೇಮವೆಷ್ಟು!...

ಆ ಅನಿರ್ವಚನೀಯ ಆಕರ್ಷಣೆ ಶಿವನಾಥನನ್ನು ಮತ್ತೆಮತ್ತೆ ದಕ್ಷಿಣೇಶ್ವರಕ್ಕೆ ಎಳೆತಂದಿತು. ಪ್ರತಿ ಬಾರಿಯೂ ಇಬ್ಬರ ನಡುವಣ ವಿಶ್ವಾಸ ಗಾಢವಾಗುತ್ತಬಂದಿತು. ಅವನ ಕುರಿತಾಗಿ ಶ್ರೀರಾಮಕೃಷ್ಣರೊಮ್ಮೆ ಉದ್ಗರಿಸುತ್ತಾರೆ:

"ಆಹ್, ಇಲ್ಲಿ ನೋಡಿ, ಶಿವನಾಥ ಬಂದಿದ್ದಾನೆ! (ಶಿವನಾಥನನ್ನುದ್ದೇಶಿಸಿ) ನೋಡು, ನೀನೊಬ್ಬ ನಿಜವಾದ ಭಕ್ತ. ಆದ್ದರಿಂದ ನಿನ್ನನ್ನು ನೋಡಿದರೇ ಸಾಕು, ನನ್ನ ಎದೆ ತಂಪಾಗುತ್ತದೆ. ಒಂದು ವಿಷಯದಲ್ಲಿ ಭಕ್ತರು ಭಂಗಿ ಸೇದುವವರಿದ್ದಂತೆ. ಒಬ್ಬ ಬಂಗಿಮುಕ್ಕನಿಗೆ ಮತ್ತೊಬ್ಬ ಬಂಗಿಮುಕ್ಕನನ್ನು ಕಂಡರೆ ಬಹಳ ಆನಂದ. ಎಷ್ಟೋ ಸಲ ಅವರು ಆ ಆನಂದವನ್ನು ತಾಳಲಾರದೆ ಒಬ್ಬರನೊಬ್ಬರು ಅಪ್ಪಿಕೊಳ್ಳುವುದೂ ಉಂಟು!"

ಆದರೆ ಶ್ರೀರಾಮಕೃಷ್ಣರು ತನ್ನನ್ನು ಸ್ವೀಕರಿಸಿದಷ್ಟು ಸಹಜವಾಗಿ ತಾನು ಅವರನ್ನು ಸ್ವೀಕರಿಸಲು ಶಿವನಾಥನಿಗೆ ಸಾಧ್ಯವಿರಲಿಲ್ಲ. ಆಂಗ್ಲ ವಿದ್ಯಾಭ್ಯಾಸದಿಂದ ರೂಪುಗೊಂಡ ಮನಸ್ಸು ಅವನದು. ಕಣ್ಣಾರೆ ಕಂಡದ್ದನ್ನೂ ಪರಾಂಬರಿಸಿ ನೋಡುವ ಸ್ವಭಾವ ಅವನದು. ಶ್ರೀರಾಮಕೃಷ್ಣರ ವ್ಯಕ್ತಿತ್ವವನ್ನು, ವರ್ತನೆಯನ್ನು, ಮಾತುಗಳನ್ನು ಅವನು ಬಹಳ ಸೂಕ್ಷ್ಮವಾಗಿ ಗಮನಿಸಿ ನೋಡಿದ. ಅವರ ಪ್ರಾಮಾಣಿಕತೆಯನ್ನು ಕಂಡು ಬೆರಗಾದ. ಕಡೆಗೆ, ಅವರ ಕುರಿತಾಗಿ ತನ್ನದೇ ಆದ ಅಭಿಪ್ರಾಯಗಳನ್ನು ರೂಢಿಸಿಕೊಳ್ಳುತ್ತ ಬಂದ.

ಅನೇಕ ವರ್ಷಗಳ ಅನಂತರ, 'ಶಿವನಾಥನು' ತನ್ನ ಅನುಭವಗಳನ್ನು ಆಧರಿಸಿ ಹಲವಾರು ಪುಸ್ತಕಗಳನ್ನು ರಚಿಸಿದ. 'Men I Have Seen' ಎಂಬ ಪುಸ್ತಕದಲ್ಲಿ ಒಂದೆಡೆ ಅವನು ಬರೆಯುತ್ತಾನೆ: "ಶ್ರೀರಾಮಕೃಷ್ಣರ ಸ್ವಭಾವವನ್ನು ಪರೀಕ್ಷಿಸಲು ಉದ್ದೇಶಿಸಿದ ವ್ಯಕ್ತಿಯೊಬ್ಬನು ಅವರ ಕೈಮೇಲೆ ನಾಣ್ಯವನ್ನಿಟ್ಟ ಸಂದರ್ಭದಲ್ಲಿ ನಾನು ಸಾಕ್ಷಿಯಾಗಿದ್ದೆ. ನಾಣ್ಯವನ್ನಿಟ್ಟೊಡನೆಯೇ ಅವರು ತಮಗೆ ಬಹುಸಹಜವಾದ ಭಾವಾವಸ್ಥೆಗೇರುತ್ತಿದ್ದರು. ಮತ್ತು ಆ ನಾಣ್ಯವನ್ನು ತೆಗೆಯುವವರೆಗೂ ಹಾಗೆಯೇ ಪ್ರಜ್ಞಾಹೀನರಾಗಿರುತ್ತಿದ್ದರು . . ."

ಧರ್ಮಾನುಷ್ಠಾನ ಮಾಡಬೇಕೆಂಬವನು ತನ್ನ ಲೌಕಿಕ ಸಂಬಂಧಗಳನ್ನೂ ವ್ಯವಹಾರಗಳನ್ನೂ ಯಾವ ರೀತಿಯಲ್ಲೂ ಬದಲಿಸಿಕೊಳ್ಳಬೇಕಿಲ್ಲ ಅಥವಾ ಅವುಗಳಿಂದ ವಿಮುಖನಾಗಬೇಕಿಲ್ಲ ಎಂಬುದು ಶಿವನಾಥನ ದೃಢನಂಬಿಕೆ. ಯೋಗ-ಭೋಗಗಳನ್ನು ಒಟ್ಟಿಗೆ ಅನುಭವಿಸಬಹುದೆಂಬುದೇ ಅವನ ಅಭಿಮತ. ಇಂಥವನಿಗೆ, ಕಾಮಗಂಧದ ಸೋಂಕೇ ಇಲ್ಲದ, ಸ್ಫಟಿಕಶುದ್ಧವಾದ ಶ್ರೀರಾಮಕೃಷ್ಣರ ಜೀವನದ ಮಹತ್ವವನ್ನು ಅರಿತುಕೊಳ್ಳಲು ಸಾಧ್ಯವೇ ಇರಲಿಲ್ಲ. ವಿವಾಹಿತರಾದರೂ ಶ್ರೀರಾಮಕೃಷ್ಣರು ಅಸ್ಖಲಿತ ಬ್ರಹ್ಮಚರ್ಯವನ್ನೇ ಆಚರಿಸುತ್ತಿರುವರೆಂಬ ಸಂಗತಿ ತಿಳಿದಾಗಲಂತೂ ಅವನಿಗೆ ಆಘಾತವೇ ಆಯಿತು. ಆ ವಿಷಯವಾಗಿ ಅವನು ತನ್ನ ಗ್ರಂಥದಲ್ಲಿ ಬರೆಯುತ್ತಾನೆ:

"ಶ್ರೀರಾಮಕೃಷ್ಣರ ಪತ್ನಿ ತಮ್ಮ ಹಳ್ಳಿಯ ಮನೆಯಲ್ಲಿ ವಾಸವಾಗಿದ್ದರು. ಹೀಗೆ ಅವರು ತಮ್ಮ ಪತ್ನಿಯಿಂದ ಹೆಚ್ಚುಕಡಿಮೆ ಅಗಲಿಯೇ ಇದ್ದುಬಿಟ್ಟರು. ಒಂದು ದಿನ ನಾನು ನನ್ನ ಸ್ನೇಹಿತರ ಬಳಿ, ಅವರ ಪತ್ನಿ ವಿವಾಹವಾದರೂ ವಿಧವೆಯಂತೆ ಇರುವಂತಾದುದರ ಬಗ್ಗೆ ಮಾತನಾಡುತ್ತ ಅವರ ವರ್ತನೆಯನ್ನು ಖಂಡಿಸುತ್ತಿದ್ದೆ.*

"ಆಗ ಅವರು ನನ್ನನ್ನು ಬದಿಗೆ ಕರೆದು ಕಿವಿಯಲ್ಲಿ ಪಿಸುಗುಟ್ಟಿದರು: 'ಆ ಬಗ್ಗೆ ಏಕೆ ಟೀಕೆ ಮಾಡುತ್ತೀಯೆ ? ಅದಿನ್ನು (ಸಾಂಸಾರಿಕ ಜೀವನ) ನನ್ನಿಂದ ಸಾಧ್ಯವೇ ಇಲ್ಲ. ಅವೆಲ್ಲ (ಕಾಮನೆಗಳೆಲ್ಲ) ಯಾವಾಗಲೋ ಸತ್ತುಹೋಗಿವೆ !' ಮತ್ತೊಂದು ದಿನ, ಅವರ 'ಕಾಮ-ಕಾಂಚನ ತ್ಯಾಗ'ದ ಬೋಧನೆಯನ್ನು ಟೀಕಿಸುತ್ತ ನಾನು, 'ನಮ್ಮ ಬ್ರಾಹ್ಮ ಸಮಾಜದ ಕಾರ್ಯಪ್ರಣಾಳಿಯಲ್ಲಿ ಸ್ತ್ರೀಯರ ಪಾತ್ರ ಇದ್ದೇ ಇರುತ್ತದೆ. ನಮ್ಮದು

*ಈ ವಿಷಯದಲ್ಲಿ, ಶಿವನಾಥ ಶಾಸ್ತ್ರಿಯೇ ಅಲ್ಲದೆ ಇನ್ನೂ ಹಲವಾರು ಬ್ರಾಹ್ಮಮುಖಂಡರು ಶ್ರೀರಾಮಕೃಷ್ಣರನ್ನು ಕಟುವಾಗಿ ಟೀಕಿಸುತ್ತಿದ್ದರು. ಆದರೆ ಇದಕ್ಕೆ ತಾತ್ವಿಕ ಭಿನ್ನಾಭಿಪ್ರಾಯಕ್ಕಿಂತ ಹೆಚ್ಚಾಗಿ, ಶ್ರೀರಾಮಕೃಷ್ಣರು ತಮ್ಮ ಮುಖಂಡನಾದ ಕೇಶವಚಂದ್ರ ಸೇನನ ಮೇಲೆ ಬೀರಿದ ವರ್ಚಸ್ಸನ್ನು ಕಂಡು ಇವರಿಗುಂಟಾದ ಆಕ್ರೋಶವೇ ಕಾರಣ ಎಂದು ಶ್ರೀ ರೊಮಾ ರೋಲಾ ಬರೆಯುತ್ತಾರೆ.) (Romain Rolland: The Life of Ramakrishna, p.32)

ಸಾಮಾಜಿಕರ ಧರ್ಮ, ಸಾಮಾನ್ಯರ ಧರ್ಮ. ನಾವು ಸ್ತ್ರೀಯರಿಗೆ ಶಿಕ್ಷಣ ಕೊಡುತ್ತೇವೆ, ಸಾಮಾಜಿಕ ಸ್ವಾತಂತ್ರ್ಯ ಕೊಡುತ್ತೇವೆ' ಎಂದು ಘೋಷಿಸಿದೆ. ಹೀಗೆನ್ನುತ್ತಿದ್ದಂತೆಯೇ ಆ ಸಂತರು ಉದ್ವಿಗ್ನರಾದರು. ಅವರಲ್ಲಿ ಆಳವಾಗಿ ಬೇರುಬಿಟ್ಟ ನಂಬಿಕೆಗಳಿಗೆ ವಿರುದ್ಧ ವಾಗಿ ಯಾರಾದರೂ ವಾದಿಸಿದರೆ ಅವರು ಹಾಗೆಯೇ ಉದ್ವೇಗಗೊಳ್ಳುತ್ತಿದ್ದುದು. ಮತ್ತು ಅವರಲ್ಲಿ ನಮಗೆಲ್ಲ ಬಹಳ ಮೆಚ್ಚುಗೆಯಾದ ಅಂಶ ಅದು! ಅವರು ಉದ್ಗರಿಸಿದರು: 'ಹೋಗು ಹೋಗೋ, ಮೂರ್ಖ! ಆ ಹೆಂಗಸರು ನಿಮಗಾಗಿ ತೋಡುವ ಹಳ್ಳದಲ್ಲಿ ಬಿದ್ದು ಸಾಯಿ!' ಬಳಿಕ ನನ್ನನ್ನೇ ದುರುಗುಟ್ಟಿ ನೋಡುತ್ತ ಹೇಳಿದರು: 'ಎಲೋ, ತೋಟಗಾರನು ತನ್ನ ಎಳೆಯ ಸಸಿಯನ್ನು ಕಾಪಾಡಲು ಏನು ಮಾಡುತ್ತಾನೆ ಹೇಳು? ಅದನ್ನು ದನಕರುಗಳಿಂದ ರಕ್ಷಿಸಲು ಬೇಲಿ ಹಾಕುವುದಿಲ್ಲವೆ? ಮತ್ತು ಆ ಸಸಿ ಬೆಳೆದು ಮರವಾದ ಮೇಲೆ ಬೇಲಿಯನ್ನು ತೆಗೆದು ಅದು ತನ್ನಷ್ಟಕ್ಕೆ ಬೆಳೆದು ಕೊಳ್ಳಲು ಬಿಡುವುದಿಲ್ಲವೆ?' ನಾನೆಂದೆ, 'ನಿಜ, ತೋಟಗಾರರು ಮಾಡುವುದು ಹಾಗೆಯೇ.' ಆಗ ಅವರೆಂದರು: 'ನಿನ್ನ ಆಧ್ಯಾತ್ಮಿಕ ಜೀವನದಲ್ಲೂ ಹಾಗೆಯೇ ಮಾಡು. ಮೊದಮೊದಲಿಗೆ ಸ್ತ್ರೀಯರನ್ನು ದೂರವಿಡು. ಶಕ್ತನಾಗು, ಪ್ರಗತಿಹೊಂದು. ಆಮೇಲೆ ಬೇಕಾದರೆ ಅವರೊಂದಿಗಿರಬಹುದು.' ಆಗ ನಾನು ಹೇಳಿದೆ: 'ಆದರೆ, ಸ್ತ್ರೀಯರ ಪಾತ್ರ ಆ ದನಕರುಗಳಂತೆ ವಿನಾಶಕಾರಿಯಾದದ್ದು ಎಂಬ ಮಾತನ್ನು ನಾನು ಒಪ್ಪುವುದಿಲ್ಲ. ನಮ್ಮ ಎಲ್ಲ ಆಧ್ಯಾತ್ಮಿಕ ಹೋರಾಟಗಳಲ್ಲೂ ಸಾಮಾಜಿಕ ಮುನ್ನಡೆಯಲ್ಲೂ ಅವರು ನಮ್ಮ ಸಂಗಾತಿಗಳು, ನಮಗೆ ನೆರವಾಗುವವರು.' ಆದರೆ ಇದು ಅವರಿಗೆ ಒಪ್ಪಿಗೆಯಾಗ ಲಿಲ್ಲ. ತಲೆಯಲ್ಲಾಡಿಸಿ ಅವರು ತಮ್ಮ ಅಸಮ್ಮತಿಯನ್ನು ತೋರ್ಪಡಿಸಿದರು. ತರುವಾಯ ಹೊತ್ತು ಮೀರುತ್ತಬಂದುದನ್ನು ಸೂಚಿಸುತ್ತ, 'ನೀನು ಹೊರಡುವ ವೇಳೆ ಬಂದಿತು. ಎಚ್ಚರ, ತಡವಾಗಿ ಹೋದೀಯೆ! ಆಮೇಲೆ ನಿನ್ನ ಹೆಂಗಸು ನಿನ್ನನ್ನು ಕೋಣೆಗೆ ಸೇರಿಸಲಾರಳು!' ಇದನ್ನು ಕೇಳಿ ಅಲ್ಲಿದ್ದವರೆಲ್ಲ ಗಟ್ಟಿಯಾಗಿ ನಕ್ಕರು."

ಶ್ರೀರಾಮಕೃಷ್ಣರು ತನ್ನ ಬಗ್ಗೆ ಇರಿಸಿದ್ದ ಪ್ರೇಮದ ಬಗ್ಗೆ ಶಿವನಾಥ ತನ್ನ ಸ್ಮೃತಿ ಚಿತ್ರಗಳಲ್ಲಿ ಉಜ್ವಲವಾಗಿ ಬರೆದಿಟ್ಟಿದ್ದಾನೆ. ಎಷ್ಟೋ ಸಂದರ್ಭಗಳಲ್ಲಿ ಶ್ರೀರಾಮಕೃಷ್ಣರು ಅವನನ್ನು ವಾತ್ಸಲ್ಯದಿಂದ ಅಪ್ಪಿಕೊಂಡು, ದಕ್ಷಿಣೇಶ್ವರಕ್ಕೆ ಮತ್ತೆ ಬರುವಂತೆ ಕೇಳಿಕೊಳ್ಳುತ್ತಿದ್ದರು. ಒಮ್ಮೆ, ಹೀಗೆ ಎಷ್ಟೋ ಬಾರಿ ಕರೆದ ಮೇಲೂ ಅವನು ಬಾರದಿದ್ದಾಗ ತಾವೇ ಅವನನ್ನು ನೋಡಲು ಹೊರಟುಬಿಟ್ಟರು. ಆಧ್ಯಾತ್ಮಿಕ ಜೀವನವನ್ನು ನಡೆಸಬಯಸುವ ಯಾರೇ ಆಗಲಿ, ಅಂಥವರ ಬಗ್ಗೆ ಶ್ರೀರಾಮಕೃಷ್ಣರ ಪ್ರೀತಿ ಅಷ್ಟಿತ್ತು!

ಆದರೆ ಇಷ್ಟು ನಿಕಟವಾದ ಸಂಪರ್ಕ ಹೊಂದಿದ್ದರೂ ಪಂಡಿತ ಶಿವನಾಥನಿಗೆ ಶ್ರೀರಾಮಕೃಷ್ಣರ ಸಮಾಧಿಸ್ಥಿತಿಯ ಬಗ್ಗೆ ವಿಚಿತ್ರವಾದ ನಂಬಿಕೆಯೊಂದು ಬೆಳೆದಿತ್ತು. "ಅದೊಂದು ಬಗೆಯ ನರರೋಗದ ಪರಿಣಾಮವಾಗಿತ್ತು. ಅದರಿಂದಾಗಿ, ಅವರೊಳಗೆ ಯಾವುದಾದರೊಂದು ಉತ್ಕಟ ಭಾವವೋ ಉದ್ವೇಗವೋ ಕೆರಳಿದಾಗ ಬವಳಿ ಬಂದು ತಾತ್ಕಾಲಿಕವಾಗಿ ಸಂಜ್ಞಾಶೂನ್ಯರಾಗಿಬಿಡುತ್ತಿದ್ದರು. ಮತ್ತು ಒಳಗೆ ಪ್ರಬಲ ಭಾವನೆಗಳ ಸಂಚಾರವಾಗುತ್ತಿರುವುದರ ಕುರುಹಾಗಿ ಅವರ ಮುಖಮಂಡಲವು ಉಜ್ವಲ ಕಾಂತಿಯಿಂದ ಬೆಳಗುತ್ತಿತ್ತು" ಎಂದು ಅವನು ಬರೆಯುತ್ತಾನೆ. ಈ ಬಗೆಯ 'ಅಪಸ್ಮಾರ'ಕ್ಕೆ ಕಾರಣವೇನಿರಬಹುದೆಂದೂ ಅವನು ಊಹಿಸಿದ್ದ. ಶ್ರೀರಾಮಕೃಷ್ಣರು ತಮ್ಮ ಯೌವನ ಕಾಲದಲ್ಲಿ ಆಹಾರ ನಿದ್ರಾದಿಗಳನ್ನು ಲೆಕ್ಕಿಸದೆ ನಡೆಸಿದ ಉಗ್ರ ತಪೋಮಯ ಜೀವನದ

ಬಗ್ಗೆ ಅವನಿಗೆ ಸ್ವಲ್ಪ ತಿಳಿದುಬಂದಿತ್ತು. ಅತಿಯಾದ ದೇಹದಂಡನೆ - ಮನೋದಂಡನೆಗಳಿಂದಲೇ ಅವರಿಗೆ ಈಗಿನ ವಿಕಲ್ಪಗಳು ಉಂಟಾಗಿರಬೇಕೆಂದು ಆತ ತರ್ಕಿಸಿದ್ದ. ಆದರೂ ಅಂತಹ ಸ್ಥಿತಿಯು ತೀರಾ ಅಸಹಜವೆಂದೇನೂ ಅವನಿಗೆ ತೋರಿರಲಿಲ್ಲ. ಚೈತನ್ಯ, ಮಹಮ್ಮದ ಮತ್ತು ಭಕ್ತಿಪ್ರವೃತ್ತಿಯು ಇತರ ಸಂತರನೇಕರಿಗೆ ಉಂಟಾಗುತ್ತಿದ್ದ ಅವಸ್ಥೆಯೂ ಇದೇ ಬಗೆಯದು ಎಂಬುದು ಅವನ ತೀರ್ಮಾನವಾಗಿತ್ತು.

ಅವನ ಮನಸ್ಸಿನಲ್ಲಿ ಅಂಥ ನಂಬಿಕೆ ನೆಲೆಯೂರಲು ಪ್ರಾಯಶಃ ಕಾರಣವಾದ ಒಂದು ಘಟನೆಯಿತ್ತು. ಅದನ್ನು ಅವನೇ ತನ್ನ ಪುಸ್ತಕದಲ್ಲಿ ತಿಳಿಸುತ್ತಾನೆ:

ಒಮ್ಮೆ ಶ್ರೀರಾಮಕೃಷ್ಣರ ದರ್ಶನಕ್ಕಾಗಿ ಕೆಲವು ಶ್ರೀಮಂತರು ಕಲ್ಕತ್ತದಿಂದ ಬಂದಿದ್ದರು. ಮಾತಿನ ಮಧ್ಯೆ ಶ್ರೀರಾಮಕೃಷ್ಣರು ಏತಕ್ಕೋ ಸ್ವಲ್ಪ ಹೊತ್ತು ಹೊರಗೆ ಹೋದರು. ಆಗ ಅಲ್ಲೇ ಇದ್ದ ಹೃದಯ, ಬಂದಿದ್ದವರೊಂದಿಗೆ ಮಾತನಾಡಲಾರಂಭಿಸಿದ. ಸಾಧನಾಕಾಲದಲ್ಲಿ ಶ್ರೀರಾಮಕೃಷ್ಣರ ಅವಸ್ಥೆ ಹೇಗಿತ್ತೆಂಬುದನ್ನು ಬಣ್ಣಿಸುತ್ತ ಕೇಳುಗರನ್ನು ವಿಸ್ಮಿತರನ್ನಾಗಿಸಿದ. "ಸಾಧನೆಯ ಉತ್ತುಂಗ ಸ್ಥಿತಿಯಲ್ಲಿದ್ದಾಗಲಂತೂ, ಅವರು ಭಗವತ್ಪ್ರೇಮದಿಂದ ಉನ್ಮತ್ತರಾಗಿ ಬಾಹ್ಯಪ್ರಜ್ಞೆಯನ್ನೇ ಕಳೆದುಕೊಂಡು ಮೃತಪ್ರಾಯರಾಗಿಬಿಟ್ಟಿದ್ದರು" ಎನ್ನುತ್ತ ಅವರ ಮಹಿಮೆಯನ್ನು ಕೊಂಡಾಡಿದ.

ಹೃದಯ ಹೀಗೆ ಹೇಳುತ್ತಿರುವಾಗಲೇ ಶ್ರೀರಾಮಕೃಷ್ಣರು ಅಲ್ಲಿಗೆ ಬಂದರು. ಅವನ ಮಾತು ಅವರ ಕಿವಿಗೂ ಬಿತ್ತು. ಆ ಮಾತಿನಲ್ಲಿ ಅತಿಶಯೋಕ್ತಿಯೇನೂ ಇರಲಿಲ್ಲ. ಆದರೆ ಅದರ ಹಿಂದೆ ಅವನ ಉದ್ದೇಶವೇನಿತ್ತೆಂಬುದು ಅವರಿಗೆ ಕ್ಷಣಮಾತ್ರದಲ್ಲಿ ಅರಿವಾಗಿ ಅವನಿಗೆ ಛೀಮಾರಿ ಹಾಕಿದರು: "ಎಂಥಾ ಹೀನ ಬುದ್ಧಿ ನಿನ್ನದು! ಇವರ ಮುಂದೆ ನನ್ನನ್ನು ಹೊಗಳುತ್ತಿದ್ದೀಯಲ್ಲ! ಇವರ ಬೆಲೆಬಾಳುವ ವೇಷಭೂಷಣಗಳನ್ನು, ಚಿನ್ನದ ಸರ-ಗಡಿಯಾರಗಳನ್ನು ನೋಡಿಬಿಟ್ಟೆ; ಆದ್ದರಿಂದ, ಎಷ್ಟು ಸಾಧ್ಯವೋ ಅಷ್ಟು ಹಣವನ್ನು ಇವರಿಂದ ಲಪಟಾಯಿಸುವ ಯೋಜನೆ ಹಾಕಿದೆ! ಅಲ್ಲವೆ?... ಛೆ! ಇವರೆಲ್ಲ ನನ್ನ ಬಗ್ಗೆ ಏನು ಭಾವಿಸಿದರೆ ನನಗೇನಯ್ಯ?"

ಹೀಗೆಂದ ಶ್ರೀರಾಮಕೃಷ್ಣರು ಆ ಸಂದರ್ಶಕರತ್ತ ತಿರುಗಿ ಹೇಳಿದರು:

"ಇಲ್ಲ ಇಲ್ಲ. ಇವನೆಂದದ್ದು ಸರಿಯಲ್ಲ. ನಾನು ಕೆಲಕಾಲ ಬಾಹ್ಯಜ್ಞಾನಶೂನ್ಯನಾಗಿ, ಬಾಹ್ಯಪ್ರಪಂಚದಿಂದ ವಿಮುಖನಾಗಿ ಇದ್ದದ್ದೇನೋ ನಿಜವೇ. ಆದರೆ ಹಾಗಾದದ್ದು ಮಾತ್ರ ಭಗವತ್ಪ್ರೇಮದಿಂದಲ್ಲ. ಆ ಸಮಯದಲ್ಲಿ ನನಗೆ ನಿಜವಾಗಿಯೂ ಹುಚ್ಚು ಹಿಡಿದಿತ್ತು! ಈ ದೇವಸ್ಥಾನಕ್ಕೆ ಬರುತ್ತಿದ್ದ ಸಾಧುಗಳು ನನಗೆ ಯಾವಯಾವುದೋ ಸಾಧನೆಗಳನ್ನು ಮಾಡಲು ಹೇಳಿದರು. ನಾನು ಅದರಂತೆಯೇ ಮಾಡಲು ಯತ್ನಿಸಿದೆ. ಅದರ ಪರಿಣಾಮವಾಗಿ ನನಗೆ ಬುದ್ಧಿಸ್ವಾಸ್ಥ್ಯ ತಪ್ಪಿಹೋಯಿತು."

ಶ್ರೀರಾಮಕೃಷ್ಣರ ಈ ಮಾತನ್ನು ಆ ಶ್ರೀಮಂತ ಭಕ್ತರು ಎಷ್ಟರಮಟ್ಟಿಗೆ ನಂಬಿದರೋ ಗೊತ್ತಿಲ್ಲ. ಆದರೆ ವಿಪರ್ಯಾಸವೆಂದರೆ ಬುದ್ಧಿವಂತನಾದ ಶಿವನಾಥನೇ ಈ ಮಾತನ್ನು ನಿಜವೆಂದು ಭಾವಿಸಿದ!! ಮತ್ತು ತನ್ನ ಈ ಅಭಿಪ್ರಾಯವನ್ನು ಅವನು ಇತರರ ಮುಂದೆಯೂ ವ್ಯಕ್ತಪಡಿಸಿದ. ಕ್ರಮೇಣ ಇದು ಶ್ರೀರಾಮಕೃಷ್ಣರ ಕಿವಿಗೂ ಬಿತ್ತು. ಒಂದು ದಿನ ಅವರು ಮಾತಿನ ಮಧ್ಯೆ ಅದನ್ನು ಪ್ರಸ್ತಾಪಿಸಿ ಅವನಿಗೆಂದರು:

"ಶಿವನಾಥ, ನೀನು ಇದಕ್ಕೆ (ನನ್ನ ಭಾವಸಮಾಧಿಗೆ) ರೋಗವೆಂದು ಹೇಳುತ್ತೀಯಂತೆ; ನಾನು ಮೂರ್ಛೆ ಬೀಳುತ್ತೇನೆ ಎನ್ನುವೆಯಂತೆ; ನಿಜವೆ? ಚೆನ್ನಾಗಿದೆ!

ನೀವೆಲ್ಲ ಹಗಲಿರಳೂ ಹೊನ್ನು ಮಣ್ಣುಗಳೇ ಮೊದಲಾದ ಜಡಪದಾರ್ಥಗಳಲ್ಲೇ ಮನ ಸ್ಸಿಟ್ಟಿದ್ದರೂ ನಿಮ್ಮ ಬುದ್ಧಿ ಸರಿಯಾಗಿಯೇ ಇರುತ್ತದೆ, ಆದರೆ ಈ ಜಗತ್ತನ್ನೇ ಚೈತನ್ಯ ಮಯವಾಗಿಸಿರುವ ಆ ದಿವ್ಯ ಚೈತನ್ಯವನ್ನೇ ಅವಿರತ ಸ್ಮರಿಸುತ್ತ ನನ್ನ ಬುದ್ಧಿ ಮಾತ್ರ ಕೆಟ್ಟುಹೋಗಿದೆ, ಅಲ್ಲವೆ? ಅಹಹ, ಶಿವನಾಥ, ಎಲ್ಲಿ ಕಲಿತೆಯೊ ಈ ಬಗೆಯ ತರ್ಕ ವನ್ನು?"

ಇದಕ್ಕೆ ಏನೊಂದು ಬದಲು ಕೊಡಲಾಗದೆ ಪಂಡಿತ ಮೌನ ತಾಳಿದ.

ಇನ್ನೊಮ್ಮೆ ಶಿವನಾಥ, ಯಾವುದೋ ನಿರ್ದಿಷ್ಟ ದಿನದಂದು ದಕ್ಷಿಣೇಶ್ವರಕ್ಕೆ ಬರಲು ಒಪ್ಪಿದ್ದ; ಪ್ರಾಯಶಃ ಶ್ರೀರಾಮಕೃಷ್ಣರ ಪ್ರೀತಿಯ ಒತ್ತಾಯಕ್ಕೆ ಮಣಿದು. ಆದರೆ ಆ ದಿನ ಅವನು ಬರಲಿಲ್ಲ. ಮತ್ತೊಮ್ಮೆ ಅವನು ಬಂದಾಗ ಅವರು ಆಶ್ಚರ್ಯ ಪಡು ತ್ತಲೇ ಕೇಳಿದರು:

"ಅಲ್ಲ, ನೀವುಗಳೆಲ್ಲ ಅಷ್ಟೊಂದು ಜಾಣರು ಅನ್ನಿಸಿಕೊಂಡವರು, ಅದ್ಹೇಗೆ ನಿಮಗೆ ಸುಳ್ಳು ಹೇಳಲು ಸಾಧ್ಯವಾಗುತ್ತದೊ! ನನ್ನನ್ನು ನೀವು ಹುಚ್ಚ ಎನ್ನುತ್ತೀರಿ. ಆದರೆ ನನ್ನ ನಾಲಿಗೆಯಲ್ಲಿ ಮಾತ್ರ ಒಂದು ಸುಳ್ಳೂ ಬರುವುದಿಲ್ಲಪ್ಪ!"

ಇದಕ್ಕೇನೆಂದಾನು ಶಿವನಾಥ!

ವಿಜಯಕೃಷ್ಣ ಗೋಸ್ವಾಮಿಯೂ ಇನ್ನಿತರರೂ ಸಂಘವನ್ನು ಬಿಟ್ಟುಹೋದುದಕ್ಕೆ ಶ್ರೀರಾಮಕೃಷ್ಣರೊಂದಿಗಿನ ಅತಿಯಾದ ಒಡನಾಟವೇ ಕಾರಣ ಎಂದು ಶಿವನಾಥನಿಗೆ ಅನ್ನಿಸಿತ್ತು. ಆದ್ದರಿಂದ ಸಂಘ ಉಳಿದು ಬೆಳೆಯಬೇಕಾದರೆ ತಾನು ಅವರಿಂದ ದೂರವಿರ ಬೇಕೆಂದು ನಿಶ್ಚಯಿಸಿದ. ಅವನಿಗೂ ಶ್ರೀರಾಮಕೃಷ್ಣರಿಗೂ ಇದ್ದ ಪರಸ್ಪರ ವಿಶ್ವಾಸವನ್ನು ಕಂಡಿದ್ದವರೊಬ್ಬರು ಅವನನ್ನೊಮ್ಮೆ ಕೇಳಿದರು, "ಏನು, ಈಚೆಗೆ ದಕ್ಷಿಣೇಶ್ವರಕ್ಕೆ ಬರುತ್ತಲೇ ಇಲ್ಲವಲ್ಲ?" ಎಂದು. ಅದಕ್ಕೆ ಶಾಸ್ತ್ರಿ ಉತ್ತರಿಸಿದ. "ನಾನು ಅಲ್ಲಿಗೆ ಪದೇ ಪದೇ ಬರುತ್ತಿದ್ದರೆ ಸಮಾಜದ ಇತರರೂ ನನ್ನನ್ನು ಅನುಸರಿಸಿ ಬರಲಾರಂಭಿಸಿತ್ತಾರೆ. ಆಗ ಸಂಘ ಬಿದ್ದುಹೋಗುತ್ತದೆ. ಆದ್ದರಿಂದಲೇ ನಾನಲ್ಲಿಗೆ ಬರುವುದಿಲ್ಲ."

ಹೀಗೆ ಶ್ರೀರಾಮಕೃಷ್ಣರ ಆಕರ್ಷಣೆಯ ಮೋಡಿಗೊಳಗಾಗದಿರಲು ಶಿವನಾಥ ಶಾಸ್ತ್ರಿ ಬಹಳವಾಗಿ ಪ್ರಯತ್ನಿಸಿದ. ಆದರೇನು? ಅವನ ವ್ಯಕ್ತಿತ್ವದ ಮೇಲೆ ಅವರ ಪ್ರಭಾವ ಆದಾಗಲೇ ಆಳವಾಗಿ ಅಚ್ಚೊತ್ತಿತ್ತು. ಮತ್ತು ಅವನ ಹೃದಯದಲ್ಲಿ ಅವರಿಗೆ ಅತ್ಯುನ್ನತ ಸ್ಥಾನವಿತ್ತು. ಅವನು ಬರೆಯುತ್ತಾನೆ:

"ಆಧ್ಯಾತ್ಮಿಕಜೀವನದ ತೃಷೆ ಅವರಲ್ಲಿದ್ದಷ್ಟು ಉತ್ಕಟವಾಗಿ ಬೇರೆ ಯಾರಲ್ಲೂ ಇದ್ದುದನ್ನು ನಾನು ಕಾಣಲಿಲ್ಲ. ಅವರಷ್ಟು ತೀವ್ರವಾದ ತಪಸ್ಸನ್ನಾಚರಿಸಿದ ಮತ್ತೊಬ್ಬ ವ್ಯಕ್ತಿಯನ್ನು ನಾನೆಲ್ಲೂ ನೋಡಲಿಲ್ಲ. ಶ್ರೀರಾಮಕೃಷ್ಣರು ಕೇವಲ ಒಬ್ಬ ಸಾಧಕನಾಗಿ ಉಳಿದಿರಲಿಲ್ಲವೆಂಬುದು ನನಗೆ ಖಚಿತವಾಗಿದೆ. ಆಧ್ಯಾತ್ಮಿಕ ಸತ್ಯದ ನೇರ ಅನುಭವ ವನ್ನು ಹೊಂದಿದ್ದ ಸಿದ್ಧಪುರುಷರೇ ಅವರು. ಅವರೊಂದಿಗಿನ ನನ್ನ ಸಂಪರ್ಕ ಅಲ್ಪಾ ವಧಿಯದಾದರೂ, ಅದು ನನ್ನೊಳಗಿನ ಆಧ್ಯಾತ್ಮಿಕ ಶ್ರದ್ಧೆಯನ್ನು ಬಲಗೊಳಿಸಿತು. ಅವರು ನನ್ನ ಮೇಲಿರಿಸಿದ್ದ ಪ್ರೇಮಕ್ಕಾಗಿ ನಾನು ಅವರಿಗೆ ಚಿರಋಣಿಯಾಗಿದ್ದೇನೆ. ನಿಸ್ಸಂಶಯವಾಗಿ ನಾನು ನನ್ನ ಜೀವನದಲ್ಲಿ ಸಂಧಿಸಿದ ಅತ್ಯದ್ಭುತ ವ್ಯಕ್ತಿ ಅವರು."

ಶ್ರೀರಾಮಕೃಷ್ಣರ ವ್ಯಕ್ತಿತ್ವದ ವೈಭವವನ್ನು, ವೈವಿಧ್ಯವನ್ನು ಸಂಕ್ಷಿಪ್ತವಾಗಿ ಬಣ್ಣಿಸುವ ಒಂದು ಲೇಖನವು ಒಮ್ಮೆ ಬ್ರಾಹ್ಮಸಮಾಜದ ಮುಖಪತ್ರಿಕೆಯಾದ 'ಥೀಯಿಸ್ಟಿಕ್ ಕ್ವಾರ್ಟರ್ಲಿ ರೆವ್ಯೂ' ಎಂಬ ಪತ್ರಿಕೆಯಲ್ಲಿ ಪ್ರಕಟಗೊಂಡಿತು. ಅದರ ಕೆಲವು ಭಾಗಗಳು ಇಂತಿದ್ದುವು:

"ಶ್ರೀರಾಮಕೃಷ್ಣರು ಬೋಧಿಸಿದ ಧರ್ಮ ಯಾವುದು? ಅದು ಸಂಪ್ರದಾಯಬದ್ಧ ಹಿಂದೂಧರ್ಮವೇ ಆಗಿದೆ. ಆದರೆ ಅವರು ಒಂದು ದೇವತೆಯ ಆರಾಧಕರಲ್ಲ. ಅವರು ಶೈವರಲ್ಲ, ಅವರು ಶಾಕ್ತರಲ್ಲ, ಅವರು ವೈಷ್ಣವರಲ್ಲ, ಅವರು ವೇದಾಂತಿಗಳಲ್ಲ. ಆದರೂ ಅವರು ಇವೆಲ್ಲವೂ ಆಗಿದ್ದಾರೆ. ಅವರು ಶಿವನನ್ನೂ ಪೂಜಿಸುತ್ತಾರೆ, ಕಾಳಿಯನ್ನೂ ಪೂಜಿಸುತ್ತಾರೆ; ಅವರು ರಾಮನನ್ನೂ ಪೂಜಿಸುತ್ತಾರೆ, ಕೃಷ್ಣನನ್ನೂ ಪೂಜಿಸುತ್ತಾರೆ. ಮತ್ತು ಅವರು ವೇದಾಂತತತ್ತ್ವಗಳ ನಿಷ್ಠಾವಂತ ಅನುಯಾಯಿಗಳೂ ಆಗಿದ್ದಾರೆ. ಅವರೊಬ್ಬ 'ವಿಗ್ರಹಾರಾಧಕ'ರು; ಆದರೂ ಅವರು, 'ಅಖಂಡ ಸಚ್ಚಿದಾನಂದ'ವೆಂದು ತಾವೇ ಕರೆಯುವ ಅನಂತ-ನಿರಾಕಾರ-ಪರಬ್ರಹ್ಮದ ನಿಷ್ಠಾವಂತ ಆರಾಧಕರೂ ಆಗಿದ್ದಾರೆ. ಅವರ ಪಾಲಿಗೆ ಪ್ರತಿಯೊಂದು ದೇವತೆಯೂ ಒಂದೊಂದು ಶಕ್ತಿ; ಅದೇ ಅನಂತ-ನಿರಾಕಾರ ದಿವ್ಯ ಚೇತನದೊಂದಿಗೆ ಆತ್ಮದ ಅವಿನಾಸಂಬಂಧವನ್ನು ಸುವ್ಯಕ್ತಗೊಳಿಸುವ ಒಂದೊಂದು ತತ್ತ್ವ. ಈ ಅವತಾರಗಳು ಏಕಮಾತ್ರ ಅನಂತ-ಅಖಂಡ ಸಚ್ಚಿದಾನಂದಸಾಗರದ 'ಶಕ್ತಿ' ಮತ್ತು 'ಲೀಲೆ'ಗಳಷ್ಟೇ ಎಂದು ಅವರೆನ್ನುತ್ತಾರೆ. . . ಅವರು ನಮಗೆ ಲಭ್ಯವಿರುವಷ್ಟು ದಿನವೂ ನಾವು ಅವರ ಪದತಲದಲ್ಲಿ ಕುಳಿತು ಪವಿತ್ರತೆ, ಆಧ್ಯಾತ್ಮಿಕತೆ, ಭಗವತ್ಪ್ರೇಮಗಳ ಪಾಠಗಳನ್ನು ಕಲಿಯೋಣ."

ಈ ಲೇಖನದ ಕರ್ತೃ ಪ್ರತಾಪಚಂದ್ರ ಮಜುಮದಾರನೆಂಬ ಬ್ರಾಹ್ಮಮುಖಂಡ; ಕೇಶವಸೇನನ ಆಪ್ತ. ಮತ್ತೊಂದು ಲೇಖನದಲ್ಲಿ ಅವನು ಬರೆಯುತ್ತಾನೆ:

"ಅವರದು ಶಿಶುಸಹಜ ಭಕ್ತಿ; ಅದಕ್ಕೊಪ್ಪುವಂತೆ ಭಗವಂತನನ್ನು ಮಾತೃದೃಷ್ಟಿಯಿಂದ ಕಂಡು ಆರಾಧಿಸುವ ಅದ್ಭುತ ಕಲ್ಪನೆ. ಇವೆರಡರ ನೆರವಿನಿಂದ ಅವರು ನಮ್ಮೆಲ್ಲರ ಹೃದಯಗಳಲ್ಲೂ ಆ ಬಗೆಯ ಭಕ್ತಿಯು ಅರಳುವಂತೆ ಪ್ರಚೋದಿಸಿದರು . . . ಹಿಂದೂಪುರಾಣಗಳಲ್ಲಿ ವರ್ಣಿತವಾಗಿರುವ ಮೂವತ್ತೂರು ಕೋಟಿ ದೇವತೆಗಳಲ್ಲಿ ಹರಿಹಂಚಿಹೋಗಿರುವ ದಿವ್ಯತೆಯ ವಿವಿಧ ಅಂಶಗಳನ್ನು ಗುರುತಿಸಿ ಗೌರವಿಸುವುದನ್ನು ನಾವು ಅವರ ಸಹವಾಸದಿಂದ ಕಲಿತೆವು.

"ಆ ವ್ಯಕ್ತಿ ತಾನು ಹೋದಲ್ಲೆಲ್ಲ ನಿರ್ಮಾಣ ಮಾಡುವ ಜ್ಯೋತಿರ್ಮಯ ವಾತಾವರಣದಲ್ಲೇ ನನ್ನ ಮನಸ್ಸಿನ್ನೂ ತೇಲುತ್ತಿದೆ. ನಾನು ಅವರನ್ನು ಸಂಧಿಸಿದಾಗಲೆಲ್ಲ ಅವರು ನನ್ನೊಳಗೆ ಹರಿಯಿಸಿದ ಒಂದು ಅನಿರ್ವಚನೀಯ-ಅವ್ಯಕ್ತಭಾವದ ಪುಳಕ ನನ್ನಿಂದ ಇನ್ನೂ ದೂರವಾಗಿಲ್ಲ. ಆದರೆ ಇಷ್ಟರಮೇಲೆ, ನನಗೂ ಅವರಿಗೂ ಸಾಮಾನ್ಯಾಂಶವಾದರೂ ಏನಿದೆ? ನಾನಾದರೋ ಆಂಗ್ಲಪ್ರಭಾವಕ್ಕೆ ಸಿಲುಕಿದ, 'ನಾಗರಿಕ'ನಾದ, ಅಹಂಭಾವಯುಕ್ತನಾದ, ಅರ್ಧಂಬರ್ಧ ನಂಬಿಕೆಯ, ಸುಶಿಕ್ಷಿತ ವಿಚಾರವಾದಿ ಎನ್ನಿಸಿ

ಕೊಂಡ ವ್ಯಕ್ತಿ; ಅವರೋ ಒಬ್ಬ ಬಡ-ದೀನ-ಅನಕ್ಷರಸ್ಥನಾದ, 'ಶಿಸ್ತುಗಾರ'ನಲ್ಲದ, ವಿಗ್ರಹಾರಾಧಕನಾದ ಹಿಂದೂ ಭಕ್ತ! ಡಿಸ್ರೇಲಿ, ಫಾಸೆಟ್, ಸ್ಟ್ಯಾನ್ಲಿ, ಮ್ಯಾಕ್ಸ್ ಮುಲ್ಲರರೇ ಮೊದಲಾದ ಅಸಂಖ್ಯಾತ ಐರೋಪ್ಯ ವಿದ್ವಾಂಸರ, ಜ್ಞಾನಿಗಳ ಮಾತುಗಳನ್ನು ಅದಾಗಲೇ ಆಲಿಸಿರುವ ನಾನು ಅವರ ದರ್ಶನಕ್ಕಾಗಿ ಹಾತೊರೆಯುತ್ತೇನಲ್ಲ, ಏಕಿರಬಹುದು? ಏಸುವಿನ ಪರಮಭಕ್ತನೂ ಅನುಯಾಯಿಯೂ ಆದ ನಾನು, ಉದಾರಪಂಥಿಗಳಾದ ಕ್ರೈಸ್ತಮಿಷನರಿಗಳ ಸ್ನೇಹಿತನೂ ಬೆಂಬಲಿಗನೂ ಆದ ನಾನು, ವಿಚಾರವಂತರ ಬ್ರಾಹ್ಮಸಮಾಜದ ನಿಷ್ಠಾವಂತ ಸ್ವಯಂಸೇವಕನಾದ ನಾನು–ಅವರ ಮಾತುಗಳನ್ನು ಕೇಳುತ್ತ ಕೇಳುತ್ತ ಮಂತ್ರಮುಗ್ಧನಾಗುವೆನಲ್ಲ, ಹೇಗದು? ಮತ್ತು ಹೀಗಾಗುವುದು ನನಗೆ ಮಾತ್ರವಲ್ಲ, ನನ್ನಂತಿರುವ ಹತ್ತುಹಲವರ ಸ್ಥಿತಿಯೂ ಇದೇ! ಅವರನ್ನು ಪ್ರಶ್ನಿಸಲು, ಪರೀಕ್ಷಿಸಲು ಬರುವವರು ಹಲವರು. ಅವರನ್ನು ನೋಡಿ ಅವರೊಡನೆ ಮಾತನಾಡಲು ಜನರು ತಂಡೋಪತಂಡವಾಗಿ ಬರುತ್ತಾರೆ. ಆದರೆ ನಮ್ಮಲ್ಲಿನ ಕೆಲವು ವಿದ್ಯಾವಂತ ಮೂರ್ಖರು ಮಾತ್ರ ಅವರಲ್ಲಿ ಅಂಥದೇನನ್ನೂ ಕಾಣದೆಹೋಗಿದ್ದಾರೆ. ಇನ್ನು, ತಿರಸ್ಕಾರಬುದ್ಧಿಯ ಕ್ರೈಸ್ತಮಿಷನರಿಗಳು ಅವರನ್ನು ಸೋಗುಗಾರ, ವಂಚಕ ಎಂದೋ ಭ್ರಮೆಗೊಳಗಾದ ವ್ಯಕ್ತಿಯೆಂದೋ ಕರೆಯಬಹುದು. ಇವರ ಆಕ್ಷೇಪಗಳನ್ನೂ ನಾನು ಚೆನ್ನಾಗಿ ತೂಗಿನೋಡಿದ್ದೇನೆ. ಆದ್ದರಿಂದ ಈಗ ನಾನು ಬರೆಯುವುದನ್ನೆಲ್ಲ ಉದ್ದೇಶಪಟ್ಟೇ ಬರೆದಿದ್ದೇನೆ.”

ಸಾಮೂಹಿಕ ಭಜನೆ-ಕೀರ್ತನೆಗಳಿಗೆ ಬಂಗಾಳದಲ್ಲೊಂದು ವಿಶೇಷ ಸ್ಥಾನವಿದೆ. ನೂರಾರು ವರ್ಷಗಳಿಂದ ಬೆಳೆದುಬಂದ ಒಂದು ಕಲೆ, ಧಾರ್ಮಿಕ ವಿಧಿ ಅದಾಗಿದೆ. ಅಂತೆಯೇ ಬ್ರಾಹ್ಮಸಮಾಜದಲ್ಲೂ ಅದರದ್ದೇ ಆದ ಸಂಕೀರ್ತನೆಯ ಸಂಪ್ರದಾಯವೊಂದು ರೂಪುಗೊಂಡಿತ್ತು. ಸಂಘದ ತತ್ತ್ವಗಳಿಗೆ ಅನುಗುಣವಾದ ಹಾಡುಗಳನ್ನೇ ಅವರು ಹಾಡುತ್ತ ಬಂದಿದ್ದರು. ತ್ರೈಲೋಕ್ಯನಾಥ ಸನ್ಯಾಲ ಎಂಬವನು ಕೇಶವನ ನಿಕಟವರ್ತಿಗಳಲ್ಲಿ ಒಬ್ಬನಾಗಿದ್ದವನು. ಚಿರಂಜೀವ ಶರ್ಮ ಎಂಬ ಕಾವ್ಯನಾಮದಿಂದ ಇವನು ಪ್ರಸಿದ್ಧನಾಗಿದ್ದಾನೆ. ಇವನೊಬ್ಬ ಪ್ರತಿಭಾನ್ವಿತ ಸಂಗೀತಗಾರ ಮತ್ತು ಕವಿ. ಸಮಾಜವು ಇಬ್ಭಾಗವಾದಾಗ ಇವನು ಕೇಶವನೊಂದಿಗೇ ಉಳಿದುಕೊಂಡು 'ನವವಿಧಾನ' ಪಂಥದ ಆಚಾರ್ಯರಲ್ಲೊಬ್ಬನಾದ.

ಸ್ವಭಾವತಃ ಭಕ್ತಿವಂತನಾದ ತ್ರೈಲೋಕ್ಯನಾಥ, ಶ್ರೀರಾಮಕೃಷ್ಣರಿಂದ ಆಳವಾಗಿ ಪ್ರಭಾವಿತನಾದ. ಶ್ರೀರಾಮಕೃಷ್ಣರ ಭಕ್ತ್ಯಾವೇಶದ ನರ್ತನ, ಮಧುರ ಗಾಯನ, ಬಾರಿಬಾರಿಗೂ ಸಮಾಧಿಗೇರುವ ಪರಿ—ಇವು ಅವನ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತಿದ್ದುವು. ಆ ಸ್ಫೂರ್ತಿಯಿಂದ ಅವನು 'ನವವಿಧಾನ'ಕ್ಕಾಗಿ ಭಾವೋದ್ದೀಪಕವಾದ ಅನೇಕ ಕವನಗಳನ್ನು ರಚಿಸಿದ. ಮುಂದೆ ಇವು ಬಂಗಾಳದ ಲಕ್ಷಾಂತರ ಜನರ ಹೃನ್ಮನಗಳನ್ನು ರಂಜಿಸಿದುವು.

ತ್ರೈಲೋಕ್ಯನಾಥ ಸ್ವತಃ ಮಧುರ ಗಾಯಕನಾಗಿದ್ದ. ಅವನು ಎಷ್ಟೋ ಸಲ ಶ್ರೀರಾಮಕೃಷ್ಣರ ಮುಂದೆ ಹಾಡುವುದಿತ್ತು, ಅದನ್ನು ಕೇಳುತ್ತ ಅವರು ಭಾವಸಮಾಧಿಗೇರುತ್ತಿದ್ದುದೂ ಅಪರೂಪವಲ್ಲ.

ಹೀಗೆ ಬ್ರಾಹ್ಮಸಮಾಜದ ಎರಡೂ ಪಂಗಡಗಳ ಮೇಲೆ ಶ್ರೀರಾಮಕೃಷ್ಣರು ಬೀರಿದ ಪ್ರಭಾವ ಅತ್ಯಂತ ಗಾಢವಾದುದು. ಒಮ್ಮೆ ಆಚಾರ್ಯ ಪ್ರತಾಪಚಂದ್ರ

ಮಜುಮುದಾರನನ್ನೂ ತ್ರೈಲೋಕ್ಯನಾಥನನ್ನು ಕೆಲವರು ಕೇಳಿದರು:

"ಠಾಕೂರರ ಸಹವಾಸವನ್ನು ಮಾಡಿದ ಮೇಲೆ ನಿಮ್ಮ ಸಮಾಜದ ಆಧ್ಯಾತ್ಮಿಕ ಭಾವದಲ್ಲಿ ಯಾವ ಬಗೆಯ ಸುಧಾರಣೆಯಾಗಿದೆ? ಅದೀಗ ಹೇಗೆ ಮುಂದುವರಿಯುತ್ತಿದೆ?" ಅದಕ್ಕೆ ಪ್ರತಾಪಚಂದ್ರ ಉತ್ತರಿಸಿದ್ದು ಹೀಗೆ:

"ಇವರನ್ನು ಕಾಣುವುದಕ್ಕೆ ಮೊದಲು ಧರ್ಮವೆಂದರೆ ನಿಜಕ್ಕೂ ಏನು ಎಂಬುದು ನಮಗೆ ತಿಳಿದಿತ್ತೆ? ನಾವು ಸುಮ್ಮನೆ ಪುಂಡಾಟಿಕೆಯಿಂದ ತಿರುಗಾಡಿಕೊಂಡಿದ್ದೆವು. ಯಥಾರ್ಥವಾದ ಆಧ್ಯಾತ್ಮಿಕಜೀವನದ ಸ್ವರೂಪವನ್ನು ನಾವು ಅರಿತಿದ್ದು ಇವರ ದರ್ಶನಲಾಭವಾದಮೇಲಷ್ಟೇ."

ಹೀಗೆ ಶ್ರೀರಾಮಕೃಷ್ಣರು ತಮ್ಮ ನಾನಾ ಬಗೆಯ ಬೋಧನೆಗಳಿಂದ, ಮಾರ್ಗದರ್ಶನದಿಂದ ಬ್ರಾಹ್ಮಸಮಾಜಕ್ಕೆ ಹೊಸ ಸ್ಫೂರ್ತಿಯನ್ನೂ ಶಕ್ತಿಯನ್ನೂ ನೀಡಿದರು. ಮಾತ್ರವಲ್ಲ, ಅವರ ಪ್ರಭಾವದಿಂದಾಗಿ ಅದರ ಸ್ವರೂಪವೇ ಬದಲಾಯಿತು. ಬ್ರಾಹ್ಮಸಮಾಜೀಯರ ಅನೇಕ ರೀತಿನೀತಿಗಳ, ತತ್ತ್ವಗಳ ಕುರಿತಾಗಿ ಅವರು ತಮ್ಮ ಅಸಮ್ಮತಿಯನ್ನು ನೇರವಾಗಿ ವ್ಯಕ್ತಪಡಿಸಿದರು. ಮತ್ತು ಸಮಾಜದಲ್ಲಿ ಪ್ರಚಾರದಲ್ಲಿದ್ದ ಭಗವಂತನ 'ಸಗುಣ-ನಿರಾಕಾರ' ಕಲ್ಪನೆಯ ಇತಿಮಿತಿಗಳನ್ನು ಕಂಡು ಅವರದನ್ನು 'ಅಪಕ್ವ ನಿರಾಕಾರಭಾವ' ಎಂದು ಕರೆಯುತ್ತಿದ್ದರು. ಆದರೂ ಕೂಡ, ಆ ಭಾವದಲ್ಲಿಯೇ ದೃಢವಾದ ವಿಶ್ವಾಸವನ್ನಿರಿಸಿ ಸಾಧನೆ ಮಾಡಿದವರಿಗೂ ಭಗವತ್ಸಾಕ್ಷಾತ್ಕಾರವಾಗುವುದು ಖಂಡಿತ ಎಂದು ಅವರು ಬಾರಿಬಾರಿಗೂ ಹೇಳಿದ್ದಾರೆ.

ಪ್ರತಿದಿನವೂ ಕೀರ್ತನಾಂತ್ಯದಲ್ಲಿ ನಾನಾ ದೇವದೇವಿಯರಿಗೂ ಸಕಲ ಸಂಪ್ರದಾಯಗಳ ಭಕ್ತರಿಗೂ ನಮಸ್ಕಾರ ಸಲ್ಲಿಸುವಾಗ ಅವರು ಮರೆಯದೆ, "ಆಧುನಿಕ ಬ್ರಹ್ಮಜ್ಞಾನಿಗಳಿಗೆ ನಮಸ್ಕಾರ" ಎಂದು ಬ್ರಾಹ್ಮಸಮಾಜೀಯರಿಗೂ ತಲೆಬಾಗುತ್ತಿದ್ದರು. ಭಗವಂತನೆಡೆಗೆ ಒಯ್ಯುವ ಇತರೆಲ್ಲ ಮತಧರ್ಮಗಳಂತೆಯೇ ಬ್ರಾಹ್ಮಸಮಾಜದ ಸಿದ್ಧಾಂತವೂ ಒಂದು ಮಾರ್ಗ ಎಂದು ಅವರು ನಂಬಿದ್ದರು. ಆದರೆ ಪಾಶ್ಚಾತ್ಯ ವಿಚಾರಗಳ ಪ್ರಭಾವದಿಂದ ಮುಕ್ತವಾಗಿ, ಸಮಾಜವು ಆಧ್ಯಾತ್ಮಿಕ ಮಾರ್ಗದಲ್ಲಿ ನೆಲೆಗೊಳ್ಳುವಂತೆ ಮಾಡಲು ಅತ್ಯುತ್ಸಾಹಿತರಾಗಿದ್ದರು.

ಶ್ರೀರಾಮಕೃಷ್ಣರ ಅಭೂತಪೂರ್ವ ಆಧ್ಯಾತ್ಮಿಕ ಜೀವನದ ಪರಿಚಯ ಮಾಡಿಕೊಟ್ಟು ಕಲ್ಕತ್ತದ ಜನಸಮೂಹವನ್ನು ದಕ್ಷಿಣೇಶ್ವರಕ್ಕೆ ಆಕರ್ಷಿಸಿದ ಹಿರಿಮೆ ಬ್ರಾಹ್ಮಸಮಾಜದ್ದು. ಅವರ ಪವಿತ್ರ ಪದತಲದಲ್ಲಿ ಕುಳಿತು ಆಧ್ಯಾತ್ಮಿಕ ಶಕ್ತಿಯನ್ನು, ಶಾಂತಿಯನ್ನು ಹೊಂದಿ ಧನ್ಯರಾದ ಪ್ರತಿಯೊಬ್ಬನೂ ಆ ವಿಷಯದಲ್ಲಿ 'ನವವಿಧಾನ' ಮತ್ತು 'ಸಾಧಾರಣ' ಬ್ರಾಹ್ಮಸಮಾಜಗಳಿಗೆ ಶಾಶ್ವತವಾಗಿ ಋಣಿ.

ಶ್ರೀರಾಮಕೃಷ್ಣರ ಮನದಲ್ಲಿ ಬಹುದಿನಗಳಿಂದಲೂ ಒಂದು ತೀವ್ರವಾದ ಆಸೆಯಿತ್ತು—ಶ್ರೀಚೈತನ್ಯ ಮಹಾಪ್ರಭುವಿನ ಮಹಾದ್ಭುತವೂ ಚರಿತ್ರಪ್ರಸಿದ್ಧವೂ ಆದ 'ನಗರ ಸಂಕೀರ್ತನೆ'ಯ ದೃಶ್ಯವನ್ನು ನೋಡಬೇಕು ಎಂದು. ಶ್ರೀಚೈತನ್ಯನು ತನ್ನ ಆಪ್ತ ಸಖರೊಡಗೂಡಿ, ಹರಿನಾಮಮತ್ತರಾದ ನೂರಾರು ಜನರನ್ನು ಮುನ್ನಡೆಸಿಕೊಂಡು ಸಾಗುತ್ತಿರುವ ಆ ನೋಟವನ್ನು ಊಹಿಸಿಕೊಂಡರೇ ಅವರಿಗೆ ರೋಮಾಂಚನವಾಗುತ್ತಿತ್ತು.

ಅವರು ಕೇಶವಸೇನನನ್ನು ಮೊದಲ ಬಾರಿಗೆ ಭೇಟಿಯಾದ ಕೆಲವೇ ದಿನಗಳ ಬಳಿಕ ಜಗನ್ಮಾತೆ ಅವರ ಈ ಮನೋರಥವನ್ನು ಈಡೇರಿಸಿಕೊಟ್ಟಳು.

ಒಮ್ಮೆ ಅವರು ತಮ್ಮ ಕೋಣೆಯ ಹೊರಗೆ ಸುಮ್ಮನೆ ನಿಂತಿದ್ದಾರೆ; ಆಗ ಇದ್ದಕ್ಕಿದ್ದಂತೆ ಆ ದರ್ಶನವಾಯಿತು. ಪಂಚವಟಿಯ ಕಡೆಯಿಂದ, ಹರಿನಾಮ ಸಂಕೀರ್ತನೆಯಲ್ಲಿ ತೊಡಗಿದ ಜನಸಮೂಹದ ಮಹಾ ತರಂಗವೊಂದು ಮುನ್ನಡೆದು ಬಂದಿತು. ಅದು ತಮ್ಮ ಕೋಣೆಯ ಮುಂಭಾಗದಿಂದ ಹಾದು, ದಕ್ಷಿಣೇಶ್ವರದ ಉದ್ಯಾನದ ಮೂಲಕ ಸಾಗಿ ಮರಗಳ ಹಿಂದೆ ಅದೃಶ್ಯವಾಗುವುದನ್ನು ಅವರು ಕಂಡರು. ಆ ಗುಂಪಿನ ನಡುಭಾಗದಲ್ಲಿ ಶ್ರೀಚೈತನ್ಯದೇವನು ನಿತ್ಯಾನಂದನನ್ನೂ ಅದ್ವೈತಗೋಸ್ವಾಮಿಯನ್ನೂ ಜೊತೆಗೂಡಿಕೊಂಡು ಭಗವತ್ಪ್ರೇಮದಿಂದ ಮತ್ತನಾಗಿ ನಿಧಾನವಾಗಿ ಹೆಜ್ಜೆಯಿಡುತ್ತ ಹೋಗುತ್ತಿದ್ದ. ಸುತ್ತಮುತ್ತಲಿದ್ದವರೆಲ್ಲರೂ ಅವನ ಆ ಪ್ರೇಮದಿಂದ ತನ್ಮಯರಾಗಿದ್ದರು. ಕೆಲವರು ಉನ್ಮತ್ತತೆಯಿಂದ ಅಚೇತನರಾಗಿದ್ದರೆ ಮತ್ತೆ ಕೆಲವರು ಆನಂದದ ತಾಂಡವನೃತ್ಯದಲ್ಲಿ ತೊಡಗಿದ್ದರು. ಆ ಮೆರವಣಿಗೆಗೆ ತುದಿಮೊದಲುಗಳೇ ಇಲ್ಲದಂತಿತ್ತು—ಅಂತಹ ಜನಸಂದಣಿ! ಹೀಗೆ, ಆನಂದದ ಮಹಾಪ್ರವಾಹವೇ ತಮ್ಮೆದುರು ಸಾಗುತ್ತಿರುವುದನ್ನು ಕಂಡ ಶ್ರೀರಾಮಕೃಷ್ಣರು ಆನಂದವಿಭೋರರಾದರು.

ಆ ಜನಸಮೂಹದಲ್ಲಿದ್ದ ಕೆಲವರ ಮುಖಗಳು ಅವರಿಗೆ ಸ್ಪಷ್ಟವಾಗಿ ಗೋಚರವಾದುವು. ಮತ್ತು ಅವು ಅವರ ಮನಃಪಟಲದ ಮೇಲೆ ನಿಚ್ಚಳವಾಗಿ ಚಿತ್ರಿತವಾದುವು. ಈ ದರ್ಶನವಾದ ಕೆಲದಿನಗಳಲ್ಲೇ ಆ ವ್ಯಕ್ತಿಗಳೆಲ್ಲ ತಮ್ಮ ಭಕ್ತರಾಗಿ ಬರಲಾರಂಭಿಸಿದಾಗ, ಅವರು ಪೂರ್ವಜನ್ಮದಲ್ಲಿ ಶ್ರೀಚೈತನ್ಯನ ಅಂತರಂಗಭಕ್ತರಾಗಿದ್ದರು ಎಂಬುದನ್ನು ಶ್ರೀರಾಮಕೃಷ್ಣರು ಗುರುತಿಸಿದರು.

ಇದಾದ ಕೆಲಕಾಲದ ಬಳಿಕ ಶ್ರೀರಾಮಕೃಷ್ಣರು ಪ್ರತಿ ವರ್ಷದಂತೆ ತಮ್ಮ ಹುಟ್ಟೂರಾದ ಕಾಮಾರಪುಕುರಕ್ಕೂ ಸಿಹೋರಿಗೂ ಹೋದರು. ಆ ಸಂದರ್ಭದಲ್ಲಿ ನಡೆದ ಕೆಲವು ಕುತೂಹಲಕರ ಘಟನೆಗಳು ಉಲ್ಲೇಖಯೋಗ್ಯವಾಗಿವೆ.

ಸಿಹೋರಿನಿಂದ ಕೆಲವು ಮೈಲಿ ದೂರದಲ್ಲಿ ಫುಲುಯಿ ಶ್ಯಾಮಬಜಾರ್ ಎಂಬುದೊಂದು ಸ್ಥಳ. ಅಲ್ಲಿ ಅನೇಕ ವೈಷ್ಣವರು ವಾಸವಾಗಿದ್ದರು.* ಇವರು ಪ್ರತಿದಿನವೂ ಭಜನೆ-ಕೀರ್ತನೆಗಳನ್ನು ಮಾಡುತ್ತ ಅತ್ಯಂತ ಆನಂದಪೂರ್ಣವಾಗಿ ಕಾಲ ಕಳೆಯುತ್ತಾರೆ

*ಕರ್ನಾಟಕದ ವೈಷ್ಣವಸಂಪ್ರದಾಯಕ್ಕೂ ಬಂಗಾಳದ ವೈಷ್ಣವಸಂಪ್ರದಾಯಕ್ಕೂ ಬಹಳಷ್ಟು ವ್ಯತ್ಯಾಸಗಳಿವೆ ಎಂಬುದನ್ನು ಮರೆಯಬಾರದು.

ಎಂಬ ಸುದ್ದಿ ಶ್ರೀರಾಮಕೃಷ್ಣರಿಗೆ ತಿಳಿಯಿತು. ಇದು ತಿಳಿದೊಡನೆ, ತಾವೂ ಅಲ್ಲಿಗೆ ಹೋಗಿ ಅದನ್ನು ಕೇಳಬೇಕೆಂಬ ಇಚ್ಛೆ ಅವರಲ್ಲುಂಟಾಯಿತು.

ಶ್ಯಾಮಬಜಾರಿನ ನೆರೆಗ್ರಾಮದ ಬೆಲ್ಟೆ ಎಂಬಲ್ಲಿ ನಟವರ ಗೋಸ್ವಾಮಿ ಎಂಬವನಿದ್ದ. ಇವನು ಶ್ರೀರಾಮಕೃಷ್ಣರನ್ನು ಮೊದಲೇ ಕಂಡಿದ್ದವನು. ತನ್ನ ಮನೆಗೆ ಬಂದು ಪಾದಧೂಳಿಯನ್ನು ಅನುಗ್ರಹಿಸಬೇಕೆಂದು ಅವರನ್ನು ಆಹ್ವಾನಿಸಿದ. ಅದಕ್ಕೊಪ್ಪಿ ಅವರು ಹೃದಯುನನ್ನು ಕೂಡಿಕೊಂಡು ಅವನಲ್ಲಿಗೆ ಹೋದರು.

ನಟವರನ ಮನೆಯಲ್ಲಿ ಶ್ರೀರಾಮಕೃಷ್ಣರು ಒಂದು ವಾರ ಇದ್ದು, ಶ್ಯಾಮಬಜಾರಿನ ವೈಷ್ಣವರ ಕೀರ್ತನಾನಂದದಲ್ಲಿ ಪಾಲ್ಗೊಂಡರು. ಆಗ ಅವರ ಅತ್ಯಪೂರ್ವ ಭಾವಗಳನ್ನು ಕಂಡ ಊರಿನ ಜನರು ಪರಮಾನಂದಭರಿತರಾದರು. ಕ್ರಮೇಣ ಆ ವಿಷಯ ಎಲ್ಲೆಲ್ಲೂ ಪ್ರಚಾರವಾಯಿತು. ರಾಮಜೀವನಪುರ, ಕೃಷ್ಣಗಂಜ್ ಮುಂತಾದ ಅನೇಕಾನೇಕ ಊರುಗಳಿಗೂ ಈ ಸುದ್ದಿ ಹಬ್ಬಿತು.

ಆ ಸಂಕೀರ್ತನೆಯಲ್ಲಿ ಪಾಲ್ಗೊಳ್ಳಲು ಊರೂರುಗಳಿಂದ ಭಜನೆಯ ತಂಡಗಳು ಬಂದು ನೆರೆದುವು. ಗಂಡಸರು-ಹೆಂಗಸರು-ಮಕ್ಕಳು ಎಲ್ಲರೂ ಕಿಕ್ಕಿರಿದು ಜಾಗವೇ ಇಲ್ಲದಂತಾಯಿತು! ಆಗ ನಡೆದುದನ್ನು ಶ್ರೀರಾಮಕೃಷ್ಣರೇ ಬಣ್ಣಿಸುತ್ತಾರೆ:

"...ನಾನು ಹೃದಯುನ ಮನೆಯಲ್ಲಿದ್ದಾಗ ಕೆಲವರು ಬಂದು ನನ್ನನ್ನು ಶ್ಯಾಮಬಜಾರಿಗೆ ಕರೆದುಕೊಂಡು ಹೋದರು. ಇನ್ನೇನು ಹಳ್ಳಿಯನ್ನು ಪ್ರವೇಶಿಸಬೇಕು—ಆಗ ನನಗೆ ಶ್ರೀಚೈತನ್ಯದೇವನ ದರ್ಶನವಾಯಿತು. ಹಳ್ಳಿಯ ಜನರು ಚೈತನ್ಯಭಕ್ತರು ಎಂದು ಅದರಿಂದ ನಾನು ಅರ್ಥ ಮಾಡಿಕೊಂಡೆ. ಅಲ್ಲಿ ನಡೆದ ಸಂಕೀರ್ತನೆಯ ಆಕರ್ಷಣೆ ಎಷ್ಟು ಪ್ರಬಲವಾಗಿತ್ತೆಂದರೆ, ಏಳು ಹಗಲು ಏಳು ರಾತ್ರಿ ಜನ ನಿರಂತರವಾಗಿ ನೆರೆದೇ ಇದ್ದರು. ಯಾವಾಗ ನೋಡಲಿ, ಭಜನೆ-ನೃತ್ಯ! ಬೇರೆ ಏನೂ ಇಲ್ಲ! ಆ ದೃಶ್ಯವನ್ನು ನೋಡಲು ಜನಗಳು ಗೋಡೆಗಳ ಮೇಲೆ, ಮರಗಳ ಮೇಲೆಲ್ಲ ಹತ್ತಿಬಿಟ್ಟಿದ್ದರು. ಬಳಿಕ ನಾನು ನಟವರ ಗೋಸ್ವಾಮಿಯ ಮನೆಗೆ ಹೋದೆ. ಮತ್ತೆ ಅಲ್ಲಿಯೂ ಹಗಲಿರುಳು ಅಂಥದೇ ಜನಸಂದಣಿ! ಬೆಳಗಿನ ಹೊತ್ತಿನಲ್ಲಿ ನಾನು ಸ್ವಲ್ಪ ಹೊತ್ತು ವಿಶ್ರಮಿಸಲು ಹೇಗೋ ಮಾಡಿ ನೇಕಾರನೊಬ್ಬನ ಮನೆಗೆ ಬಂದುಬಿಡುತ್ತಿದ್ದೆ. ಆದರೆ ಜನ ಅದನ್ನು ಪತ್ತೆ ಹಚ್ಚಿಬಿಟ್ಟರು. ಸರಿ, ತಾಳ-ಮೃದಂಗ ಹಿಡಿದುಕೊಂಡು ಅಲ್ಲಿಗೂ ಬಂದೇಬಿಟ್ಟರು. ಅಲ್ಲಿ ಮತ್ತದೇ ಕಥೆ! ನಾವು ಸ್ನಾನ ಮಾಡಿ ಊಟ ಮಾಡಬೇಕಾದರೆ ಅಪರಾಹ್ಣ ಮೂರು ಗಂಟೆಯಾಗುತ್ತಿತ್ತು! 'ಅಲ್ಲೊಬ್ಬ ಮನುಷ್ಯ ಒಂದೇ ದಿನದಲ್ಲಿ ಏಳು ಬಾರಿ ಸತ್ತು ಏಳು ಬಾರಿ ಹುಟ್ಟಿದ್ದಾನೆ' ಎಂಬ ಸುದ್ದಿ ಬೇರೆ ಹಬ್ಬಿಬಿಟ್ಟಿತು. ಆ ಗೊಂದಲದಲ್ಲೇ ಇದ್ದರೆ ಎಲ್ಲಿ ನನ್ನ ತಲೆ ಸಿಡಿದುಹೋದೀತೋ ಎಂದು ಹೆದರಿದ ಹೃದಯು ನನ್ನನ್ನು ಯಾರೂ ಇಲ್ಲದ ಬಯಲಿಗೆ ಎಳೆದುಕೊಂಡು ಹೋಗುತ್ತಿದ್ದ. ಆದರೂ ಜನ ಬಿಡಲಿಲ್ಲ. ಅಲ್ಲಿಗೂ ಬಂದು ಮುತ್ತಿಕೊಂಡರು. ತಾಳ-ಮೃದಂಗ ತಂದು ಶುರು ಮಾಡಿಯೇ ಬಿಟ್ಟರು. ಹೃದಯುನಿಗೆ ರೇಗಿಹೋಯಿತು. 'ಏನ್ರಯ್ಯ, ಹೀಗೆ ನಮ್ಮ ಪ್ರಾಣ ಹಿಂಡುತ್ತಿದ್ದೀರಲ್ಲ. ನಾವೇನು ಸಂಕೀರ್ತನೆಯನ್ನು ಕಂಡೇ ಇಲ್ಲ ಅಂದುಕೊಂಡಿರಾ?' ಎಂದು ಅವರನ್ನು ಗದರಿಸಿದ. ದೂರದೂರದ ಹಳ್ಳಿಗಳಿಂದಲೂ ಜನರು ಬಂದು ರಾತ್ರಿಯೆಲ್ಲ ಇರುತ್ತಿದ್ದರು. ಆಗ ನನಗೆ ಅರ್ಥವಾಯಿತು ದೈವೀಆಕರ್ಷಣೆಯೆಂದರೆ ಹೇಗಿರುತ್ತದೆ ಎಂದು..."

ಕಡೆಗೆ ಹೃದಯ ಶ್ರೀರಾಮಕೃಷ್ಣರನ್ನು ಕರೆದುಕೊಂಡು ಗೋಪ್ಯವಾಗಿ ಸಿಹೋರಿಗೆ ಪಲಾಯನ ಮಾಡಿದ. ಆಗಲೇ ಆ ಆನಂದದ ಮೇಳ ಮುಕ್ತಾಯಗೊಂಡದ್ದು.

ಶ್ರೀರಾಮಕೃಷ್ಣರು ಆ ಸ್ಥಳಕ್ಕೆ ಹೋಗಿದ್ದಾಗ ಮತ್ತೊಂದು ತಮಾಷೆ ನಡೆಯಿತು. ಅವರನ್ನು ಕಂಡು ಅಲ್ಲಿನ ಕೆಲವು ಗೋಸ್ವಾಮಿಗಳಿಗೆ (ವೈಷ್ಣವಮುಖಂಡರು) ಭಯ ಹುಟ್ಟಿಕೊಂಡಿತು—ಎಲ್ಲಿ ಇವರಿಂದಾಗಿ ತಮಗೆ ಬರಬೇಕಾದ ಕಾಣಿಕೆ-ದಕ್ಷಿಣೆಗಳಿಗೆ ಸಂಚಕಾರ ಬಂದುಬಿಡುತ್ತದೋ ಎಂದು. ಅವರ ಜನಪ್ರಿಯತೆಯನ್ನು, ಜನರಿಗೆ ಅವರ ಮೇಲಿನ ಭಕ್ತಿ-ಗೌರವಗಳನ್ನು ಕಂಡು ಗೋಸ್ವಾಮಿಗಳಿಗೆ ಹಾಗೆ ಅನ್ನಿಸಿದ್ದು ಸಹಜವೇ. ಆದ್ದರಿಂದ ಆ ವಿಷಯವಾಗಿ ಅವರೊಂದಿಗೆ ಜಗಳಕ್ಕೇ ಬಂದರು. ಆದರೆ ಶ್ರೀರಾಮಕೃಷ್ಣರು ಒಂದು ಕಾಸನ್ನೂ ಮುಟ್ಟುವುದಿಲ್ಲ ಅಥವಾ ಒಂದೆಳೆ ದಾರವನ್ನೂ ತೆಗೆದುಕೊಳ್ಳುವುದಿಲ್ಲ ಎಂಬುದು ಗೊತ್ತಾದಾಗ ಅವರಿಗೆ ಸಮಾಧಾನವಾಯಿತು.

ಯಾರೋ ಅವರಿಗೆ "ಶ್ರೀರಾಮಕೃಷ್ಣರು ಬ್ರಹ್ಮಜ್ಞಾನಿಗಳು" ಎಂದು ಹೇಳಿದ್ದರು. ಆದರೆ ಶ್ರೀರಾಮಕೃಷ್ಣರನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಒಬ್ಬ ಕೇಳಿದ: "ಇವರು ಬ್ರಹ್ಮಜ್ಞಾನಿಯೇ? ಹಾಗಾದರೆ ಅದೇಕೆ ಇವರ ಹಣೆಯಲ್ಲಿ ಗಂಧ-ಚಂದನದ ಯಾವ ಗುರುತೂ ಇಲ್ಲ? ಕೊರಳಲ್ಲಿ ತುಳಸೀಮಾಲೆಯಿಲ್ಲ?" ತಕ್ಷಣ ಅವರಲ್ಲೇ ಯಾರೋ ಒಬ್ಬ ಉತ್ತರಿಸಿದ: "ಅವುಗಳೆಲ್ಲ ಒಣಗಿದ ತೆಂಗಿನ ಗರಿಗಳಂತೆ ಬಿದ್ದುಹೋಗಿವೆ!" ಈ ಉತ್ತರ ಎಲ್ಲರಿಗೂ ಸಮಾಧಾನ ತಂದಿತು. ಎಲ್ಲರೂ ಶ್ರೀರಾಮಕೃಷ್ಣರಿಗೆ ನಮಸ್ಕರಿಸಿ ಹೊರಟರು.

ಶ್ರೀರಾಮಕೃಷ್ಣರು ಮುಂದೆ 'ಒಣಗಿದ ತೆಂಗಿನಗರಿ'ಯ ಈ ದೃಷ್ಟಾಂತವನ್ನು ತಮ್ಮ ಮಾತುಗಳಲ್ಲಿ ಮತ್ತೆಮತ್ತೆ ಬಳಸಿಕೊಳ್ಳುತ್ತಿದ್ದರು. ಹೇಗೆ ತೆಂಗಿನ ಮರ ಬೆಳೆಯುತ್ತ ಬೆಳೆಯುತ್ತ ಅದರ ಹಳೆಯ ಗರಿಗಳೆಲ್ಲ ತಾವಾಗಿಯೇ ಉದುರಿಹೋಗುವುವೋ ಹಾಗೆಯೇ ಸಾಧಕನು ಆಧ್ಯಾತ್ಮಿಕ ಪಥದಲ್ಲಿ ಮುಂದುವರಿದಂತೆಲ್ಲ ಬಾಹ್ಯಾಚರಣೆಗಳೂ ಬಾಹ್ಯಚಿಹ್ನೆಗಳೂ ಅವನ ಪಾಲಿಗೆ ಅನಗತ್ಯವಾಗುತ್ತವೆ; ಆಗ ಅವನು ಅವುಗಳನ್ನು ಸಹಜವಾಗಿಯೇ ತ್ಯಜಿಸುತ್ತಾನೆ ಎಂಬುದು ತಾತ್ಪರ್ಯ. ಇಂತಹ ಸುಂದರವಾದ ಉಪಮೆಗಳನ್ನು ಕೊಡುವಾಗ ಶ್ರೀರಾಮಕೃಷ್ಣರು ತಮಗೆ ಸಹಜವಾದ ಪ್ರಾಮಾಣಿಕತೆಯಿಂದ, ತಾವು ಅವನ್ನು ಕಲಿತುಕೊಂಡದ್ದು ಎಲ್ಲಿ ಎಂಬುದನ್ನೂ ಆಗಾಗ ಹೇಳುತ್ತಿದ್ದರು.

ಅರ್ಥಹೀನವಾದ ಮತ್ತು ಅತಿಯಾದ ಮತಾಂಧತೆಯನ್ನು ಖಂಡಿಸುತ್ತ ಶ್ರೀರಾಮಕೃಷ್ಣರು ತಮ್ಮ ಒಂದು ಅನುಭವವನ್ನು ಹೇಳುತ್ತಿದ್ದರು:

"ಶ್ಯಾಮಬಜಾರಿನ ಸುತ್ತಮುತ್ತಲ ಹಳ್ಳಿಗಳಲ್ಲಿ ನೇಕಾರರು ವಾಸವಾಗಿದ್ದಾರೆ. ಅವರೆಲ್ಲ ವೈಷ್ಣವ ಮತಾವಲಂಬಿಗಳು. ಆದರೆ ಅವರು ಹೇಗೆ ಮಾತನಾಡುತ್ತಾರೆ ಗೊತ್ತೆ? ನನ್ನ ಬಗ್ಗೆ ಅವರು ಕೇಳಿದರು: 'ಇವರು ಯಾವ ವಿಷ್ಣುವನ್ನು ನಂಬುತ್ತಾರೆ?—ಏನು, ಜಗದ್ರಕ್ಷಕನಾದ ವಿಷ್ಣುವನ್ನೇ? ಓ, ಆ ವಿಷ್ಣುವನ್ನು ನಾವು ಲೆಕ್ಕಿಸುವುದೇ ಇಲ್ಲ! ಆಮೇಲೆ, ಅವರು ಯಾವ ಶಿವನನ್ನು ಪೂಜಿಸುವುದು? ನಾವಂತೂ ಆತ್ಮಾರಾಮ ಶಿವನನ್ನೇ ನಂಬುವುದು . . .' ಅವರಲ್ಲೊಬ್ಬ ಯಾರಿಗೋ ಸಲಹೆ ಕೊಟ್ಟ: 'ನೋಡು, ನೀನು ಯಾವ ಹರಿಯನ್ನು ಪೂಜೆ ಮಾಡುತ್ತೀಯೆಂದು ಅವನಿಗೆ ಹೇಳಿಬಿಡುವುದೊಳ್ಳೆಯದು.' ಅದಕ್ಕೆ ಇನ್ನೊಬ್ಬ ಸಿಡುಕಿದ: 'ಅಯ್ಯಾ, ನಮ್ಮನ್ನು ಯಾಕೆ

ವಾದಕ್ಕೆ ಎಳೆಯುತ್ತೀಯ ? ನೀವೇ ಅದನ್ನು ಇತ್ಯರ್ಥ ಮಾಡಿಕೊಳ್ಳಿ.' ನೋಡಿದರೆ, ಅವರು ನೇಕಾರರು ! ಆಡುವುದು ಮಾತ್ರ ಇಂಥ ದೊಡ್ಡದೊಡ್ಡ ಮಾತು !"

ಶ್ರೀರಾಮಕೃಷ್ಣರು ಕಾಮಾರಪುಕುರಕ್ಕೆ ಬೇರೆಬೇರೆ ಸಂದರ್ಭಗಳಲ್ಲಿ ಬಂದಿದ್ದಾಗ ನಡೆದ ಹಲವಾರು ಘಟನೆಗಳು ಬಹಳ ಸ್ವಾರಸ್ಯವಾಗಿವೆ. ಅವುಗಳಲ್ಲಿ ಒಂದೆರಡನ್ನು ಈಗ ನೋಡೋಣ.

ಶ್ರೀರಾಮಕೃಷ್ಣರು ಅಜೀರ್ಣದಿಂದ ನರಳುತ್ತಿದ್ದ ಸಮಯ ಅದು. ಊಟಕ್ಕೆ ದ್ರವ ಪದಾರ್ಥ ಮಾತ್ರ. ಒಂದು ರಾತ್ರಿ ಎಂದಿನಂತೆ ಬಾರ್ಲಿ ಗಂಜಿ, ಹಾಲು ಕುಡಿದು ಮಲಗಿದ್ದಾರೆ. ಮನೆಮಂದಿಯೂ ಮನೆಗೆಲಸ ಮುಗಿಸಿ ಮಲಗಿದ್ದಾರೆ. ಇದ್ದಕ್ಕಿದ್ದಂತೆ ನಡುರಾತ್ರಿಯ ವೇಳೆಯಲ್ಲಿ ಶ್ರೀರಾಮಕೃಷ್ಣರಿಗೆ ಎಚ್ಚರವಾಯಿತು. ಭಾವಾವೇಶಭರಿತರಾಗಿದ್ದಾರೆ; ತಮ್ಮ ಕೋಣೆಯಿಂದ ಹೊರಬಂದು ತೂರಾಡುತ್ತ ರಾಮಲಾಲನ ತಾಯಿಯೇ ಮೊದಲಾದ ಮನೆಹೆಂಗಸರನ್ನು ಕೂಗಿ ಕರೆದು ಕೇಳಿದರು:

"ಎಲ್ಲಿ, ಎಲ್ಲರೂ ಮಲಗಿಬಿಟ್ಟಿರಾ ? ನನಗೇನು ಊಟಗೀಟ ಹಾಕುವುದಿಲ್ಲವೆ ?"

ರಾಮಲಾಲನ ತಾಯಿ: "ಇದೇನಪ್ಪ ಹೀಗನ್ನುತ್ತಿದ್ದೀಯ ? ನೀನು ಗಂಜಿ ಕುಡಿದೇ ಮಲಗಿದ್ದಲ್ಲವೆ ?"

ಶ್ರೀರಾಮಕೃಷ್ಣರು: "ಎಲ್ಲಿ ಕುಡಿದೆ ? ನಾನು ಇದೀಗ ತಾನೆ ದಕ್ಷಿಣೇಶ್ವರದಿಂದ ಬರುತ್ತಿದ್ದೇನೆ. ನೀವು ನನಗೇನೂ ಕೊಡಲಿಲ್ಲವಲ್ಲ !"

ಸ್ತ್ರೀಯರೆಲ್ಲ ಆಚ್ಚರಿಯಿಂದ ಮುಖಮುಖ ನೋಡಿಕೊಂಡರು. ಶ್ರೀರಾಮಕೃಷ್ಣರು ಈಗ ಯಾವುದೋ ದಿವ್ಯಭಾವದಲ್ಲಿದ್ದಾರೆ ಎಂಬುದೇನೋ ಅವರಿಗೆ ಅರ್ಥವಾಯಿತು. ಆದರೆ ಈ ಅಪರಾತ್ರಿಯಲ್ಲಿ ಏನು ಮಾಡುವುದು ? ಮನೆಯಲ್ಲಿ ಅವರಿಗೆ ಕೊಡಲು ಯೋಗ್ಯವಾದ ತಿಂಡಿಪದಾರ್ಥವೇನೂ ಇಲ್ಲ ! ರಾಮಲಾಲನ ತಾಯಿ ಸಂಕೋಚ ಪಡುತ್ತಲೇ ನುಡಿದಳು:

"ಏನು ಮಾಡಲಿ, ಮನೆಯಲ್ಲಿ ತಿಂಡಿಯೇನೂ ಇಲ್ಲವಲ್ಲ ! ಪುರಿ ಮಾತ್ರ ಇದೆ, ಹೋಗಲಿ, ಅದನ್ನೇ ಸ್ವಲ್ಪ ತಿನ್ನುವೆಯಾ ? ಅದನ್ನು ತಿಂದರೆ ಹೊಟ್ಟೆಗೂ ತೊಂದರೆಯಾಗುವುದಿಲ್ಲ."

ಹೀಗೆನ್ನುತ್ತಾ ಒಂದು ತಟ್ಟೆಯಲ್ಲಿ ಪುರಿ ತಂದಿಟ್ಟಳು. ಶ್ರೀರಾಮಕೃಷ್ಣರು ಅದನ್ನು ಕಂಡು ಪುಟ್ಟ ಮಕ್ಕಳಂತೆ ಕೋಪಗೊಂಡು ಮುಖ ತಿರುಗಿಸಿ ಹೇಳಿದರು:

"ಈ ಪುರಿ ನಿನಗೇ ಇರಲಿ, ನನಗೆ ಬೇಡ."

ಅವಳೆಂದಳು: "ನೋಡು, ನಿನಗೆ ಆರೋಗ್ಯ ಸರಿಯಿಲ್ಲ. ಇನ್ನೇನನ್ನು ತಿಂದರೂ ನಿನ್ನ ಹೊಟ್ಟೆಗಾಗದು. ಅಲ್ಲದೆ, ಏನನ್ನಾದರೂ ಕೊಂಡುತರೋಣವೆಂದರೂ, ಅಪರಾತ್ರಿ, ಅಂಗಡಿಗಳೆಲ್ಲ ಮುಚ್ಚಿವೆ. ಆದ್ದರಿಂದ ಈಗ ಸ್ವಲ್ಪ ಇದನ್ನೇ ತಿಂದಿರು, ನಾಳೆ ಬೆಳಗಾಗುತ್ತಲೇ ನಿನಗೆ ಬೇಕಾದ್ದು ಮಾಡಿಕೊಡುತ್ತೇನೆ."

ಆದರೆ ಈ ಸಮಾಧಾನದ ಮಾತನ್ನೆಲ್ಲ ಕೇಳುವವರು ಯಾರು ? ಹಟಮಾರಿ ಹುಡುಗರಂತೆ ಶ್ರೀರಾಮಕೃಷ್ಣರು, 'ನಾನೀ ಪುರಿಯನ್ನು ತಿನ್ನಲೊಲ್ಲೆ' ಎಂದು ಪಟ್ಟಾಗಿ ಕುಳಿತುಬಿಟ್ಟರು. ಬೇರೇನೂ ಉಪಾಯಗಾಣದೆ ಆಕೆ ರಾಮಲಾಲನನ್ನು ಎಬ್ಬಿಸಿದಳು. ಅವನು ಹತ್ತಿರದ ಅಂಗಡಿಗೆ ಹೋಗಿ, ಎಷ್ಟೋ ಹೊತ್ತು ಗಟ್ಟಿಯಾಗಿ ಕೂಗಿ,

ಅಂಗಡಿಯವನನ್ನು ಎಬ್ಬಿಸಿ ಒಂದು ಕೇಜಿಯಷ್ಟು ಸಿಹಿತಿಂಡಿಯನ್ನು ಕೊಂಡುತಂದ. ಆ ಸಿಹಿತಿಂಡಿಯೊಂದಿಗೆ ತಟ್ಟೆ ತುಂಬ ಪುರಿಯನ್ನಿಟ್ಟು ಕೊಟ್ಟಾಗ ಶ್ರೀರಾಮಕೃಷ್ಣರ ಆನಂದಕ್ಕೆ ಪಾರವೇ ಇಲ್ಲ. ಅಚ್ಚುಕಟ್ಟಾಗಿ ಕುಳಿತುಕೊಂಡು ಅಷ್ಟನ್ನೂ ತಿಂದು ಮುಗಿಸಿಯೇಬಿಟ್ಟರು! ಇದನ್ನು ಕಂಡು ಮನೆಮಂದಿಯೆಲ್ಲ ಬೆರಗಾಗಿಬಿಟ್ಟರು. ಜೊತೆಗೆ ಗಾಬರಿ ಹತ್ತಿಕೊಂಡಿತು. ಅಲ್ಲದೆ ಇನ್ನೇನು ? ತಿಂಗಳಲ್ಲಿ ಹದಿನೈದು ದಿನ ಬಾರ್ಲಿ ಗಂಜಿ ಯಲ್ಲೇ ಇರುತ್ತಿದ್ದವರು ಈ ರಾತ್ರಿ, ಉಂಡಮೇಲೂ ಮತ್ತೆ ಇಷ್ಟೊಂದನ್ನು ತಿಂದುಬಿಟ್ಟ ರಲ್ಲ! ನಾಳೆ ದಿನ ಏನಾಗುವುದೋ? ಆದರೆ ಆಶ್ಚರ್ಯ! ಮರುದಿನ ಶ್ರೀರಾಮ ಕೃಷ್ಣರು ಎಂದಿಗಿಂತಲೂ ಹೆಚ್ಚು ಸೌಖ್ಯವಾಗಿಯೇ ಇದ್ದರು! ರಾತ್ರಿ ಅಷ್ಟೊಂದು ತಿಂದದ್ದರಿಂದ ಅವರ ಆರೋಗ್ಯ ಸ್ವಲ್ಪವೂ ಕೆಟ್ಟಿರಲಿಲ್ಲ.

ಇನ್ನೊಮ್ಮೆ ಜಯರಾಂಬಾಟಿಯಲ್ಲಿ ಅವರಿದ್ದಾಗ ಇಂಥದೇ ಇನ್ನೊಂದು ಘಟನೆ ನಡೆಯಿತು. ಅಂದು ರಾತ್ರಿ ಎಲ್ಲರೂ ಊಟ ಮುಗಿಸಿ ಮಲಗಿದ್ದಾರೆ, ಗಾಢ ನಿದ್ರೆ ಆವರಿಸಿದೆ. ಆ ಹೊತ್ತಿಗೆ ಇದ್ದಕ್ಕಿದ್ದಂತೆ ಎದ್ದು ಶ್ರೀರಾಮಕೃಷ್ಣರು, 'ಬಹಳ ಹಸಿವು, ಬಹಳ ಹಸಿವು' ಎನ್ನುತ್ತ ಮನೆಮಂದಿಯನ್ನು ಎಬ್ಬಿಸಿದರು. ತಿನ್ನುವ ಪದಾರ್ಥವೇನೂ ಅಂದು ಮಿಕ್ಕಿರಲಿಲ್ಲ. ಇವರಿಗೀಗ ಏನು ಕೊಡುವುದು ಎಂಬ ಚಿಂತೆ, ಕಳವಳ ಹೆಂಗಸ ರಿಗೆ. ಆ ದಿನ ಮನೆಯಲ್ಲಿ ಪಿತೃಶ್ರಾದ್ಧ ನಡೆದಿತ್ತು. ಬಂಧುಬಳಗವೆಂದು ಬಹಳ ಜನ ಬಂದು ಹೋಗಿದ್ದರು. ಆದ್ದರಿಂದ ತಿನ್ನುವ ವಸ್ತುವೆಲ್ಲ ಖಾಲಿಯಾಗಿತ್ತು. ಆದರೆ ಒಂದು ತಪ್ಪಲೆಯಲ್ಲಿ ಅನ್ನ ಮಾತ್ರ ಮಿಕ್ಕಿತ್ತು. ಅದು ಹಳಸಬಾರದೆಂದು ನೀರು ಹಾಕಿಟ್ಟಿದ್ದರು. ಶಾರದಾದೇವಿಯವರು ತುಂಬ ಸಂಕೋಚದಿಂದ ನುಡಿದರು:

"ಒಳಗೆ ಸ್ವಲ್ಪ ಅನ್ನ ಬಿಟ್ಟರೆ ಇನ್ನೇನೂ ಇಲ್ಲ..."

ಶ್ರೀರಾಮಕೃಷ್ಣರು: "ಚಿಂತೆಯಿಲ್ಲ, ಅದನ್ನೇ ತಂದುಕೊಡು!"

ಶ್ರೀಶಾರದಾದೇವಿ: "ಆದರೆ ನೆಂಜಿಕೊಳ್ಳಲು ಏನೂ ಉಳಿದಿಲ್ಲವಲ್ಲ!"

ಶ್ರೀರಾಮಕೃಷ್ಣರು: "ಇಂದು ಮೀನಿನ ಪಲ್ಯವನ್ನೇನೋ ಮಾಡಿದ ನೆನಪು... ಅದೇನಾದರೂ ಮಿಕ್ಕಿರಬಹುದು, ಹೋಗಿ ಹುಡುಕಿ ನೋಡು!"

ಶ್ರೀಶಾರದಾದೇವಿಯವರು ಹುಡುಕಿ ನೋಡಿದರು. ನಿಜ. ಪಾತ್ರೆಯಲ್ಲಿ ಒಂದೇ ಒಂದು ಸಣ್ಣ ಮೀನು, ಜೊತೆಗೆ ಸ್ವಲ್ಪ ರಸ ಉಳಿದುಕೊಂಡಿತ್ತು. ಅದನ್ನು ಕಂಡು ಶ್ರೀರಾಮಕೃಷ್ಣರಿಗೆ ಸಂತೋಷವಾಯಿತು. ಅಷ್ಟೇ ಅಲ್ಲ, ಆ ಸಣ್ಣ ಮೀನನ್ನೇ ನೆಂಜಿ ಕೊಂಡು ಸುಮಾರು ಎರಡು ಸೇರಕ್ಕಿ ಅನ್ನವನ್ನು ತಿಂದು ತೃಪ್ತಿಯಾಯಿತೆಂದರು!

ಶ್ರೀರಾಮಕೃಷ್ಣರ ಮಾನುಷಶರೀರ ಆ ಪಾಟಿ ಆಹಾರವನ್ನು ಜೀರ್ಣಿಸಿಕೊಳ್ಳಲು ಸಾಧ್ಯವೆ? ಆದರೆ ಅದನ್ನು ತಿನ್ನುತ್ತಿದ್ದುದು ಮಾನುಷರೂಪೀ ರಾಮಕೃಷ್ಣರಲ್ಲ, ಬದ ಲಾಗಿ ಅವರೊಳಗೆ ಆವಿರ್ಭಾವಗೊಂಡಿದ್ದ ಆದ್ಯಾಶಕ್ತಿ ಎಂಬುದು ಅವರ ಒಂದು ಮಾತಿನಿಂದಲೇ ಸಾಬೀತಾಗುತ್ತದೆ: ಇನ್ನೊಮ್ಮೆ ಅವರು ಹೀಗೆಯೇ ಬೃಹತ್ ಪ್ರಮಾ ಣದ ಆಹಾರವನ್ನು ಸೇವಿಸುತ್ತಿದ್ದಾಗ ಅದನ್ನು ಬಡಿಸುತ್ತಿದ್ದ ಭಕ್ತೆಯೊಬ್ಬಳು ಅವಾಕ್ಕಾಗಿ ಅವರನ್ನೇ ನೋಡುತ್ತ ಕುಳಿತುಬಿಟ್ಟಳು. ಇದನ್ನು ಗಮನಿಸಿದ ಶ್ರೀರಾಮಕೃಷ್ಣರು ಅವ ಳನ್ನು ಕೇಳಿದರು: "ಇಲ್ಲಿ ಹೀಗೆ ತಿನ್ನುತ್ತಿರುವವರು ಯಾರು? ಹೇಳು ನೋಡೋಣ?" ಅದಕ್ಕೆ ಅವಳೆಂದಳು: "ನಿಮ್ಮ ಅಂತರಂಗದಲ್ಲಿ ಬೇರೆ ಯಾರೋ ಒಬ್ಬರು ಇರುವ ಹಾಗೆ, ಅವರೇ ಇದನ್ನು ತಿನ್ನುತ್ತಿರುವ ಹಾಗೆ, ನನಗೆ ಭಾಸವಾಗುತ್ತಿದೆ!" ಶ್ರೀರಾಮ

ಕೃಷ್ಣರು ಮುಗುಳ್ನಗುತ್ತ ನುಡಿದರು: "ನಿಜ; ನೀನಂದದ್ದು ಸರಿ."

ಶ್ರೀರಾಮಕೃಷ್ಣರೊಮ್ಮೆ ಸಿಹೋರಿಗೆ ಹೋಗಿದ್ದಾಗ ನಡೆದ ಘಟನೆ ಇದು. ಒಂದು ದಿನ, ಹೃದಯನ ತಮ್ಮ ರಾಜಾರಾಮನಿಗೂ ಆ ಊರಿನ ಇನ್ನೊಬ್ಬನಿಗೂ ಜಗಳ ಹತ್ತಿ ಕೊಂಡಿತು. ಯಾವುದೋ ವ್ಯವಹಾರಕ್ಕೆ ಸಂಬಂಧಿಸಿದ ವಿಷಯ. ಮಾತಿಗೆ ಮಾತು ಬೆಳೆಯಿತು. ಕೊನೆಗೆ ಈ ರಾಜಾರಾಮನಿಗೆ ಸಿಟ್ಟೇರಿತು. ಕೈಗೆ ಸಿಕ್ಕ ಮರದ ಹುಕ್ಕಾ ಕೊಳವೆಯೊಂದನ್ನು ತೆಗೆದುಕೊಂಡು ಆ ಮನುಷ್ಯನ ತಲೆಗೆ ಟಪ್ಪೆಂದು ಒಂದೇಟು ಬಿಗಿದ.

ಇದೆಲ್ಲ ನಡೆದಾಗ ಶ್ರೀರಾಮಕೃಷ್ಣರು ಅಲ್ಲೇ ಇದ್ದರು. ರಾಜಾರಾಮನ ಮುಂಗೋಪ ವನ್ನು ಕಂಡು ಅವರು ಚೆನ್ನಾಗಿ ಛೀಮಾರಿ ಹಾಕಿದರು. ಆದರೆ ಹೊಡೆಸಿಕೊಂಡ ವ್ಯಕ್ತಿ ಸುಮ್ಮನೆ ಬಿಡಲಿಲ್ಲ. 'ಮಾಡುತ್ತೇನೆ ನಿನಗೆ ಶಾಸ್ತಿ' ಎಂದು ಹೋಗಿ ಕ್ರಿಮಿನಲ್ ಮೊಕದ್ದಮೆ ಹೂಡಿದ. ಅಲ್ಲದೆ ಈ ವಿಷಯದಲ್ಲಿ ಶ್ರೀರಾಮಕೃಷ್ಣರನ್ನು ಸಾಕ್ಷಿಯಾಗಿ ಹೆಸರಿಸಿದ. ಶ್ರೀರಾಮಕೃಷ್ಣರಂತೂ ಸುಳ್ಳು ಹೇಳಲು ಸಾಧ್ಯವೇ ಇಲ್ಲವಲ್ಲ! ಸತ್ಯ ಸಂಧರು, ಸಾಧುಗಳು ಎಂದು ಬಹು ವರ್ಷಗಳಿಂದಲೂ ಹೆಸರಾಗಿದ್ದವರು ಅವರು. ಆದ್ದರಿಂದ ತಾನು ಮೊಕದ್ದಮೆಯನ್ನು ಗೆಲ್ಲುವುದರಲ್ಲಿ ಅವನಿಗೆ ಸಂಶಯವೇ ಇರ ಲಿಲ್ಲ.

ಈಗ ಶ್ರೀರಾಮಕೃಷ್ಣರು ಸಾಕ್ಷ್ಯ ಹೇಳಲು ವನವಿಷ್ಣುಪುರ ಎಂಬಲ್ಲಿಗೆ ಹೋಗ ಬೇಕಾಯಿತು. ಅಲ್ಲಿ ಅವರು ರಾಜಾರಾಮನಿಗೆ ಹೇಳಿದರು:

"ನೋಡಯ್ಯ, ಆ ಮನುಷ್ಯನಿಗೆ ಒಂದಷ್ಟು ಪರಿಹಾರಧನವನ್ನು ಕೊಟ್ಟೋ ಹೇಗೋ ರಾಜಿ ಮಾಡಿಕೊಂಡು ಕೇಸನ್ನು ರದ್ದುಪಡಿಸು. ಇಲ್ಲದಿದ್ದರೆ ನಿನಗೇ ಗೊತ್ತಿದೆ, ನಾನಂತೂ ಸುಳ್ಳುಪಳ್ಳು ಹೇಳಲಾರೆ. ನಾನು ಏನು ಕಂಡೆನೋ ಅದನ್ನೇ ಹೇಳುವವನು. ಆಮೇಲೆ ನೀನು ಕಷ್ಟಕ್ಕೀಡಾಗುತ್ತೀಯೆ." ಈಗ ರಾಜಾರಾಮನಿಗೆ ನಡುಕ ಹತ್ತಿತು. ಶ್ರೀರಾಮಕೃಷ್ಣರ ಬುದ್ಧಿವಾದದಂತೆ, ಆತನೊಂದಿಗೆ ರಾಜಿ ಮಾಡಿಕೊಳ್ಳುವ ಪ್ರಯತ್ನ ಮಾಡಿದ.

ಈ ಒಂದು ಸಣ್ಣ ಘಟನೆಯು, ಶ್ರೀರಾಮಕೃಷ್ಣರ ಭಾವಪ್ರಪಂಚದ ಆಳ-ಅಗಲ ವನ್ನು ತೋರಿಸುವ ಮತ್ತೊಂದು ಘಟನೆ ನಡೆಯಲು ನಾಂದಿಯಾಯಿತು.

ವನವಿಷ್ಣುಪುರಕ್ಕೆ ಬಂದ ಈ ಅವಕಾಶವನ್ನು ಉಪಯೋಗಿಸಿಕೊಂಡು, ಸುಮ್ಮನೆ ಒಮ್ಮೆ ಊರನ್ನೆಲ್ಲ ನೋಡಿಕೊಂಡು ಬರೋಣವೆಂದು ಶ್ರೀರಾಮಕೃಷ್ಣರು ಒಂದಿಬ್ಬರನ್ನು ಜೊತೆ ಮಾಡಿಕೊಂಡು ಹೊರಟರು. ಹಿಂದೊಮ್ಮೆ ಆ ಊರು ಬಹಳ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂಬ ಸಂಗತಿ ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು. ಚೊಕ್ಕಟವಾದ ರಸ್ತೆಗಳು, ಅಸಂಖ್ಯ ದೇವಸ್ಥಾನಗಳು, ಮಾರುಕಟ್ಟೆಗಳು ಇವೆಲ್ಲ ಇದ್ದುದರ ಕುರುಹು ಉಳಿದಿತ್ತು. ಅಲ್ಲಿನ ಆಳರಸರು ಕಟ್ಟಿಸಿದ್ದ ಸುಂದರ ದೇವಾಲಯಗಳೆಷ್ಟೋ ಪಾಳು ಬಿದ್ದಿದ್ದುವು. ಇವುಗಳಲ್ಲಿ ಮೃಣ್ಮಯೀದೇವಿಯ ದೇಗುಲವೂ ಒಂದು. ಇದು ಬಹಳ ಪ್ರಾಚೀನ ಕಾಲದ್ದು. ಮೃಣ್ಮಯೀದೇವಿ ಬಹಳ ಜಾಗೃತ ದೇವತೆ ಎಂದು ಪ್ರಸಿದ್ಧಿಯಿತ್ತು. ('ಮೃಣ್ಮಯೀ' ಎಂಬ ಹೆಸರಿಗೆ ಅನ್ವರ್ಥವಾಗಿ ಅದೊಂದು ಮಣ್ಣಿನ ವಿಗ್ರಹವೇ ಆಗಿತ್ತು.)

ಶ್ರೀರಾಮಕೃಷ್ಣರು ದೇವಾಲಯಗಳನ್ನೆಲ್ಲ ಒಂದೊಂದಾಗಿ ನೋಡಿಕೊಂಡು ಈ

ದೇಗುಲಕ್ಕೆ ಬರುತ್ತಿದ್ದಾಗ ಹಠಾತ್ತಾಗಿ ಭಾವಾವಸ್ಥೆಗೇರಿದರು. ಆ ಸ್ಥಿತಿಯಲ್ಲಿ ಅವರಿಗೆ ಮೃಣ್ಮಯೀದೇವಿಯ ಮುಖದ ದರ್ಶನವಾಯಿತು. ಸ್ವಲ್ಪಹೊತ್ತಿನಲ್ಲೇ ಅವರು ಸಾಧಾರಣಸ್ಥಿತಿಗೆ ಮರಳಿದರು. ಮತ್ತು ಸಂತೋಷದಿಂದ ಮುನ್ನಡೆದು ದೇವಸ್ಥಾನಕ್ಕೆ ಬಂದರು. ಆದರೆ ಅಲ್ಲಿ ಪ್ರತಿಷ್ಠಿತವಾಗಿದ್ದ ದೇವಿಯ ಮುಖವು ಅವರು ಆಗತಾನೆ ಭಾವಸ್ಥಿತಿಯಲ್ಲಿ ಕಂಡಿದ್ದಂತಿರಲಿಲ್ಲ. ಅವರಿಗೆ ಆಶ್ಚರ್ಯ—ಇದು ಹೇಗೆ ಸಾಧ್ಯ ಎಂದು. ಉತ್ತರವೇನೂ ಹೊಳೆಯಲಿಲ್ಲ. ಆಮೇಲೆ ಯಾರನ್ನೋ ವಿಚಾರಿಸಿದಾಗ, ಆ ವಿಗ್ರಹದ ಬಗ್ಗೆ ತಿಳಿದುಬಂದ ವಿಷಯ ಇದು:

ಈಗ ಅವರು ಕಂಡದ್ದು ಬದಲಾದ ಪ್ರತಿಮೆಯೇ ಹೊರತು, ದೇವಸ್ಥಾನದ ಪ್ರತಿಷ್ಠೆಯ ಸಮಯದಲ್ಲಿ ಸ್ಥಾಪಿಸಲಾಗಿದ್ದ ಮೂಲವಿಗ್ರಹವಲ್ಲ. ಏಕೆಂದರೆ, ಯಾವಾಗಲೋ ಒಮ್ಮೆ ಅಲ್ಲಿನ ರಾಜಮನೆತನದ ಸ್ಥಿತಿ ಅವನತಿಯಲ್ಲಿದ್ದ ಕಾಲದಲ್ಲಿ ಒಬ್ಬಳು ಹುಚ್ಚಿ ಅದನ್ನು ಕೆಡಿಸಿಬಿಟ್ಟಿದ್ದಳು. ಆಗ ಆ ವಿಗ್ರಹದ ಬದಲಿಗೆ ಅದೇ ರೀತಿಯ ಬೇರೊಂದು ವಿಗ್ರಹವನ್ನು ನಿರ್ಮಿಸಲು ತೀರ್ಮಾನಿಸಿ, ಒಬ್ಬ ಕಲಾಕಾರನಿಗೆ ಆ ಕೆಲಸವನ್ನು ಒಪ್ಪಿಸಿದರು. ಆದರೆ ಈ ಬಾರಿ ಅದನ್ನು ನಿರ್ಮಿಸಿದ ಕಲಾಕಾರ ತನ್ನ ಕೌಶಲವನ್ನು ತೋರಿಸಲು ಬೇಕೆಂದೇ ವಿಗ್ರಹದ ಮುಖಭಾವವನ್ನು ಬದಲಾಯಿಸಿಬಿಟ್ಟಿದ್ದ. ಆದರೂ ಅದನ್ನು ಯಾರೂ ಅಷ್ಟಾಗಿ ಪರಿಗಣಿಸದೆ ಪ್ರತಿಷ್ಠಾಪಿಸಿಬಿಟ್ಟಿದ್ದರು.

ಈ ಘಟನೆಯ ಹಿನ್ನೆಲೆಯಲ್ಲಿ, ಹಿಂದೆ ಶ್ರೀರಾಮಕೃಷ್ಣರು ತಮಗಾದ ದರ್ಶನದಲ್ಲಿ ಕಂಡ ಏಸುವಿನ ಮೂಗು ಸ್ವಲ್ಪ ಚಪ್ಪಟೆಯಾಗಿತ್ತೆಂದು ಹೇಳಿದಾಗ ಅವರ ಶಿಷ್ಯರು ಅದನ್ನು ಗಂಭೀರವಾಗಿ ಪರಿಗಣಿಸದಿದ್ದು, ಮುಂದೊಮ್ಮೆ, ಅವನ ಕುರಿತಾಗಿ ಗ್ರಂಥವೊಂದರಲ್ಲಿ ಆ ರೀತಿಯ ವರ್ಣನೆಯೇ ಇದೆ ಎಂದು ತಿಳಿದ ಪ್ರಸಂಗವನ್ನೂ ನಾವು ಅರ್ಥ ಮಾಡಿಕೊಳ್ಳಬಹುದಾಗಿದೆ. ಹಾಗೆಯೇ ನದಿಯಾದಲ್ಲಿ ಶ್ರೀರಾಮಕೃಷ್ಣರಿಗಾದ ಅನುಭವವನ್ನೂ ಇಲ್ಲಿ ಸ್ಮರಿಸಿಕೊಳ್ಳಬಹುದು.

ಕಾಮಾರಪುಕುರದಲ್ಲಿ ಕೆಲತಿಂಗಳನ್ನು ಕಳೆದು ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಮರಳಿದರು. ಆ ಸಮಯದಲ್ಲಿ ಅವರ ಸಂಪರ್ಕಕ್ಕೆ ಬಂದ ಭಕ್ತರಲ್ಲಿ ಲಕ್ಷ್ಮೀನಾರಾಯಣ ಎಂಬ ಮಾರ್ವಾಡಿ ಒಬ್ಬ. ಆತ ವೇದಾಂತವನ್ನು ಓದಿಕೊಂಡಿದ್ದವನು. ಶ್ರೀರಾಮಕೃಷ್ಣರ ಬಗ್ಗೆ ಅವನಿಗೆ ಅತಿಶಯ ಭಕ್ತಿ, ಗೌರವ. ಒಂದು ದಿನ ಅವನು ಶ್ರೀರಾಮಕೃಷ್ಣರ ಹಾಸಿಗೆಯ ಮೇಲುಹೊದಿಕೆ ಹಳೆಯದಾಗಿರುವುದನ್ನು ಗಮನಿಸಿ, ಹೇಳಿದ:

"ಸ್ವಾಮಿ, ನೀವೇಕೆ ಹೀಗೆ ಕಷ್ಟ ಪಡಬೇಕು? ನಾನು ನಿಮಗಾಗಿ ಹತ್ತುಸಾವಿರ ರೂಪಾಯಿಗಳನ್ನು ಬ್ಯಾಂಕಿನಲ್ಲಿ ಇಡುತ್ತೇನೆ. ಅದರಿಂದ ನೀವು ಯಾವ ತೊಂದರೆಯೂ ಇಲ್ಲದೆ ಜೀವನ ನಡೆಸಬಹುದು. ಕೃಪೆ ಮಾಡಿ ಅದನ್ನು ಸ್ವೀಕರಿಸಬೇಕು."

ಶ್ರೀರಾಮಕೃಷ್ಣರಿಗೆ ಇದನ್ನು ಕೇಳಿದಾಗ ಹೇಗಾಯಿತೆಂದರೆ—ಮುಂದೆ ಅವರೇ ಅದನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸುತ್ತಾರೆ: "ಮಥುರನೂ ಲಕ್ಷ್ಮೀನಾರಾಯಣನೂ ನನಗೆ ಹಣ ಕೊಡಲು ಬಂದಾಗ ನನ್ನ ತಲೆಯನ್ನು ಗರಗಸದಿಂದ ಸೀಳುತ್ತಿರುವಂತೆ ನೋವಾಯಿತು" ಎಂದು. ಸ್ವಾರಸ್ಯವೆಂದರೆ, ಅವರು ಹಾಗೆ ಹೇಳುವಾಗಲೂ ಅವರಿಗೆ ಆ ನೋವು ಮರುಕಳಿಸಿತೇನೋ ಎಂಬಂತೆ ನೋಡುವವರಿಗೆ ಭಾಸವಾಯಿತು!

ಯಾತನೆಯಲ್ಲಿ ಶ್ರೀರಾಮಕೃಷ್ಣರು ಆತನಿಗೇನೂ ಹೇಳಲಿಲ್ಲ. ಬದಲಾಗಿ ಉದ್ಗರಿಸಿದರು: "ಅಮ್ಮಾ, ನನ್ನನ್ನು ಮೋಸಗೊಳಿಸಬೇಕೆಂದು ಇಷ್ಟು ದಿನಗಳ ಮೇಲೆ ಮತ್ತೆ ನೋಡುತ್ತಿದ್ದೀಯಾ?"

ಆಗ ಮಾರ್ವಾಡಿ ಪುನಃ ಒತ್ತಾಯ ಪಡಿಸಿದ: "ಇಲ್ಲ, ನೀವಿದನ್ನು ತೆಗೆದುಕೊಳ್ಳಲೇಬೇಕು. ಇಲ್ಲದೆಹೋದರೆ ನಿಮ್ಮ ಖರ್ಚುವೆಚ್ಚಕ್ಕೆಲ್ಲ ಏನು ಮಾಡುತ್ತೀರಿ? ನನಗೋಸ್ಕರವಾದರೂ ತೆಗೆದುಕೊಳ್ಳಿ."

ಶ್ರೀರಾಮಕೃಷ್ಣರು ಅವನಿಗೆ ಕೈಮುಗಿದು ಪ್ರಾರ್ಥಿಸಿಕೊಂಡರು: "ಅಯ್ಯಾ, ನನಗೆ ಬೇಡವೆಂದು ಹೇಳಿದೆನಲ್ಲ! ಮತ್ತೆಂದೂ ನನ್ನೆದುರು ಆ ವಿಷಯವನ್ನು ಎತ್ತಬೇಡಪ್ಪ."

ಆದರೆ ಅವನು ಅಷ್ಟಕ್ಕೇ ಬಿಡಲಿಲ್ಲ. ಹೃದಯನ ಬಳಿಗೆ ಹೋದ. ಆ ಹಣವನ್ನು ಶ್ರೀಮಾತೆಯವರ ಹೆಸರಿನಲ್ಲಿ ಇಟ್ಟುಕೊಳ್ಳುವಂತೆ ಪುಸಲಾಯಿಸಿದ. ಅದರಿಂದ ಶ್ರೀರಾಮಕೃಷ್ಣರ ಆವಶ್ಯಕತೆಗಳನ್ನು ಪೂರೈಸಲು ಅನುಕೂಲವಾಗುತ್ತದಲ್ಲವೆ?

ಹೃದಯನಿಗೇನೊ ಬಾಗಿಲಿಗೆ ಬಂದ ಭಾಗ್ಯಲಕ್ಷ್ಮಿಯನ್ನು ಹೊರಗಟ್ಟಲು ಸ್ವಲ್ಪವೂ ಮನಸ್ಸಿಲ್ಲ. ಆದರೆ ಶ್ರೀರಾಮಕೃಷ್ಣರು ಆಕ್ಷೇಪಿಸಿದರೆ? ವಿಧಿಯಿಲ್ಲದೆ ಅವರ ಅಭಿಪ್ರಾಯವನ್ನು ಕೇಳಬೇಕಾಯಿತು. ಶ್ರೀರಾಮಕೃಷ್ಣರು ಇದಕ್ಕೊಪ್ಪಿಯಾರೆ! ಅವರೆಂದರು: "ಅದೆಲ್ಲ ಸಾಧ್ಯವಿಲ್ಲ. ಹಣ ಅವಳ ಹೆಸರಿನಲ್ಲಿದ್ದರೂ ಒಟ್ಟಿನಲ್ಲಿ ನನ್ನದೆಂದೇ ಆಗುತ್ತದೆ. 'ನನ್ನದೊಂದು ಆಸ್ತಿಯಿದೆ' ಎಂಬ ಆಲೋಚನೆಯನ್ನೇ ನಾನು ಸಹಿಸಿಕೊಳ್ಳಲಾರೆ."

"ಹೋಗಲಿ, ಮಾತೆಯವರನ್ನೇ ಕೇಳಿನೋಡಿ. ಅವರು ಒಪ್ಪಿದರೆ ಆಗಬಹುದಲ್ಲವೆ?"

ಈಗ ಶ್ರೀರಾಮಕೃಷ್ಣರು ಆಲೋಚಿಸಿದರು—ತಮ್ಮ ಸಹವಾಸದಿಂದ ಪತ್ನಿಯಲ್ಲಿ

ವೈರಾಗ್ಯ ಎಷ್ಟರಮಟ್ಟಿಗೆ ಬೇರೂರಿದೆ ಎಂಬುದನ್ನು ಪರೀಕ್ಷಿಸಲು ಇದೊಂದು ಒಳ್ಳೆಯ ಅವಕಾಶ ಎನ್ನಿಸಿತು. ಕೂಡಲೇ ಪತ್ನಿಗೆ ಹೇಳಿಕಳಿಸಿದರು. ಶಾರದಾದೇವಿಯವರು ಬಂದರು.

"ನೋಡು, ಅವನು ನನಗೆ ಹತ್ತುಸಾವಿರ ರೂಪಾಯಿ ಕೊಡುವುದಾಗಿ ಹೇಳುತ್ತಿದ್ದಾನೆ. ಆದರೆ ನನಗದು ಬೇಡ ಎಂದದ್ದರಿಂದ ಅದನ್ನು ನಿನ್ನ ಹೆಸರಿನಲ್ಲಿ ಇಡುತ್ತಾನಂತೆ. ನೀನು ಬೇಕಾದರೆ ಅದನ್ನು ತೆಗೆದುಕೊ. ಏನೆನ್ನುವೆ ?"

ಶಾರದಾದೇವಿಯವರು ತಕ್ಷಣ ನುಡಿದರು: "ಅದು ಹೇಗಾದೀತು ? ನೀವು ಬೇಡ ಎಂದದ್ದನ್ನು ನಾನು ಸ್ವೀಕರಿಸಲೆ ? ಅಲ್ಲದೆ ಒಂದು ವೇಳೆ ನಾನು ತೆಗೆದುಕೊಂಡರೂ ಅದನ್ನು ನಿಮ್ಮ ಅಗತ್ಯಗಳಿಗಾಗಿಯೇ ಖರ್ಚು ಮಾಡುವುದು. ಎಂದಮೇಲೆ ಹಣವನ್ನು ನೀವು ತೆಗೆದುಕೊಂಡಂತೆಯೇ ಆಯಿತು ! ಜನ ನಿಮ್ಮ ಬಗ್ಗೆ ಅಷ್ಟೊಂದು ಪ್ರೀತಿ-ಭಕ್ತಿ ಇಟ್ಟುಕೊಂಡಿರುವುದೇ ನಿಮ್ಮ ವೈರಾಗ್ಯವನ್ನು ಕಂಡು. ಹಾಗಿರುವಾಗ ಅದನ್ನು ಸ್ವೀಕರಿಸುವ ಮಾತೇ ಇಲ್ಲ."

'ಎಲ್ಲಿ ಇವಳು ಒಪ್ಪಿಬಿಡುವಳೋ!' ಎಂದು ಹೆದರಿದ್ದ ಶ್ರೀರಾಮಕೃಷ್ಣರಿಗೆ ಇದನ್ನು ಕೇಳಿ ಬಹಳ ಸಂತೋಷವಾಯಿತು, ಸಮಾಧಾನವಾಯಿತು. ಇಷ್ಟಾದರೂ ಆ ಮಾರ್ವಾಡೀಭಕ್ತ ಬಿಡಲಿಲ್ಲ. ಮತ್ತೆಮತ್ತೆ ಗೋಗರೆದ. ಕಡೆಗೆ ಶ್ರೀರಾಮಕೃಷ್ಣರು, ಇವನೊಂದಿಗೆ ಇನ್ನು ವಾದ ಮಾಡಲು ಸಾಧ್ಯವಿಲ್ಲ ಎಂದರಿತು ಗಟ್ಟಿಯಾಗಿ ಕೂಗು ಹಾಕಿದರು:

"ಓ ತಾಯಿ ! ನನ್ನನ್ನು ನಿನ್ನಿಂದ ದೂರ ಮಾಡಲು ಯತ್ನಿಸುವ ಇಂಥವರನ್ನೆಲ್ಲ ನನ್ನ ಬಳಿಗೇಕೆ ಕಳಿಸುತ್ತೀಯೆ ?"

ಈಗ ಅವನು ಸೋತು ಅಲ್ಲಿಂದ ನಿರ್ಗಮಿಸಿದ.

ಒಮ್ಮೆ ಹೃದಯ ಒಂದು ಹೋರಿಗರುವನ್ನು ಹಿಡಿದುಕೊಂಡು ಓಡಾಡುವುದನ್ನು ಶ್ರೀರಾಮಕೃಷ್ಣರು ಕಂಡರು. ಅವನು ಅದನ್ನು ಮೇಯಿಸುವುದು, ಕಟ್ಟಿಹಾಕುವುದು ಇದನ್ನೆಲ್ಲ ಮಾಡುತ್ತಿದ್ದ. ಇದನ್ನು ಕಂಡು ಅವರು ವಿಸ್ಮಯದಿಂದ ಕೇಳಿದರು:

"ಅಲ್ಲವೋ ಹೃದೂ, ನಿನಗೇಕೋ ಆ ಪುಟ್ಟ ಕರುವಿನ ಗೋಜು ? ಅದನ್ನು ಹಿಡಿದುಕೊಂಡೇಕೆ ಓಡಾಡುತ್ತಿರುವೆ ?"

ಹೃದಯ ಸಹಜವಾಗಿ ಹೇಳಿದ: "ಮತ್ತಿನ್ನೇಕೆ ? ಅದನ್ನು ನಾನು ಊರಿಗೆ ಒಯ್ಯುತ್ತೇನೆ. ಮುಂದೆ ಅದು ಬೆಳೆಯುತ್ತದೆ; ಆಗ ಅದನ್ನು ನೇಗಿಲಿಗೆ ಕಟ್ಟಿ ಉಳುತ್ತೇನೆ, ಹೊಲದ ತುಂಬ ಬೆಳೆ ಬೆಳೆಯುತ್ತೇನೆ . . ."

ಇದನ್ನು ಕೇಳುತ್ತಿದ್ದಂತೆ, ತಲೆಯ ಮೇಲೆ ಹೊಡೆದಂತಾಗಿ ಶ್ರೀರಾಮಕೃಷ್ಣರು ಬವಳಿ ಬಂದು ಬಿದ್ದರು. ಬಹಳ ಹೊತ್ತಿನ ಮೇಲೆ ಎಚ್ಚರವಾದಾಗ ಅವರೆಂದರು: "ಆಹಾ, ನೋಡಿದೆಯಾ ಈ ಪ್ರಾಪಂಚಿಕ ಜನರ ಬುದ್ಧಿಯನ್ನು ! ಈ ಕಲ್ಕತ್ತ ಎಲ್ಲಿ, ಆ ಕಾಮಾರಪುಕುರ ಎಲ್ಲಿ ! ಈ ಬಡಪಾಯಿ ಕರು ಅಲ್ಲಿಯವರೆಗೆ ಹೋಗಬೇಕಂತೆ, ಅಲ್ಲಿ ಅದು ದೊಡ್ಡದಾಗುತ್ತದಂತೆ, ಆಮೇಲೆ ಇವನದನ್ನು ನೇಗಿಲಿಗೆ ಕಟ್ಟಿ ಉಳುತ್ತಾನಂತೆ ! ಎಷ್ಟು ದೂರ ಯೋಚಿಸುತ್ತಾರೆ ಇವರು ! ದೇವರನ್ನು ನಂಬಿಕೊಂಡು ಜೀವನ ಮಾಡುವುದಿಲ್ಲವಲ್ಲ ! ಇದೆಂಥ ಮಾಯೆ !"

ಮಾಯೆ ! ನಿಜ, ತ್ರಿಭುವನಮೋಹಿನೀ ಮಾಯೆ ! ಇದು ಭಗವಂತನದೇ ಶಕ್ತಿ;

ಭಗವಂತನನ್ನು ಜನಮನದಿಂದ ಮರೆಮಾಚಿಸುವ ಶಕ್ತಿ! ಭಗವಂತನಲ್ಲಿ ಅನುರಾಗ ತಾಳಿ ಭಗವನ್ಮಯಜೀವನ ನಡೆಸುವವರು ಶಾಂತಿ ತೃಪ್ತಿ ಆನಂದಗಳನ್ನು ಹೊಂದಿ ಧನ್ಯರಾಗುತ್ತಾರೆ. ಆದರೆ ಅದೇ ಭಗವಂತನ ಮಾಯಾಶಕ್ತಿಗೆ ಮರುಳಾದ ಜನಕೋಟಿ ಬುದ್ಧಿಭ್ರಮಣೆಗೆ ಒಳಗಾಗಿ ಉದ್ದೇಶರಹಿತ ವ್ಯರ್ಥಜೀವನ ನಡೆಸಿ ದುಃಖಕ್ಕೀಡಾಗುವುದು ಸರ್ವವಿದಿತ. ಹೀಗೆ ದಾರಿತಪ್ಪಿದ, ಗುರಿಗಾಣದ ಜನಕೋಟಿಯನ್ನು ಮೇಲೆತ್ತುವುದು ಕರುಣಾಮಯರಾದ ಸಜ್ಜನರ, ಸಾಧುಸಂತರ, ಅವತಾರಪುರುಷರ ಹವ್ಯಾಸ. ಭಗವಂತನ ದಿವ್ಯಾನಂದರಸವನ್ನು ಸವಿದು ತೃಪ್ತವಾದ ಶ್ರೀರಾಮಕೃಷ್ಣರ ಹೃದಯವು, ವಿಷಯರಸವನ್ನು ಹೀರಿಯೂ ಅತೃಪ್ತವಾಗಿರುವ ಮತ್ತು ಧಾವಂತ ಪಡುತ್ತಿರುವ ಜನರಿಗಾಗಿ ಮರುಗಿತು; ನಿಜವಾದ ಆನಂದರಸಕ್ಕಾಗಿ ಹಾತೊರೆಯುತ್ತಿದ್ದ ಮುಮುಕ್ಷುಗಳತ್ತ ತಾನಾಗಿಯೇ ಧಾವಿಸಿತು. ಆದ್ದರಿಂದಲೇ ಶ್ರೀರಾಮಕೃಷ್ಣರು ಬ್ರಾಹ್ಮಸಮಾಜಕ್ಕೆ ತಾವಾಗಿಯೇ ಭೇಟಿಯಿತ್ತರು. ಆ ಬ್ರಾಹ್ಮಭಕ್ತರಿಗೆ ತಮ್ಮ ದಿವ್ಯಾನುಭವಗಳನ್ನು ತಿಳಿಸುತ್ತ, 'ಭಗವಂತನಿಗಾಗಿ ಸರ್ವಸಮರ್ಪಣೆ ಮಾಡಿಕೊಳ್ಳದಿದ್ದರೆ ಆತನ ಪೂರ್ಣದರ್ಶನ ಎಂದಿಗೂ ಸಾಧ್ಯವಿಲ್ಲ' ಎಂದು ಬೋಧಿಸಿದರು. 'ಎಷ್ಟು ಮತಗಳೊ ಅಷ್ಟು ಪಥಗಳು. ಆದ್ದರಿಂದ ಮತಾಂಧತೆ ಸಲ್ಲದು' ಎಂದು ತಿಳಿಯಹೇಳಿದರು. 'ಯಾವುದೇ ಧರ್ಮವನ್ನು ಅವಲಂಬಿಸಿ ಮುನ್ನಡೆದರೂ ಸಾಧನೆಯ ಅಂತ್ಯದಲ್ಲಿ ಉಪಾಸಕನಿಗೆ ತಾನೂ ತನ್ನ ಉಪಾಸ್ಯದೇವತೆಯೂ ಒಂದೇ ಎಂಬ ಅಭೇದಜ್ಞಾನವೇ ಪ್ರಾಪ್ತಿಯಾಗುವುದು' ಎಂಬ ರಹಸ್ಯವನ್ನು ವಿಶದಪಡಿಸಿದರು. 'ಮನಸ್ಸು-ಮಾತು-ಕೃತಿಗಳನ್ನು ಶುದ್ಧವಾಗಿರಿಸಿಕೊಳ್ಳುವುದು ಮತ್ತು ಅವುಗಳಲ್ಲಿ ಪರಸ್ಪರ ಸಾಮರಸ್ಯವಿರುವಂತೆ ನೋಡಿಕೊಳ್ಳುವುದೇ ಸಾಧನೆ' ಎಂದು ಸೂಚಿಸಿದರು. 'ಭಗವಂತ ಸರ್ವಶಕ್ತ ಎಂಬುದರಲ್ಲಿ ಅಚಲ ವಿಶ್ವಾಸವಿರಬೇಕು; ಭಗವಂತ ಮಾತ್ರವೇ ನಿತ್ಯ, ಮಿಕ್ಕವೆಲ್ಲ ಅನಿತ್ಯ ಎಂಬ ಸತ್ಯವನ್ನು ಗ್ರಹಿಸಿ ಕರ್ಮಫಲವನ್ನು ಅವನಿಗೆ ಅರ್ಪಿಸುತ್ತ ಸಂಸಾರದಲ್ಲಿ ಅನಿವಾರ್ಯವಾಗಿ ಮಾಡಬೇಕಾದ ಕಾರ್ಯಗಳನ್ನು ಮಾಡಬೇಕು; ಇದೇ ಆತನೆಡೆಗೆ ಮುಂದುವರಿಯುವ ದಾರಿ' ಎಂಬುದನ್ನು ವಿವರಿಸಿದರು. ಮನಸ್ಸು ದೇಹೇಂದ್ರಿಯಗಳತ್ತ ಹರಿಯದೆ ಭಗವಂತನಲ್ಲೇ ನೆಲೆನಿಂತು ಅತ್ಯುನ್ನತ ಆಧ್ಯಾತ್ಮಿಕ ಅನುಭವಗಳಾಗಬೇಕಾದರೆ ಕೇವಲ ದೈಹಿಕ ಬ್ರಹ್ಮಚರ್ಯ ಸಾಲದು, ಮನಸ್ಸು-ಮಾತುಗಳೂ ಪರಿಶುದ್ಧವಾಗಿರಲೇಬೇಕು ಎಂಬ ಅಂಶವನ್ನು ಮನಗಾಣಿಸಿ, ಕೇಶವಚಂದ್ರ ಸೇನನೇ ಮೊದಲಾದ ಕೆಲವು ಬ್ರಾಹ್ಮಭಕ್ತರನ್ನು ಆ ಬಗೆಯ ಶುದ್ಧಜೀವನ ನಡೆಸುವಂತೆ ಪ್ರೇರೇಪಿಸಿದರು. ಆದರೆ, ಇಂಥ ಮೂಲಭೂತ ವಿಷಯಗಳನ್ನು ಮತ್ತೆಮತ್ತೆ ಮನದಟ್ಟು ಮಾಡಲೆತ್ನಿಸಿದರೂ ಬ್ರಾಹ್ಮಸಮಾಜೀಯರಲ್ಲಿ ಅನೇಕರು ಅವುಗಳನ್ನು ದೃಢಭಾವದಿಂದ ಪಾಲಿಸಲಿಲ್ಲ ಎಂಬುದನ್ನು ಕಂಡುಕೊಂಡ ಶ್ರೀರಾಮಕೃಷ್ಣರು ಒಂದು ಹೊಸ ಪಾಠವನ್ನು ಕಲಿತರೆನ್ನಬಹುದು. ಹಳೆಯ ಸಂಸ್ಕಾರಗಳು ರೂಢಮೂಲವಾಗಿದ್ದರೆ ನೂತನ ಭಾವನೆಗಳು ಹೃದಯದಲ್ಲಿ ದೃಢವಾಗಿ ನಿಲ್ಲಲಾರವು ಎಂಬುದೇ ಆ ಪಾಠ! ಗಿಣಿಗೆ 'ರಾಮ' ಎಂದು ಉಚ್ಚರಿಸಲು ಕಲಿಸಬೇಕಾದರೆ ಅದಿನ್ನೂ ಎಳೆಯ ಮರಿಯಾಗಿರಬೇಕು. ಅದರ ಕೊರಳ ಸುತ್ತ ಬಣ್ಣಬಣ್ಣದ ಪುಕ್ಕಗಳು ಮೂಡಿ ಬಲಿತ ಮೇಲೆ ಅದಕ್ಕೆ ಪಾಠ ಹೇಳಿಕೊಡುವುದು ನಿರರ್ಥಕ. ಹಾಗೆಯೇ, ಪಾಶ್ಚಾತ್ಯರ ಭೋಗವಾದದ ಪ್ರಭಾವದಿಂದಲೋ ಅಥವಾ ಜನ್ಮಾಂತರದ ಸಂಸ್ಕಾರಗಳ ಆಧಿಕ್ಯದಿಂದಲೋ ಯಾರಲ್ಲಿ ವಿಷಯತೃಷ್ಣೆ ಅತಿಶಯವಾಗಿದೆಯೊ ಅಂಥವ

ರನ್ನು ಅಧ್ಯಾತ್ಮಮಾರ್ಗದಲ್ಲಿ ಮುನ್ನಡೆಸುವುದು ಮಹಾ ಪ್ರಯಾಸದ ಕೆಲಸ. ಇದನ್ನರಿತ ಶ್ರೀರಾಮಕೃಷ್ಣರ ಹೃದಯದಲ್ಲಿ ಒಂದು ಪ್ರಾರ್ಥನೆ ತಾನೇತಾನಾಗಿ ಮೇಲೆದ್ದಿತು:

"ಓ ತಾಯಿ, ಪರಿಶುದ್ಧ ಹೃದಯದ ನಿನ್ನ ತ್ಯಾಗೀಭಕ್ತರು ಇತ್ತ ಬರಬೇಕು, ಅವರೊಂದಿಗೆ ನಾನು ನಿನ್ನ ಮಹಿಮೆಯ ಕುರಿತು ಮನಬಿಚ್ಚಿ ಮಾತನಾಡಬೇಕು. ಆದ್ದರಿಂದ ಅವರನ್ನು ಇಲ್ಲಿಗೆ ತ್ವರೆಯಿಂದ ಬರಮಾಡಮ್ಮಾ!"

ಹೀಗೆಂದು ಪ್ರಾರ್ಥಿಸಿದ ಅವರೀಗ, ತಮ್ಮ ದಿವ್ಯಾನುಭವಗಳ ಸಾರವನ್ನು ಸ್ವೀಕರಿಸಬಲ್ಲ ಸತ್ತ್ವಶಾಲಿಗಳಾದ, ಶಕ್ತಿಯುತರಾದ ವ್ಯಕ್ತಿಗಳ ಆಗಮನವನ್ನೇ ಉತ್ಕಂಠಿತರಾಗಿ ಇದಿರು ನೋಡತೊಡಗಿದರು. ಹಿಂದೆ ಋಷಿಗಳು—

*ಆ ಮಾ ಯಂತು ಬ್ರಹ್ಮಚಾರಿಣಃ ಸ್ವಾಹಾ।*
*ವಿ ಮಾಽಽಯಂತು ಬ್ರಹ್ಮಚಾರಿಣಃ ಸ್ವಾಹಾ।*
*ಪ್ರ ಮಾಽಽಯಂತು ಬ್ರಹ್ಮಚಾರಿಣಃ ಸ್ವಾಹಾ।*
*ದಮಾಯಂತು ಬ್ರಹ್ಮಚಾರಿಣಃ ಸ್ವಾಹಾ।*
*ಶಮಾಯಂತು ಬ್ರಹ್ಮಚಾರಿಣಃ ಸ್ವಾಹಾ।*

**—(ತೈತ್ತಿರೀಯ ಉಪನಿಷದ್: ೧. ೪. ೨)**

ಎಂದು, ಶಮದಮಸಂಪನ್ನರಾದ ಬ್ರಹ್ಮಚಾರಿಗಳು ಎಲ್ಲೆಡೆಗಳಿಂದಲೂ ತಮ್ಮೆಡೆಗೆ ಬರುವಂತಾಗಲೆಂದು ಹಾರೈಸಿದಂತಿತ್ತು ಶ್ರೀರಾಮಕೃಷ್ಣರ ಹೃದಯದ ಕಳಕಳಿ. ಓಹ್! ಅದೆಂಥ ಕಾತರತೆ! ಅದೆಂಥ ವಿರಹವೇದನೆ! ಅದನ್ನು ಎಲ್ಲಿ ತಾನೆ ಕಾಣಬಹುದು? ಯಾರು ತಾನೆ ಊಹಿಸಬಲ್ಲರು? ಶ್ರೀರಾಮಕೃಷ್ಣರೇ ಮುಂದೊಮ್ಮೆ ಅದನ್ನು ಬಣ್ಣಿಸುತ್ತಾರೆ:

"ಆ ದಿನಗಳಲ್ಲಿ ನನ್ನ ವ್ಯಾಕುಲತೆಗೆ ಮಿತಿಯೇ ಇರಲಿಲ್ಲ. ಹಗಲುಹೊತ್ತಿನಲ್ಲಿ ಅದನ್ನು ಹೇಗೋ ಸಹಿಸಿಕೊಂಡು ಅಡಗಿಸಿಟ್ಟುಕೊಳ್ಳುತ್ತಿದ್ದೆ. ವಿಷಯಾಸಕ್ತರಾದ ಪ್ರಾಪಂಚಿಕ ಜನರ ಮಾತುಗಳು ನನಗೆ ವಿಷಪ್ರಾಯವಾಗಿ ತೋರುತ್ತಿದ್ದುವು. ಅದನ್ನು ಕೇಳಿದರೆ ಕಿವಿಗೆ ಕಾದ ಸೀಸವನ್ನು ಸುರಿದಂತಾಗುತ್ತಿತ್ತು. ನನ್ನ ಆ ನೆಚ್ಚಿನ ಸಂಗಾತಿಗಳೆಲ್ಲ ಬರಬಹುದಾದ ದಿನವನ್ನು ಭಾವಿಸುತ್ತ ಮನದಲ್ಲೇ ಹರ್ಷಿಸುತ್ತಿದ್ದೆ. 'ಅವರೆಲ್ಲ ಬಂದಾಗ ಭಗವದ್ವಿಚಾರದಲ್ಲಿ ತೊಡಗಿ ನನ್ನ ಅಂತಃಕರಣವನ್ನು ಸಮಾಧಾನಗೊಳಿಸಿಕೊಳ್ಳುತ್ತೇನೆ; ಕೆಟ್ಟುಹೋಗಿರುವ ನನ್ನ ಕಿವಿಗಳನ್ನು ಶುದ್ಧಗೊಳಿಸಿಕೊಳ್ಳುತ್ತೇನೆ; ನನ್ನ ಆಧ್ಯಾತ್ಮಿಕ ಅನುಭವಗಳನ್ನೆಲ್ಲ ಹೇಳಿಕೊಂಡು ನನ್ನೆದೆಯ ಭಾರವನ್ನು ಇಳಿಸುತ್ತೇನೆ' ಎಂದು ಕನಸುಗಾಣುತ್ತಿದ್ದೆ. ಏನನ್ನು ನೋಡಿದರೂ ಏನನ್ನು ಕೇಳಿದರೂ ನನ್ನಲ್ಲಿ ಅವರ ಕುರಿತಾದ ಆಲೋಚನೆಯ ಪ್ರಚೋದನೆಯೇ ಆಗುತ್ತಿತ್ತು. ಅವರೆಲ್ಲ ಬಂದಾಗ, ಯಾರ್ಯಾರಿಗೆ ಏನೇನು ಹೇಳಬೇಕು, ಏನೇನು ಕೊಡಬೇಕು ಎನ್ನುವುದನ್ನೆಲ್ಲ ಆಲೋಚಿಸಿ, ನನ್ನ ವಿವಿಧಾನುಭವಗಳನ್ನು ಜ್ಞಾಪಕಕ್ಕೆ ತಂದುಕೊಂಡು ವಿಮರ್ಶನೆ-ವಿಭಜನೆ ಮಾಡುತ್ತ ಮನಸ್ಸಿನ ಕೋಶಗಳಲ್ಲಿ ವಿಂಗಡಿಸಿಟ್ಟುಕೊಳ್ಳುತ್ತಿದ್ದೆ. ಆದರೆ ಹಗಲು ಕಳೆದು ಸಂಜೆಯಾಗುತ್ತ ಬಂದಂತೆ ಆ ವೇದನೆಯನ್ನು ತಡೆಯಲಾಗುತ್ತಿರಲಿಲ್ಲ. ಅಯ್ಯೋ, ಇನ್ನೊಂದು ದಿನ ಕಳೆದುಹೋಯಿತು! ಇನ್ನೂ ಅವರಲ್ಲಿ ಯಾರೂ ಬರಲೇ ಇಲ್ಲವಲ್ಲ! ಎಂದು ಯೋಚಿಸುತ್ತ ಸಂಕಟಪಡುತ್ತಿದ್ದೆ. ದೇವಾಲಯದಲ್ಲಿ ಆರತಿಯ

ವೇಳೆಗೆ ಶಂಖಧ್ವನಿ ಮತ್ತು ಘಂಟಾನಾದಗಳ ಘೋಷ ಕೇಳಿಬರುತ್ತಿದ್ದಾಗ ನಾನು ರಾಸಮಣಿಯ ಭವನದ ಛಾವಣಿಯ ಮೇಲಕ್ಕೆ ಓಡುತ್ತಿದ್ದೆ. ಆ ಏಕಾಂತದಲ್ಲಿ, ಹೃದಯದ ವೇದನೆಯನ್ನು ತಾಳಲಾರದೆ ಗಟ್ಟಿಯಾಗಿ ಅಳುತ್ತಿದ್ದೆ. 'ಓ ನನ್ನ ಮಕ್ಕಳಿರಾ! ನೀವೆಲ್ಲ ಎಲ್ಲಿದ್ದೀರಿ? ಬನ್ನಿ, ಬನ್ನಿ! ನಿಮ್ಮನ್ನು ಕಾಣದೆ ನಾನಿನ್ನು ಜೀವಿಸಿರಲಾರೆ!' ಎಂಬ ನನ್ನ ಕೂಗು ನಭೋಮಂಡಲಕ್ಕೇರುತ್ತಿತ್ತು. ಹೆತ್ತ ತಾಯಿ ತನ್ನ ಮಗುವನ್ನು ಕಾಣಲು ಅಷ್ಟು ವ್ಯಾಕುಲಳಾಗುತ್ತಾಳೋ ಇಲ್ಲವೋ ಅನುಮಾನ; ಒಬ್ಬನು ತನ್ನ ಗೆಳೆಯನಿಗಾಗಿ, ಪ್ರಿಯನು ತನ್ನ ಪ್ರಿಯತಮೆಗಾಗಿ ಹೀಗೆ ಕಾತರಿಸಿದ್ದನ್ನು ನಾನೆಲ್ಲೂ ಕೇಳಿಲ್ಲ! ಓಹ್, ಅದು ವರ್ಣಿಸಲಸಾಧ್ಯ! ಹೀಗೆ ನಾನು ಅತ್ತು ಕರೆದ ಕೆಲದಿನಗಳಲ್ಲೇ ಆ ಭಕ್ತರೆಲ್ಲ ಒಬ್ಬೊಬ್ಬರಾಗಿ ಬರಲಾರಂಭಿಸಿದರು."

ಹೀಗೆ ಬಂದ ಮೊದಲಿಗರೇ ರಾಮಚಂದ್ರ ದತ್ತ ಮತ್ತು ಮನಮೋಹನ ಮಿತ್ರ ಎಂಬಿಬ್ಬರು ಗೃಹೀಭಕ್ತರು.

ಒಂದು ಭೀಕರ ಪ್ರವಾಹ ಬಂದು ಸಿಕ್ಕಿದ್ದನ್ನೆಲ್ಲ ಕೊಚ್ಚಿಕೊಂಡು ಹೋಗುತ್ತಿದೆ! ಅದು ಇಡೀ ಭೂಮಿಯನ್ನೇ ಆವರಿಸಿದಂತೆ ತೋರುತ್ತಿದೆ! ಅವನೊಂದು ಮರದ ಹಲಗೆಯನ್ನು ಹಿಡಿದುಕೊಂಡು ತೇಲುತ್ತಿದ್ದಾನೆ. ಯಾವುದೋ ಸೇತುವೆಯ ಕೆಳಗೊಂದು ಸ್ವಲ್ಪ ಆಧಾರ ಸಿಕ್ಕಿತು. ಅದನ್ನು ಹಿಡಿದುಕೊಂಡು ಒಂದು ನಿಮಿಷ ನಿಂತ. ಆಗ ಇದ್ದಕ್ಕಿದ್ದಂತೆ ಅವನನ್ನು ಭೀತಿ ಆವರಿಸಿತು. ಅವನು ಜೋರಾಗಿ ಕಿರುಚಿಕೊಂಡ:

"ಈ ಜಗತ್ತಿನಲ್ಲಿ ಯಾರೂ ಬದುಕಿಲ್ಲವೆ?"

"ಯಾರೊಬ್ಬರೂ ಬದುಕಿಲ್ಲ"—ಎಲ್ಲಿಂದಲೋ ಬಂತು ಉತ್ತರ.

"ನನ್ನ ಹೆಂಡತಿ, ಮಕ್ಕಳು, ತಾಯಿ ಎಲ್ಲರೂ ಸತ್ತುಹೋದರೆ?"

"ಹೌದು, ಎಲ್ಲರೂ ಸತ್ತುಹೋದರು!"

"ಹಾಗಾದರೆ . . . ಹಾಗಾದರೆ . . . ಒಬ್ಬರೂ ಬದುಕಿಲ್ಲವೆ?"

"ಒಬ್ಬರೂ ಇಲ್ಲ—ದೇವರನ್ನು ನಂಬಿದವರನ್ನು ಬಿಟ್ಟು!"

ಹತಾಶೆಯಿಂದ ಅವನು "ಅಯ್ಯೋ!" ಎಂದು ಚೀರಿದ.

ಅವನು ಎಷ್ಟು ಗಟ್ಟಿಯಾಗಿ ಚೀರಿದನೆಂದರೆ ಅಲ್ಲೇ ಮಲಗಿದ್ದ ಅವನ ತಾಯಿಯೂ ಹೆಂಡತಿಯೂ ಎಚ್ಚರಗೊಂಡು, "ಏನಾಯಿತು" ಎಂದು ಗಾಬರಿಯಿಂದ ಕೇಳಿದರು. ಅವನು ಅದೇ ಸ್ಥಿತಿಯಲ್ಲಿ ಹೇಳಿದ: "ನೀವು ಯಾರು? ನನ್ನ ಹೆಂಡತಿ, ತಾಯಿ ಎಲ್ಲ ಸತ್ತುಹೋದರು!"

ಅವನೊಂದು ವಿಚಿತ್ರ ಕನಸು ಕಾಣುತ್ತಿದ್ದ. ಅದರದು ಎಷ್ಟು ಸ್ಫುಟವಾಗಿತ್ತೆಂದರೆ ಅವನ ಒಳಮನಸ್ಸು ಹೇಳಿತು—ಇದಕ್ಕೆಲ್ಲ ಏನೋ ಅರ್ಥ ಇರಲೇಬೇಕು ಎಂದು.

ಅವನೇ ಕಲ್ಕತ್ತದ ಮನಮೋಹನ ಮಿತ್ರ. ಆತ ಸರ್ಕಾರೀ ನೌಕರ. ವಯಸ್ಸು ಸುಮಾರು ಇಪ್ಪತ್ತೆಂಟು. ಆಗಿನ ಕಾಲದ ಬಹುತೇಕ ವಿದ್ಯಾವಂತರಂತೆ ಹಿಂದೂ ಧರ್ಮದ ಟೀಕೆಯಲ್ಲಿ ತೊಡಗಿದ್ದವನು. ಬ್ರಾಹ್ಮಸಮಾಜದಲ್ಲಿ ಇವನಿಗೆ ಸ್ವಲ್ಪ ಒಲವಿತ್ತು. ತಕ್ಕಮಟ್ಟಿಗೆ ನೆಮ್ಮದಿಯ ಜೀವನವೇ. ಆದರೆ ತನ್ನ ಏಳು ತಿಂಗಳ ಮುದ್ದಿನ ಮಗಳು ಇದ್ದಕ್ಕಿದ್ದಂತೆ ತೀರಿಕೊಂಡಾಗ ಮಾತ್ರ ದಿಗ್ಭ್ರಮೆಗೊಂಡ. ಆಗ ಬ್ರಾಹ್ಮಸಮಾಜದ ಪ್ರಾರ್ಥನೆಗಳಿಂದ ಸಮಾಧಾನ ತಂದುಕೊಳ್ಳಲು ಪ್ರಯತ್ನಪಟ್ಟ.

ಮನಮೋಹನನ ಸಮೀಪ ಬಂಧುವೂ ಸಮಾನ ವಯಸ್ಕನೂ ಆದವನು ರಾಮಚಂದ್ರ ದತ್ತ. ಈತ ವೈದ್ಯಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಕಲ್ಕತ್ತದ ಮೆಡಿಕಲ್ ಕಾಲೇಜಿನಲ್ಲಿ 'ಕೆಮಿಸ್ಟ್' ಆಗಿದ್ದ. ಇವನು ಸಂಪೂರ್ಣ ನಾಸ್ತಿಕ. ಇವನು ಮನಮೋಹನನಲ್ಲಿದ್ದ ಅಲ್ಪಸ್ವಲ್ಪ ದೈವಶ್ರದ್ಧೆಯನ್ನೂ ತನ್ನ ಹರಿತವಾದ ತರ್ಕದಿಂದ ಕತ್ತರಿಸುತ್ತಿದ್ದ. ಇದರಿಂದ ಮನಮೋಹನ ಇನ್ನಷ್ಟು ಗೊಂದಲದಲ್ಲಿ ಸಿಲುಕಿದ್ದ.

ರಾಮಚಂದ್ರ ಸಂಪ್ರದಾಯಸ್ಥ ವೈಷ್ಣವಕುಟುಂಬಕ್ಕೆ ಸೇರಿದವನು. ಇವನಿಗೂ ವಿವಾಹವಾಗಿ ಮಕ್ಕಳಿದ್ದರು. ಆದರೆ ಇವನ ತಂದೆ ಎರಡನೇ ವಿವಾಹವಾಗಿದ್ದು, ತಂದೆ-ಮಕ್ಕಳ ಮಧ್ಯೆ ಆಗಾಗ ವಿರಸವೇರ್ಪಡುತ್ತಿತ್ತು. ಒಟ್ಟಿನಲ್ಲಿ ಇವನಿಗೂ ಶಾಂತಿಯಿರಲಿಲ್ಲ.

ಈ ವೇಳೆಗೆ ಆತನ ಜೀವನದಲ್ಲೊಂದು ಅವಘಡ ಸಂಭವಿಸಿತು. ಅವನ ಹೆಣ್ಣುಮಕ್ಕಳಲ್ಲೊಬ್ಬಳು ಅಕಾಲಮರಣಕ್ಕೀಡಾದಳು. ಈ ವಿಯೋಗ ಅವನ ಜೀವನವನ್ನೇ ಕದಡಿಬಿಟ್ಟಿತು. ಬದುಕು-ಸಾವಿನ ಪ್ರಶ್ನೆ ತಲೆಯಲ್ಲಿ ಕೊರೆಯಲಾರಂಭಿಸಿತು. ಆದರೆ ಅವನ ತರ್ಕ-ವಿತರ್ಕ ಅವನಿಗೇನೂ ಸಮಾಧಾನ ತರಲಿಲ್ಲ.

ಹೀಗೆ ಬಂಧುಗಳಿಬ್ಬರೂ ಸಾಕಷ್ಟು ನೊಂದಿದ್ದರು. ತಮ್ಮ ಮನಸ್ಸಿನ ಸಂದೇಹಗಳಿಗೆ ಸಮಾಧಾನವೆಲ್ಲಿಯಾದರೂ ಸಿಕ್ಕೀತೇ ಎಂದು ಹುಡುಕುತ್ತ ಕೊನೆಗೆ ಬ್ರಾಹ್ಮ ಸಮಾಜದ ದಾರಿಹಿಡಿದರು. ಕೇಶವಸೇನನ ಲೇಖನ-ಭಾಷಣಗಳತ್ತ ಗಮನ ಹರಿಸಿದರು. ಆಗ ಅವರಿಗೆ ದಕ್ಷಿಣೇಶ್ವರದ ಪರಮಹಂಸರ ಬಗ್ಗೆ ಏನೋ ಸ್ವಲ್ಪ ತಿಳಿಯಿತು.

'ಅವರನ್ನೂ ನೋಡಿಯೇ ಬಿಡೋಣ' ಎಂದುಕೊಂಡು ಒಂದು ದಿನ ಇಬ್ಬರೂ ಹೊರಟರು. ಅದು ಭಾನುವಾರ, ೧೩ನೇ ನವೆಂಬರ್ ೧೮೭೯.

ಶ್ರೀರಾಮಕೃಷ್ಣರ ಕೋಣೆಯ ಬಾಗಿಲು ಮುಚ್ಚಿತ್ತು. ಜಟಾಧಾರಿಯಾದ, ವಿಭೂತಿ ಬಳಿದುಕೊಂಡ ಸಾಧುವೊಬ್ಬನನ್ನು ನಿರೀಕ್ಷಿಸುತ್ತ ಅವರು ಬಾಗಿಲು ತಟ್ಟಿದರು. ಆದರೆ ಹೊರಬಂದ ವ್ಯಕ್ತಿಯನ್ನು ನೋಡಿ ಅವರಿಗೆ ಆಶ್ಚರ್ಯ—ಇವರೇನೆ ಪರಮಹಂಸರೆಂದರೆ ? ನಿರಾಡಂಬರ ದೀನ ಕೃಶಕಾಯ ವ್ಯಕ್ತಿ ?

ಶ್ರೀರಾಮಕೃಷ್ಣರು ನಡುಬಾಗಿ ವಂದಿಸಿ "ನಾರಾಯಣ !" ಎಂದರು. ಇಬ್ಬರೂ ಪ್ರತಿಯಾಗಿ ಸುಮ್ಮನೆ ತಲೆಯಾಡಿಸಿದರು. ಶ್ರೀರಾಮಕೃಷ್ಣರು ಅವರನ್ನು ವಿಶ್ವಾಸದಿಂದ ಒಳಬರಮಾಡಿಕೊಂಡು ತಮ್ಮ ಮಂಚದ ಮೇಲೆಯೇ ಕುಳ್ಳಿರಿಸಿಕೊಂಡರು. ಬಳಿಕ ಕೇಳಿದರು: "ಎಲ್ಲಿಂದ ಬರುತ್ತಿರುವುದು ?" ಇಬ್ಬರೂ ತಮ್ಮ ಪರಿಚಯ ಹೇಳಿಕೊಂಡರು.

ಕೆಳಗೆ ಚಾಪೆಯ ಮೇಲೆ ಒಬ್ಬ ಉದ್ದನೆಯ ಆಸಾಮಿ ಮಲಗಿದ್ದ. ಅವನು ಹೃದಯರಾಮನೆಂದು ಅವರಿಗೆ ಆಮೇಲೆ ತಿಳಿಯಿತು.

ಶ್ರೀರಾಮಕೃಷ್ಣರನ್ನು ನೋಡುತ್ತಿದ್ದಂತೆ ರಾಮಚಂದ್ರನಿಗೆ ಅವರು ತನ್ನ ಸ್ವಂತದವರೇ ಎಂಬ ಭಾವವುಂಟಾಯಿತು. ಮತ್ತು ಹೃದಯದಲ್ಲಿ ಅನಿರ್ವಚನೀಯ ಆನಂದವಾಯಿತು. ಶ್ರೀರಾಮಕೃಷ್ಣರೂ ಸಹ ಅವರಿಬ್ಬರೂ ತಮ್ಮ ಅಂತರಂಗಭಕ್ತರೆಂಬುದನ್ನು ಅಂತರ್ದೃಷ್ಟಿಯಿಂದ ಅರಿತುಕೊಂಡರು. ಬಳಿಕ ಅವರನ್ನು ತಮಗೆ ಬಹಳ ಪರಿಚಿತರೋ ಎಂಬಂತೆ ಪ್ರೀತಿಯಿಂದ ಮಾತನಾಡಿಸತೊಡಗಿದರು. ಮಾತಿನ ಮಧ್ಯೆ ಕ್ಷಣಕಾಲ ರಾಮಚಂದ್ರನನ್ನೇ ದಿಟ್ಟಿಸಿನೋಡಿ ಇದ್ದಕ್ಕಿದ್ದಂತೆ ಹೇಳಿದರು:

"ನೀನು ವೈದ್ಯನಲ್ಲವೆ ? ದಯವಿಟ್ಟು ಇವನನ್ನು (ಹೃದಯನನ್ನು) ಪರೀಕ್ಷೆ ಮಾಡುತ್ತೀಯಾ ? ಜ್ವರ ಬಂದು ಮಲಗಿದ್ದಾನೆ."

ತಾನು ವೈದ್ಯನೆಂಬ ವಿಷಯವನ್ನು ಅವನಿನ್ನೂ ಹೊರಗೆಡವಿರಲಿಲ್ಲ. 'ಇವರಿಗದು ಹೇಗೆ ಗೊತ್ತಾಯಿತು ?' ಎಂದವನು ಕಕ್ಕಾಬಿಕ್ಕಿ ! ಆದರೂ ಮರುಮಾತನಾಡದೆ ಹೃದಯನನ್ನು ಪರೀಕ್ಷೆಮಾಡಿ, "ಏನೂ ಪರವಾಗಿಲ್ಲ, ಜ್ವರ ಇಳಿದುಹೋಗಿದೆ" ಎಂದ.

ಹೀಗೆ ಶ್ರೀರಾಮಕೃಷ್ಣರೊಂದಿಗೆ ಮಾತನಾಡುತ್ತ ತಮ್ಮ ಸಂದೇಹವನ್ನು ಮುಂದಿಟ್ಟರು: "ದೇವರು ನಿಜಕ್ಕೂ ಇದ್ದಾನೆಯೆ ? ಇದ್ದರೆ, ಅವನನ್ನು ಕಾಣಲು ಸಾಧ್ಯವೆ ?"

"ದೇವರು ಖಂಡಿತ ಇದ್ದಾನೆ ! ಹಗಲು ಹೊತ್ತು ಆಕಾಶದಲ್ಲಿ ನಕ್ಷತ್ರಗಳು ಕಾಣುವುದಿಲ್ಲ. ಅಂದಮಾತ್ರಕ್ಕೆ ನಕ್ಷತ್ರಗಳೇ ಇಲ್ಲ ಎಂದರ್ಥವೆ ? ನೋಡಿ, ಹಾಲಿನಲ್ಲಿ ಬೆಣ್ಣೆ ಇರುತ್ತದೆ. ಆದರೆ ಸುಮ್ಮನೆ ನೋಡುತ್ತಿದ್ದರೆ ಅದು ಸಿಗುತ್ತದೆಯೆ ? ಹಾಲಿಗೆ ಹೆಪ್ಪು

ಹಾಕಿ, ಬಹಳ ಹೊತ್ತು ಅಲುಗಿಸದೆ ಶಾಂತವಾಗಿ ಇಡಬೇಕು. ಆಮೇಲೆ ಮೊಸರನ್ನು ಕಡೆಯಬೇಕು. ಆಗಲೇ ಬೆಣ್ಣೆ ಸಿಗುವುದು. ಹಾಗೆಯೇ, ಕೊಳದಲ್ಲಿ ಮೀನು ಹಿಡಿಯಬೇಕಾದರೆ ನೀವು ಬಲ್ಲವರನ್ನು ಕೇಳಿತಿಳಿದುಕೊಳ್ಳಬೇಕು—ಅಲ್ಲಿ ಎಂತಹ ಮೀನಿದೆ, ಅದಕ್ಕೆ ಯಾವ ಬಗೆಯ ಎರೆ ಸೂಕ್ತವಾದುದು, ಎಂದು. ದೇವರ ವಿಚಾರದಲ್ಲೂ ಅಷ್ಟೆ; ಬಲ್ಲವರನ್ನು ವಿಚಾರಿಸಿ ನೋಡಬೇಕು. ಬೆಸ್ತನು ಗಾಳ ಹಾಕಿದ ಮೇಲೆ ಅದರ ಬೆಂಡು ಅಲುಗಾಡಬೇಕಾದರೆ ಬಹಳ ಹೊತ್ತು ಕಾಯುತ್ತ ಕುಳಿತಿರಬೇಕು. ಬೆಂಡು ಅಲುಗಾಡಿದ್ದು ಕಂಡಾಗ ಅವನಿಗೆ ಅಲ್ಲಿ ಮೀನುಗಳಿರುವುದು ಖಚಿತವಾಗುತ್ತದೆ. ಬಳಿಕ ಮೀನೊಂದು ಗಾಳಕ್ಕೆ ಸಿಕ್ಕಿಸಿದ ಎರೆಯನ್ನು ನುಂಗಿದಾಗ ಬೆಂಡು ಮುಳುಗುತ್ತದೆ, ಆಗ ಬೆಸ್ತ ಗಾಳವನ್ನು ಚಕ್ಕನೆ ಮೇಲಕ್ಕೆತ್ತುತ್ತಾನೆ, ಮೀನು ಸಿಕ್ಕಿಬಿಡುತ್ತದೆ. ನಾವು ಸುಮ್ಮನೆ ಇಷ್ಟಪಟ್ಟ ಮಾತ್ರಕ್ಕೆ ದೇವರು ದೊರಕಿಬಿಡುವುದಿಲ್ಲ. ಅದಕ್ಕೆ ಕೆಲವು ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಸಾಧುವಿನ ಮಾತಿನಲ್ಲಿ ವಿಶ್ವಾಸವಿಟ್ಟು ನಮ್ಮ ಮನಸ್ಸನ್ನು ಗಾಳ ಹಾಕುವವನು ತನ್ನ ಕೋಲನ್ನು ಹಿಡಿಯುವಂತೆ ಸ್ಥಿರವಾಗಿ ಹಿಡಿದುಕೊಳ್ಳಬೇಕು; ಅದಕ್ಕೆ 'ಪ್ರಾಣ'ವೆಂಬ ಗಾಳವನ್ನು ಕಟ್ಟಬೇಕು; ಬಳಿಕ ಭಗವನ್ನಾಮವನ್ನೇ ಎರೆಯನ್ನಾಗಿ ಸಿಕ್ಕಿಸಿ ಕಾಯಬೇಕು. ಕ್ರಮೇಣ ಭಗವಚ್ಚಿಂತನೆಯೆಂಬ ತರಂಗಗಳು ಅಂತರಂಗದಲ್ಲಿ ಏಳುವುದನ್ನು ಕಾಣುವಿರಿ. ಕಡೆಯಲ್ಲಿ ಭಗವದ್ದರ್ಶನದ ಭಾಗ್ಯವನ್ನು ಹೊಂದುವಿರಿ."

ಆದರೆ ಶ್ರೀರಾಮಕೃಷ್ಣರು ಎಷ್ಟೇ ರಸವತ್ತಾಗಿ ಹೇಳಿದರೂ ಆ ಮಾತುಗಳು ಇಬ್ಬರಿಗೂ ರುಚಿಸುತ್ತಿಲ್ಲ. ರಾಮಚಂದ್ರ ದೇವರನ್ನೇ ನಂಬದವನು; ಮನಮೋಹನನೋ, ದೇವರೊಬ್ಬನಿದ್ದರೆ ಅವನಿಗೊಂದು ಆಕಾರವಿರಲು ಸಾಧ್ಯವಿಲ್ಲ ಎಂದು ದೃಢವಾಗಿ ನಂಬಿದವನು—ಬ್ರಾಹ್ಮಸಮಾಜದ ಪ್ರಭಾವ! ಅವರ ಮನಸ್ಸುಗಳನ್ನರಿತು ಶ್ರೀರಾಮಕೃಷ್ಣರು ನುಡಿದರು:

"ಆದರೆ ದೇವರು ನಿಜಕ್ಕೂ ಯಾರಿಗೆ ಬೇಕಾಗಿದ್ದಾನೆ? ದೇವರನ್ನು ಅರಿಯಲು ಸಾಧ್ಯವೇ ಇಲ್ಲ ಎಂದು ದೃಢವಾಗಿ ನಂಬಿಕೊಂಡು ಕುಳಿತಿದ್ದಾರೆ ಎಲ್ಲರೂ. ದೇವರು ಬೇಕೇಬೇಕು ಎಂಬವನು, 'ಕೃಪೆ ತೋರಿ ನಿನ್ನ ದರ್ಶನ ಕೊಡು' ಎಂದು ಕಣ್ಣೀರಿಟ್ಟು ಪ್ರಾರ್ಥಿಸಿಕೊಂಡರೆ ಅವನು ನಿಸ್ಸಂಶಯವಾಗಿ ಮೈದೋರುತ್ತಾನೆ. ಅವನ ಈ ಸೃಷ್ಟಿಯನ್ನು ನೋಡಿ—ಅದೆಷ್ಟು ಸುಂದರ, ಅದೆಷ್ಟು ವಿಚಿತ್ರ! ಇಂಥ ಅದ್ಭುತ ಮಹಿಮನಾದ ದೇವರನ್ನು ಅರಿಯಲು ಸಾಧ್ಯವೇ ಇಲ್ಲ ಎಂದರೆ ಒಪ್ಪುವ ಮಾತೆ?"

ಮನಮೋಹನ: "ನೀವು ಹೇಳಿದ್ದು ನಿಜವೆಂದೇ ಇಟ್ಟುಕೊಳ್ಳೋಣ. ಆದರೆ ಅವನನ್ನು ಈ ಜನ್ಮದಲ್ಲೇ ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವೆ?"

ಶ್ರೀರಾಮಕೃಷ್ಣರು: "ನೋಡು, ಮನುಷ್ಯನ ಭಕ್ತಿಯ ತೀವ್ರತೆಗೆ ತಕ್ಕಂತೆ ಅವನು ಗಳಿಸುವ ಲಾಭ."

ಹೀಗೆಂದವರೇ ತಮ್ಮ ದೇವದುರ್ಲಭ ಕಂಠದಿಂದ ಹಾಡತೊಡಗಿದರು:

*ಭಾವುಕನ ಭಾವದೊಲು ಅವನವನ ಒಲವು*
*ಆ ಒಲವಿಗನುಸಾರ ಅವನು ಪಡೆಯುವ ಫಲವು;*
*ಶ್ರದ್ಧೆ ಎಲ್ಲಕು ಮೂಲ; ತಾಯ ಶ್ರೀಪಾದಮಧು-*
*ಸರಸಿಯಲಿ ಮುಳುಗಿರುವ ನನಗೇಕೆ ಮತ್ತೆ ಜಪ-*
*ತಪ ಹೋಮ ಹವನಾದಿ ಕರ್ಮಗಳ ರಗಳೆ?*

"ಒಬ್ಬನು ಪೂರ್ವ ದಿಕ್ಕಿನಲ್ಲಿ ಎಷ್ಟು ದೂರ ಹೋಗುತ್ತಾನೋ, ಅಷ್ಟರಮಟ್ಟಿಗೆ ಅವನು ಪಶ್ಚಿಮ ದಿಕ್ಕಿನಿಂದ ದೂರವಾದನೆಂದೇ ಅರ್ಥ!"

ಆದರೆ ಅವರಿಬ್ಬರಿಗೂ ಇನ್ನೂ ಸಮಾಧಾನವಿಲ್ಲ. ಹೇಳಿದರು:

"ನಾವು ದೇವರ ಅಸ್ತಿತ್ವಕ್ಕೊಂದು ನೇರವಾದ ಸಾಕ್ಷ್ಯವನ್ನು ಕಂಡಹೊರತು ನಮ್ಮ ಅಪನಂಬಿಕೆ ಹೋಗಲಾರದು"

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ವಿಷಮಶೀತಜ್ವರ ಬಂದವನು ಒಂದು ಹಂಡೆ ನೀರು ಕುಡಿಯಬೇಕು, ಒಂದು ಕೊಳಗ ಅನ್ನ ತಿನ್ನಬೇಕು ಅಂತ ಆಸೆ ಪಡುತ್ತಾನೆ. ಆದರೆ ಡಾಕ್ಟರು ಬಿಡುತ್ತಾನೆಯೆ? ಅಥವಾ ಮಲೇರಿಯಾ ಬಂದವನಿಗೆ ಜ್ವರ ಏರಿದ ತಕ್ಷಣ ಕ್ವಿನೈನ್ ಕೊಟ್ಟುಬಿಡುತ್ತಾನೆಯೆ? ರೋಗಿಯನ್ನು ಗಮನಿಸುತ್ತಿದ್ದು ಜ್ವರ ಒಂದು ಮಟ್ಟದಲ್ಲಿ ನಿಂತಮೇಲಷ್ಟೇ ಕ್ವಿನೈನ್ ಕೊಡುತ್ತಾನೆ. ಹಾಗೆ ಮಾಡುವುದನ್ನು ಬಿಟ್ಟು ಅವನು ರೋಗಿಯ ಮಾತು ಕೇಳುವುದುಂಟೆ?"

ಈ ನೇರ ಸರಳ ಮಾತುಗಳು ಅವರಿಬ್ಬರಿಗೂ ಒಪ್ಪಿಗೆಯಾದುವು, ತೃಪ್ತಿ ನೀಡಿದುವು. ಎಲ್ಲಕ್ಕಿಂತ ಮಿಗಿಲಾಗಿ ಶ್ರೀರಾಮಕೃಷ್ಣರ ನಿಷ್ಕಪಟ ಪ್ರೀತಿ, ಆದರ ಹಾಗೂ ಅಹೈತುಕ ಕರುಣೆಗೆ ಅವರು ಸಂಪೂರ್ಣ ಶರಣಾದರು.

ಸಂಜೆಯ ವೇಳೆಗೆ ಅವರು ಹೊರಡಲನುವಾದರು. ಶ್ರೀರಾಮಕೃಷ್ಣರು ಸಿಹಿ ತಿನಿಸಿನ ಪ್ರಸಾದವನ್ನಿತ್ತರು. ಇಬ್ಬರೂ ಗುರುವಿನ ಪಾದ ಮುಟ್ಟಿ ನಮಸ್ಕರಿಸಿದರು. ಶ್ರೀರಾಮಕೃಷ್ಣರು "ಮತ್ತೊಮ್ಮೆ ಬನ್ನಿ" ಎನ್ನಲು ಮರೆಯಲಿಲ್ಲ.

ಅಲ್ಲಿಂದಾಚೆಗೆ ಶುರುವಾಯಿತು—ಅವರಿಬ್ಬರ ದಕ್ಷಿಣೇಶ್ವರಯಾತ್ರೆ. ಭಾನುವಾರ ಬಂತೆಂದರೆ ದಕ್ಷಿಣೇಶ್ವರಕ್ಕೆ ಹೊರಟರೆಂದೇ ಅರ್ಥ! ಈಗ ಅವರ ಜೀವನಗತಿಯೇ ಬದಲಾದಂತಿತ್ತು. ಅವರ ಮನಸ್ಸಿನ ಕಾಳಿಕೆಯೆಲ್ಲ ಕಳೆದು ಹೊಸ ಉತ್ಸಾಹ, ಹೊಸ ಶ್ರದ್ಧೆ ಆವರಿಸತೊಡಗಿತು. ಜಗತ್ತಿನ ವ್ಯಾಪಾರಗಳಲ್ಲಿ ಆಸಕ್ತಿ ಕಡಿಮೆಯಾಗುತ್ತ ಬಂತು. ಭಗವದ್ವಿಚಾರವೇ ಅವರ ವ್ಯಕ್ತಿತ್ವವನ್ನೆಲ್ಲ ತುಂಬಿದಂತಿತ್ತು.

ಯಾವಾಗ ಇವರಿಬ್ಬರೂ ಸದಾ ಕಾಲ 'ದೇವರು, ದೇವರು' ಎನ್ನತೊಡಗಿದರೋ ಆಗ ಮನೆಮಂದಿಯೆಲ್ಲ ಎಚ್ಚರಿಕೆ ವಹಿಸಬೇಕಾಗಿ ಬಂತು! ಒಂದು ದಿನ ಮನಮೋಹನ ದಕ್ಷಿಣೇಶ್ವರಕ್ಕೆ ಹೊರಡಲು ಸಿದ್ಧನಾಗುತ್ತಿದ್ದಾನೆ. ಆಗ ಅವನ ಸೋದರತ್ತೆ ಬಂದು, "ಅಯ್ಯೋ, ಅಲ್ಲಿಗೆಲ್ಲ ಹೋಗಬಾರದಪ್ಪ" ಎಂದು ಮನವೊಲಿಸಲೆತ್ನಿಸಿದಳು. ಆದರೆ ಶ್ರೀರಾಮಕೃಷ್ಣರ ಆಕರ್ಷಣೆಯೇ ಗೆದ್ದಿತು. ರಾಮಚಂದ್ರನನ್ನು ಕೂಡಿಕೊಂಡು ಅವನು ಹೊರಟೇಬಿಟ್ಟ.

ದಕ್ಷಿಣೇಶ್ವರಕ್ಕೆ ಬಂದು ನೋಡುತ್ತಾರೆ—ಶ್ರೀರಾಮಕೃಷ್ಣರು ಮ್ಲಾನವದನರಾಗಿ ಕುಳಿತಿದ್ದಾರೆ! ಇವರಿಗೂ ದುಃಖವೆ! ವಿಚಾರಿಸಿದರು—ಕಾರಣವೇನೆಂದು. ಶ್ರೀರಾಮಕೃಷ್ಣರು ಮಗುವಿನಂತೆ ನುಡಿದರು:

"ಒಬ್ಬ ಭಕ್ತನಿಗೆ ಇಲ್ಲಿಗೆ ಬರಬೇಕೆಂಬ ಇಚ್ಛೆಯಿದೆ. ಆದರೆ ಅವನ ಸೋದರತ್ತೆಗೆ ಅದು ಇಷ್ಟವಿಲ್ಲ, ತಡೆಯುತ್ತಿದ್ದಾಳೆ. ಎಲ್ಲಿ ಅವಳ ಮಾತು ಕೇಳಿಕೊಂಡು ಅವನು ಇಲ್ಲಿಗೆ ಬರುವುದನ್ನು ನಿಲ್ಲಿಸಿಬಿಡುತ್ತಾನೋ ಎಂಬ ಭಯ ನನಗೆ."

ಮನಮೋಹನ ಮಿಂಚು ತಾಕಿದವನಂತೆ ಬೆಚ್ಚಿಬಿದ್ದ. ಇವರಿಗೆ ಹೇಗೆ ಗೊತ್ತಾಯಿತಪ್ಪ, ತನ್ನ ಮನೆಯ ವಿಷಯ...! ಏನಾದರಾಗಲಿ, ತಾನಂತೂ ಇನ್ನುಮುಂದೆ ಅವ

ರಾರ ಮಾತನ್ನೂ ಕೇಳುವವನೇ ಅಲ್ಲ ಎಂದು ನಿರ್ಧರಿಸಿಬಿಟ್ಟ. ಆದರೆ ಮನೆಯವರು ಬಿಡಬೇಕಲ್ಲ! ಮತ್ತೊಂದು ದಿನ ಹೀಗೆಯೇ ಆಯಿತು. ಅವನು ದಕ್ಷಿಣೇಶ್ವರಕ್ಕೆ ಹೊರಟುನಿಂತಾಗ ಅವನ ಹೆಂಡತಿ ತಡೆದಳು:

"ಮನೆಯಲ್ಲಿ ಮಗಳು ಜ್ವರ ಬಂದು ಮಲಗಿದ್ದಾಳೆ, ನೀವು ಅದೆಲ್ಲಿಗೋ ಹೋಗುತ್ತೀರಲ್ಲ! ಮಗಳಿಗಿಂತ ಆ ಸಾಧುವೇ ಹೆಚ್ಚೆ ನಿಮಗೆ?"

ಮನಮೋಹನ ಆಲೋಚಿಸಿದ: ತಾನೀಗ ಮನೆಯಲ್ಲಿದ್ದು ಮಾಡುವುದಾದರೂ ಏನು? ತನ್ನನ್ನು ಅಲ್ಲಿಗೆ ಹೋಗದಂತೆ ತಡೆಯಲು ಇದೊಂದು ಉಪಾಯವಷ್ಟೆ. ತಾನೀಗ ಹೋಗುವುದೋ ಬೇಡವೋ... ಕಡೆಗೆ ಮನಸ್ಸನ್ನು ಗಟ್ಟಿಮಾಡಿಕೊಂಡು ಬಂದೇ ಬಿಟ್ಟ. ಏನಾಶ್ಚರ್ಯ! ಶ್ರೀರಾಮಕೃಷ್ಣರು ಹಿಂದಿನಂತೆಯೇ ವಿಷಣ್ಣರಾಗಿದ್ದಾರೆ; ಕಣ್ಣಿಂದ ನೀರು! ಹೆದರುತ್ತಲೇ ಕೇಳಿದ: "ಏನಾಯಿತು? ಯಾರಿಗಾಗಿ ಈ ದುಃಖ?"

"ಮಗು, ಇಲ್ಲಿಗೊಬ್ಬ ಬರುತ್ತಾನೆ. ಆತ ನಿಜವಾದ ಭಕ್ತ. ಆದರೆ ಅವನ ಹೆಂಡತಿಗೆ ಅವನಿಲ್ಲಿಗೆ ಬರುವುದು ಸಮಾಧಾನವಿಲ್ಲ. ಅದರಿಂದಾಗಿ ಅವನು ಬರುವುದನ್ನು ನಿಲ್ಲಿಸಿಬಿಟ್ಟರೆ?—ಅಂತ ಚಿಂತೆಯಾಗಿದೆ ನನಗೆ."

ಮನಮೋಹನ ಗುರುವಿನ ಪಾದಕ್ಕೆ ಬಿದ್ದು ಕಣ್ಣೀರು ಹಾಕಿದ. 'ನಾನಿನ್ನು ಗುರುವಿನ ವಶವರ್ತಿ' ಎಂದು ಮನಸ್ಸಿಗೆ ಹೇಳಿಕೊಂಡ.

ಆದರೆ ಅವನಿನ್ನೂ ಕಲಿಯುವುದು ಬಹಳವಿತ್ತು.

ದಿನಕಳೆದಂತೆ ಬಂಧುಗಳಿಬ್ಬರೂ ಶ್ರೀರಾಮಕೃಷ್ಣರಿಗೆ ಅತ್ಯಂತ ಆಪ್ತ ಭಕ್ತರಾದರು. ಮಾತ್ರವಲ್ಲ, ತಮ್ಮ ಸ್ನೇಹಿತರನ್ನೂ ಸಂಬಂಧಿಗಳನ್ನೂ ಮನವೊಲಿಸಿ ದಕ್ಷಿಣೇಶ್ವರಕ್ಕೆ ಕರೆತಂದು ತಾವು ಸವಿದ ಆನಂದದ ರುಚಿಯನ್ನು ಅವರಿಗೂ ತೋರಿಸಿಕೊಟ್ಟರು. ನಾವು ಮುಂದೆ ನೋಡಲಿರುವಂತೆ ಶ್ರೀರಾಮಕೃಷ್ಣರ ಶಿಷ್ಯರಲ್ಲಿ ಪ್ರಮುಖರಾದ ನರೇಂದ್ರನಾಥನನ್ನೂ ರಾಖಾಲನನ್ನೂ ಗುರುವಿಗೆ ಪರಿಚಯಿಸಿದವರು ಇವರೇ.

ಕೇಶವಚಂದ್ರ ಸೇನನ ಲೇಖನ-ಭಾಷಣಗಳ ಮೂಲಕ ಶ್ರೀರಾಮಕೃಷ್ಣರ ಹೆಸರು ಪ್ರಚಾರವಾದಂತೆ, ಅವರ ಭಕ್ತರ ಸಂಖ್ಯೆಯೂ ಹೆಚ್ಚಿತು. ಮುಖ್ಯವಾಗಿ ಭಾನುವಾರಗಳಂದು ಅವರ ಪುಟ್ಟ ಕೋಣೆ ಭಕ್ತರಿಂದ ತುಂಬಿಹೋಗುತ್ತಿತ್ತು. ಕ್ರಮೇಣ ಭಕ್ತರಲ್ಲಿ ಒಬ್ಬರಿಗೊಬ್ಬರ ಪರಿಚಯ ಬೆಳೆಯಿತು. ಒಂದೇ ತೆರನಾದ ಭಕ್ತಿಭಾವಗಳಿಂದ, ಸಮಾನ ಆದರ್ಶದಿಂದ ಕೂಡಿದ ಅವರಲ್ಲಿ ಸಹಜವಾಗಿಯೇ ಪರಸ್ಪರ ಪ್ರೀತಿ-ವಿಶ್ವಾಸ, ಭ್ರಾತೃಭಾವ ವರ್ಧಿಸಿತು. ಶ್ರೀರಾಮಕೃಷ್ಣರೂ ಇದನ್ನು ಕಂಡು ಸಂತೋಷಗೊಂಡು ಬೆಂಬಲಿಸಿದರು. ಆಗಾಗ ಕಲ್ಕತ್ತದ ಭಕ್ತರ ಆಹ್ವಾನವನ್ನು ಮನ್ನಿಸಿ ಅವರ ಮನೆಗಳಿಗೆ ಹೋಗಿ-ಬರಲಾರಂಭಿಸಿದರು. ಈ ಸಂದರ್ಭಗಳಲ್ಲಿ ಇತರ ಭಕ್ತರಿಗೂ ಆಮಂತ್ರಣ ಸಿಗುವಂತೆ ಶ್ರೀರಾಮಕೃಷ್ಣರು ವ್ಯವಸ್ಥೆ ಮಾಡುತ್ತಿದ್ದರು. ಕ್ರಮೇಣ ಇವು ಉತ್ಸವಗಳ ರೂಪ ತಾಳಿದುವು. ಕೆಲವೊಮ್ಮೆ ನುರಿತ ಸಂಗೀತಗಾರರಿಂದ ಸಂಕೀರ್ತನೆಯ ಏರ್ಪಾಟೂ ಇರುತ್ತಿತ್ತು. ಶ್ರೀರಾಮಕೃಷ್ಣರ ಮಧುಮಯ ಮಾತುಗಳನ್ನೂ ಕರ್ಣರಸಾಯನದಂತಿರುವ ಗಾಯನವನ್ನೂ ಆಲಿಸುತ್ತ, ಅವರ ಅಭೂತಪೂರ್ವ ಭಾವಾವಸ್ಥೆಯನ್ನು ವೀಕ್ಷಿಸುತ್ತ ಮೈಮರೆತ ಭಕ್ತರಿಗೆ ಗಂಟೆಗಳು ಉರುಳಿದ್ದರ ಪರಿವೆಯೇ ಇರುತ್ತಿರಲಿಲ್ಲ. ಬಳಿಕ, ಸಾಮಾನ್ಯವಾಗಿ ಎಲ್ಲರಿಗೂ ಭೋಜನದ ವ್ಯವಸ್ಥೆಯಿರುತ್ತಿತ್ತು. ಈ ಸತ್ಸಂಗಗಳ ಮೂಲಕ ನೆರೆಹೊರೆಯ ಜನರೆಲ್ಲ ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬರಲು ಅವಕಾಶ

ವಾಗುತ್ತಿತ್ತು. ಅಲ್ಲದೆ, ಹಳೆಯ ಭಕ್ತರಲ್ಲೂ ಆಗಿಂದಾಗ್ಗೆ ದಕ್ಷಿಣೇಶ್ವರಕ್ಕೆ ಬರಲಾಗದಿದ್ದ ವರಿಗೆ ಅವರ ದರ್ಶನ ಮಾಡಲು ಅನುಕೂಲವಾಗುತ್ತಿತ್ತು.

ಮನಮೋಹನನೂ ತನ್ನ ಮನೆಯಲ್ಲಿ ಇಂತಹ ಉತ್ಸವಗಳನ್ನು ಏರ್ಪಾಡು ಮಾಡುತ್ತಿದ್ದ. ಒಂದು ದಿನ ಉತ್ಸವದಲ್ಲಿ ಕೇಶವನೂ ಇತರ ಬ್ರಾಹ್ಮಸಮಾಜೀಯರೂ ಪಾಲ್ಗೊಂಡರು. ನೋಡಿದವರು ಎಂದೂ ಮರೆಯಲಾಗದ ನೋಟ ಅದು! ಬ್ರಾಹ್ಮ ಭಕ್ತರು ಸಂಕೀರ್ತನೆಯನ್ನು ಪ್ರಾರಂಭಿಸಿದರು. ಶ್ರೀರಾಮಕೃಷ್ಣರೂ ಅದರಲ್ಲಿ ಸೇರಿ ಕೊಂಡು ಹಾಡಿದರು; ಆನಂದಾತಿರೇಕದಿಂದ ಆಗಾಗ ಸಮಾಧಿಗೇರಿದರು. ಆ ಆನಂದವು ಸಾಂಕ್ರಾಮಿಕವಾಗಿ ಎಲ್ಲರಿಗೂ ಹಬ್ಬಿತು. ಭಾವಗಳ ಸುಳಿಯಲ್ಲಿ ಸಿಲುಕಿದ ಭಕ್ತರಲ್ಲಿ ಕೆಲವರು ನಕ್ಕರು, ಕೆಲವರು ಅತ್ತರು. ಸಂಕೀರ್ತನೆಯಾದ ಮೇಲೆ ಶ್ರೀರಾಮಕೃಷ್ಣರು ಭಕ್ತರೊಂದಿಗೆ ಅಧ್ಯಾತ್ಮ ಸಂಬಂಧವಾಗಿ ಮಾತುಕಥೆಯಾಡಿದರು. ರಾತ್ರಿಯ ಊಟ ದೊಂದಿಗೆ ಉತ್ಸವ ಮುಗಿಯಿತು.

ಮನಮೋಹನನ ಮನದಲ್ಲಿ ಬಹು ಬೇಗ ಭಕ್ತಿ-ಶ್ರದ್ಧೆಯುಂಟಾಯಿತು ಎಂಬು ದೇನೋ ನಿಜವೆ. ಆದರೆ ಅದರೊಂದಿಗೆ 'ತಾನೊಬ್ಬ ಮಹಾ ಭಕ್ತ' ಎಂಬ ಗರ್ವವೂ ಬೆಳೆಯಿತು. ಮತ್ತು ಈ ಗರ್ವವಿದ್ದ ಮೇಲೆ ಅಸೂಯೆಯೂ ಇರಲೇಬೇಕಲ್ಲ! ಒಂದು ದಿನ ಬಹಳ ಜನ ಭಕ್ತರು ಸೇರಿದ್ದಾರೆ. ಅವರಲ್ಲಿ, ರಾಮಚಂದ್ರ ದತ್ತನೇ ಶ್ರೀರಾಮಕೃಷ್ಣ ರಿಗೆ ಪರಿಚಯಿಸಿದ್ದ ಸುರೇಂದ್ರನಾಥ ಮಿತ್ರ ಎಂಬವನೊಬ್ಬನಿದ್ದ. (ಇವನನ್ನು ಶ್ರೀರಾಮ ಕೃಷ್ಣರು 'ಸುರೇಶ' ಎಂದು ಕರೆಯುತ್ತಿದ್ದರು. ಈತನ ಬಗ್ಗೆ ಮುಂದೆ ನೋಡಲಿದ್ದೇವೆ.) ಮಾತಿನ ಮಧ್ಯೆ ಅವರು ಎಲ್ಲರೆದುರಿಗೆ, "ಸುರೇಶನನ್ನು ನೋಡಿ! ಅವನ ಭಕ್ತಿಗೆ ಸಾಟಿಯೇ ಇಲ್ಲ!" ಎಂದು ಕೊಂಡಾಡಿದರು. ಇದನ್ನು ಕೇಳಿ ಮನಮೋಹನನ 'ಅಹಂ'ಗೆ ಧಕ್ಕೆಯಾಯಿತು. 'ಎಲ್ಲ ಬಿಟ್ಟು ಅವರು ಆ ಸುರೇಂದ್ರನನ್ನು ಮಹಾ ಭಕ್ತ ಎಂದು ಬಿಟ್ಟರಲ್ಲ! ಹಾಗಾದರೆ ನಾನೇನೂ ಅಲ್ಲ?' ಎಂದು ಆಲೋಚಿಸಿ ಕಸಿವಿಸಿಗೊಳ್ಳುತ್ತ ಮೈಪರಚಿಕೊಂಡ. 'ನನಗಿನ್ನು ಈ ದಕ್ಷಿಣೇಶ್ವರದ ಋಣ ತೀರಿತು' ಎಂದುಕೊಂಡ.

ಮನಮೋಹನ ಪ್ರತಿ ಭಾನುವಾರವೂ ತಪ್ಪದೆ ದಕ್ಷಿಣೇಶ್ವರಕ್ಕೆ ಬರುತ್ತಿದ್ದವನು. ಆದ್ದರಿಂದ ಮುಂದಿನ ಭಾನುವಾರ ಅವನು ತಪ್ಪಿಸಿಕೊಂಡದ್ದನ್ನು ಶ್ರೀರಾಮಕೃಷ್ಣರು ಗಮನಿಸದಿರಲಿಲ್ಲ. ರಾಮಚಂದ್ರನನ್ನು ಕೇಳಿದರು, 'ಅವನೆಲ್ಲಿ' ಎಂದು. 'ನನಗೆ ತಿಳಿ ಯದು' ಎಂದ ರಾಮಚಂದ್ರ. ವಿಚಾರಿಸಿ ಬಂದು ತಿಳಿಸುವಂತೆ ಹೇಳಿದರು ಶ್ರೀರಾಮ ಕೃಷ್ಣರು. ರಾಮಚಂದ್ರ ಹೋಗಿ ನೋಡಿದ—ಗೆಳೆಯ ಆರೋಗ್ಯವಾಗಿಯೇ ಇದ್ದಾನೆ. 'ಯಾಕೆ ಬರಲಿಲ್ಲ? ಏನು ಸಮಾಚಾರ?' ಎಂದು ಕೇಳಿನೋಡಿದ. ಆದರೆ ಮನ ಮೋಹನ ನಿಜವಾದ ಕಾರಣವನ್ನು ಬಾಯಿಬಿಟ್ಟಾನೆಯೆ? ಏನೋ ಒಂದು ಸಬೂಬು ಹೇಳಿದ. ರಾಮಚಂದ್ರ ಬಂದು ತಿಳಿಸಿದ: "ಅವನು ಚೆನ್ನಾಗಿಯೇ ಇದ್ದಾನೆ. ಆದರೆ ಯಾಕೆ ಬರಲಿಲ್ಲವೋ ತಿಳಿಯದು." ಶ್ರೀರಾಮಕೃಷ್ಣರಿಗೆ ಗೊತ್ತಾಗದಿದ್ದೀತೆ—ಅವ ನೊಳಗೆ ಯಾವ ಹುಳ ಹೊಕ್ಕಿದೆಯೆಂದು! 'ಅವನನ್ನು ಇಲ್ಲಿಗೆ ಬರಹೇಳು' ಎಂದರು.

ಶ್ರೀರಾಮಕೃಷ್ಣರ ಮಾತನ್ನು ಅವಜ್ಞೆ ಮಾಡಿ ಮನಮೋಹನ ಸುಮ್ಮನಿದ್ದುಬಿಟ್ಟ. ಮನಸ್ಸಿನಲ್ಲಿಯೇ ಅವರಿಗೆ ಮುನಿಸಿನಿಂದ ಹೇಳಿಕೊಂಡ: "ನೀವೂ ನಿಮ್ಮ ಭಕ್ತರೂ ಸಂತೋಷದಿಂದಿರಿ. ನಾನೇನೂ ನಿಮಗೆ ಬೇಕಾದವನಲ್ಲವಲ್ಲ? ನಾನೊಬ್ಬ ಯಃಕಶ್ಚಿತ್ತು ತಾನೆ?" ಹೀಗೆಂದುಕೊಳ್ಳುತ್ತ ಅವರನ್ನು ಮರೆತೇ ಬಿಡುವ ಪ್ರಯತ್ನ ಮಾಡಿದ.

ಶ್ರೀರಾಮಕೃಷ್ಣರು ಮತ್ತೆಮತ್ತೆ ಯಾರಯಾರ ಕೈಯಲ್ಲೋ ಹೇಳಿಕಳಿಸಿದರು. ಆದರೆ ಇವನು ಜಗ್ಗದೆ ಕುಳಿತ. ಅಷ್ಟೇ ಅಲ್ಲ, ಅವರ ಕೈಗೆ ಸಿಗಲೇಬಾರದು ಎಂದುಕೊಂಡು ಕಲ್ಕತ್ತದಿಂದ ಎಷ್ಟೋ ಮೈಲಿ ದೂರದ ಕೊನ್ನಗರ ಎಂಬಲ್ಲಿಗೆ ಹೋಗಿ ಇದ್ದುಬಿಟ್ಟ. ಪ್ರತಿದಿನವೂ ಆಫೀಸಿಗೆ ರೈಲಿನಲ್ಲಿ ಓಡಾಡಬೇಕಾದ ಕಷ್ಟವನ್ನೂ ಪರಿಗಣಿಸಲಿಲ್ಲ.

ಆದರೆ ಏನು ಮಾಡಿದರೇನು? ಅವನ ಮನಸ್ಸು ಶಾಂತವಾಗಬೇಕಲ್ಲ! 'ಇದಕ್ಕೆಲ್ಲ ಅವರೇ ಕಾರಣ' ಎಂದು ಮತ್ತೆಮತ್ತೆ ತನಗೆ ತಾನೇ ಹೇಳಿಕೊಂಡ. ಬಂದು ವಿಚಾರಿಸಿದವರಿಗೂ ಹಾಗೆಯೇ ಹೇಳಿದ. ಆದರೆ ಆಲೋಚಿಸಿದಷ್ಟೂ ಅಶಾಂತಿ-ಅಸಮಾಧಾನ ಹೆಚ್ಚುತ್ತಲೇ ಹೋಯಿತು. ಯಾವ ಕೆಲಸಕ್ಕೂ ಮನಸ್ಸು ಕೊಡಲಾಗದಂತಾಯಿತು. ಕುಳಿತರೂ ನಿಂತರೂ ಮಲಗಿದರೂ ಶ್ರೀರಾಮಕೃಷ್ಣರದೇ ಆಲೋಚನೆ!

ಒಂದು ದಿನ ಆತ ಮನೆಯ ಸಮೀಪ ಗಂಗಾಸ್ನಾನಕ್ಕೆ ಹೋಗಿದ್ದ. ಗಂಗೆಯನ್ನು ನೋಡಿದೊಡನೆ, ಅದರ ಪಾವಿತ್ರ್ಯದ ಕುರಿತಾಗಿ ಶ್ರೀರಾಮಕೃಷ್ಣರಾಡುತ್ತಿದ್ದ ಮಾತು ನೆನಪಾಯಿತು. ಮರುಕ್ಷಣಕ್ಕೆ ಕಣ್ಣಿಗೆ ಕಟ್ಟಿದಂತೆ ಅವರ ಪ್ರಶಾಂತಮೂರ್ತಿಯ ಸ್ಮರಣೆ! ಆ ಚಿತ್ರವನ್ನು ಬದಿಗೆ ಸರಿಸೋಣವೆಂದರೆ ಸಾಧ್ಯವೇ ಆಗುತ್ತಿಲ್ಲ! ಅದೇ ಕ್ಷಣಕ್ಕೆ ಅನತಿ ದೂರದಲ್ಲಿ ನಾಡದೋಣಿಯೊಂದು ತನ್ನೆಡೆಗೇ ಬರುತ್ತಿರುವುದು ಗೋಚರವಾಯಿತು. ಅದರಲ್ಲಿಬ್ಬರು ವ್ಯಕ್ತಿಗಳು. ಒಬ್ಬರು . . . ತನಗೆ ಪರಿಚಿತರಾದವರೇ! ಮತ್ತೊಬ್ಬ ವ್ಯಕ್ತಿ ತನ್ನ ಕಡೆ ಕೈ ಮಾಡಿ ತೋರಿಸುತ್ತ ಏನೋ ಹೇಳುತ್ತಿದ್ದಾನೆ.

ಶ್ರೀರಾಮಕೃಷ್ಣರು ಮತ್ತು ನಿರಂಜನ ಎಂಬ ಅವರ ತರುಣಶಿಷ್ಯ—ಇವರೇ ಆ ಇಬ್ಬರು ವ್ಯಕ್ತಿಗಳು. ಮನಮೋಹನ ದಿಗ್ಭ್ರಾಂತನಾಗಿ ನಿಂತು ನೋಡುತ್ತಿದ್ದಾನೆ; ದೋಣಿ ಮತ್ತಷ್ಟು ಬಳಿಸಾರಿತು. ನಿರಂಜನ ಮನಮೋಹನನನ್ನು ಕೇಳಿದ:

"ನೀವೇಕೆ ಈಚೆಗೆ ದಕ್ಷಿಣೇಶ್ವರಕ್ಕೆ ಬರುತ್ತಿಲ್ಲ? ಠಾಕೂರರು ಬಹಳ ಕಳವಳಗೊಂಡು ನಿಮ್ಮನ್ನೇ ಹುಡುಕಿಕೊಂಡು ಬಂದಿದ್ದಾರೆ."

ಶ್ರೀರಾಮಕೃಷ್ಣರು ಇವನನ್ನು ಕಂಡೊಡನೆ ದೋಣಿಯಲ್ಲೇ ಸಮಾಧಿವಶರಾಗಿ ನಿಂತುಬಿಟ್ಟರು. ಮನಮೋಹನ ನೀರಿಗಿಳಿದು ಮೆಲ್ಲನೆ ಮುನ್ನಡೆದ. ಅಷ್ಟರಲ್ಲೇ ಅವನೊಳಗಿನಿಂದ ಭಾವಗಳು ಉಕ್ಕಿ ಕಣ್ಣೀರಾಗಿ ಹರಿಯಿತು. 'ಅಯ್ಯೋ, ಅವರು ನನಗಾಗಿ ಇಷ್ಟೊಂದು ತೊಂದರೆಪಟ್ಟುಕೊಳ್ಳುವಂತೆ ಮಾಡಿದೆನಲ್ಲ. ನಾನೆಂಥ ಪಾಪಿ' ಎಂದು ಸಂಕಟಪಟ್ಟ. ದುಃಖದ ಆವೇಗದಲ್ಲಿ ಅವನು ಇನ್ನೇನು ಬಿದ್ದುಬಿಡಬೇಕು, ಅಷ್ಟರಲ್ಲಿ ನಿರಂಜನ ಹಾರಿ ಬಂದು ಅವನನ್ನು ಹಿಡಿದುಕೊಂಡ. ಈ ವೇಳೆಗೆ ಶ್ರೀರಾಮಕೃಷ್ಣರಿಗೆ ಬಾಹ್ಯಪ್ರಜ್ಞೆ ಮರಳಿತ್ತು. "ನಿರಂಜನ, ಅವನನ್ನು ಇಲ್ಲಿಗೆ ಕರೆದು ತಾ" ಎಂದರು.

ಅವನು ದೋಣಿಗೆ ಬಂದೊಡನೆ ಶ್ರೀರಾಮಕೃಷ್ಣರು ಅವನ ಕೈಗಳನ್ನು ಬಿಗಿಯಾಗಿ ಹಿಡಿದುಕೊಂಡು ಹೇಳಿದರು: "ಅಪ್ಪಾ! ನಿನಗೋಸ್ಕರ ನನಗಾದ ತಳಮಳ ಅದೆಷ್ಟು ಗೊತ್ತೆ? ಅದಕ್ಕೇ ನಾನು ನಿನ್ನನ್ನು ಹುಡುಕಿಕೊಂಡು ಬಂದುಬಿಟ್ಟೆ."

ಮನಮೋಹನ ಗುರುವಿನ ಶ್ರೀಚರಣಕ್ಕೆ ಸಾಷ್ಟಾಂಗ ಪ್ರಣಾಮ ಮಾಡಿ ಹೇಳಿದ:

"ಸ್ವಾಮಿ, ಇದೆಲ್ಲಕ್ಕೂ ನನ್ನ ಹಾಳು ಅಹಂಕಾರವೇ ಕಾರಣ!"

ಹೀಗೆಂದ ಅವನು ಮಗುವಿನಂತೆ ಬಿಕ್ಕಳಿಸಿದ. ಮತ್ತೇನೂ ಮಾತನಾಡಲು ಅವನಿಂದ ಸಾಧ್ಯವಾಗಲಿಲ್ಲ. ದೋಣಿ ಮರಳಿ ದಕ್ಷಿಣೇಶ್ವರದೆಡೆಗೆ ಸಾಗಿದಂತೆ ಶ್ರೀರಾಮಕೃಷ್ಣರು ಮತ್ತೆ ಸಮಾಧಿಗೇರಿದರು.

ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದಾಗ ಸ್ವಲ್ಪ ತಣಿದಂತಿದ್ದ ರಾಮಚಂದ್ರನ ದೈವತೃಷೆ ಕೆಲದಿನಗಳಲ್ಲಿ ಮತ್ತೆ ಕೆರಳಿತು. ಚಡಪಡಿಕೆ ಹೆಚ್ಚಾಯಿತು. ಹೀಗೆ ಗೊಂದಲದಲ್ಲಿ ಸಿಲುಕಿದ್ದಾಗ ಒಂದು ರಾತ್ರಿ ಅವನಿಗೊಂದು ವಿಚಿತ್ರ ಕನಸಾಯಿತು. ಶ್ರೀರಾಮಕೃಷ್ಣರು ಅವನಿಗೆ ಸ್ನಾನ ಮಾಡಿ ಬರುವಂತೆ ಹೇಳಿದರು. ಬಳಿಕ ಅವನ ಕಿವಿಯಲ್ಲಿ ಒಂದು ಮಂತ್ರವನ್ನುಚ್ಚರಿಸಿ, 'ದಿನಕ್ಕೆ ಇಂತಿಷ್ಟು ಬಾರಿ ಇದನ್ನು ಜಪಿಸುತ್ತ ಬಾ' ಎಂದು ಆದೇಶಿಸಿದರು.

ರಾಮಚಂದ್ರನಿಗೆ ಇದ್ದಕ್ಕಿದ್ದಂತೆ ಎಚ್ಚರವಾಯಿತು. ಅತೀವ ಆನಂದದಿಂದ ಅವನು ಎದ್ದುಕುಳಿತ. ಬೆಳಗಾಗುತ್ತಲೇ ದಕ್ಷಿಣೇಶ್ವರಕ್ಕೆ ಓಡಿದ—ತನ್ನ ಈ ಅದ್ಭುತ ಕನಸನ್ನು ಗುರುವಿಗೆ ಅರುಹಲು. ಶ್ರೀರಾಮಕೃಷ್ಣರು ಆ ವೃತ್ತಾಂತವನ್ನು ಕೇಳಿ, "ಭೇಷ್ ! ಅದು ನಿನ್ನ ಒಳ್ಳೆಯದಕ್ಕೆ" ಎಂದು ಅಭಿನಂದಿಸಿದರು.

ಆದರೆ ವಾಪಸು ಬರುವಾಗ ರಾಮಚಂದ್ರ ಯೋಚಿಸಿದ—'ಅದರಿಂದೇನಾಯಿತು ? ಎಷ್ಟಾದರೂ ಕನಸು ಕನಸೇ. ಆ ಮಂತ್ರವನ್ನು ಹಿಡಿದುಕೊಂಡು ನಾನು ಮಾಡುವುದೇನು ?'

ಈಗ ಅವನ ಅಶಾಂತಿ ಮತ್ತಷ್ಟು ಹೆಚ್ಚಿತು. ಅಲ್ಲದೆ ಅವನಿಗೊಂದು ಉಭಯ ಸಂಕಟ ಒದಗಿದಂತಾಯಿತು—ಇತ್ತ ಪ್ರಾಪಂಚಿಕ ಭೋಗವೂ ರುಚಿಸುತ್ತಿಲ್ಲ, ಅತ್ತ ಆಧ್ಯಾತ್ಮಿಕ ಸುಖವೂ ಕೈಗೆಟುಕುತ್ತಿಲ್ಲ ! ಇದೆಂಥ ವಿಡಂಬನೆ ! ಮುಖ್ಯ, ಅಂದು ತಾನು ಶ್ರೀರಾಮಕೃಷ್ಣರನ್ನು ಮೊದಲ ಬಾರಿ ಭೇಟಿಯಾದದ್ದೇ ತನ್ನ ಅತಿ ದೊಡ್ಡ ತಪ್ಪು !

ಇದಾಗಿ ಕೆಲದಿನಗಳಾದುವು. ಒಂದು ದಿನ ಬೆಳಗ್ಗೆ ಸುಮಾರು ಹನ್ನೊಂದು ಗಂಟೆಯ ಸಮಯ; ಕಲ್ಕತ್ತದ 'ಕಾಲೇಜ್ ಸ್ಕ್ವೇರ್' ಎಂಬಲ್ಲಿ ರಾಮಚಂದ್ರ ತನ್ನೊಬ್ಬ ಸ್ನೇಹಿತನೊಂದಿಗೆ ಮಾತನಾಡುತ್ತ ನಿಂತಿದ್ದಾನೆ; ತನ್ನ ಗೋಳನ್ನು ಹೇಳಿಕೊಳ್ಳುತ್ತಿದ್ದಾನೆ. ಆಗ ಹಠಾತ್ತಾಗಿ ಅವನೆದುರು ಒಬ್ಬ ಕಪ್ಪನೆಯ ಅಪರಿಚಿತ ವ್ಯಕ್ತಿ ಕಾಣಿಸಿಕೊಂಡು ಮುಗುಳ್ನಗುತ್ತ ನುಡಿದ: "ಏಕಿಷ್ಟು ಉದ್ವೇಗ ? ಸಮಾಧಾನ ತಂದುಕೊ, ಎಲ್ಲ ಸರಿ ಹೋಗುತ್ತದೆ." ಸ್ನೇಹಿತರಿಬ್ಬರಿಗೂ ಒಂದು ಕ್ಷಣ ಏನೂ ತೋಚದೆ ಕಣ್‌ಕಣ್ಣು ಬಿಟ್ಟರು. ಯಾರವನು ? ಎಲ್ಲಿಂದ ಬಂದ ? ತಮ್ಮ ವಿಷಯ ಅವನಿಗೆ ಹೇಗೆ ತಿಳಿಯಿತು ?... ಮರುಘಳಿಗೆಗೆ ಅವನನ್ನು ಹುಡುಕಲು ಅತ್ತಿತ್ತ ಎಲ್ಲ ಕಡೆಯೂ ನೋಡಿದರು. ಆದರೆ ಅವನ ಸುಳಿವೇ ಸಿಗಲಿಲ್ಲ. ಇವರಿಗೆ ಮತ್ತೂ ಆಶ್ಚರ್ಯ. ಅದೊಂದು ಭ್ರಮೆಯಾಗಿರಬಹುದೆ ? ಸಾಧ್ಯವೇ ಇಲ್ಲ ! ಮಟಮಟ ಮಧ್ಯಾಹ್ನ; ಇಬ್ಬರೂ ಸ್ಪಷ್ಟವಾಗಿ ಕಂಡಿದ್ದಾರೆ, ಕೇಳಿದ್ದಾರೆ. ಮತ್ತೆಲ್ಲಿಗೆ ಹೋಗಿರಬಹುದು ಅವನು ? ರಾಮಚಂದ್ರನಿಗನ್ನಿಸಿತು, ಇದು ಭಗವಂತನ ಸಂದೇಶವೇ ಇರಬೇಕು ಎಂದು. ಮತ್ತೆ ಶ್ರೀರಾಮಕೃಷ್ಣರ ಬಳಿಗೆ ಹೋಗಿ ಹೇಳಿಕೊಂಡಾಗ ಅವರು ಸಹಜವಾಗಿ ನುಡಿದರು: "ಹೌದು. ಇಂತಹ ಇನ್ನೂ ಎಷ್ಟೋ ಅನುಭವಗಳನ್ನು ಪಡೆಯುವ ಭಾಗ್ಯ ನಿನ್ನ ಪಾಲಿಗಿದೆ !"

ಇದಾದ ಮೇಲೆ ಸ್ವಲ್ಪ ಸಮಯ ರಾಮಚಂದ್ರ ಬಹಳಷ್ಟು ಶಾಂತಿಯನ್ನು

ಅನುಭವಿಸಿದ. ಭಗವದ್ಭಕ್ತಿಯಿಂದುದಿಸಿದ ಶಾಂತಿ ಅದು. ಪ್ರಾಪಂಚಿಕ ಜೀವನದಲ್ಲಿ ನಿರಾಸಕ್ತಿ ಹೆಚ್ಚಾಯಿತು. ಸಾಕಿನ್ನು ಸಂಸಾರ ಎನ್ನಿಸಿತು. ಗುರುವಿನ ಬಳಿಗೆ ಬಂದು ಬೇಡಿಕೊಂಡ:

"ನನಗೀ ಜೀವನ ರುಚಿಸುತ್ತಿಲ್ಲ. ದಯಮಾಡಿ ನನಗೆ ಸಂನ್ಯಾಸದೀಕ್ಷೆ ನೀಡಿಬಿಡಿ. ಹಾಯಾಗಿರುತ್ತೇನೆ."

ಆದರೆ ಶ್ರೀರಾಮಕೃಷ್ಣರು ಒಪ್ಪಲಿಲ್ಲ:

"ಇಲ್ಲ ಇಲ್ಲ, ಹಾಗೆಲ್ಲ ಮನಸ್ಸಿಗೆ ಬಂದ ತಕ್ಷಣ ಏನನ್ನಾದರೂ ಮಾಡಿಬಿಡ ಬಾರದು. ಒಬ್ಬೊಬ್ಬ ವ್ಯಕ್ತಿಯೂ ಯಾವಯಾವ ಮಾರ್ಗ ಹಿಡಿಯಬೇಕೆಂಬುದು ಭಗವಂತನೊಬ್ಬನಿಗೇ ಗೊತ್ತು. ನೀನು ಸಂನ್ಯಾಸಿಯಾಗಿಬಿಟ್ಟರೆ ನಿನ್ನ ಹೆಂಡತಿ-ಮಕ್ಕಳು ಏನು ಮಾಡಬೇಕು? ದೇವರು ನಿನಗಾಗಿ ಮಾಡಿಟ್ಟಿರುವ ವ್ಯವಸ್ಥೆಯನ್ನು ಕೆಡಿಸಲು ನೋಡಬೇಡ. ಎಲ್ಲವೂ ಸಕಾಲದಲ್ಲಿ ನೆರವೇರುತ್ತದೆ."

'ಸರಿ' ಎಂದುಕೊಂಡು ಅವನು ಸ್ವಲ್ಪ ದಿನ ಸುಮ್ಮನಿದ್ದ. ಆದರೆ ಮತ್ತೊಂದು ದಿನ ಅದೇ ವಿಷಯವನ್ನೆತ್ತಿದ. ಆಗ ಶ್ರೀರಾಮಕೃಷ್ಣರೆಂದರು:

"ಸಂಸಾರವನ್ನು ತ್ಯಾಗಮಾಡುವುದರಿಂದ ಏನು ಪಡೆಯುತ್ತೀಯಯ್ಯಾ? ಈ ಗೃಹಸ್ಥಜೀವನ ಇದೆಯಲ್ಲ, ಇದು ಕೋಟೆಯಿದ್ದಂತೆ. ಶತ್ರುವನ್ನು ಎದುರಿಸಿ ಒಳಗಡೆ ಯಿಂದ ಯುದ್ಧ ಮಾಡುವುದೇ ಸುಲಭ, ಗೊತ್ತಾಯಿತೆ? ನೀನು ನಿನ್ನ ಮನಸ್ಸಿನ ಮುಕ್ಕಾಲು ಪಾಲನ್ನು ದೇವರೆಡೆಗೆ ಹರಿಯಿಸುವಂತಾದಾಗ ಮಾತ್ರ ನೀನು ಸಂಸಾರ ವನ್ನು ತ್ಯಜಿಸಬಹುದು. ಅದಕ್ಕೆ ಮುಂಚೆ ಅಲ್ಲ."

ರಾಮಚಂದ್ರ ಮತ್ತೆ ಆ ವಿಷಯವನ್ನೆತ್ತಲಿಲ್ಲ.

ರಾಮಚಂದ್ರ ಸಂಪ್ರದಾಯಸ್ಥ ವೈಷ್ಣವಕುಟುಂಬಕ್ಕೆ ಸೇರಿದವನೆಂದು ಹಿಂದೆಯೇ ಹೇಳಿದೆ. ಸಹಜವಾಗಿಯೇ ಅವನಿಗೆ ಶ್ರೀಚೈತನ್ಯನಲ್ಲಿ ವಿಶೇಷ ಅನುರಾಗ. ಚೈತನ್ಯ ಮಹಾಪ್ರಭುವಿನ ಜೀವನಲೀಲೆಯನ್ನು ಹೊಸತಾಗಿ ಅಧ್ಯಯನ ಮಾಡಲು ಹೊರ ಟಾಗ ಇವನಿಗೆ ಎದ್ದು ಕಂಡ ಅಂಶವೆಂದರೆ, ಚೈತನ್ಯನಿಗೂ ಪರಮಹಂಸರಿಗೂ ಇರುವ ಸಾಮ್ಯ. ಅವನಿನ್ನೂ ಅದನ್ನೇ ಆಲೋಚಿಸುತ್ತ ಮತ್ತೆಮತ್ತೆ ಆಶ್ಚರ್ಯಪಡುತ್ತ ಅದೇ ಗುಂಗಿನಲ್ಲಿದ್ದ ಸಮಯ. ಆಗೊಂದು ದಿನ ಶ್ರೀರಾಮಕೃಷ್ಣರು ಅವನಿಗೆ ಅಂದು ಸಂಜೆ ದಕ್ಷಿಣೇಶ್ವರದಲ್ಲೇ ಇರುವಂತೆ ಹೇಳಿದರು. ಬೇರೆ ಯಾರೂ ಇರಲಿಲ್ಲ. ಆಗ ಇದ್ದ ಕ್ಕಿದ್ದಂತೆ ಅವನ ಮುಂದೆ ನಿಂತು ಅವನನ್ನು ಕೇಳಿದರು:

"ನೀನು ನೋಡುತ್ತಿರುವುದೇನನ್ನು?"

"ನಿಮ್ಮನ್ನೇ!"

"ನನ್ನನ್ನು ನೋಡಿ ಏನು ತಿಳಿದೆ?"

"ನೀವು...ಸಾಕ್ಷಾತ್ ಶ್ರೀಚೈತನ್ಯರೆಂದು!"

ಶ್ರೀರಾಮಕೃಷ್ಣರು ಒಂದು ಕ್ಷಣ ಮೌನವಾಗಿದ್ದು ಬಳಿಕ ಉದ್ಗಾರ ಮಾಡಿದರು:

"ನಿಜ. ಭೈರವಿಯೂ ಹಾಗೆಯೇ ಹೇಳುತ್ತಿದ್ದಳು."

ದಿನಕಳೆದಂತೆಲ್ಲ ಶ್ರೀರಾಮಕೃಷ್ಣರ ಅತೀಂದ್ರಿಯ ಶಕ್ತಿಯನ್ನು ಅವನು ಅನೇಕ ಬಾರಿ ಕಂಡ. ಒಮ್ಮೆ ಅವನು ಅವರಿಗಾಗಿ ಸ್ವಲ್ಪ ಸಿಹಿತಿನಿಸನ್ನು ತರುತ್ತಿದ್ದ. ದಾರಿ ಯಲ್ಲೊಬ್ಬ ಭಿಕ್ಷುಕ ಅಡ್ಡಗಟ್ಟಿ ಪೀಡಿಸಿದ. ರಾಮ ಆ ಬುಟ್ಟಿಯಿಂದಲೇ ಒಂದು ತುಂಡು

ಸಿಹಿಯನ್ನು ತೆಗೆದು ಕೊಟ್ಟ. ದಕ್ಷಿಣೇಶ್ವರಕ್ಕೆ ಬಂದು ಸಿಹಿಯ ಬುಟ್ಟಿಯನ್ನು ಅದಕ್ಕೆ ಮೀಸಲಾದ ಜಾಗದಲ್ಲಿ ಇರಿಸಿದ. ಸಂಜೆಯ ವೇಳೆಗೆ ಶ್ರೀರಾಮಕೃಷ್ಣರಿಗೆ ಹಸಿವಾಯಿತು. ರಾಮ ತಾನು ತಂದಿದ್ದ ಸಿಹಿಯನ್ನೆತ್ತಿಕೊಟ್ಟ. ಆದರೆ ಅದೇಕೋ ಅವರು ಅದನ್ನು ಎಡಗೈಯಲ್ಲಿ ಮುಟ್ಟಿದರು! ವಿಚಿತ್ರವಾಗಿ ಮೇಲೆ ನೋಡಿದರು; ಒಂದು ತುಣುಕನ್ನು ಮುರಿದು ಅಲ್ಲೇ ಬಿಟ್ಟು, 'ಇಲ್ಲ ಇಲ್ಲ' ಎಂಬಂತೆ ತಲೆಯಾಡಿಸಿದರು. ಅಷ್ಟೇ ಅಲ್ಲ, ಕೂಡಲೇ ಕೈತೊಳೆದುಕೊಂಡರು!! ಇದನ್ನು ಕಂಡು ರಾಮಚಂದ್ರನಿಗೆ ಹೇಗಾಯಿತೆಂದರೆ . . . !

ಅವನು ಮುಂದಿನ ಬಾರಿ ಬಂದಾಗ ಶ್ರೀರಾಮಕೃಷ್ಣರೇ ಹೇಳಿದರು: "ನೋಡು, ನೀನು ನನಗೋಸ್ಕರ ಏನನ್ನಾದರೂ ತಂದಾಗ ಅದರಲ್ಲಿ ಯಾರಿಗೂ ಪಾಲು ಕೊಡಬೇಡ. ನಾನು ಯಾವುದನ್ನೂ ಭಗವತಿಗೆ ನೈವೇದ್ಯ ಮಾಡದೆ ತಿನ್ನಲಾರೆ; ಮತ್ತು ಯಾರಿಗಾದರೂ ಕೊಟ್ಟು ಎಂಜಲಾದುದನ್ನು ನೈವೇದ್ಯ ಮಾಡಲಾರೆ. ತಿಳಿಯಿತೆ?"

ಗುರುವಿನ ಶಕ್ತಿಯನ್ನೂ ಸೂಕ್ಷ್ಮತೆಯನ್ನೂ ಕಂಡು ಬೆರಗಾದ ರಾಮಚಂದ್ರ. ಆದರೆ ಕೆಲದಿನಗಳಾದ ಮೇಲೆ ಮತ್ತೆ ಅಂಟಿಕೊಂಡಿತು ಸಂಶಯ ಪಿಶಾಚಿ. ತಲೆಯಲ್ಲಿ ಇಪ್ಪತ್ತೆಂಟು ಆಲೋಚನೆಗಳ ನರ್ತನ ಶುರುವಾಯಿತು. ಮತ್ತೇನೂ ದಾರಿಗಾಣಲಿಲ್ಲ; ಓಡಿದ ದಕ್ಷಿಣೇಶ್ವರಕ್ಕೆ. ತನ್ನ ಕಥೆಯನ್ನು ಪ್ರಾರಂಭಿಸಿದ. ಆದರೆ ಈ ಬಾರಿ ಅದೇಕೊ ಗುರುಗಳು ಸಾವಧಾನದಿಂದ ಲಾಲಿಸಲಿಲ್ಲ; ಸಮಾಧಾನ ಹೇಳಲಿಲ್ಲ. ಅವನನ್ನು ಅರ್ಧದಲ್ಲೇ ತಡೆದು ಚುಟುಕಾಗಿ ನುಡಿದರು:

"ಸರಿ ಸರಿ; ನಾನೇನು ಮಾಡಲಿ? ಎಲ್ಲವೂ ದೇವರಿಚ್ಛೆಯಂತಾಗುತ್ತದೆ."

ರಾಮಚಂದ್ರನಿಗೆ ದಿಗ್ಭ್ರಮೆ! ಇಂಥಾ ಉತ್ತರವನ್ನು ಅವನು ಕನಸಿನಲ್ಲೂ ನಿರೀಕ್ಷಿಸಿರಲಿಲ್ಲ.

"ಆದರೆ . . . ಹಾಗೆಂದುಬಿಟ್ಟರೆ ಹೇಗೆ? ನಾನಿಷ್ಟು ದಿನವೂ ನಿಮ್ಮನ್ನೇ ನಂಬಿಕೊಂಡಿದ್ದವನು. ಈಗ ಇದ್ದಕ್ಕಿದ್ದಂತೆ ಹೀಗೆ ಕೈಬಿಟ್ಟರೆ ನಾನೆಲ್ಲಿಗೆ ಹೋಗಲಿ!"

ಶ್ರೀರಾಮಕೃಷ್ಣರು ತಾಳ್ಮೆಗೆಟ್ಟವರಂತೆ ನುಡಿದರು:

"ನಾನೇನೂ ನಿನಗೆ ಯಾವ ಬಾಕಿಯನ್ನೂ ತೀರಿಸಬೇಕಾಗಿಲ್ಲವಲ್ಲ! ನಿನಗಿಷ್ಟವಿದ್ದರೆ ಬಂದುಹೋಗುತ್ತಿರು, ನಿನ್ನ ಸಂತೋಷ. ನನ್ನದೇನೂ ಬಲವಂತವಿಲ್ಲ."

ಪಕ್ಕದಲ್ಲಿ ಸಿಡಿಲು ಬಿದ್ದಿದ್ದರೂ ರಾಮಚಂದ್ರನಿಗೆ ಅಂಥ ಆಘಾತವಾಗುತ್ತಿರಲಿಲ್ಲ!

ಶ್ರೀರಾಮಕೃಷ್ಣರು ಅಂದು ಮನಮೋಹನನ ವಿಷಯದಲ್ಲಿ ತೋರಿದ ಕೃಪೆ ಒಂದು ಬಗೆಯದಾದರೆ ಇಂದು ರಾಮಚಂದ್ರನಿಗೆ ನೀಡಿದ ಚಿಕಿತ್ಸೆ ಈ ಬಗೆಯದು!

ಕಾಲಕೆಳಗಿನ ಭೂಮಿಯೇ ಕುಸಿದರೆ ನಿಲ್ಲುವುದಿನ್ನೆಲ್ಲಿ? ರಾಮನ ಮನಸ್ಸಿಗೆ ಹೊಳೆದ ಮೊದಲ ಆಲೋಚನೆಯೆಂದರೆ ಗಂಗೆಯಲ್ಲಿ ಮುಳುಗಿ ಜೀವನವನ್ನು ಕೊನೆಗಾಣಿಸಿಬಿಡುವುದು. ಹಾಗೆ ನಿರ್ಧರಿಸಿಕೊಂಡೇ ಅವನು ಕೋಣೆಯಿಂದಾಚೆ ಬಂದ. ಆದರೆ ಮರುಕ್ಷಣಕ್ಕೆ ಅನ್ನಿಸಿತು: 'ನಾನೇಕೆ ಆತ್ಮಹತ್ಯೆ ಮಾಡಿಕೊಳ್ಳುವಂಥ ಮೂರ್ಖತನಕ್ಕೆ ಕೈಹಾಕಲಿ. ಇನ್ನೊಮ್ಮೆ ಪ್ರಯತ್ನಿಸಿ ನೋಡೋಣ... ಅಂದು ನಾನು ಕನಸಿನಲ್ಲಿ ಮಂತ್ರೋಪದೇಶ ಪಡೆದುದನ್ನು ಠಾಕೂರರು ಶುಭಸೂಚನೆಯೆಂದು ಹೇಳಿದ್ದರಲ್ಲವೆ? ಆ ಮಂತ್ರದ ಶಕ್ತಿಯನ್ನು ಇಂದು ಪರೀಕ್ಷೆ ಮಾಡಿಯೇಬಿಡುತ್ತೇನೆ. ಸ್ವಯಂ ಭಗವಂತನಿಗಿಂತಲೂ ಆತನ ನಾಮವೇ ಶಕ್ತಿಶಾಲಿಯೆಂದು ಹೇಳುತ್ತಾರೆ.'

ಹೀಗೆ ಆಲೋಚಿಸುತ್ತ ಅವನು ಶ್ರೀರಾಮಕೃಷ್ಣರ ಕೋಣೆಯ ಉತ್ತರ ದಿಕ್ಕಿನ ವರಾಂಡಕ್ಕೆ ಹೋಗಿ ಒರಗಿಕೊಂಡ. ಮೌನವಾಗಿ ಆ ಮಂತ್ರವನ್ನು ಜಪಿಸಲಾರಂಭಿಸಿದ. ಕೆಲವು ಗಂಟೆಗಳೇ ಕಳೆದುವು. ನಡುರಾತ್ರಿಯ ವೇಳೆಗೆ ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರು ಕೋಣೆಯ ಬಾಗಿಲನ್ನು ತೆರೆದುಕೊಂಡು ಬಂದರು. ಅವನನ್ನುದ್ದೇಶಿಸಿ ಒಂದು ಮಾತು ಹೇಳಿದರು, "ಭಕ್ತರ ಸೇವೆ ಮಾಡು; ನಿನಗೆ ಶುಭವಾಗುತ್ತದೆ; ಶಾಂತಿ ಲಭಿಸುತ್ತದೆ."

ಈಗಲಾದರೂ ಅವನು ಸಮಾಧಾನಚಿತ್ತದಿಂದ ಗುರುವಾಕ್ಯವನ್ನು ಪಾಲಿಸಿದನೆ ? ಇಲ್ಲವೇ ಇಲ್ಲ ! ಜಿಪುಣತನವೆಂಬುದು ಅವನ ರಕ್ತಕ್ಕೇ ಸೇರಿಬಿಟ್ಟಿತ್ತು. ಹಾಗಿರುವಾಗ, 'ಭಕ್ತರ ಸೇವೆ ಮಾಡು' ಎಂದರೆ ಅವನಿಗೆ ಒಪ್ಪಿಗೆಯಾಗುವ ಮಾತೆ ಅದು ? ಅದನ್ನು ಮೆಲ್ಲಗೆ ಮರೆಯಲು—ಅಥವಾ ಮರೆಯಿಸಲು—ನೋಡಿದ. ಆದರೆ ಶ್ರೀರಾಮಕೃಷ್ಣರು ಬಿಟ್ಟಾರೆಯೆ ? ಎಲ್ಲರೆದುರಿಗೆ ಆ ವಿಷಯವನ್ನು ಜ್ಞಾಪಿಸಿದರು. ಅಷ್ಟೇ ಅಲ್ಲ, 'ರಾಮಚಂದ್ರನ ಮನೆಯಲ್ಲಿ ಇಂಥ ದಿನ ಉತ್ಸವ' ಎಂದು ಹೇಳಿಯೂಬಿಟ್ಟರು !

ರಾಮಚಂದ್ರ ಮತ್ತೇನು ಮಾಡಿಯಾನು ಪಾಪ, ಒಪ್ಪಿಕೊಳ್ಳದೆ ! ಆದರೆ ಏನು ವಿಚಿತ್ರವೋ ಏನೋ, ಮರುದಿನ ಅವನ ಸ್ವಭಾವವೇ ಬದಲಾಗಿಬಿಟ್ಟಿತ್ತು. ಹೀಗೆ ಒತ್ತಾಯದಿಂದ ತನ್ನಿಂದ ಆಹ್ವಾನವನ್ನು ಪಡೆದುಕೊಳ್ಳಬೇಕಾದರೆ, ಗುರು ಅದೆಂಥ ಕರುಣಾಳುವಾಗಿರಬೇಕು ! ಹೀಗೆಂದು ಭಾವಿಸುತ್ತ ಅವನಿಗೆ ಅಳುವೇ ಬಂದುಬಿಟ್ಟಿತು. ಸಮಾರಂಭಕ್ಕೆ ಅತ್ಯಂತ ಉತ್ಸಾಹದಿಂದ ಸಿದ್ಧತೆಗಳನ್ನು ಮಾಡಿದ. ಎಲ್ಲರನ್ನೂ ಆದರದಿಂದ ಆಹ್ವಾನಿಸಿದ. ಶ್ರೀರಾಮಕೃಷ್ಣರನ್ನೂ ಭಕ್ತವೃಂದವನ್ನೂ ಮನದಣಿಯೆ ಉಪಚರಿಸಿ ಆನಂದಪಡಿಸಿದ.

ಮರುದಿನ ಸಂಜೆ ರಾಮಚಂದ್ರ ದಕ್ಷಿಣೇಶ್ವರಕ್ಕೆ ಹೋದ. ಶ್ರೀರಾಮಕೃಷ್ಣರು ಪ್ರೀತಿಯಿಂದ ಬರಮಾಡಿಕೊಂಡು ರಾತ್ರಿ ಹತ್ತು ಗಂಟೆಯವರೆಗೂ ಅವನೊಡನೆ ಮಾತನಾಡುತ್ತ ಕುಳಿತರು. ಆ ಬಳಿಕ ಅವನು ಗುರುವಿನಿಂದ ಬೀಳ್ಕೊಂಡು ಹೊರಟ. ಹೊರಗೆ ಗಾಢಾಂಧಕಾರ ಕವಿದಿತ್ತು. ಬಹುಶಃ ಏನೋ ಆಲೋಚಿಸುತ್ತ ಅವನು ವರಾಂಡದಲ್ಲಿ ನಿಂತ. ಆಗ ಶ್ರೀರಾಮಕೃಷ್ಣರು ತನ್ನೆಡೆಗೇ ಬರುತ್ತಿರುವುದು ಕಂಡಿತು. ಅವರು ಆತನ ಸನಿಹಕ್ಕೇ ಬಂದು ಅನಿರೀಕ್ಷಿತವಾಗಿ ಕೇಳಿದರು:

"ರಾಮು, ಹೇಳು, ನಿನಗೇನು ಬೇಕು ?"

ರಾಮಚಂದ್ರ ತಬ್ಬಿಬ್ಬಾದ. ತಾನು ಸರ್ವವರಪ್ರದಾಯಕವಾದ ಅತುಲಶಕ್ತಿಯೊಂದರ ಸಮ್ಮುಖದಲ್ಲಿ ನಿಂತಿರುವಂತೆ ತೋರಿತು. ತಾನೀಗ ಏನು ಕೇಳಿದರೂ ಲಭಿಸುತ್ತದೆ ! ಆದರೆ ಕೇಳುವುದೇನನ್ನು ? ಐಶ್ವರ್ಯ-ಅಧಿಕಾರಗಳ ಮಾತಂತಿರಲಿ, ಅಷ್ಟಸಿದ್ಧಿಗಳೂ ಕೂಡ ಅವನಿಗೆ ಅಲ್ಪವಾಗಿ ಕಂಡುವು. ಕಡೆಗೆ ತಡವರಿಸುತ್ತ ಪ್ರಯಾಸಪಟ್ಟು ಉತ್ತರಿಸಿದ:

"ಭಗವಾನ್, ನನಗೊಂದೂ ತೋಚುತ್ತಿಲ್ಲ. ನನಗೇನು ಬೇಕೋ ಅದನ್ನು ನೀವೇ ನಿರ್ಧರಿಸಿ ಅನುಗ್ರಹಿಸಿ."

ಶ್ರೀರಾಮಕೃಷ್ಣರು ತಮ್ಮ ಕೈಯನ್ನು ಮುಂದೆ ಚಾಚಿ ಹೇಳಿದರು: "ನಾನಂದು ಸ್ವಪ್ನದಲ್ಲಿ ನಿನಗಿತ್ತ ಮಂತ್ರವನ್ನು ಹಿಂದಕ್ಕೆ ಕೊಟ್ಟುಬಿಡು." ಹೀಗೆಂದವರೇ ಸಮಾಧಿಗೇರಿದರು. ರಾಮಚಂದ್ರ ಮಂತ್ರವನ್ನುಚ್ಚರಿಸಿ ಸಾಷ್ಟಾಂಗ ಪ್ರಣಾಮ ಮಾಡಿದ. ಶ್ರೀರಾಮಕೃಷ್ಣರು ತಮ್ಮ ಬಲಪಾದದಿಂದ ಅವನ ಶಿರವನ್ನು ಸ್ಪರ್ಶಿಸುತ್ತ ಸ್ಥಿರವಾಗಿ ನಿಂತರು.

ಹಾಗೆ ಎಷ್ಟು ಹೊತ್ತು ಕಳೆಯಿತೆಂಬುದು ಅವನಿಗೆ ತಿಳಿಯಲೇ ಇಲ್ಲ. ಶ್ರೀರಾಮಕೃಷ್ಣರು ಬಹಿರ್ಮುಖರಾಗಿ ತಮ್ಮ ಪಾದವನ್ನು ಹಿಂದೆಗೆದ ಮೇಲೆ ಕೃತಾರ್ಥಭಾವದಿಂದ ಎದ್ದು ನಿಂತ. ಈಗ ಅವರೆಂದರು:

"ನಿನಗೆ ಇನ್ನೇನನ್ನಾದರೂ ನೋಡುವ ಇಚ್ಛೆಯಿದ್ದರೆ ನನ್ನತ್ತ ನೋಡು!"

ತನ್ನ ದೃಷ್ಟಿಯನ್ನು ಅವರಲ್ಲಿ ಕೀಲಿಸಿದಾಗ ರಾಮಚಂದ್ರನಿಗೆ ಕಂಡದ್ದೇನು? ಸಾಕ್ಷಾತ್ ಅವನ ಇಷ್ಟದೇವತೆ! ಅವನಿಗೆ ಪರಮಪ್ರಿಯವಾದ ಭಗವತ್ಸ್ವರೂಪ!

ಗುರುವಿನ ಶ್ರೀಮುಖದಿಂದ ಅನುಗ್ರಹಪೂರ್ವಕ ಆದೇಶ ಹೊರಟಿತು:

"ನೀನಿನ್ನು ಯಾವ ಸಾಧನೆಯನ್ನೂ ಮಾಡಬೇಕಿಲ್ಲ. ಸುಮ್ಮನೆ ಆಗಾಗ ಬಂದು ಹೋಗುತ್ತಿರು, ಸಾಕು. ಬರುವಾಗ ಏನಾದರೊಂದು ಕಾಣಿಕೆಯನ್ನು ತಾ. ಮೂರು ಕಾಸಿನದಾದರೂ ಸರಿಯೇ!"

ಈ ಘಟನೆಯ ನಂತರ ರಾಮಚಂದ್ರನ ಭಕ್ತಿ-ನಿಷ್ಠೆ ಪಕ್ವವಾಗುತ್ತ ಬಂತು. ಶ್ರೀರಾಮಕೃಷ್ಣರಿಗೂ ಅವರ ಭಕ್ತವೃಂದಕ್ಕೂ ಅಗತ್ಯವಾದದ್ದನ್ನೆಲ್ಲ ಪೂರೈಸುವ ಪ್ರಮುಖ ದಾನಿಗಳಲ್ಲಿ ಅವನೊಬ್ಬನಾದ.

ಮುಂದೊಮ್ಮೆ ಶ್ರೀರಾಮಕೃಷ್ಣರು ಇತರ ಭಕ್ತರ ಮುಂದೆ ಹೇಳುತ್ತಾರೆ: "ನೀವೀಗ ರಾಮನಲ್ಲಿ ಇಂಥಾ ಉದಾರಬುದ್ಧಿಯನ್ನು ಕಾಣುತ್ತಿದ್ದೀರಿ. ಆದರೆ ಅವನಿಲ್ಲಿಗೆ ಬಂದ ಹೊಸತರಲ್ಲಿ ಅವನ ಜಿಪುಣತನವನ್ನು ನೋಡಬೇಕಾಗಿತ್ತು! ಒಂದು ದಿನ ನಾನವನಿಗೆ 'ಸ್ವಲ್ಪ ಏಲಕ್ಕಿ ತಂದುಕೊಡು' ಎಂದೆ. ಅವನು ಒಂದು ಪೈಸೆಯ ಒಣಕಲು ಏಲಕ್ಕಿಯನ್ನು ತಂದು ಮುಂದಿಟ್ಟು ನಮಸ್ಕಾರ ಮಾಡಿದ! ಹೀಗಿರುವಾಗ, ಈಗ ಅವನಲ್ಲುಂಟಾದ ಬದಲಾವಣೆ ಎಂಥದೆಂಬುದನ್ನು ನೀವೇ ಊಹಿಸಿಕೊಳ್ಳಿ."

ಮನಮೋಹನ, ರಾಮಚಂದ್ರ—ಇವರಿಬ್ಬರಿಗೂ ಆತ್ಮೀಯನಾದ ಒಬ್ಬ ಸ್ನೇಹಿತ ನಿದ್ದ. ಅವನೇ ಸುರೇಂದ್ರನಾಥ ಮಿತ್ರ. ಸುರೇಂದ್ರ ಒಳ್ಳೇ ಅನುಕೂಲಸ್ಥನೇ. ಬ್ರಿಟಿಷ್ ಸಂಸ್ಥೆಯೊಂದರಲ್ಲಿ ಉದ್ಯೋಗ; ಯಾವುದಕ್ಕೂ ಕೊರತೆಯಿಲ್ಲದ ಬಾಳು. ಆತ ಸುಖ ಲೋಲುಪ. ಕುಡಿತ-ಸ್ತ್ರೀವ್ಯಸನಗಳೂ ಇದ್ದುವು. ಜೊತೆಗೆ, ಇತರರಿಗೆ ನೆರವಾಗುವ ಬುದ್ಧಿಯೂ ಇತ್ತು. ಬಡವರು-ದೀನರನ್ನು ಕಂಡರೆ ಮರುಗುತ್ತಿದ್ದ. ಸ್ವಾಭಿಮಾನಿ; ವ್ಯವ ಹಾರದಲ್ಲಿ ಸ್ವಲ್ಪ ಕಟುವಾಗಿ ಕಂಡರೂ ಸೀದಾಸಾದಾ ಮನುಷ್ಯ.

ಆದರೆ ಮೇಲ್ನೋಟಕ್ಕೆ ಸುಖಿಯಂತಿದ್ದ ಸುರೇಂದ್ರ ಒಳಗೊಳಗೇ ಕೊರಗುತ್ತಿದ್ದ. ತನ್ನ ಸ್ವೇಚ್ಛಾಚಾರದ ಬಗ್ಗೆಯೇ ಅವನಿಗೆ ಜುಗುಪ್ಸೆ! ದೇವರಲ್ಲಿ ನಂಬಿಕೆ ಕಳೆದು ಹೋಗಿದೆ. ಯಾವ ಧಾರ್ಮಿಕ ಆಚಾರಗಳಲ್ಲೂ ಸಾಧುಸಂತರಲ್ಲೂ ವಿಶ್ವಾಸವಿಲ್ಲ. ಆದ್ದ ರಿಂದ ಅವನಿಗೆ ಅತ್ಯಂತ ಅಗತ್ಯವಾಗಿ ಬೇಕಾಗಿದ್ದ ಶಾಂತಿ-ಸಮಾಧಾನಕ್ಕಾಗಿ ಅವನು ಯಾರ ಬಳಿಗೆಂದು ಹೋಗುವುದು! ಹೀಗೆ ಒಂದು ಬಗೆಯ ತುಮುಲದಲ್ಲಿ ಸಿಲುಕಿದ್ದ ಆತ. ಆ ಸ್ಥಿತಿಯಲ್ಲಿ ಅವನೊಂದು ದಿನ ಮನೆಯ ಮುಂದೆ ನಿಂತಿದ್ದಾನೆ; ಆಗ ಒಬ್ಬಳು ಭೈರವಿ ಅತ್ತ ಹೋಗುತ್ತಿದ್ದಳು. ಆಕೆಯ ಕೈಲೊಂದು ತ್ರಿಶೂಲ; ಕೆದರಿದ ಕೂದಲು. ಅವನನ್ನು ನೋಡಿದ ಆಕೆ "ಮಗು, ದೇವರೊಬ್ಬನೇ ಸತ್ಯ, ಮಿಕ್ಕದ್ದೆಲ್ಲ ಮಿಥ್ಯೆ!" ಎಂದುದ್ಗರಿಸಿ ಸೀದಾ ಹೊರಟು ಹೋದಳು.

ಈ ಮಾತು ಅವನ ತಲೆಯಲ್ಲಿ ನಿಂತುಬಿಟ್ಟಿತು. ಅವನೊಳಗಿನ ಭಾವನೆಗಳ ಘರ್ಷಣೆ ಮತ್ತಷ್ಟು ಹೆಚ್ಚಾಯಿತು. ಉತ್ಸಾಹಶೂನ್ಯತೆ ಆವರಿಸಿತು. ಎಷ್ಟರಮಟ್ಟಿಗೆಂದರೆ ಅವನಿಗೆ ಜೀವನವೇ ಸಾಕೆನ್ನಿಸಿತು. ಆತ್ಮಹತ್ಯೆಯ ಆಲೋಚನೆ ಮತ್ತೆಮತ್ತೆ ಮೂಡಿತು. ಈ ಸಮಯದಲ್ಲಿ ರಾಮಚಂದ್ರನೂ ಮನಮೋಹನನೂ ಅವನನ್ನು ಸಮಾಧಾನಗೊಳಿ ಸುವ ಪ್ರಯತ್ನ ಮಾಡಿದರು. ತಾವು ಹೊಸದಾಗಿ ಕಂಡುಕೊಂಡಿದ್ದ ಶಾಂತಿಧಾಮಕ್ಕೆ ಅವನನ್ನೂ ಆಹ್ವಾನಿಸಿದರು. ಆದರೆ ಎಷ್ಟು ಬಾರಿ ಕರೆದರೂ ಅವನದೊಂದೇ ಉತ್ತರ: "ಊಹೂಂ." ಬಲಾತ್ಕರಿಸಿದರೆ ಅವನೆನ್ನುತ್ತಿದ್ದ:

"ನೀವು ಬೇಕಾದರೆ ಹೋಗಿರಯ್ಯ. ನಿಮಗೇನೋ ಆ ಪರಮಹಂಸರೆಂದರೆ ಭಾರೀ ಭಕ್ತಿ. ನನಗೇನು ಅವರಿಂದ ?"

ಅವನೇನು ಹೇಳಿದರೂ ಅವನ ಮೇಲಿನ ಕಳಕಳಿಯಿಂದಾಗಿ ಸ್ನೇಹಿತರಿಬ್ಬರೂ ಮತ್ತೆಮತ್ತೆ ಒತ್ತಾಯಿಸಿದರು. ಕಟ್ಟಕಡೆಗೆ ಅವನೆಂದ, "ನೋಡಿ, ನಾನು ಆದಾಗಲೇ ಬಹಳಷ್ಟು ಕಪಟಿಗಳನ್ನು ನೋಡಿಬಿಟ್ಟಿದ್ದೇನೆ. ನಿಮ್ಮ ಒತ್ತಾಯಕ್ಕೆ ಈ ಬಾರಿ ಬರುತ್ತೇನೆ. ಆದರೆ ಜ್ಞಾಪಕವಿರಲಿ, ಅವನೇನಾದರೂ ಡೋಂಗಿಯಾಗಿದ್ದರೆ ನಾನು ಅವನ ಕಿವಿಹಿಂಡಿ ಬಿಡುತ್ತೇನೆ !"

"ಓ, ಹಾಗೇ ಆಗಲಿ ಬಾರಪ್ಪ !" ಎಂದು ಕರೆದುಕೊಂಡು ಹೊರಟರು.

ಮೂವರೂ ಶ್ರೀರಾಮಕೃಷ್ಣರ ಕೋಣೆಯನ್ನು ಪ್ರವೇಶಿಸಿದರು. ಅಲ್ಲಿ ಆದಾಗಲೇ ಅನೇಕರು ಕುಳಿತು ತನ್ಮಯತೆಯಿಂದ ಗುರುವಾಣಿಯನ್ನು ಆಲಿಸುತ್ತಿದ್ದರು. ರಾಮನೂ

ಮನಮೋಹನನೂ ಸಾಷ್ಟಾಂಗ ಪ್ರಣಾಮ ಮಾಡಿ ಕುಳಿತರು. ಸುರೇಂದ್ರ ನೋಡಿದ—'ಇವರೂ ಒಬ್ಬ ಪರಮಹಂಸರೇ ?' ಎಂಬಂತೆ. ನಮಸ್ಕಾರವೇನೂ ಮಾಡದೆ ಮೆಲ್ಲನೆ ಹೋಗಿ ಒಂದು ಮೂಲೆಯಲ್ಲಿ ಕುಳಿತ.

ಶ್ರೀರಾಮಕೃಷ್ಣರು ಯಾರನ್ನೋ ಉದ್ದೇಶಿಸಿ ಹೇಳುತ್ತಿದ್ದರು:

"ಮನುಷ್ಯ ಬೆಕ್ಕಿನ ಮರಿಯಂತಿರದೆ ಕೋತಿಮರಿಯಂತೆ ವರ್ತಿಸುತ್ತಾನೆ. ಅದೇಕೆ ಅವನು ಹಾಗೆ ಮಾಡಬೇಕು ? ತಾಯಿಕೋತಿ ಓಡಾಡುತ್ತಿರುವಾಗ ಮರಿಕೋತಿ ತಾಯಿಯನ್ನು ಸ್ವಪ್ರಯತ್ನದಿಂದ ಕಷ್ಟಪಟ್ಟು ಹಿಡಿದುಕೊಂಡಿರುತ್ತದೆ. ಆದರೆ ಬೆಕ್ಕಿನಮರಿ ? ತಾಯಿಯ ಬರವಿಗಾಗಿ ಕಾಯುತ್ತ ತಾನಿರುವಲ್ಲೇ 'ಮಿಯಾಂವ್, ಮಿಯಾಂವ್' ಎನ್ನುತ್ತಿರುತ್ತದೆ. ತಾಯಿ ಬೆಕ್ಕು ತಾನಾಗಿಯೇ ಬಂದು ತನ್ನ ಮರಿಯನ್ನು ಕಚ್ಚಿಕೊಂಡು ಹೋಗುತ್ತದೆ. ಅದು ಕೆಲವೊಮ್ಮೆ ತನ್ನ ಮರಿಯನ್ನು ಹಾಸಿಗೆಯ ಮೇಲಿರಿಸುತ್ತದೆ, ಕೆಲವೊಮ್ಮೆ ಅಟ್ಟದ ಮೇಲೆ ಬಿಟ್ಟಿರುತ್ತದೆ, ಇನ್ನು ಕೆಲವೊಮ್ಮೆ ಸೌದೆರಾಶಿಯ ಹಿಂದೆ ಮಲಗಿಸುತ್ತದೆ. ಒಟ್ಟಿನಲ್ಲಿ ತಾಯಿಗೆ ಮಗುವಿನ ಜವಾಬ್ದಾರಿ; ಮಗುವಿಗೆ ಸಂಪೂರ್ಣ ನಿಶ್ಚಿಂತೆ ! ಆದರೆ ಕೋತಿಮರಿಗೆ ಹಾಗಲ್ಲ—ಒಮ್ಮೊಮ್ಮೆ ಅದು ಬಿಗಿ ತಪ್ಪಿ ಬಿದ್ದುಬಿಡುವುದೂ ಉಂಟು. ಸ್ವಪ್ರಯತ್ನವನ್ನು ನೆಚ್ಚಿ ಜೀವಿಸುವುದಕ್ಕೂ ಶರಣಾಗತಿಜೀವನಕ್ಕೂ ಇದೇ ವ್ಯತ್ಯಾಸ."

ಇದನ್ನು ಕೇಳುತ್ತ ಸುರೇಂದ್ರ ಅಂದುಕೊಂಡ: 'ಎಲಎಲಾ, ಇದು ನನಗೇ ಹೇಳಿದಂತಿದೆಯಲ್ಲ! ನಾನಾದರೂ ಆ ಮರಿಕೋತಿಯ ಹಾಗೇ ಮಾಡುತ್ತಿದ್ದೇನೆ, ಆದ್ದರಿಂದಲೇ ಕಷ್ಟಪಡುತ್ತಿದ್ದೇನೆ!... ಇನ್ನುಮೇಲೆ ನಾನು ಭಗವದಿಚ್ಛೆಗೆ ವಿರುದ್ಧವಾಗಿ ನಡೆಯುವುದಿಲ್ಲ. ಅಥವಾ ನನ್ನಿಚ್ಛೆಗೆ ತಕ್ಕಂತೆ ಯಾವುದೂ ನಡೆಯದಿದ್ದರೂ ನಾನು ಹತಾಶನಾಗುವುದಿಲ್ಲ; ಆತ್ಮಹತ್ಯೆಯಂಥ ಯೋಚನೆಯನ್ನೂ ಮಾಡುವುದಿಲ್ಲ. ಜಗನ್ಮಾತೆ ನನ್ನನ್ನು ಹೇಗಿರಿಸುತ್ತಾಳೋ ಅದರಲ್ಲೇ ತೃಪ್ತಿಯಿಂದಿರುತ್ತೇನೆ. ಆಗಾಗ 'ಅಮ್ಮಾ! ಅಮ್ಮಾ!' ಎನ್ನುತ್ತೇನೆ. ಮಿಕ್ಕದ್ದನ್ನು ಅವಳು ನೋಡಿಕೊಳ್ಳುತ್ತಾಳೆ.'

ಹೀಗೆ ಭಾವಿಸಿ ಅವನು ಸಮಾಧಾನದ ನಿಟ್ಟುಸಿರುಬಿಟ್ಟ. ತಲೆಯಲ್ಲಿ ತುಂಬಿಕೊಂಡಿದ್ದ ಚಿಂತೆಯ ಕಾರ್ಮೋಡಗಳೆಲ್ಲ ಚದರಿಹೋದವು.

ಕಡೆಯಲ್ಲಿ ಶ್ರೀರಾಮಕೃಷ್ಣರು ರಾಮಲಾಲನಿಗೆ ಹೇಳಿ ಎಲ್ಲರಿಗೂ ಕಾಳಿಯ ಪ್ರಸಾದವನ್ನು ವಿತರಿಸಿದರು. ಎಲ್ಲರೂ ಹೊರಟುನಿಂತಾಗ ಅವರು ತಮ್ಮ ಮಧುರ ದನಿಯಲ್ಲಿ ಸುರೇಂದ್ರನಿಗೆ ಹೇಳಿದರು: "ಆಬಾರ್ ಏಶೊ !"—"ಇನ್ನೊಮ್ಮೆ ಬಾ !"

ಒಮ್ಮೆ ಬಂದವರನ್ನು ಮತ್ತೆಮತ್ತೆ ತಮ್ಮೆಡೆಗೆ ಸೆಳೆದುಕೊಳ್ಳಲು ಶ್ರೀರಾಮಕೃಷ್ಣರ ಸಿದ್ಧಮಂತ್ರ ಇದು: "ಆಬಾರ್ ಏಶೊ !"

ಅದನ್ನು ಕೇಳಿದವರು ಆ ದಿವ್ಯ ಮೀನುಗಾರನ ಬಲೆಗೆ ಬಿದ್ದರೆಂದೇ ಅರ್ಥ ! ವಾಪಸು ಬರುತ್ತ ಸುರೇಂದ್ರ ತನ್ನ ಮಿತ್ರರೊಡನೆ ಹೇಳಿದ:

"ಆಹಾ, ಏನಯ್ಯ, ಅವರು ನನಗೇ ತಿರುಮಂತ್ರ ಹಾಕಿಬಿಟ್ಟರು ! ನಾನು ಅವರ ಕಿವಿ ಹಿಂಡೋಣವೆಂದಿದ್ದರೆ ಅವರೇ ನನ್ನ ಕಿವಿ ಹಿಂಡಿಬಿಟ್ಟರಲ್ಲ !" ಇದನ್ನು ಕೇಳಿ ಸ್ನೇಹಿತರಿಬ್ಬರೂ ಗಟ್ಟಿಯಾಗಿ ನಕ್ಕರು. ಮತ್ತೆ ಅವನೆಂದ:

"ಆದರೆ ಇಂಥವರೊಬ್ಬರು ಇರಲು ಸಾಧ್ಯವೆಂದು ನನಗೆ ಹೇಗೆ ಗೊತ್ತಾಗಬೇಕು ? ನನ್ನ ಮನಸ್ಸಿನ ಭಾವನೆಗಳನ್ನೆಲ್ಲ ಅವರು ಓದಿಬಿಟ್ಟರು ! ನನ್ನ ಬದುಕಿಗೂ

ಏನೋ ಒಂದು ಅರ್ಥವಿದೆ ಅಂತ ಈಗ ನನಗನಿಸುತ್ತಿದೆ . . ."

ಶ್ರೀರಾಮಕೃಷ್ಣರ ಮೊದಲ ದರ್ಶನದಿಂದಲೇ ಸುರೇಂದ್ರನಲ್ಲಿ ಪರಿವರ್ತನೆಯ ಲಕ್ಷಣಗಳು ಕಾಣತೊಡಗಿದವು. ಅವರ ಬಗ್ಗೆ ಗಾಢವಾದ ಭಕ್ತಿವಿಶ್ವಾಸಗಳುಂಟಾದುವು. ಅವನಲ್ಲಿ ಸಹಜವಾಗಿದ್ದ ಔದಾರ್ಯ-ಸರಳತೆಗಳು ಭಗವದ್ಭಕ್ತಿಯಾಗಿ ವ್ಯಕ್ತವಾದುವು. ಭಾನುವಾರಗಳಂದು ದಕ್ಷಿಣೇಶ್ವರಕ್ಕೆ ಹೋಗುವುದನ್ನು ಅವನೆಂದೂ ತಪ್ಪಿಸುತ್ತಿರಲಿಲ್ಲ.

ಆದರೆ ಅವನ ಹಳೆಯ ಚಾಳಿಗಳಿನ್ನೂ ಪೂರ್ತಿ ಬಿಟ್ಟಿರಲಿಲ್ಲ. ಆಗಾಗ ಸಂಯಮ ಮೀರಿ ಮದ್ಯಪಾನ ಮಾಡಿಬಿಡುತ್ತಿದ್ದ, ಇಲ್ಲವೆ ಪರಸ್ತ್ರೀಸಂಗ ಮಾಡುತ್ತಿದ್ದ. ಬಳಿಕ ತನ್ನ ಅಕೃತ್ಯಕ್ಕೆ ನಾಚಿ ತಾನೇ ಕೊರಗುತ್ತಿದ್ದ. ಅಂಥ ಸಮಯದಲ್ಲಿ ಗುರುವಿಗೆ ಮುಖ ತೋರಿಸದೆ ಇದ್ದುಬಿಡುತ್ತಿದ್ದ. ಕಾರಣ ಕೇಳಿದರೆ ಕಾರ್ಯಭಾರದ ಸಬೂಬು ಕೊಡುತ್ತಿದ್ದ. ಆದರೆ ಎಷ್ಟು ದಿನ ಗೋಪ್ಯವನ್ನು ಕಾಪಾಡಲಾದೀತು ? ಯಾರೋ ಹೋಗಿ, 'ಸುರೇಂದ್ರ ಮತ್ತೆ ದುಷ್ಟಸಹವಾಸಕ್ಕೆ ಸಿಕ್ಕಿಬಿದ್ದಿದ್ದಾನೆ. ಆದ್ದರಿಂದಲೇ ಅವನು ಆಗಾಗ ಹೀಗೆ ತಲೆ ತಪ್ಪಿಸಿಕೊಳ್ಳುವುದು' ಎಂದು ಶ್ರೀರಾಮಕೃಷ್ಣರ ಬಳಿ ಹೇಳಿಬಿಟ್ಟರು. ಆದರೆ ಇದನ್ನು ಕೇಳಿ ಅವರೇನೂ ದಿಗಿಲುಗೊಳ್ಳಲಿಲ್ಲ, ಅಚ್ಚರಿಯನ್ನೂ ತೋರಿಸಲಿಲ್ಲ. ಬದಲಾಗಿ ಗಂಭೀರ ಭಾವದಲ್ಲಿ ಉತ್ತರಿಸಿದರು: "ಆಗಲಿ, ಪರವಾಗಿಲ್ಲ. ಅವನಿಗಿನ್ನೂ ಸ್ವಲ್ಪ ಬಯಕೆಗಳಿವೆ, ತೀರಿಸಿಕೊಳ್ಳಲಿ. ಅವನು ಪರಿಶುದ್ಧನಾಗುವ ದಿನ ಹೆಚ್ಚೇನೂ ದೂರವಿಲ್ಲ."

ಈ ವಿಚಾರವೆಲ್ಲ ಸುರೇಂದ್ರನ ಕಿವಿಗೆ ಬಿತ್ತು. 'ಅಯ್ಯೋ, ನನ್ನ ವಿಚಾರವೆಲ್ಲ ಅವರಿಗೂ ಗೊತ್ತಾಗಿಹೋಯಿತೇ!' ಎಂದು ದುಃಖವಾದರೂ, 'ಸದ್ಯ ! "ಹಾಳಾಗಿ ಹೋಗಲಿ ಅವನು"—ಎನ್ನದೆ ಕ್ಷಮಿಸಿದರಲ್ಲ!' ಎಂದು ಸ್ವಲ್ಪ ಧೈರ್ಯವೂ ಉಂಟಾಯಿತು. ಮುಂದಿನ ಭಾನುವಾರ ದಕ್ಷಿಣೇಶ್ವರಕ್ಕೆ ಹೋದ. ಆದರೆ ಅಳುಕುತ್ತಲೇ ಹೋಗಿ ಕೋಣೆಯ ಒಂದು ಮೂಲೆಯಲ್ಲಿ ಕುಳಿತ. ಶ್ರೀರಾಮಕೃಷ್ಣರು ಅದನ್ನು ಗಮನಿಸಿ, "ಇಲ್ಲೇ ಹತ್ತಿರ ಬಾ !" ಎಂದು ಅಕ್ಕರೆಯಿಂದ ಕರೆದರು. ಆಮೇಲೆ ಅರ್ಧಭಾವಾವಸ್ಥೆಯಲ್ಲಿ ಯಾರಿಗೋ ಎಂಬಂತೆ ಹೇಳಿದರು: "ಒಬ್ಬನು, ಹೋಗಬಾರದ ಸ್ಥಳಕ್ಕೆ ಹೋದಾಗ ಜಗನ್ಮಾತೆಯನ್ನೂ ಏಕೆ ಕರೆದೊಯ್ಯಬಾರದು ? ಆಗ ಅವನು ಎಷ್ಟೋ ದುಷ್ಕೃತ್ಯಗಳಿಂದ ದೂರವಾಗಬಹುದಲ್ಲ !"

ಸುರೇಂದ್ರನ ಎದೆ ಡಬಡಬ ಹೊಡೆದುಕೊಳ್ಳಲಾರಂಭಿಸಿತು. ಈಗ ಗುರುಗಳು ತನ್ನ ವಿಚಾರವಾಗಿ ಇನ್ನೂ ಏನೇನು ಹೇಳಿಬಿಡುತ್ತಾರೋ ಎಂಬ ಭೀತಿ ! ಆದರೆ ಅವರು ಅಷ್ಟಕ್ಕೇ ನಿಲ್ಲಿಸಿಬಿಟ್ಟರು. ಅಷ್ಟು ಹೇಳಿದ್ದೇ ಅವನಿಗೆ ಸಾಕಷ್ಟಾಯಿತು. ಆ ಮಾತನ್ನು ಅವನು ಮರೆಯಲಿಲ್ಲ. ಎಂದಾದರೂ ಸ್ತ್ರೀವ್ಯಸನ ಕಾಡಿದರೂ ಗುರುವಾಕ್ಯವನ್ನು ಸ್ಮರಣೆಗೆ ತಂದುಕೊಂಡು ಅನುಸರಿಸುತ್ತಿದ್ದ. ಕ್ರಮೇಣ ಆ ದುಶ್ಚಟ ದೂರವಾಯಿತು. ಆದರೆ ಮದ್ಯಪಾನದ ಅಭ್ಯಾಸ ಮಾತ್ರ ಅಷ್ಟು ಬೇಗ ಬಿಟ್ಟುಹೋಗಲಿಲ್ಲ. ಸ್ನೇಹಿತರು ಅವನಿಗೆ ಎಷ್ಟೋ ಬಾರಿ ಬುದ್ಧಿ ಹೇಳಿ ನೋಡಿದರು. ಅದರಲ್ಲೂ ರಾಮಚಂದ್ರನಿಗೆ ಅವನದೇ ಚಿಂತೆ. ಏಕೆಂದರೆ ಕುಡಿತದಿಂದ ಅವನಿಗಾಗುವ ಕೇಡು ಹಾಗಿರಲಿ, 'ಪರಮಹಂಸರ ಪರಮಭಕ್ತನಂತಪ್ಪಾ ಇವನು !' ಎಂದು ಜನ ಆಡಿಕೊಂಡಾರಲ್ಲ ಎಂಬ ಭಯ ! ಅಷ್ಟು ಚೆನ್ನಾಗಿ ಒಗ್ಗಿಹೋಗಿರುವ ಚಾಳಿಯನ್ನು ಬಿಡಿಸಿಕೊಳ್ಳಲು ಸುರೇಂದ್ರನಿಗೂ ಮನಸ್ಸಿಲ್ಲ. "ಅದೇನೂ ಅಂಥ ದೋಷವಲ್ಲ" ಎಂದು ವಾದಿಸಿಕೊಂಡೇ ಇದ್ದ. ಕಡೆಗೊಂದು ದಿನ

ರಾಮಚಂದ್ರನ ಉಪದೇಶದಿಂದ ಬೇಸತ್ತು ನುಡಿದ:

"ನೀನ್ಯಾಕೆ ಅಷ್ಟೊಂದು ಹೇಳುತ್ತೀಯ ಅದರ ಬಗ್ಗೆ? ಅದರಿಂದ ಅಂಥಾ ಕೆಡುಕಿದ್ದರೆ ಠಾಕೂರರೇ ಬಾಯಿಬಿಟ್ಟು ಹೇಳುತ್ತಿದ್ದರು ನನಗೆ. ಅವರಿಗೇನು ಗೊತ್ತಿಲ್ಲದ ವಿಷಯವೆ ಅದು?"

"ಆಯಿತಪ್ಪ, ಹಾಗಾದರೆ ಅಲ್ಲಿಗೇ ಹೋಗೋಣ ಬಾ. ಅವರೇ ಹೇಳಲಿ ನಿನಗೆ, ಆಗಲಾದರೂ ಬಿಡುತ್ತೀಯೇನೋ ನೋಡೋಣ."

"ಖಂಡಿತ! ಆದರೆ ನೋಡು, ನೀನಾಗಿಯೇ ಕುಡಿತದ ವಿಚಾರ ಎತ್ತಬಾರದು. ಅವರಾಗಿಯೇ ಹೇಳಲಿ. ಆಗ ನಾನು ಮರುಮಾತಿಲ್ಲದೆ ಅದನ್ನು ಬಿಟ್ಟುಬಿಡುತ್ತೇನೆ."

ರಾಮಚಂದ್ರ ಒಪ್ಪಿದ.

'ಸರಿ ಸರಿ, ಅವರಾಗಿಯೇ ಹೇಳಿದಾಗ ತಾನೆ!' ಎಂದುಕೊಂಡು ಸುರೇಂದ್ರ ಧೈರ್ಯವಾಗಿ ಹೊರಟ. ರಾಮಚಂದ್ರನೂ, 'ಏನಾಗುವುದೋ ಈಗ!' ಎಂದುಕೊಂಡೇ ನಡೆದ. ಇಬ್ಬರೂ ನೇರವಾಗಿ ದಕ್ಷಿಣೇಶ್ವರಕ್ಕೆ ಹೋದರು. ಶ್ರೀರಾಮಕೃಷ್ಣರು ಬಕುಲ ವೃಕ್ಷದ ಕೆಳಗೆ ಭಾವಾವಿಷ್ಟರಾಗಿ ಕುಳಿತಿದ್ದರು. ಇವರು ಹೋಗಿ ಇನ್ನೂ ನಮಸ್ಕರಿಸುವುದಕ್ಕಿಲ್ಲ, ಅಷ್ಟರಲ್ಲಿಯೇ ಕಣ್ತೆರೆದು ಮಂದಸ್ಮಿತರಾಗಿ, ತಮ್ಮ ಮಾತನ್ನು ಮುಂದುವರಿಸುತ್ತಿದ್ದಾರೋ ಎಂಬಂತೆ ಹೇಳಿದರು:

"ಅದು ಸರಿ ಸುರೇಶ, ಆದರೆ ನೀನು ಸುರೆಯನ್ನು ಸುರೆಯೆಂಬಂತೆಯೇ ಭಾವಿಸಿ ಏಕೆ ಕುಡಿಯುತ್ತಿ? ಅದನ್ನು ಮೊದಲು ಕಾಳಿಗೆ ನೈವೇದ್ಯ ಮಾಡಿ ಆಕೆಯ ಪ್ರಸಾದವೆಂಬಂತೆ ಸ್ವೀಕರಿಸಬಹುದಲ್ಲ? ಆದರೆ ಅಮಲೇರುವಷ್ಟು ಕುಡಿಯಬೇಡ, ಅಷ್ಟೆ. ತಲೆತಿರುಗದಂತೆ, ನಡಿಗೆ ತಪ್ಪದಂತೆ ನೋಡಿಕೊ. ಈ ಸುರೆಯಿಂದ ಮೊದಮೊದಲು ಏನೋ ಸ್ವಲ್ಪ ಖುಷಿಯಾದೀತು. ಆದರೆ ಅದನ್ನು ಪ್ರಸಾದವಾಗಿ ಸ್ವೀಕರಿಸಲು ಸಾಧ್ಯವಾದಾಗ ಅದು ನಿನ್ನ ಆಧ್ಯಾತ್ಮಿಕ ಉನ್ನತಿಗೆ ಕಾರಣವಾಗುತ್ತದೆ."

ಗುರುಗಳು ಮಾತನಾಡಿದ ಪರಿಯನ್ನು ಕಂಡು ಗೆಳೆಯರಿಬ್ಬರೂ ಸ್ತಂಭಿತರಾಗಿ ಬಿಟ್ಟರು! ಅಲ್ಲದೆ ಇನ್ನೇನು? ಅಂದಿನಿಂದಲೇ ಸುರೇಂದ್ರ ಶ್ರದ್ಧೆಯಿಂದ ಆ ಮಾತನ್ನು ಪಾಲಿಸತೊಡಗಿದ. ಮದ್ಯವನ್ನು ಕುಡಿಯುವಾಗಲೆಲ್ಲ ಅದನ್ನು ಕಾಳಿಯ ಮುಂದಿಟ್ಟು ಮಹಾಪ್ರಸಾದವೆಂದು ಭಕ್ತಿಯಿಂದ ಸೇವಿಸುತ್ತಿದ್ದ. ಏನದ್ಭುತ! ಅದರಿಂದ ಅವನಿಗೆ ಹಿಂದೆಂದೂ ಆಗಿರದ ಆನಂದಾನುಭವವಾಯಿತು. ಮಗುವಿನಂತೆ ಜಗನ್ಮಾತೆಯನ್ನು ವ್ಯಾಕುಲತೆಯಿಂದ ಕರೆಯುವ ಅಭ್ಯಾಸ ಬೆಳೆಯಿತು. ಕೆಲವೊಮ್ಮೆ ಅವನು ಗಾಢ ಧ್ಯಾನದಲ್ಲಿ ಲೀನನಾಗುತ್ತಿದ್ದ. ಮದ್ಯಪಾನದ ಹವ್ಯಾಸ ತಾನಾಗಿಯೇ ದೂರವಾಯಿತು. ಅವನಲ್ಲಾದ ಬದಲಾವಣೆಗಳನ್ನು ಕಂಡವರೆಲ್ಲ ಆಶ್ಚರ್ಯಚಕಿತರಾದರು.

ಒಂದು ದಿನ ಶ್ರೀರಾಮಕೃಷ್ಣರು, "ಸ್ವಲ್ಪಮಟ್ಟಿನ ಪೌರುಷ-ಛಲ ಪ್ರತಿಯೊಬ್ಬನಲ್ಲೂ ಇರಬೇಕು" ಎಂದು ಯಾರಿಗೋ ಹೇಳುತ್ತಿರುವುದು ಸುರೇಂದ್ರನ ಕಿವಿಗೆ ಬಿತ್ತು. ಆಗ ಅವನಿಗನ್ನಿಸಿತು, 'ಅಯ್ಯೋ ದೇವರೆ! ಇದೇ ಅಲ್ಲವೇ ನನಗಂಟಿದ್ದ ರೋಗ! ಸದ್ಯ, ನನಗಂತೂ ಬೇಡಪ್ಪ ಇದು.' ಮರುಕ್ಷಣವೇ ಶ್ರೀರಾಮಕೃಷ್ಣರೆಂದರು: "ಆದರೆ ನಾನು ಹೇಳುತ್ತಿರುವುದು ಇಂದ್ರಿಯಸುಖಕ್ಕಾಗಿ ಪ್ರಾಣಿಗಳೂ, ಮನುಷ್ಯರೂ ನಡೆಸುವ ಹೋರಾಟದ ಕುರಿತಾಗಲ್ಲ. ಪೌರುಷವೆಂದರೆ ಅರ್ಜುನನ ಪೌರುಷ—ಒಂದು ಆದರ್ಶಕ್ಕೆ ಅಂಟಿಕೊಂಡು ಕಡೆಯುಸಿರಿನವರೆಗೂ ಅದರಂತೆ ಜೀವಿಸುವ ಛಲ!"

ಅತ್ಯಲ್ಪ ಕಾಲದಲ್ಲೇ ಸುರೇಂದ್ರ ಶ್ರೀರಾಮಕೃಷ್ಣರ ಪರಮಭಕ್ತನಾದ. ಮತ್ತು ಅವರ ಅತ್ಯಂತ ಆಪ್ತನಾದ. ಶ್ರೀರಾಮಕೃಷ್ಣರಿಗಂತೂ ಅವನನ್ನು ಕಂಡರೆ ಇನ್ನಿಲ್ಲದ ವಾತ್ಸಲ್ಯ. ಅವನನ್ನು ಅವರು ಸಲಿಗೆಯಿಂದ 'ಸುರೇಂದರ್' ಅಥವಾ 'ಸುರೇಶ್' ಎಂದು ಕರೆಯುತ್ತಿದ್ದರು. ಅವನ ಭಕ್ತಿಯನ್ನೂ ಔದಾರ್ಯವನ್ನೂ ಅವರು ಎಲ್ಲರ ಮುಂದೆ ಕೊಂಡಾಡುವುದೂ ಇತ್ತು.

ಒಂದು ದಿನ ಅವನು ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದಾನೆ; ಇದ್ದಕ್ಕಿದ್ದಂತೆ, ಶ್ರೀರಾಮಕೃಷ್ಣರನ್ನು ನೋಡಬೇಕೆಂಬ ಇಚ್ಛೆಯೆದ್ದಿತು. ಬಹಳಷ್ಟು ಕೆಲಸ ಬಾಕಿಯಿತ್ತು. ಅದನ್ನು ಪೂರೈಸದೆ ಹೊರಡುವಂತಿರಲಿಲ್ಲ. ಆದರೆ ಅವನಿಗೆ ತಡೆದುಕೊಳ್ಳಲಾಗಲಿಲ್ಲ. ಕಾಗದ ಪತ್ರಗಳನ್ನೆಲ್ಲ ಪಕ್ಕಕ್ಕೆ ದೂಡಿ, ನೇರವಾಗಿ ದಕ್ಷಿಣೇಶ್ವರಕ್ಕೆ ಓಡಿದ. ಆಗ ಶ್ರೀರಾಮ ಕೃಷ್ಣರು ಕಲ್ಕತ್ತಕ್ಕೆ ಹೋಗಲು ಅನುವಾಗುತ್ತಿದ್ದರು. ಇವನನ್ನು ಕಂಡು ಹರ್ಷದಿಂದ, "ಆಹ್! ನೀನೇ ಬಂದುಬಿಟ್ಟೆಯಾ! ಬಹಳ ಒಳ್ಳೆಯದಾಯಿತು! ನನಗೆ ನಿನ್ನದೇ ಯೋಚನೆಯಾಗಿತ್ತು. ಆದ್ದರಿಂದ ನಿನ್ನಲ್ಲಿಗೇ ಹೊರಟಿದ್ದೆ" ಎಂದರು. ಸುರೇಂದ್ರನಿಗಾದ ಅಚ್ಚರಿ, ಆನಂದ ಅಷ್ಟಿಷ್ಟಲ್ಲ. ಅವನೆಂದ, "ನೀವು ನನ್ನನ್ನು ನೋಡಲೆಂದೇ ಹೊರಟಿದ್ದಿ ರಾದರೆ, ಖಂಡಿತ ಬನ್ನಿ ನಮ್ಮ ಮನೆಗೆ." ಶ್ರೀರಾಮಕೃಷ್ಣರು ಅದಕ್ಕೊಪ್ಪಿ ಅವನ ಮನೆಗೆ ಹೋದರು; ಅವನ ಸಂತಸವನ್ನು ಪೂರ್ಣಗೊಳಿಸಿದರು.

ಅಂದಿನಿಂದ ಅವನು ಆಗಾಗ ಶ್ರೀರಾಮಕೃಷ್ಣರನ್ನೂ ಭಕ್ತವೃಂದವನ್ನೂ ತನ್ನ ಮನೆಗೆ ಆಹ್ವಾನಿಸಿ ಉತ್ಸವವನ್ನೇರ್ಪಡಿಸಲಾರಂಭಿಸಿದ. ಗುರುವಿಗಾಗಿ ಎಷ್ಟು ಹಣವ ನ್ನಾದರೂ ಖರ್ಚು ಮಾಡಲು ಹಿಂದೆಮುಂದೆ ನೋಡುತ್ತಿರಲಿಲ್ಲ. ಅಲ್ಲದೆ ದಕ್ಷಿಣೇಶ್ವರಕ್ಕೆ ಬಂದು ಇಳಿದುಕೊಳ್ಳುತ್ತಿದ್ದ ಭಕ್ತರ ವೆಚ್ಚವನ್ನೂ ತಾನೇ ಸಂತೋಷದಿಂದ ಭರಿಸುತ್ತಿದ್ದ.

ಒಮ್ಮೆ ಶ್ರೀರಾಮಕೃಷ್ಣರು ಸುರೇಂದ್ರನಿಗೆ ಹೇಳುತ್ತಾರೆ: "ನೀನು ವರ್ತಕರ ಆಫೀಸಿ ನಲ್ಲಿ ಕೆಲಸ ಮಾಡುತ್ತೀಯೆ. ಆಫೀಸಿನಲ್ಲಿ ಸುಳ್ಳು ಹೇಳಬೇಕಾಗುತ್ತದೆ. ಹಾಗಿದ್ದರೂ ನೀನು ಕೊಟ್ಟದ್ದನ್ನು ನಾನು ತಿನ್ನುತ್ತೇನಲ್ಲ, ಏಕೆ ಹೇಳು? ಏಕೆಂದರೆ ನೀನು ನಿನ್ನ ಹಣವನ್ನು ಧರ್ಮಕಾರ್ಯಕ್ಕೆ ವಿನಿಯೋಗಿಸುತ್ತೀಯೆ; ನೀನು ಸಂಪಾದಿಸಿದ್ದಕ್ಕಿಂತ ಅಧಿಕ ವಾಗಿ ದಾನ-ಧರ್ಮ ಮಾಡುತ್ತೀಯೆ. ಲೋಭಿಗಳು ತರುವ ತಿನಿಸುಗಳನ್ನು ನಾನು ತಿನ್ನಲಾರೆ. . . ಯಾವನು ದಾನ-ಧರ್ಮಾದಿಕಾರ್ಯಗಳನ್ನು ಮಾಡುತ್ತಾನೋ ಅವನಿಗೆ ಒಳ್ಳೆಯ ಫಲ ದೊರೆಯುತ್ತದೆ; ಧರ್ಮ, ಅರ್ಥ, ಕಾಮ, ಮೋಕ್ಷ—ಈ ನಾಲ್ಕು ಪುರುಷಾರ್ಥಗಳೂ ಸಿದ್ಧಿಸುತ್ತವೆ."

ಸುರೇಂದ್ರನ ವ್ಯಕ್ತಿತ್ವದಲ್ಲಿ ಉಂಟಾದ ಗಮನಾರ್ಹ ಸುಧಾರಣೆಯನ್ನು ಕಂಡು ಶ್ರೀರಾಮಕೃಷ್ಣರೊಮ್ಮೆ ಭಕ್ತರೊಡನೆ ಸಂತಸದಿಂದ ಹೇಳುತ್ತಾರೆ: "ಈಗ ಸುರೇಂದ್ರನಿಗೆ ಎಂಥಾ ಸ್ವಭಾವ ಬಂದುಬಿಟ್ಟಿದೆ! ಸ್ವಲ್ಪವೂ ಮುಚ್ಚುಮರೆಯಿಲ್ಲ. ಇದ್ದುದನ್ನು ಇದ್ದಂತೆ ಹೇಳಲು ಸ್ವಲ್ಪವೂ ಹೆದರುವುದಿಲ್ಲ. ಅಲ್ಲದೆ ಅವನು ಮುಕ್ತಹಸ್ತ; ಸಹಾಯಕ್ಕಾಗಿ ಅವನಲ್ಲಿಗೆ ಹೋದವರು ಯಾರೂ ಬರಿಗೈಯಲ್ಲಿ ಹಿಂದಿರುಗುವುದಿಲ್ಲ."

ಶ್ರೀರಾಮಕೃಷ್ಣರು ಲೋಕಕ್ಕಿತ್ತ ಧರ್ಮಸಮನ್ವಯದ ಆದರ್ಶವನ್ನು ಸಾರುವ ಒಂದು ಸುಂದರ ವರ್ಣಚಿತ್ರವನ್ನು ಸುರೇಂದ್ರನು ಬರೆಸಿದ್ದ. ಅದೊಂದು ಅದ್ಭುತವಾದ ಕಲ್ಪನೆ. ಆ ಚಿತ್ರದಲ್ಲಿ ಎಲ್ಲ ಧರ್ಮಗಳ ಪ್ರವಾದಿಗಳೂ ಒಂದೇ ವೇದಿಕೆಯ ಮೇಲೆ ಒಟ್ಟಾಗಿ ನಿಂತಿದ್ದಾರೆ; ದೇವಾಲಯ-ಮಸೀದಿ-ಇಗರ್ಜಿ ಮೂರೂ ಪಕ್ಕಪಕ್ಕದಲ್ಲಿವೆ;

ಶ್ರೀಚೈತನ್ಯನೂ ಏಸುಕ್ರಿಸ್ತನೂ ಕೈಕೈಹಿಡಿದು ನರ್ತಿಸುತ್ತಿದ್ದಾರೆ! ಶ್ರೀರಾಮಕೃಷ್ಣರು ಕೇಶವಚಂದ್ರ ಸೇನನಿಗೆ ಇದನ್ನು ಬೆರಳು ಮಾಡಿ ತೋರಿಸುತ್ತ 'ಜತೊ ಮತ್, ತತೊ ಪಥ್', 'ಎಷ್ಟು ಮತಗಳೋ ಅಷ್ಟು ಪಥಗಳು' ಎಂಬುದನ್ನು ಅರ್ಥಪಡಿಸುತ್ತಿದ್ದಾರೆ. ಈ ತೈಲಚಿತ್ರವನ್ನು ಕಂಡ ಶ್ರೀರಾಮಕೃಷ್ಣರು, "ಭೇಷ್, ಇದರಲ್ಲಿ ಎಲ್ಲವೂ ಅಡಕ ವಾಗಿದೆ. ಇದೇ ನೂತನ ಯುಗದ ಆದರ್ಶ" ಎನ್ನುತ್ತ ತಮ್ಮ ಮೆಚ್ಚುಗೆಯನ್ನು ಸೂಚಿ ಸಿದರು. ಇದರ ಒಂದು ಪ್ರತಿಯನ್ನು ಸುರೇಂದ್ರನು ಕೇಶವ ಸೇನನಿಗೂ ಕಳಿಸಿಕೊಟ್ಟ. ಕೇಶವನಂತೂ ಬಹಳ ಸಂತಸಗೊಂಡು, "ಯಾರ ಮನದಲ್ಲಿ ಈ ಕಲ್ಪನೆ ಮೂಡಿತೋ ಅವನು ನಿಜಕ್ಕೂ ಧನ್ಯ" ಎಂದುದ್ಗರಿಸಿದ.

* * *

ದಕ್ಷಿಣೇಶ್ವರಕ್ಕೆ ಬಂದ ಮೊದಲ ಗೃಹೀಭಕ್ತರಲ್ಲಿ ಕೇದಾರನಾಥ ಚಟರ್ಜಿ ಒಬ್ಬ. ಮೊದಲಿಗೆ ಇವನು ಬ್ರಾಹ್ಮಸಮಾಜದ ಅನುಯಾಯಿಯಾಗಿದ್ದ. ಆಮೇಲೆ ಅದನ್ನು ಬಿಟ್ಟು ಇತರ ಮಾರ್ಗಗಳನ್ನು ಅನುಸರಿಸುವ ಯತ್ನ ಮಾಡಿದ. ಸ್ವಭಾವತಃ ಇವನು ಭಕ್ತಿವಂತ. ವೈಷ್ಣವ ಶಾಸ್ತ್ರಗಳ ಬೋಧನೆಯಂತೆ ಭಕ್ತಿಭಾವಗಳ ಸಾಧನೆಯಲ್ಲಿ ಮುಂದು ವರಿದ. ನಾಮಸಂಕೀರ್ತನೆಯನ್ನು ಆಲಿಸುತ್ತ ಆನಂದವಿವಶನಾಗಿ ಕಣ್ಣೀರು ಸುರಿಸು ತ್ತಿದ್ದ. ಆದರೆ ಆಧ್ಯಾತ್ಮಿಕ ಜೀವನದಲ್ಲಿ ಅವನಿಗಿನ್ನೂ ಶಾಂತಿ ದೊರಕಿರಲಿಲ್ಲ.

ಈ ವೇಳೆಗೆ, ಬಹುಶಃ ಬ್ರಾಹ್ಮಸಮಾಜದ ಮೂಲಕವೇ ಶ್ರೀರಾಮಕೃಷ್ಣರ ಸಂಪ ರ್ಕಕ್ಕೆ ಬಂದ ಕೇದಾರನಾಥ ಅವರಲ್ಲಿ ಶರಣಾದ. ಇವನ ಭಕ್ತಿ-ಶ್ರದ್ಧೆ ಶ್ರೀರಾಮಕೃಷ್ಣರಿಗೆ ಬಹಳ ಮೆಚ್ಚುಗೆಯಾಯಿತು. ಆದರೆ ಇವನಿದ್ದುದು ದೂರದ ಢಾಕಾದಲ್ಲಿ. ಸಾಧ್ಯ ವಾದಾಗಲೆಲ್ಲ ಕೆಲಸಕ್ಕೆ ರಜೆಹಾಕಿ ಬಂದು ಕೆಲದಿನಗಳನ್ನು ಗುರುಸನ್ನಿಧಿಯಲ್ಲಿ ಕಳೆಯು ತ್ತಿದ್ದ.

ಕೇದಾರನಾಥನ ಭಕ್ತ್ಯತಿಶಯತೆಯಿಂದ ಆಕರ್ಷಿತರಾದ ಢಾಕಾ ನಗರದ ಹಲ ವಾರು ಜನರು ಆತನ ಬಳಿಗೆ ಬರುತ್ತಿದ್ದರು; ಅವನಿಂದ ಆಧ್ಯಾತ್ಮಿಕ ಮಾರ್ಗದರ್ಶನ ವನ್ನು ಬೇಡುತ್ತಿದ್ದರು. ಆ ಜನರಿಗೆಲ್ಲ ಅವನು ಶ್ರೀರಾಮಕೃಷ್ಣರ ಕುರಿತಾಗಿ ತಿಳಿಸಿ, ಅವರ ಸಂದೇಶಾಮೃತವನ್ನು ನೀಡುತ್ತಿದ್ದ. ಕೇದಾರನ ಯೋಗ್ಯತೆಯನ್ನು ಮನಗಂಡು ಶ್ರೀರಾಮಕೃಷ್ಣರೇ ಇದಕ್ಕೆ ತಮ್ಮ ಅನುಮೋದನೆಯನ್ನು ನೀಡಿದ್ದರು. ಅವರ ಮತ್ತೊಬ್ಬ ಪ್ರಮುಖ ಭಕ್ತನಾದ ವಿಜಯಕೃಷ್ಣ ಗೋಸ್ವಾಮಿಯೂ ಢಾಕಾದಲ್ಲೇ ವಾಸಿಸಿದ್ದು, ಇವ ರಿಬ್ಬರೂ ಆಪ್ತ ಸ್ನೇಹಿತರಾಗಿದ್ದರು.

ಶ್ರೀರಾಮಕೃಷ್ಣರು ಕೆಲವೊಮ್ಮೆ ವಿವಿಧ ಮನೋಭಾವಗಳ ಭಕ್ತರನ್ನು ವಾದಕ್ಕೆ ಹಚ್ಚಿ ವಿನೋದಿಸುವುದಿತ್ತು. ಆ ಭಕ್ತರ ಆಲೋಚನೆಗಳಲ್ಲಿರಬಹುದಾದ ದೋಷಗಳನ್ನು ಗುರುತಿಸಿ ಸರಿಪಡಿಸಲೂ, ಅವರ ಸತ್ತ್ವವನ್ನು ಅಳೆಯಲೂ ಶ್ರೀರಾಮಕೃಷ್ಣರು ಹೀಗೆ ಮಾಡುತ್ತಿದ್ದರು.

ಈ ಭಕ್ತರ ಪೈಕಿ ಕೇದಾರನು ಪ್ರತ್ಯುತ್ತರ ಕೊಡುವುದರಲ್ಲಿ ನಿಸ್ಸೀಮ. ವಾದದಲ್ಲಿ ತೊಡಗಿದಾಗ ಪ್ರತಿವಾದಿಯ ಮಾತುಗಳು ಅಸಂಬದ್ಧವೆಂದು ತೋರಿದರೆ ತಕ್ಷಣ ಅದನ್ನು ಎತ್ತಿತೋರಿಸಿ ಬಾಯಿ ಮುಚ್ಚಿಸುತ್ತಿದ್ದ. ಅವನ ಉತ್ತರಗಳನ್ನು ಶ್ರೀರಾಮ ಕೃಷ್ಣರೂ ಮೆಚ್ಚಿಕೊಂಡಿದ್ದರು. ತಮ್ಮಲ್ಲಿಗೆ ಬಂದ ಯಾರಾದರೂ ಆದೇ ಬಗೆಯ ಅಸಂ ಬದ್ಧ ಪ್ರಶ್ನೆಯನ್ನೆತ್ತಿದರೆ, "ಈ ಪ್ರಶ್ನೆಗೆ ಕೇದಾರ ಅಂದು ಹೀಗೆ ಉತ್ತರಿಸಿದ್ದ" ಎಂದು

ನೆನಪಿಸಿಕೊಳ್ಳುತ್ತಿದ್ದರು. ಒಂದು ದಿನ ಮಾತಿನ ಮಧ್ಯೆ ಯಾರೋ ಒಬ್ಬರು ಅವನನ್ನು ಕೇಳಿದರು: "ದೇವರು ದಯಾಮಯನೇ ಆಗಿದ್ದಲ್ಲಿ, ಈ ಜಗತ್ತಿನಲ್ಲೇಕೆ ಅವನು ಅಷ್ಟೊಂದು ನೋವು ಸಂಕಟ ದಬ್ಬಾಳಿಕೆಗಳನ್ನು ಸೃಷ್ಟಿಸಿದ್ದಾನೆ? ಬರಗಾಲ-ಪ್ರವಾಹ ಗಳಲ್ಲಿ ಪ್ರತಿವರ್ಷವೂ ಸಾವಿರಾರು ಜನ ಸಾಯುತ್ತಾರಲ್ಲ, ಏಕೆ?" ಅದಕ್ಕೆ ಕೇದಾರ ನೆಂದ: "ಏನು ಮಾಡುವುದು? ದೇವರು ದಯಾಮಯನೇ ಸರಿ. ಆದರೆ ಅವನು, 'ಈ ಸೃಷ್ಟಿಯಲ್ಲಿ ನೋವು ಸಂಕಟ ದಬ್ಬಾಳಿಕೆಗಳು ಹಾಗೆಯೇ ಮುಂದುವರಿಯಲಿ' ಎಂದು ತೀರ್ಮಾನಿಸಿದ ಮೀಟಿಂಗಿಗೆ ದುರದೃಷ್ಟವಶಾತ್ ನಾನು ಹೋಗಿರಲಿಲ್ಲ. ಆದ್ದ ರಿಂದ ನನಗೆ ಹೇಗೆ ಗೊತ್ತಾಗಬೇಕು?"

ಮುಂದೆ, ತಮ್ಮ ಬಳಿಗೆ ಬರುವ ಭಕ್ತರ ಸಂಖ್ಯೆ ಮಿತಿಮೀರಿದಾಗ ಹೊಸಹೊಸ ಭಕ್ತರನ್ನೆಲ್ಲ ಮಾತನಾಡಿಸಿ, ಅವರಿಗೆ ತಮ್ಮ ಬೋಧನೆಯ ಮೊದಲ ಪಾಠವನ್ನೇ ಮತ್ತೆ ಮತ್ತೆ ಹೇಳಬೇಕಾದ ಶ್ರಮ ಶ್ರೀರಾಮಕೃಷ್ಣರಿಗೊದಗಿತು. ಆಗೊಮ್ಮೆ ಅವರು ಭಾವಾ ವಸ್ಥೆಯಲ್ಲಿ ಜಗನ್ಮಾತೆಗೆ ಮೊರೆಯಿಡುತ್ತಾರೆ: "ಅಮ್ಮಾ, ಇಷ್ಟೊಂದು ಜನರಿಗೆ ನಾನು ಬೋಧನೆ ನೀಡಲಾರೆ. ಅವರಿಗೆಲ್ಲ ಸ್ವಲ್ಪವಾದರೂ ತಿಳಿಯಹೇಳಿ, ಅವರ ಡೊಂಕು ಗಳನ್ನು ಮೊದಲು ಸರಿಪಡಿಸಲಾಗುವಂತೆ ಕೇದಾರ, ರಾಮಚಂದ್ರ, ವಿಜಯ, ಮಹೇಂದ್ರ, ಗಿರೀಶ—ಇವರುಗಳಿಗೆ ಶಕ್ತಿ ಕೊಡು."

ಸಾಧನೆಯ ಮೂಲಕ ಕೇದಾರ ತನ್ನೊಳಗೆ ಮಧುರಭಾವವನ್ನು ಪ್ರಬೋಧಿಸಿ ಕೊಂಡಿದ್ದ. ಆದ್ದರಿಂದ ಒಮ್ಮೊಮ್ಮೆ ಶ್ರೀರಾಮಕೃಷ್ಣರಿಗೆ ಅವನನ್ನು ನೋಡಿದೊಡನೆ ಭಾವೋದ್ದೀಪನವಾಗುತ್ತಿತ್ತು. ಆದರೆ ಭಕ್ತಿಯ ಜೊತೆಜೊತೆಗೇ ಅವನಲ್ಲಿ ಭೋಗಾ ಸಕ್ತಿಯೂ ಇತ್ತೆಂಬುದನ್ನು ಅವರು ತಿಳಿದಿದ್ದರು. ಅವನನ್ನು ಅದರಿಂದ ಮುಕ್ತಗೊಳಿ ಸಲು ಪ್ರಯತ್ನಿಸುತ್ತಿದ್ದರು. ಒಮ್ಮೆ ಅವರು ಭಾಗಶಃ ಭಾವಸ್ಥಿತಿಯಲ್ಲಿದ್ದಾಗ ಅವನಿಗೆ ಹೇಳಿದರು: "ನೀನಿನ್ನೂ ಕಾಮಕಾಂಚನಾಸಕ್ತಿಯಿಂದ ಬಿಡಿಸಿಕೊಂಡಿಲ್ಲ. 'ನಾನವನ್ನೆಲ್ಲ ಮೀರಿಹೋಗಿದ್ದೇನೆ' ಎಂದು ಸುಮ್ಮನೆ ಭಾವಿಸುವುದರಿಂದೇನೂ ಪ್ರಯೋಜನವಿಲ್ಲ. ಮುಂದೆ ಸಾಗು. ಈಗಿನದಕ್ಕಿಂತ ಎಷ್ಟೋ ಅದ್ಭುತ ಸ್ಥಿತಿಗಳನ್ನೆಲ್ಲ ಪಡೆಮಕೊಳ್ಳುವೆ."

ಶ್ರೀರಾಮಕೃಷ್ಣರ ಹೆಸರು ಕೀರ್ತಿ ಹಬ್ಬಿದಂತೆ ಸಮಾಜದ ಎಲ್ಲ ವರ್ಗಗಳ ಜನರು ಅವರ ದರ್ಶನಕ್ಕೆ ಬರಲಾರಂಭಿಸಿದರು. ಹುಡುಗರು-ಮುದುಕರು, ಶ್ರೀಮಂತರು-ಬಡವರು, ಪಂಡಿತರು-ಪಾಮರರು, ದಣಿಗಳು-ಸೇವಕರು, ಬ್ರಾಹ್ಮಣರು-ಚಂಡಾಲರು, ಸಂತರು-ಪಾಪಿಗಳು—ಹೀಗೆ ಎಲ್ಲ ಬಗೆಯವರೂ ಅಲ್ಲಿದ್ದರು. ಈ ಜನರ ಪೈಕಿ ಜಿಜ್ಞಾಸುಗಳು-ಭಕ್ತರು ಮಾತ್ರವಲ್ಲದೆ ಕುತೂಹಲಕ್ಕಾಗಿ ಬರುವವರು, ತಮ್ಮ ಪ್ರತಿಷ್ಠೆಯ ಪ್ರದರ್ಶನಕ್ಕಾಗಿ ಬರುವವರು, ಪರೀಕ್ಷೆ ಮಾಡಬಯಸುವವರು, ವಾದ ಮಾಡಲಿಚ್ಛಿಸುವವರು, ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಡಬೇಕೆಂದು ಬೇಡುವವರು—ಇಂಥವರೆಲ್ಲ ಇದ್ದರು. ಇವರಲ್ಲಿ ಕೇಶವಚಂದ್ರ ಸೇನನ ಪತ್ರಿಕಾ ವರದಿಗಳಿಂದ ಆಕರ್ಷಿತರಾಗಿ ಬಂದವರು ಹೆಚ್ಚು ಜನ. ಈ ಬಗೆಯ ಜನಜಂಗುಳಿಯಿಂದ ಶ್ರೀರಾಮಕೃಷ್ಣರಿಗೆ ಸಾಕಷ್ಟು ತೊಂದರೆಯೇ ಆಯಿತು.

ಒಮ್ಮೆ ಶ್ರೀರಾಮಕೃಷ್ಣರ ದರ್ಶನಕ್ಕಾಗಿ ಕಲ್ಕತ್ತದ ಗಣ್ಯವ್ಯಕ್ತಿಗಳನೇಕರು ದಕ್ಷಿಣೇಶ್ವರಕ್ಕೆ ಬಂದರು. ರಾಜಾ ಯತೀಂದ್ರಮೋಹನ ಟಾಗೋರ್ ಎಂಬವನು ಇವರಲ್ಲೊಬ್ಬ. ಈತ ತನ್ನ ಶ್ರೀಮಂತಿಕೆಯಿಂದಲೂ ದಾನಕಾರ್ಯದಿಂದಲೂ ಪ್ರಸಿದ್ಧನಾದವನು. 'ರಾಜಾ' ಎಂಬುದು ಅವನಿಗೆ ಪಂದ ಬಿರುದು. ಆದರೆ ಶ್ರೀರಾಮಕೃಷ್ಣರಿಗೆ ಅವನನ್ನು ಪರಿಚಯಿಸಿದಾಗ ಅವರು ಸ್ವಲ್ಪವೂ ಮುಚ್ಚುಮರೆಯಿಲ್ಲದೆ ಅವನಿಗೆಂದರು: " 'ರಾಜ' ? ನಾನು ಮಾತ್ರ ನಿನ್ನನ್ನು ಹಾಗೆ ಸಂಬೋಧಿಸಲಾರೆ. ನನಗೆ ನಿನ್ನನ್ನು ಹಾಗೆ ಕರೆಯಬೇಕೆಂದು ಅನ್ನಿಸುವುದೇ ಇಲ್ಲ. ನಾನೇಕೆ ಸುಳ್ಳು ಹೇಳಲಿ ?" ಇದನ್ನು ಕೇಳಿ ಅವನಿಗೆ ಅದೆಷ್ಟು ಕರಕರೆಯಾಯಿತೊ ! ಆದರೆ ಅವನನ್ನು ನೋಡಿದೊಡನೆ ಶ್ರೀರಾಮಕೃಷ್ಣರಿಗೆ ಅವನ ಸತ್ವವೇನೆಂಬುದರ ಸ್ಪಷ್ಟ ಪರಿಚಯವಾಗಿತ್ತು. 'ರಾಜಾ' ಎಂಬ ಬಿರು ದಿಗೆ ಅವನು ಅರ್ಹನಲ್ಲವೆಂದು ಅವರಿಗೆ ತಿಳಿದುಹೋಯಿತು. ತಮ್ಮ ಮನಸ್ಸಿನ ಭಾವ ನೆಗೆ ವಿರುದ್ಧವಾಗಿ ಏನನ್ನಾದರೂ ಮಾತನಾಡಲು ಅವರಿಗೆ ಸಾಧ್ಯವೆ ?

ಬಳಿಕ ಸಂದರ್ಶಕರು ತಮಗೆ ಏನಾದರೂ ಬೋಧನೆ ನೀಡುವಂತೆ ಕೇಳಿಕೊಂಡರು. ಶ್ರೀರಾಮಕೃಷ್ಣರು ಅವರಿಗೆ ತ್ಯಾಗ-ವಿವೇಕ-ವೈರಾಗ್ಯಗಳ ಮಹತ್ವವನ್ನು ಬಣ್ಣಿಸಿದರು. ಆಮೇಲೆ ಹೇಳಿದರು:

"ನೀವು ಹಗಲಿರುಳೂ ಭಗವನ್ನಾಮಜಪವನ್ನೇ ಮಾಡುತ್ತಿದ್ದರೂ ನಿಮ್ಮ ಮನಸ್ಸು ಮಾತ್ರ ವಿಷಯವಸ್ತುಗಳ ಮೇಲೆಯೇ ಇದ್ದರೆ ನಿಮಗೆ ಏನೇನೂ ಸಿದ್ಧಿಸದು. ಮಾಡಿದ್ದೆಲ್ಲ ವ್ಯರ್ಥ."

ಯತೀಂದ್ರಮೋಹನ: "ಆದರೆ ಸಂಸಾರಿಗಳು ಎಂದಾದರೂ ಭಗವಂತನನ್ನು ವ್ಯಾಕುಲತೆಯಿಂದ ಕರೆಯಲು ಸಾಧ್ಯವೇ ? ಅವರೊಳಗೆ ಪರಿಪೂರ್ಣ ಭಕ್ತಿ-ವಿಶ್ವಾಸ, ನಿಷ್ಕಪಟತೆ ಇರಲು ಸಾಧ್ಯವೆ ? ಅಂಥಾ ಮಹಾತ್ಮನಾದ ಧರ್ಮರಾಯನೇ ಸುಳ್ಳು ಹೇಳಿಬಿಟ್ಟ !"

ಇದನ್ನು ಕೇಳಿದ ಶ್ರೀರಾಮಕೃಷ್ಣರು ಜುಗುಪ್ಸೆಗೊಂಡು ರೇಗಿದರು:

"ಆಹಾ! ಧರ್ಮರಾಯನೆ? ಅವನ ಹೆಸರು ಹೇಳಲು ಯೋಗ್ಯತೆ ಬೇಕು! ಅವನ ಅವಿಚಲ ಶ್ರದ್ಧೆಯನ್ನು, ಅಸಂಖ್ಯಾತ ಸದ್ಗುಣಗಳನ್ನು, ಸತ್ಯವಂತಿಕೆಯನ್ನು ಮರೆತುಬಿಟ್ಟು ಇಡೀ ಜೀವನದಲ್ಲಿ ಅವನು ಸುಳ್ಳು ಹೇಳಿದ ಘಟನೆಯೊಂದನ್ನೇ ಎತ್ತಿಯಾಡುತ್ತೀಯಲ್ಲ! ಏನೆನ್ನಬೇಕು ಇದಕ್ಕೆ!"

ಮತ್ತೊಂದು ದಿನ ಬಾಬು ಕ್ರಿಸ್ತೊದಾಸ್ ಪಾಲ್ ಎಂಬ ವಿಖ್ಯಾತ ವ್ಯಕ್ತಿ ದಕ್ಷಿಣೇಶ್ವರಕ್ಕೆ ಬಂದ. ಇವನು 'ಹಿಂದೂ ಪೇಟ್ರಿಯಟ್' ಪತ್ರಿಕೆಯ ಸಂಪಾದಕ; ಭಾರತದ ರಾಷ್ಟ್ರೀಯ ಆಂದೋಳನದ ಪ್ರವರ್ತಕರಲ್ಲೊಬ್ಬ. ಸರ್ಕಾರದಿಂದಲೂ ಸಮಾಜದಿಂದಲೂ ಸಮಾನ ಗೌರವವನ್ನು ಗಳಿಸಿದ್ದವನು. ಸಂಭಾಷಣೆಯ ಸಮಯದಲ್ಲಿ ತ್ಯಾಗ ವೈರಾಗ್ಯದ ವಿಷಯ ಬಂದಿತು. ಆಗ ಕ್ರಿಸ್ತೊದಾಸ ಆ ಕುರಿತಾದ ತನ್ನ ನಿಶ್ಚಿತಾಭಿಪ್ರಾಯವನ್ನು ಹೀಗೆ ಪ್ರಕಟಿಸಿದ:

"ಈ ತ್ಯಾಗದ ಸಿದ್ಧಾಂತವೆಂಬುದು ಕೇವಲ ಮೋಸ, ಅಪಾಥಭೂತಿತನ. ಇದು ನಮ್ಮ ದೇಶವನ್ನೇ ಹಾಳುಮಾಡಿಬಿಟ್ಟಿದೆ. ಇದರಿಂದಾಗಿಯೇ ನಾವಿಂದು ಗುಲಾಮ ರಾಷ್ಟ್ರವಾಗಿದ್ದೇವೆ. ಇತರರಿಗೆ ಒಳಿತು ಮಾಡುವುದು, ದುರ್ಬಲರ ಮನೆಬಾಗಿಲಿಗೇ ಶಿಕ್ಷಣವನ್ನು ತಲುಪಿಸುವುದು, ಮತ್ತು ಎಲ್ಲಕ್ಕಿಂತ ಮಿಗಿಲಾಗಿ ದೇಶದ ಆರ್ಥಿಕ ಸ್ಥಿತಿಯನ್ನು ಸುಧಾರಿಸುವುದು—ಇವೇ ಇಂದಿಗೆ ನಮ್ಮ ಕರ್ತವ್ಯವಾಗಬೇಕು. ಧರ್ಮ-ವೈರಾಗ್ಯಗಳ ಕರೆ ನಮ್ಮನ್ನು ಮತ್ತಷ್ಟು ದುರ್ಬಲರನ್ನಾಗಿಸುತ್ತದೆ, ಅಷ್ಟೆ. ಆದ್ದರಿಂದ ನೀವು ಬಂಗಾಳದ ಯುವಕರಿಗೆ, ದೇಶವನ್ನು ಮೇಲೆತ್ತಲು ಬೇಕಾದಂಥ ಬೋಧನೆಯನ್ನು ಮಾಡಬೇಕು."

ಶ್ರೀರಾಮಕೃಷ್ಣರು ಈ ವಾದವನ್ನು ಕಟುವಾಗಿ ಟೀಕಿಸಿದರು:

"ನಿಮಗಿನ್ನೂ ತಿಳುವಳಿಕೆ ಸಾಲದೆಂದು ತೋರುತ್ತದೆ! ಯಾವುದನ್ನು ನಮ್ಮೆಲ್ಲ ಶಾಸ್ತ್ರಗ್ರಂಥಗಳೂ ಅತ್ಯುನ್ನತ ಆದರ್ಶವೆಂದು ಸಾರಿವೆಯೋ ಅದನ್ನು ನೀವು ಹೀಗೆ ಹೀಯಾಳಿಸುತ್ತೀರಲ್ಲ! ಎರಡು ಪುಟ ಇಂಗ್ಲಿಷು ಓದಿಬಿಟ್ಟು ಇಡೀ ಪ್ರಪಂಚವನ್ನೇ ಅರಿತುಕೊಂಡುಬಿಟ್ಟೆನೆಂದು ಭಾವಿಸುತ್ತಿದ್ದೀರಿ! ನೀವು ಸರ್ವಜ್ಞರೆಂದು ತಿಳಿದುಕೊಂಡಿದ್ದೀರಿ. ಮಳೆಗಾಲ ಪ್ರಾರಂಭವಾದಾಗ ಗಂಗೆಯಲ್ಲಿ ಕಾಣಿಸಿಕೊಳ್ಳುವ ಪುಟ್ಟ ಏಡಿಮರಿಗಳನ್ನು ನೋಡಿದ್ದೀರಾ? ಈ ಮಹಾ ಸೃಷ್ಟಿಗೆ ಹೋಲಿಸಿದಾಗ ನಾವು ಅದಕ್ಕಿಂತಲೂ ಕ್ಷುದ್ರ ಜಂತುಗಳು. ಹಾಗಿರುವಾಗ ಜಗತ್ತಿಗೆ ಸಹಾಯ ಮಾಡುವ ಮಾತನಾಡಲು ನಿಮಗೆಷ್ಟು ಧೈರ್ಯ? ಭಗವಂತ ನೋಡಿಕೊಳ್ಳುತ್ತಾನೆ ಅದನ್ನು. ಅದಕ್ಕೆ ಬೇಕಾದ ಶಕ್ತಿ ನಿಮ್ಮಲ್ಲಿಲ್ಲ..."

ಒಂದು ಕ್ಷಣ ತಡೆದು, ಬಳಿಕ: "ಹೋಗಲಿ, ಇತರರಿಗಾಗಿ ನೀವೇನು ಮಾಡಬಲ್ಲಿರೆಂದು ಹೇಳುವಿರಾ? 'ಸಹಾಯ'ವೆಂದರೆ ನಿಮ್ಮ ಮಾತಿನಲ್ಲಿ ಏನರ್ಥವೆಂದು ನನಗೆ ಗೊತ್ತು. ಒಂದಷ್ಟು ಜನರಿಗೆ ಉಣಲಿಕ್ಕುವುದು, ಅವರು ಕಾಯಿಲೆ ಬಿದ್ದಾಗ ಸೇವೆ ಮಾಡುವುದು, ಒಂದು ರಸ್ತೆ ನಿರ್ಮಿಸುವುದು ಇಲ್ಲವೆ ಬಾವಿ ತೋಡಿಸುವುದು, ಇಷ್ಟೆ ತಾನೆ? ಇವೆಲ್ಲ ನಿಸ್ಸಂದೇಹವಾಗಿ ಸತ್ಕರ್ಮಗಳೇ; ಆದರೆ ಈ ಜಗತ್ತಿನ ವೈಶಾಲ್ಯವನ್ನು ನೋಡಿದಾಗ ನಿಮ್ಮ ಕಾರ್ಯವೆಲ್ಲ ಎಷ್ಟು ಕ್ಷುದ್ರ! ಮನುಷ್ಯ ಎಷ್ಟು ಮಹಾ ಮಾಡಬಲ್ಲ? ಭಯಂಕರ ಬರಗಾಲ ಬಡಿದಾಗ ನೀವು ಎಷ್ಟು ಜನರನ್ನು ರಕ್ಷಿಸಬಲ್ಲಿರಿ?

ಮಲೇರಿಯಾ ಒಂದು ಇಡೀ ಪ್ರಾಂತವನ್ನೇ ಹಾಳುಗೆಡವಿದೆ. ಅದನ್ನು ತಡೆಯಲು ನೀವೇನು ಮಾಡಲು ಸಾಧ್ಯವಾಯಿತು ? ದೇವರು ಮಾತ್ರ ಈ ಜಗತ್ತನ್ನು ನೋಡಿಕೊಳ್ಳಬಲ್ಲ. ಒಬ್ಬ ವ್ಯಕ್ತಿ ಮೊದಲು ಆತನನ್ನು ಸಾಕ್ಷಾತ್ಕರಿಸಿಕೊಳ್ಳಲಿ. ಕಾರ್ಯ ಮಾಡಲು ಬೇಕಾದ ಅಧಿಕಾರವನ್ನೂ ಶಕ್ತಿಯನ್ನೂ ಆತನಿಂದ ಪಡೆದುಕೊಳ್ಳಲಿ. ಆಗ, ಮತ್ತು ಆಗ ಮಾತ್ರವೇ ಅವನು ಇತರರಿಗೆ ಒಳಿತನ್ನುಂಟುಮಾಡುವ ಬಗ್ಗೆ ಆಲೋಚಿಸಬಹುದು. ವ್ಯಕ್ತಿ ಮೊದಲು ತನ್ನ ಅಹಂಕಾರವನ್ನೆಲ್ಲ ಕಳೆದುಕೊಳ್ಳಬೇಕು. ಆಗ ಮಾತ್ರವೇ ಜಗನ್ಮಾತೆ ಅವನನ್ನು ಜಗತ್ತಿಗಾಗಿ ಕೆಲಸ ಮಾಡುವಂತೆ ನಿಯಮಿಸುತ್ತಾಳೆ.''

ಶ್ರೀರಾಮಕೃಷ್ಣರ ಈ ಮಾತುಗಳನ್ನು ಸ್ವಲ್ಪ ಎಚ್ಚರಿಕೆಯಿಂದ ಗಮನಿಸಿ ಅರ್ಥ ಮಾಡಿಕೊಳ್ಳುವುದು ಅಗತ್ಯ. ಇಲ್ಲಿ ಅವರಾಡುವ ಮಾತುಗಳು ತಮ್ಮನ್ನು 'ಗುರುಗಳು' ಅಥವಾ ಜನನಾಯಕರು ಎಂದು ಪರಿಭಾವಿಸಿಕೊಂಡು ಕಾರ್ಯವೆಸಗುವ ವ್ಯಕ್ತಿಗಳನ್ನು ಉದ್ದೇಶಿಸಿದ್ದು. 'ಉಪಕಾರಿ ನಾನು ಎನ್ನುಪಕೃತಿಯು ಜಗಕೆಂಬ' ಅಹಂಕಾರದಿಂದ ಮಾಡಿದ ಕಾರ್ಯಗಳೆಲ್ಲವೂ ಕೊನೆಯಲ್ಲಿ ಆ ವ್ಯಕ್ತಿಗೆ ಅಶಾಂತಿಯನ್ನೇ ಕೊಡುತ್ತವೆ. ನಮ್ಮ ಕರ್ತವ್ಯವು ಜನರಿಗೆ 'ಸೇವೆ' ಸಲ್ಲಿಸುವುದೇ ಹೊರತು 'ಸಹಾಯ' ಮಾಡುವುದಲ್ಲ. ಸಾಮಾನ್ಯಜನರಾದರೋ ಅಹಂಕಾರಪ್ರವೃತ್ತಿಯಿಂದ ಕೆಲಸ ಮಾಡುತ್ತಾರೆ, ಆ ಕರ್ಮದಿಂದಲೇ ಬಂಧಿತರಾಗುತ್ತಾರೆ; ಆದರೆ ಆತ್ಮಸಾಕ್ಷಾತ್ಕಾರವಾದವನು ತಾನು ಕೇವಲ ದೇವರ ಉಪಕರಣ ಎಂಬ ಭಾವನೆಯಿಂದ ದುಡಿಯುತ್ತಾನೆ. ಆತನಿಗೆ ಸೋಲು-ಗೆಲುವು, ಮಾನ-ಅಪಮಾನ, ಲಾಭ-ನಷ್ಟಗಳೆಂಬ ದ್ವಂದ್ವದ ಭಯವಿಲ್ಲ—ಇದು ಶ್ರೀರಾಮಕೃಷ್ಣರ ಬೋಧನೆಯ ಸಾರ. ಮುಂದೆ ಅವರು ತಮ್ಮ ಶಿಷ್ಯರಿಗೆ ಮಾಡುವ ಬೋಧನೆಯಿಂದಲೂ, ಸ್ವಾಮಿ ವಿವೇಕಾನಂದರು ಅದನ್ನು ಅರ್ಥೈಸುವ ರೀತಿಯಿಂದಲೂ ಇದು ಸ್ಪಷ್ಟವಾಗುತ್ತದೆ.

ಇವನಾರೆಂದು ಬಲ್ಲಿರಾ?—ಇವನದೊಂದು ಶಾಲೆಯಿದೆ. ಅದರ ಹೆಸರು 'ಪ್ರಾಚ್ಯ-ಆರ್ಯ-ಶಿಕ್ಷಾಕಾಂಡ-ಪರಿಷತ್'! ಇವನ ಏಕಮಾತ್ರ ಪುತ್ರರತ್ನನ ನಾಮಧೇಯ 'ಮೃಗಾಂಕಮೌಳೀ ಪೂತತುಂಡೀ'—(ಯಾರ ಜಟೆಯಲ್ಲಿ ಚಂದ್ರನು ಶೋಭಿಸುತ್ತಾನೋ ಆ ಶಿವನ ಪವಿತ್ರ ಮುಖವುಳ್ಳವನು) ಎಂದು. ಇವನೊಂದು ಜಿಂಕೆ ಸಾಕಿದ್ದಾನೆ. ಅದರ ಹೆಸರು 'ಕಪಿಂಜಲ'. ಇವನ ಗುರು 'ಆಗಮಾಚಾರ್ಯ ಡಮರುವಲ್ಲಭ'ರಂತೆ! ಅಷ್ಟೇ ಅಲ್ಲ, ಇವನಿಗೆ ದೀಕ್ಷೆ ಕೊಟ್ಟವನು ಸಾಕ್ಷಾತ್ ಪರಮಹಂಸಾಚಾರ್ಯ ತೋತಾಪುರಿಯೇ ಅಂತೆ! "ನಾನು ಉತ್ತರ ಭಾರತದಲ್ಲಿ ತೀರ್ಥಯಾತ್ರೆ ಮಾಡುತ್ತಿದ್ದಾಗ ತೋತಾಪುರಿಯ ಪರಿಚಯವಾಯಿತು. ಆಗ ನಾನವರನ್ನು ಗುರುವಾಗಿ ಸ್ವೀಕರಿಸಿ ದೀಕ್ಷೆ ಪಡೆದೆ. ಹೌದು, ರಾಮಕೃಷ್ಣರಿಗೆ ಅವರು ಭಕ್ತಿಮಾರ್ಗವನ್ನು ಅನುಸರಿಸುವಂತೆ ಆದೇಶ ನೀಡಿದರು. ಆದರೆ ನನಗೆ ಜ್ಞಾನಮಾರ್ಗದಿಂದ ವಿಚಲಿತನಾಗದಿರುವಂತೆ ಹೇಳಿದ್ದಾರೆ. ಮತ್ತು ನಾನು ಸಂಸಾರದಲ್ಲೇ ಇರಬೇಕೆಂದು ಆಜ್ಞೆಯಾಗಿದೆ"—ಇದು ಇವನು ತನ್ನ ಬಗ್ಗೆ ಹೇಳಿಕೊಂಡ ವಿಷಯ. ಆದರೆ ಈ ವಿಷಯದಲ್ಲಿ ಸಾಕ್ಷ್ಯ ಕೊಡುವವರು ಮಾತ್ರ ಯಾರೂ ಇಲ್ಲ!

ಈ 'ಮಹಾಮಹಿಮ'ನೇ ಮಹಿಮಾಚರಣ ಚಕ್ರವರ್ತಿ. ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದ ಮೊದಲಿಗರಲ್ಲೊಬ್ಬ. ಭಕ್ತವೃಂದದಲ್ಲಿ ಇವನಿಗೊಂದು ವಿಶೇಷ ಸ್ಥಾನ. ಇವನ ವೈಶಿಷ್ಟ್ಯ? ಈಗ ತಾನೆ ನೋಡಿದೆವಲ್ಲ! ಮಹಾ ಆಡಂಬರಪ್ರಿಯತೆ. ಜನರೆಲ್ಲ ತನ್ನನ್ನು ಬುದ್ಧಿವಂತ, ಮಹಾ ಸಾಧಕ, ಆಚಾರವಂತ, ದಾನಶೀಲ, ಶ್ರೀಮಂತ ಎಂದು ತಿಳಿಯಬೇಕು, ತಿಳಿದು ಕೊಂಡಾಡಬೇಕು—ಇದೊಂದೇ ಅವನ ಆಸೆ. ಅವನ ಪ್ರತಿಯೊಂದು ಕೃತಿಯೂ ಆ ಒಂದು ಉದ್ದೇಶವನ್ನು ಈಡೇರಿಸಿಕೊಳ್ಳುವುದಕ್ಕಾಗಿಯೇ! ಅವನ ಮಾತು, ನಡೆವಳಿಕೆ, ವೇಷ—ಎಲ್ಲದರಲ್ಲೂ ಕೃತ್ರಿಮತೆ ಎದ್ದುಕಾಣುತ್ತಿತ್ತು. ಅವನು 'ಮೃಗಾಂಕಮೌಳೀ ಪೂತತುಂಡೀ' ಇತ್ಯಾದಿ ಹೆಸರುಗಳನ್ನಿಡಲೂ ಅದೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲವಲ್ಲ? ಸರ್ವೇಸಾಧಾರಣವಾದ ಹೆಸರುಗಳನ್ನಿಟ್ಟರೆ ಅವನ ಪಾಂಡಿತ್ಯಕ್ಕೇನು ಬೆಲೆ ಬಂದೀತು? ಹಾಗೆಂದು, ಅವನಲ್ಲಿ ಕೇಡಿಗತನವೇನೂ ಇರಲಿಲ್ಲ. ಪಾಪ, ಒಳ್ಳೆಯವನೇ! ಅಲ್ಲದೆ ಸಾಧನೆ ಮಾಡುವ ಇಚ್ಛೆಯೂ ಅಲ್ಪಸ್ವಲ್ಪ ಇತ್ತು. ಆದರೆ ಹೆಸರು-ಕೀರ್ತಿ ಗಳಿಸುವ ಚಪಲ ಎಷ್ಟು ಬಲವಾಗಿತ್ತೆಂದರೆ, ಅದಕ್ಕಾಗಿ ಯಾವ ಉಪಾಯವನ್ನಾದರೂ ಹಿಡಿಯಲು ಸಿದ್ಧ. ಆಗಾಗ ಒಂದೆರಡು ಸುಳ್ಳು ಹೇಳಲೂ ಹಿಂದೆಮುಂದೆ ನೋಡುತ್ತಿರಲಿಲ್ಲ. ಆದರೆ ಆ ಸುಳ್ಳುಗಳನ್ನು ರುಜುವಾತು ಮಾಡಲು ಇನ್ನಷ್ಟು ಸುಳ್ಳುಗಳನ್ನು ಹೆಣೆಯಬೇಕಾಗಿ ಬರುತ್ತಿತ್ತು ಅಷ್ಟೆ. ಅಂತೂ ನೋಡುವವರಿಗೊಂದು ಉಚಿತ ಮನರಂಜನೆ.

ಯಾವುದಾದರೂ ವಿಶೇಷ ದಿನ ಬಂತೆಂದರೆ ಮಹಿಮಾಚರಣ ದಕ್ಷಿಣೇಶ್ವರದಲ್ಲಿ ಕಾಷಾಯವಸ್ತ್ರಧಾರಿಯಾಗಿ ಕಾಣಿಸಿಕೊಳ್ಳುತ್ತಾನೆ. ಕೊರಳಲ್ಲಿ ಶೋಭಿಸುವ ರುದ್ರಾಕ್ಷಿ ಮಾಲೆ, ಕೈಯಲ್ಲೊಂದು ಏಕತಂತೀ ವಾದ್ಯ. ಪಂಚವಟಿಗೆ ಹೋಗಿ ವ್ಯಾಘ್ರಾಂಬರವನ್ನು

ಹಾಕಿಕೊಂಡು ಅರ್ಧನಿಮೀಲಿತ ನೇತ್ರನಾಗಿ ಕುಳಿತುಕೊಂಡರೆ. . . ದಕ್ಷಿಣೇಶ್ವರದ ಇನ್ನೊಬ್ಬ ಪರಮಹಂಸನೆಂದೇ ಭಾವಿಸಬೇಕು, ನೋಡಿದವರು ! ಅಂತಹ ತೇಜೋಮಯವಾದ ವಿಶಾಲ ಶರೀರ, ಅದಕ್ಕೊಪ್ಪುವ ವಾಕ್ಚಾತುರ್ಯ. ಆಗಾಗ ತಂತಿಯನ್ನು ಮೀಟುತ್ತ ಅದಕ್ಕೆ ದನಿಗೂಡಿಸಿ ಓಂಕಾರದ ಹೂಂಕಾರ ಮಾಡುತ್ತಾನೆ. ಇಲ್ಲವೆ ಅದ್ವೈತ ಬೋಧಕವಾದ ಶ್ಲೋಕಗಳನ್ನು ಉಚ್ಚರಿಸುತ್ತಾನೆ. ಯಾರಾದರೂ—ಮುಖ್ಯವಾಗಿ ಹೊಸಬರು—ಅವನನ್ನು ಮುತ್ತಿಕೊಂಡು, ನಮಸ್ಕರಿಸಿ, "ಸ್ವಾಮಿ, ದಾರಿ ತೋರಿ !" ಎಂದು ಬೇಡಿಕೊಂಡರೆ ಸಂತೋಷದಿಂದ ಉಪದೇಶ ಮಾಡುತ್ತಾನೆ. ಕೆಲವರಿಗೆ ಅಪ್ಪಣೆ ಕೊಡಿಸುತ್ತಾನೆ: "ಈ ಓಂಕಾರೋಚ್ಚಾರಣೆಯೇ ಸಾಧನೆಯ ಸನಾತನ ಮಾರ್ಗ. ಇದನ್ನು ಮಾಡಿದರೆ ಸಾಕು; ಬೇರೇನೂ ಬೇಕಿಲ್ಲ. ಇಷ್ಟರಿಂದಲೇ ಕುಂಡಲಿನೀ ಶಕ್ತಿ ಜಾಗೃತವಾಗುತ್ತದೆ."

ಮನೆಗೆ ಹೋಗುವಾಗ ಇವನು ತನ್ನ ವ್ಯಾಘ್ರಚರ್ಮವನ್ನು ಶ್ರೀರಾಮಕೃಷ್ಣರ ಗೋಡೆಯ ಮೇಲಿನ ಗೂಟಕ್ಕೆ ತೂಗುಹಾಕಿ ಹೋಗುತ್ತಿದ್ದ. ಅವನು ಹೀಗೆ ಮಾಡುವುದರಲ್ಲೂ ಅವನದ್ದೇ ಆದ ಉದ್ದೇಶವೊಂದಿತ್ತು. ಭಕ್ತನೊಬ್ಬ ಶ್ರೀರಾಮಕೃಷ್ಣರನ್ನು ಕೇಳಿದ: "ಇದೇನಿದು, ಹುಲಿ ಚರ್ಮ ಇದೆಯಲ್ಲ, ಯಾರದ್ದಿದು ?" ಮುಗುಳ್ನಕ್ಕು ಅವರೆಂದರು: "ಅದೇ ? ಮಹಿಮ ಚಕ್ರವರ್ತಿ ಬಿಟ್ಟುಹೋಗಿದ್ದಾನೆ ಅದನ್ನು. ಏಕೆ ಗೊತ್ತೆ ? ಈಗ ನೀನು ಕೇಳಿದಂತೆಯೇ ಜನ ನನ್ನನ್ನು ಕೇಳುತ್ತಾರೆ—ಅದು ಯಾರದ್ದು ಅಂತ. ನಾನು 'ಮಹಿಮನದ್ದು' ಎಂದರೆ, ಅವರು, 'ಓಹೊ, ಬಹು ದೊಡ್ಡ ಸಾಧಕನಿರಬೇಕು' ಅಂದುಕೊಳ್ಳುವುದಿಲ್ಲವೆ, ಅದಕ್ಕೇ !"

ಶ್ರೀರಾಮಕೃಷ್ಣರ ಹರಿತ ದೃಷ್ಟಿಗೆ ಗೋಚರವಾಗದ್ದು ಯಾವುದು !

ತರುಣಶಿಷ್ಯರು ಶ್ರೀರಾಮಕೃಷ್ಣರ ಬಳಿಗೆ ಬರಲಾರಂಭಿಸಿದ ಮೇಲೆ ನಡೆದ ಕತೆಯೊಂದು ಹೀಗಿದೆ: ನರೇಂದ್ರನೇ ಮೊದಲಾದವರು ಒಮ್ಮೆ ಮಹಿಮಾಚರಣನ ಮನೆಗೆ ಹೋಗಿದ್ದರು. ಆತನ ಮನೆಯಲ್ಲಿ ಇಂಗ್ಲಿಷ್ ಹಾಗೂ ಸಂಸ್ಕೃತ ಪುಸ್ತಕಗಳ ದೊಡ್ಡ ಭಂಡಾರವೇ ಇತ್ತು. ಅದನ್ನು ಕಂಡು ಇವರೆಲ್ಲ ಅಚ್ಚರಿಯಿಂದ ಕಣ್‌ಕಣ್ಣುಬಿಟ್ಟರು ! ಇಂತಿಂಥಾ ಗ್ರಂಥಗಳನ್ನೆಲ್ಲ ಪೇರಿಸಿಟ್ಟುಕೊಳ್ಳಬೇಕೆಂದರೆ . . . ! "ಸ್ವಾಮಿ, ನೀವು ಈ ಪುಸ್ತಕಗಳನ್ನೆಲ್ಲ ಓದಿಬಿಟ್ಟದ್ದೀರಾ ?" ಎಂದೊಬ್ಬ ಕೇಳಿದ. ಮಹಿಮಾಚರಣ ಶ್ರೀಮದ್ ಗಾಂಭೀರ್ಯದಿಂದ—ಆದರೆ ವಿನಯದಿಂದಲೇ—"ಹೌದು !" ಎಂದಾಗ ಈ ತರುಣರಿಗೆ ಮತ್ತೂ ಆಶ್ಚರ್ಯ. ಆದರೆ ನರೇಂದ್ರ ಸುಮ್ಮನಿರಲಾರದೆ ಯಾವುದೋ ಪುಸ್ತಕವನ್ನು ಕೈಗೆತ್ತಿಕೊಂಡ. ಅದನ್ನು ಹಿಂದೆ ಯಾರಾದರೂ ಓದಿದ್ದ ಯಾವುದೇ ಲಕ್ಷಣವೂ ಕಾಣಲಿಲ್ಲ. ಏಕೆಂದರೆ ಅದರ ಎಷ್ಟೋ ಪುಟಗಳ ಅಂಚು ಕತ್ತರಿಸದೆ ಹಾಗೆಯೇ ಅಂಟಿಕೊಂಡಿತ್ತು ! ಅವನು ಕೇಳಿಯೇಬಿಟ್ಟ—"ಅರೆರೆ ! ಈ ಪುಸ್ತಕವನ್ನು ನೋಡಿದಿರಾ, ಪುಟಗಳು ಬಿಡಿಸಿಕೊಂಡೇ ಇಲ್ಲ. . . !" ಮಹಿಮ ಚಕ್ರವರ್ತಿ ಕೂಡಲೇ ಸಂಭಾಳಿಸಿಕೊಂಡು ನುಡಿದ: "ಆ . . . ಅದೇ ! ನಾನದನ್ನು ಓದಿದ್ದೇನೆ. ಮೊದಲು ನನ್ನ ಬಳಿ ಇನ್ನೊಂದು ಪ್ರತಿ ಇತ್ತು. ಯಾರೋ ಕೇಳಿದರು ಅಂತ ಕೊಟ್ಟಿದ್ದೆ. ಅವರು ಹಿಂದಿರುಗಿಸಲಿಲ್ಲ. ಆದ್ದರಿಂದ ಬೇರೊಂದು ಪ್ರತಿಯನ್ನು ಕೊಂಡುತಂದು ಹಾಗೇ ಇಟ್ಟಿದ್ದೇನೆ ನೋಡಿ !"

ಆದರೂ ಈ ಉತ್ತರ ಯಾರಿಗೂ ಅಷ್ಟು ಸಮಾಧಾನ ತರಲಿಲ್ಲ. ಏಕೆಂದರೆ ಅವರು ಯಾವ ಪುಸ್ತಕವನ್ನು ತೆರೆದು ನೋಡಿದರೂ ಅದೇ ಸ್ಥಿತಿ !

ಶ್ರೀರಾಮಕೃಷ್ಣರಲ್ಲಿ ಮಹಿಮಾಚರಣ ಬಹಳ ಭಕ್ತಿ ಗೌರವಗಳನ್ನಿಟ್ಟುಕೊಂಡಿದ್ದ. ಇದಕ್ಕೆ ಕಾರಣವೂ ಇಲ್ಲದಿರಲಿಲ್ಲ—ಏನೆಂದರೆ, ಅವರೆಂದೂ ಅವನನ್ನು ಹೀಯಾಳಿಸಿದವರಲ್ಲ. ಅವನಲ್ಲಿದ್ದ ಅಲ್ಪಸ್ವಲ್ಪ ಸದ್ಗುಣವನ್ನೂ ಗುರುತಿಸಿ ಮೆಚ್ಚಿಕೊಳ್ಳುತ್ತಿದ್ದವರು ಅವರು. ಒಬ್ಬನಲ್ಲಿ ಎಷ್ಟೇ ಲೋಪದೋಷಗಳಿರಲಿ, ಅವನಲ್ಲಿ ಆಧ್ಯಾತ್ಮಿಕ ಸ್ವಭಾವ ಲೇಶಮಾತ್ರವಿದ್ದರೂ ಅದನ್ನೇ ಎತ್ತಿ ಕೊಂಡಾಡುವುದು ಅವರ ಸ್ವಭಾವ. ಮಹಿಮಾಚರಣ ಆಗಾಗ ವೇದೋಪನಿಷತ್ತುಗಳನ್ನು ಪಾರಾಯಣ ಮಾಡುತ್ತಿದ್ದ. ಶ್ರೀರಾಮಕೃಷ್ಣರು ಅದನ್ನು ಪ್ರೋತ್ಸಾಹಿಸುತ್ತಿದ್ದರು. ಅವನು ಅದ್ವೈತ ವೇದಾಂತವನ್ನು ಚರ್ಚಿಸಲು ಇಷ್ಟಪಡುತ್ತಿದ್ದ. ಆದ್ದರಿಂದ ಅವನು ಅದರ ತತ್ತ್ವಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತೆ ಕೆಲವೊಮ್ಮೆ ವಿವರಿಸುತ್ತಿದ್ದರು. ಅವನಿಗೆ ಸಂಸಾರವನ್ನು ತ್ಯಾಗ ಮಾಡಲು ಅಸಾಧ್ಯವೆಂದು ತಿಳಿದು, ಅವನಿಗೆ ಸಮಾಧಾನವಾಗುವ ರೀತಿಯಲ್ಲೇ ಬೋಧಿಸುತ್ತಿದ್ದರು:

"ಸಂಸಾರವನ್ನು ಸಂಪೂರ್ಣವಾಗಿ ತ್ಯಜಿಸಿಬಿಡುವ ಅಗತ್ಯವಾದರೂ ಏನಿದೆ? ಅದರ ಮೇಲಿನ ಮಮಕಾರವನ್ನು ಬಿಟ್ಟುಬಿಟ್ಟರೆ ಸಾಕು. ಆದರೆ ಆಧ್ಯಾತ್ಮಿಕ ಸಾಧನೆಗಳನ್ನು ಮಾಡಬೇಕು; ಇಂದ್ರಿಯಗಳನ್ನು ಗೆಲ್ಲಬೇಕು."

ಇಷ್ಟೇ ಅಲ್ಲ; ಕೆಲವು ಶಿಷ್ಯರನ್ನು ಕೂಡಿಸಿಕೊಂಡು ಉಪದೇಶ ಮಾಡಬೇಕೆಂಬ ಆಕಾಂಕ್ಷೆ ಅವನಲ್ಲಿ ತೀವ್ರವಾಗಿರುವುದನ್ನು ಗುರುತಿಸಿ ಶ್ರೀರಾಮಕೃಷ್ಣರು ಆಗಾಗ ಅದಕ್ಕೂ ಅವಕಾಶ ಮಾಡಿಕೊಡುತ್ತಿದ್ದರು. ಕೆಲವರನ್ನು ತೋರಿಸಿ, "ನೀನು ಪಂಡಿತ, ಸಾಕಷ್ಟು ತಿಳಿದವನು. ಇಗೋ, ಇವರಿಗೆಲ್ಲ ಉಪದೇಶ ಮಾಡು" ಎನ್ನುತ್ತಿದ್ದರು.

ಮಹಿಮಾಚರಣನಿಗೆ ಶಾಸ್ತ್ರಾಧ್ಯಯನದಲ್ಲಿ ಅತಿಯಾದ ಆಸಕ್ತಿ. ಶ್ರೀರಾಮಕೃಷ್ಣರು ಇದನ್ನು ಕಂಡು ಉದ್ಗರಿಸುವುದಿತ್ತು: "ಎಷ್ಟು ದಿನ ಅಂತ ಶಾಸ್ತ್ರಗಳನ್ನು ಓದುತ್ತಲೇ ಇರುತ್ತೀಯ? ಈ ಗ್ರಂಥಗಳಿಂದೆಲ್ಲ ಏನು ಪ್ರಯೋಜನ ಗೊತ್ತೆ? ಅವು ಏನಿದ್ದರೂ ಸಾಮಾನಿನ ಪಟ್ಟಿಯಿದ್ದಂತೆ. ಒಬ್ಬ ಇನ್ನೊಬ್ಬನಿಗೆ ಒಂದು ಚೀಟಿ ಕಳಿಸಿ, ಅದರಲ್ಲಿ ಬರೆದಿರುವ ಸಾಮಾನುಗಳನ್ನು ಕೊಂಡುಕೊಂಡು ಆಳಿನ ಕೈಲಿ ಕಳಿಸುವಂತೆ ತಿಳಿಸಿದ್ದ. ಆದರೆ ಆ ಚೀಟಿ ಎಲ್ಲೋ ಕಳೆದುಹೋಯಿತು. ಎಲ್ಲರೂ ಸೇರಿಕೊಂಡು ಅದನ್ನು ಹುಡುಕಲಾರಂಭಿಸಿದರು; ಕಡೆಗೆ ಅದು ಸಿಕ್ಕಿತು. ನೋಡಿದರು—ಅದರಲ್ಲೇನಿದೆ ಅಂತ. 'ಆರು ಸೇರು ಸಿಹಿತಿಂಡಿಯನ್ನೂ ಒಂದು ಪಂಚೆಯನ್ನೂ ಕಳಿಸು' ಅಂತ ಬರೆದಿತ್ತು. ಅದನ್ನು ಓದಿಕೊಂಡು ಇವನು ಚೀಟಿಯನ್ನು ಮುದುರಿ ಬಿಸಾಡಿದ. ಸಿಹಿತಿಂಡಿಯನ್ನೂ ಬಟ್ಟೆಯನ್ನೂ ಕೊಂಡು, ಕಳಿಸಿಕೊಟ್ಟ. ಹಾಗೆಯೇ, ಸಾಧನೆ ಮಾಡುವುದು ಹೇಗೆ ಎಂದು ಶಾಸ್ತ್ರದಲ್ಲಿ ಬರೆದಿರುತ್ತದೆ. ಅದನ್ನು ತಿಳಿದುಕೊಂಡ ಮೇಲೆ ಅದರಿಂದ ಇನ್ನೇನೂ ಆಗಬೇಕಾದ್ದಿಲ್ಲ. ಪುಸ್ತಕವನ್ನು ಬದಿಗಿಟ್ಟು ಸಾಧನೆಯಲ್ಲಿ ಮುಳುಗುವುದೊಂದೇ ಕೆಲಸ."

ಶ್ರೀರಾಮಕೃಷ್ಣರಿಗೂ ಅವರ ನಿಕಟವರ್ತಿಯಾದ ಒಬ್ಬ ಭಕ್ತನಿಗೂ ಒಮ್ಮೆ ನಡೆದ ಸಂಭಾಷಣೆ ಇದು:

ಶ್ರೀರಾಮಕೃಷ್ಣರು: "ಇಲ್ಲಿಗೆ ಬರುವ ಜನರ ಬಗ್ಗೆ ನಿನಗೆ ಏನೆನ್ನಿಸುತ್ತದೆ? ಅವರಲ್ಲಿ ಸತ್ವಗುಣ ಎಷ್ಟೆಷ್ಟು ಇದೆ ಅಂತ ಹೇಳು ನೋಡೋಣ."

ಭಕ್ತ: "ಸತ್ವಗುಣವೆ? . . . ನರೇಂದ್ರನಲ್ಲಿ ನೂರಕ್ಕೆ ನೂರರಷ್ಟಿದೆ. ನನ್ನಲ್ಲಿ ಅದು ನೂರಿಪ್ಪತ್ತೈದರಷ್ಟು."

ಶ್ರೀರಾಮಕೃಷ್ಣರು: "ಓಹೋ! ಹಾಗಾದರೆ ನನ್ನಲ್ಲೆಷ್ಟಿದೆ ಅಂತ ಹೇಳ ಬಲ್ಲೆಯಾ?"

ಭಕ್ತ: "ನಿಮ್ಮಲ್ಲಿನ್ನೂ ಸ್ವಲ್ಪ ಕೆಂಪು ಛಾಯೆ* ಕಾಣುತ್ತಿದೆ. ನಿಮ್ಮಲ್ಲಿ ಸತ್ವಗುಣ ಎಪ್ಪತ್ತೈದು ಅಂಶ ಮಾತ್ರವೇ ಎನ್ನಬೇಕು."

ಯಾರಪ್ಪಾ ಈ 'ಭಕ್ತ' ಎಂದಿರಾ? ಅವನೇ ಪ್ರತಾಪಚಂದ್ರ ಹಾಜರಾ! ಅತಿ ವಿಲಕ್ಷಣ ವ್ಯಕ್ತಿ. ಅವನು ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಕೋಣೆಯ ಎದುರಿಗೇ ಎಷ್ಟೋ ವರ್ಷ ವಾಸವಾಗಿದ್ದ ಕಾರಣದಿಂದ ಅವನನ್ನು ಶ್ರೀರಾಮಕೃಷ್ಣರ 'ನಿಕಟವರ್ತಿ' ಎಂದು ಕರೆಯಬಹುದು!

ನಾಟಕದಲ್ಲಿನ ನಕಲಿಶ್ಯಾಮನಂತೆ ಶ್ರೀರಾಮಕೃಷ್ಣರ ಲೀಲಾನಾಟಕದಲ್ಲಿ ಈತನ ಸ್ಥಾನ. ಕೆಲವೊಮ್ಮೆ ಇವನು ಖಳನಾಯಕನಾಗಿ ತೋರುತ್ತಿದ್ದುದೂ ಉಂಟು! ರಾಧಾ-ಕೃಷ್ಣ ಲೀಲೆಯಲ್ಲಿ ಬರುವ ಜಟಿಲೆ-ಕುಟಿಲೆಯರೆಂಬ ಇಬ್ಬರು ತಂಟೆಕೋರಿಯ ರಂತೆ ಈತ ಎಂದು ಶ್ರೀರಾಮಕೃಷ್ಣರೇ ಹೇಳುತ್ತಿದ್ದರು. ನಾಟಕ ಕಳೆಗಟ್ಟಲು, ಸ್ವಾರಸ್ಯ ಕೆರಳಲು ಇಂತಹ ಪಾತ್ರ ಒಂದಾದರೂ ಇರಲೇಬೇಕಂತೆ!

ಈ ಹಾಜರಾ ಇದ್ದುದು ಕಾಮಾರಪುಕುರದ ಬಳಿಯ ಹಳ್ಳಿಯೊಂದರಲ್ಲಿ. ಶ್ರೀರಾಮಕೃಷ್ಣರು ಫುಲುಯಿ-ಶ್ಯಾಮಬಜಾರಿಗೆ ಹೋಗಿದ್ದ ಸಂದರ್ಭದಲ್ಲಿ ಈತ ಅವ ರನ್ನು ಮೊದಲು ಭೇಟಿಯಾದದ್ದು. ಆಗ ಹಾಜರಾ ಅವರ ಮುಂದಿಟ್ಟ ತನ್ನ ಮೊದಲ ಸಂದೇಹ ಇದು:

"ನಾನು ಶ್ರೀಹರಿಯನ್ನು ಅದೆಷ್ಟು ಬಾರಿ ಮತ್ತೆಮತ್ತೆ, ಒಂದೇ ಸಮನೆ ಕರೆ ದಿದ್ದೇನೆ ಗೊತ್ತೆ? ಆದರೂ ಆತ ಓಗೊಡನಲ್ಲ! ಅವನಿಗೇನು ಕಿವಿ ಕೇಳಿಸುತ್ತದೆಯೋ ಇಲ್ಲವೊ ಅಂತ ಅನುಮಾನ ಬರುತ್ತಿದೆ ನನಗೆ!"

ಶ್ರೀರಾಮಕೃಷ್ಣರು ಮುಗುಳ್ನಕ್ಕರು. ಅವನ ಪ್ರಕೃತಿಯೆಂಥದು ಎಂಬುದನ್ನು ಅವ ರಾಗಲೇ ಕಂಡುಕೊಂಡಾಗಿತ್ತು. ಆದ್ದರಿಂದ ಅವರೆಂದರು:

"ಹಾಗಾಗುವುದಕ್ಕೆ ಕಾರಣ ಏನು ಎಂಬುದನ್ನು ನೀನು ತಿಳಿದುಕೊಳ್ಳಬೇಕು.

---

*ಶಾಸ್ತ್ರಗಳ ಪ್ರಕಾರ ಬಿಳಿಬಣ್ಣವು ಸತ್ವಗುಣವನ್ನೂ ಕೆಂಪು ರಜೋಗುಣವನ್ನೂ ಕಪ್ಪು ತಮೋಗುಣ ವನ್ನೂ ಪ್ರತಿನಿಧಿಸುತ್ತವೆ.

ರೈತರು ತಮ್ಮ ಕಬ್ಬಿನ ಗದ್ದೆಗೆ ನೀರು ತರುವುದನ್ನು ನೀನು ನೋಡಿದ್ದೀಯೆ. ನೀರು ಸೋರಿಹೋಗದಂತಿರಲು ಗದ್ದೆಯ ಸುತ್ತಲೂ ಮಣ್ಣಿನ ಬದು ಕಟ್ಟಿರುತ್ತಾರೆ. ಆದರೆ ಅದರಲ್ಲಿ ಇಲಿಗಳು ಅಲ್ಲಲ್ಲಿ ಕೆಲವು ತೂತುಗಳನ್ನು ಕೊರೆದಿರುತ್ತವೆ. ರೈತರು ಬಹಳ ಕಷ್ಟಪಟ್ಟು ಕಾಲುವೆ ತೋಡಿ ನೀರನ್ನೇನೋ ತರುತ್ತಾರೆ. ಆದರೆ ನೀರು ಈ ರಂಧ್ರಗಳ ಮೂಲಕ ಸೋರಿ ವ್ಯರ್ಥವಾಗುತ್ತದೆ. ಬೆಳೆಗೆ ನೀರು ಸಿಗದಂತಾಗುತ್ತದೆ. ನಮ್ಮ ಮನಸ್ಸಿನ ಆಸೆಗಳೂ ಈ ತೂತುಗಳಂತೆಯೇ. ನಮ್ಮ ಜಪ-ಸಾಧನೆಗಳ ಫಲವನ್ನೆಲ್ಲ ಇವು ಹೀರಿಬಿಡುತ್ತವೆ. ಯಾವಾಗ ಮನಸ್ಸು ಈ ಪ್ರಾಪಂಚಿಕ ಆಸೆಗಳಿಂದ ಮುಕ್ತವಾಗುತ್ತದೆಯೋ ಆಗ ಅದು ಸಹಜವಾಗಿಯೇ ಭಗವಂತನೆಡೆಗೆ ಸಾಗುತ್ತದೆ. ಭಕ್ತಿ-ಶ್ರದ್ಧೆ ಇದ್ದರೆ ಎಲ್ಲ ಅಡಚಣೆಗಳಿಂದಲೂ ಪಾರಾಗಬಹುದು."

ಶ್ರೀರಾಮಕೃಷ್ಣರು ವಿಷಯವನ್ನು ನಿರೂಪಿಸಿದ ರೀತಿಯಿಂದ ಹಾಜರಾ ಬಹಳವಾಗಿ ಪ್ರಭಾವಿತನಾದ. ಕೆಲದಿನಗಳ ಮೇಲೆ (೧೮೮೧ರಲ್ಲಿ) ಮತ್ತೆ ಅವರನ್ನು ನೋಡಲು ದಕ್ಷಿಣೇಶ್ವರಕ್ಕೆ ಬಂದ. ಆಗ ಅವರು ಇವನನ್ನು ವಿಶ್ವಾಸದಿಂದ ಬರಮಾಡಿಕೊಂಡು, ಚೆನ್ನಾಗಿ ನೋಡಿಕೊಂಡರು. ಅಲ್ಲದೆ ತಮ್ಮ ಕೊಠಡಿಯ ಬಳಿಯಲ್ಲೇ ಉಳಿದುಕೊಳ್ಳಲು ಅವಕಾಶ ಮಾಡಿಕೊಟ್ಟರು.

ಹಾಜರಾ ಮಧ್ಯವಯಸ್ಸಿನ ವ್ಯಕ್ತಿ; ಶ್ರೀರಾಮಕೃಷ್ಣರಿಗಿಂತ ಎಂಟ್ಹತ್ತು ವರ್ಷ ಚಿಕ್ಕವನು. ಮನೆಯಲ್ಲಿ ತಾಯಿ, ಹೆಂಡತಿ, ಮಗ—ಇವರೆಲ್ಲ ಇದ್ದರು. ಆದರೆ ಯಾವುದೋ ಘಳಿಗೆಯಲ್ಲಿ ಬೇಸತ್ತು ಮನೆಯನ್ನು ತ್ಯಜಿಸಿ ಬಂದುಬಿಟ್ಟಿದ್ದ. ಯಾವಾಗಲಾದರೊಮ್ಮೆ ಅವನಿಗೆ ಬುದ್ಧಿ ಸ್ವಲ್ಪ ತಿರುಗುವುದಿತ್ತು. ಆಗ ಅವನಿಗೆ ಜಪ ಧ್ಯಾನ ಮಾಡುವ, ಇಲ್ಲವೆ ಸಾಧುಗಳ ಸಹವಾಸ ಮಾಡುವ ಆಸೆಯಾಗುತ್ತಿತ್ತು. ಆದರದು ಕ್ಷಣಿಕ. ಆಮೇಲೆ ಅವನ ತಲೆಯಲ್ಲೆಲ್ಲ ಬೇರೆಯೇ ವ್ಯವಹಾರಗಳು. ಯಾವುದರಿಂದ ಎಷ್ಟು ಲಾಭ ಗಳಿಸಬಹುದು ಎಂಬ ಆಲೋಚನೆಗಳೇ. ಬಹುಶಃ ಅವನು ದಕ್ಷಿಣೇಶ್ವರದಲ್ಲಿ ನೆಲೆಯೂರಿದ್ದಕ್ಕೂ ಅದೇ ಮುಖ್ಯ ಕಾರಣ—ಧಾರ್ಮಿಕ ವ್ಯಕ್ತಿಯಂತೆ ಸೋಗು ಹಾಕುತ್ತಾ, ಅಲ್ಲಿಗೆ ಬರುವ ಶ್ರೀಮಂತರಿಂದ ಒಂದಷ್ಟು ಹಣ ಕೀಳುವುದು! ತಕ್ಕ ಮಟ್ಟಿನ ಆದಾಯವಿದ್ದುದರಿಂದಲೇ ಅವನು ದಕ್ಷಿಣೇಶ್ವರದಲ್ಲೇ ಬೇರುಬಿಟ್ಟು ಕುಳಿತ.

ಹಾಜರಾನಿಗೆ ಬಹಳ ಬುದ್ಧಿ; ಆದರೆ ವಕ್ರ! ಸಿಕ್ಕದ್ದನ್ನೆಲ್ಲ ಹೀಯಾಳಿಸುವ, ಕಂಡವರನ್ನೆಲ್ಲ ಉಡಾಯಿಸುವ ಹೀನ ಬುದ್ಧಿ. ಅದಕ್ಕೆ ತಕ್ಕಂತೆ ಉದ್ದನೆಯ ನಾಲಿಗೆ. ಆದರೆ ತನಗಿಂತ ಬುದ್ಧಿವಂತರನ್ನು, ಗಟ್ಟಿಗರನ್ನು ಎದುರುಹಾಕಿಕೊಳ್ಳದಿರುವ ಎಚ್ಚರಿಕೆಯೂ ಅವನಲ್ಲಿತ್ತು. ಹೆಚ್ಚಿನ ವಿದ್ಯಾಭ್ಯಾಸವೇನೂ ಆಗಿರಲಿಲ್ಲ. ಆದರೂ ಹೇಗೋ ಧರ್ಮ ಸಂಬಂಧವಾದ ವಿಷಯಗಳನ್ನು ಒಂದಿಷ್ಟು ತಿಳಿದುಕೊಂಡಿದ್ದ.

ಇವನದು ಲೆಕ್ಕಾಚಾರದ ಬುದ್ಧಿ ಎಂದು ಹಿಂದೆ ಹೇಳಿತಲ್ಲ, ಅವನ ಆಧ್ಯಾತ್ಮಿಕ ಸಾಧನೆಯಲ್ಲೂ ಅದು ಅಡಕವಾಗಿಯೇ ಇತ್ತು. ಹೇಗಾದರೂ ಸರಿಯೆ, ಒಂದೆರಡು ಸಿದ್ಧಿಗಳನ್ನು (ಎಂದರೆ ಅಲೌಕಿಕ ಶಕ್ತಿಗಳನ್ನು) ಇಲ್ಲವೆ ಧನಕನಕವನ್ನು ಪಡೆದುಕೊಂಡುಬಿಡಬೇಕು—ಇದೇ ಅವನ ಗುರಿ. "ಅಂತಹ ಹೀನ ಬಯಕೆಯನ್ನಿಟ್ಟುಕೊಂಡು ಸಾಧನೆ ಮಾಡಬಾರದಪ್ಪ" ಎಂಬ ಶ್ರೀರಾಮಕೃಷ್ಣರ ಕಳಕಳಿಯ ಬುದ್ಧಿವಾದ ಅವನಿಗೆ ಇಷ್ಟವಾಗಲಿಲ್ಲ. ಅಲ್ಲದೆ ಹಾಜರನೇನೂ ಸಾಮಾನ್ಯನಲ್ಲ. ಶ್ರೀರಾಮಕೃಷ್ಣರು ತಮ್ಮ ಮಾತುಗಳನ್ನು ಅರ್ಥಪಡಿಸಲು ಬಳಸುತ್ತಿದ್ದ ಉಪಮಾ ವಿಧಾನವನ್ನೇ ಪ್ರಯೋಗಿಸಿ ತನ್ನ

ವಾದವನ್ನು ಸಮರ್ಥಿಸಿಕೊಂಡ: "ನೋಡಿ, ವರ್ಷಋತು ಪ್ರಾರಂಭವಾಗಿ ಮಳೆ ಸುರಿಯಿತೆಂದರೆ ಗಂಗಾನದಿ ತುಂಬಿ ಹರಿಯುತ್ತದೆ. ಆಗ ಅದರೊಂದಿಗೇ ಇತರ ಸಣ್ಣ-ಪುಟ್ಟ ಕೆರೆ, ಕುಂಟೆ, ಕಾಲುವೆ—ಎಲ್ಲವೂ ತುಂಬಿಹೋಗುತ್ತದೆ. ಹಾಗೆಯೇ ಭಗವಂತನ ಕೃಪೆಯಾಯಿತೆಂದರೆ ಜ್ಞಾನ-ಭಕ್ತಿ-ಸಾಕ್ಷಾತ್ಕಾರ ಇವೆಲ್ಲ ದೊರೆತುಬಿಡುತ್ತವೆ. ಅಷ್ಟೇ ಅಲ್ಲ, ಐಶ್ವರ್ಯ, ಅಷ್ಟಸಿದ್ಧಿ—ಇವೂ ಜೊತೆಗೇ ಬಂದುಬಿಡುತ್ತವೆ!"

ಶ್ರೀರಾಮಕೃಷ್ಣರ ಬಳಿಗೆ ಬರಲಾರಂಭಿಸಿದ್ದ ತರುಣರಿಗೂ ಇವನು ಚುಚ್ಚಿಕೊಡುತ್ತಿದ್ದ, "ಏನ್ರಯ್ಯ ನೀವೆಲ್ಲ, ಸುಮ್ಮನೆ ಬಂದು ಹರಟೆ ಹೊಡೆದುಕೊಂಡು ಹೋಗುತ್ತೀರಿ! ಹಟ ಹಿಡಿದು ಅವರಿಂದ ಒಳ್ಳೊಳ್ಳೆ ಶಕ್ತಿಗಳನ್ನೆಲ್ಲ ಪಡೆದುಕೊಳ್ಳಿರಯ್ಯಾ!" ಎಂದು. ತಮ್ಮ ಶಿಷ್ಯರು ಈ ಗೃಧ್ರನ ಕೈಗೆ ಸಿಕ್ಕಿಬೀಳದಂತೆ ಶ್ರೀರಾಮಕೃಷ್ಣರು ವಿಶೇಷ ಗಮನ ಹರಿಸಬೇಕಾಗಿತ್ತು. ಇವನ ಪ್ರಚಂಡತನವನ್ನು ಕಂಡೇ ಅವರೊಮ್ಮೆ ಒಬ್ಬ ಭಕ್ತನಿಗೆ ಹೇಳುತ್ತಾರೆ:

"ಹಾಜರಾ ಅಂದರೆ ಏನೆಂದುಕೊಂಡೆ? ಇದು (ತಾವು) ಒಂದು ದೊಡ್ಡ ದರ್ಗಾ*ವಾದರೆ ಅವನು ಸಣ್ಣ ದರ್ಗಾ!"

ಅಂತೂ ಈ ಪ್ರತಾಪಚಂದ್ರ ಹಾಜರಾ, ದಕ್ಷಿಣೇಶ್ವರದಲ್ಲಿ ತನಗೊಂದು ಸ್ಥಾನವನ್ನು ನಿರ್ಮಿಸಿಕೊಂಡಿದ್ದ. ಅದ್ವೈತವಾದಿಯಂತೆ ಸೋಗು ಹಾಕಿಕೊಂಡು, ಆಗಾಗ 'ಸೋಽಹಂ, ಸೋಽಹಂ' ಘೋಷಣೆ ಮಾಡುತ್ತಿದ್ದ. ಎಷ್ಟೋ ಜನ ಕುತೂಹಲದಿಂದ ಅವನ ಬಳಿಗೆ ಹೋಗುತ್ತಿದ್ದರು. ಅದಾಗಲೇ ಅವನ ಪರಿಚಯವಾಗಿದ್ದ ಹಳಬರು ಅವನೊಂದಿಗೆ ಹರಟೆ ಕೊಚ್ಚಲು ನಿಲ್ಲುತ್ತಿದ್ದರು. ಶ್ರೀರಾಮಕೃಷ್ಣರ ತರುಣಶಿಷ್ಯರು ಅವನನ್ನು ಕರೆಯುತ್ತಿದ್ದುದು 'ಹಾಜರಾ ಮಹಾಶಯ' ಎಂದು. ಅದರಲ್ಲೂ ನರೇಂದ್ರನಿಗೂ ಹಾಜರಾನಿಗೂ ಬಿಡಿಸಲಾರದ ನಂಟು. ಈ ಬಗ್ಗೆ ನಾವು ಮುಂದೆ ವಿವರವಾಗಿ ನೋಡಲಿಕ್ಕಿದೆ.

ಹಾಜರಾ ತಮಗೆಷ್ಟೇ ಕಿರಿಕಿರಿ ಮಾಡಿದರೂ ಶ್ರೀರಾಮಕೃಷ್ಣರು ಸಿಟ್ಟಿಗೇಳುತ್ತಿದ್ದುದು ಅಪರೂಪ. ಅವನನ್ನು ನೋಡಿ ಅವರಿಗೆ ಒಂದೆಡೆ ಕನಿಕರ, ಇನ್ನೊಂದೆಡೆ ನಗು. ಅವನ ಮೇಲೆ ಕರುಣೆಯಿಟ್ಟು ಅವನನ್ನು ಸುಧಾರಿಸಲು ಶ್ರೀರಾಮಕೃಷ್ಣರು ಎಷ್ಟೋ ಬಗೆಯಾಗಿ ಪ್ರಯತ್ನಿಸಿದರು. ಆದರೆ ಅವರ ಕೃಪಾಜ್ಯೋತಿ ತನ್ನನ್ನು ಸೋಂಕದಂತೆ ಅವನು ಭದ್ರವಾದ ಮುಸುಕು ಹಾಕಿಕೊಂಡರೆ?

ಅವನದು ಅತಿಯಾದ ಮಡಿವಂತಿಕೆ; ರೀತಿ-ರಿವಾಜುಗಳಲ್ಲಿ, ವಿಧಿ-ನಿಯಮಗಳಲ್ಲಿ ಇನ್ನಿಲ್ಲದ ವಿಶ್ವಾಸ. ಆದರೆ ಈ ಬಾಹ್ಯಕರ್ಮಗಳ ನಡುವೆ ಭಕ್ತಿಗೆಲ್ಲಿ ಸ್ಥಾನ! ಶ್ರೀರಾಮಕೃಷ್ಣರು ಹೇಳುತ್ತಿದ್ದರು:

"ಅಯ್ಯಾ, ಹಾಜರಾ, ಇಂತಹ ಮಡಿವಂತಿಕೆ ಮಾಡುತ್ತಿದ್ದರೆ ಜ್ಞಾನ ದೊರೆಯುವುದಿಲ್ಲಪ್ಪ. ಈ ಆಚರಣೆಗಳನ್ನೆಲ್ಲ ಇಟ್ಟುಕೊ—ಆದರೆ ಎಷ್ಟು ಬೇಕೋ ಅಷ್ಟೇ. ಅತಿಯಾಗಿ ಬೆಳೆಸಿಕೊಂಡು ಹೋಗಬೇಡ."

ಆದರೆ ಅವನು ಕೇಳಬೇಕಲ್ಲ! ತಾನು ಬದಲಾಗುವುದಿರಲಿ, ಅವನು ಶ್ರೀರಾಮಕೃಷ್ಣರನ್ನೇ ಆಕ್ಷೇಪಿಸಿದ. ಅವರು ವಿಧ್ಯುಕ್ತ ಪೂಜಾದಿಗಳನ್ನು ಮಾಡದಿರುವುದು, ಜಪ

---

*ದರ್ಗಾ—ಮುಸಲ್ಮಾನರ ಪ್ರಾರ್ಥನಾ ಸ್ಥಳ.

ಧ್ಯಾನ ಮಾಡದಿರುವುದು, ಹಣೆಯ ಮೇಲೆ ವಿಭೂತಿ ಇತ್ಯಾದಿಗಳಾವುದನ್ನೂ ಧರಿಸದಿರುವುದು—ಇದನ್ನೆಲ್ಲ ನೋಡಿ ಬೇಸತ್ತು ಅವನೇ ಒಂದು ದಿನ ಹೇಳಿದ:

"ನೋಡಿ, ಇದೆಲ್ಲ ಒಳ್ಳೆಯದಲ್ಲ. ನೀವು ಹೀಗೇ ಮಾಡುತ್ತಿದ್ದರೆ, ಜನ ನಿಮಗೆ ಗೌರವ ಕೊಡುವುದಿಲ್ಲ. ಆದ್ದರಿಂದ ಏನಾದರೂ ಇಂಥದನ್ನೆಲ್ಲ ಸ್ವಲ್ಪ ಮಾಡಿ. ಹೋಗಲಿ, ಬೇರೇನೂ ಮಾಡದಿದ್ದರೂ ನನ್ನ ತರಹ ಒಂದಷ್ಟು ಜಪ ಮಾಡಿ—ಕಡೇಪಕ್ಷ ಜನಗಳ ಸಮಾಧಾನಕ್ಕೆ. ಎಷ್ಟೊಂದು ಜನ ಬರುತ್ತಿದ್ದಾರೆ ಇಲ್ಲಿಗೆ; ನೀವು ಮಣಿಸರ ಹಿಡಿದು ಜಪವಾದರೂ ಮಾಡುತ್ತಿದ್ದರೆ, 'ಪರವಾಯಿಲ್ಲ, ಏನೋ ಸ್ವಲ್ಪ ಸಾಧನೆ ಮಾಡುತ್ತಿದ್ದಾರೆ' ಎಂದು ಅವರಿಗೊಂದು ಸಮಾಧಾನವಿರುತ್ತದೆ."

ಶ್ರೀರಾಮಕೃಷ್ಣರಿಗೆ ನಗು ತಡೆಯಲಾಗಲಿಲ್ಲ. "ಓ ರಾಮಲಾಲ್, ಹರೀಶ, ಎಲ್ಲ ಬನ್ನಿ!" ಎಂದು ಕೂಗಿ ಕರೆದು ಅವನೆಂದುದನ್ನು ಹೇಳಿದರು. ಅದನ್ನು ಕೇಳಿ ಎಲ್ಲರೂ ಎದ್ದುಬಿದ್ದು ನಕ್ಕರು.

ಹಾಜರಾ ಆಷಾಢಭೂತಿಯಷ್ಟೇ ಅಲ್ಲ, ಒಣಜಂಬದ ಮನುಷ್ಯ ಕೂಡ. ಅವನು ತಾನೊಬ್ಬ ಮಹಾ ಜ್ಞಾನಿ ಎಂದೇ ನಂಬಿಕೊಂಡಿದ್ದ! ತನ್ನದೇ ಆದ ಒಂದು ಸಾಧನಾ ಮಾರ್ಗ ಇದೆಯೆಂದೂ ಹೇಳಿಕೊಳ್ಳುತ್ತಿದ್ದ. ಶ್ರೀರಾಮಕೃಷ್ಣರೇಕೊ ಇದನ್ನು ಒಪ್ಪಿದಂತೆ ಕಾಣದ್ದರಿಂದ ಅವನೊಮ್ಮೆ ಹೇಳುತ್ತಾನೆ: "ನೀವೀಗ ನನ್ನನ್ನು ಲಕ್ಷಿಸದಿರಬಹುದು. ಆದರೆ ನೋಡಿಕೊಳ್ಳಿ, ಮುಂದೆ ನೀವಾಗಿಯೇ ನನ್ನನ್ನು ಹುಡುಕಿಕೊಂಡು ಬರಬೇಕಾಗುತ್ತದೆ!"

ಅವಕಾಶ ಸಿಕ್ಕಾಗಲೆಲ್ಲ ಹಾಜರಾ ಸಾರುತ್ತಿದ್ದ, "ಈ ಜಗತ್ತು ಕೇವಲ ಮಾಯೆ, ಕನಸಿನಂತೆ ಅಸತ್ಯ" ಎಂದು. ಆದರೆ ಅವನ ಯಾವೊಂದು ಕೃತಿಯಲ್ಲೂ ಆ ಮಾತಿನ ಸತ್ಯತೆ ವ್ಯಕ್ತವಾಗುತ್ತಿರಲಿಲ್ಲ! ಎಲ್ಲಿ ಯಾರಿಂದ ಹಣ ಕೀಳುವುದು ಎಂಬ ಯೋಚನೆಯೇ ತುಂಬಿದ್ದರೆ, ಅದು ಹೇಗೆ ತಾನೆ ವ್ಯಕ್ತವಾದೀತು? ಅವನಿಗೋ ಊರಿನಲ್ಲಿ ಸಂಸಾರವಿತ್ತು; ಜೊತೆಗೆ ಒಂದೂವರೆ ಸಾವಿರ ರೂಪಾಯಿಗಳ ಸಾಲ! ಅವನ ವರ್ತನೆಯನ್ನು ಶ್ರೀರಾಮಕೃಷ್ಣರು ಚೆನ್ನಾಗಿ ಗುರುತಿಸಿಟ್ಟಿದ್ದರು: "ಹಾಜರಾ ಜಪ-ತಪ ಮಾಡುತ್ತಲೇ ಇರುತ್ತಾನೆ; ಆದರೆ ಅದರ ಮಧ್ಯೆ ದಳ್ಳಾಳಿ ಕೆಲಸ ಮಾಡುವ ಯಾವ ಅವಕಾಶವನ್ನೂ ಬಿಡುವುದಿಲ್ಲ!"

ಒಮ್ಮೆ ಒಬ್ಬ ಗೋಸ್ವಾಮಿ—ವೈಷ್ಣವಸಾಧು—ದಕ್ಷಿಣೇಶ್ವರಕ್ಕೆ ಬಂದಿದ್ದ; ಆತನಿಗೆ ಅಲ್ಲೇ ಒಂದೆರಡು ದಿನ ಉಳಿದುಕೊಳ್ಳುವ ಉದ್ದೇಶವಿತ್ತು. ಶ್ರೀರಾಮಕೃಷ್ಣರು ಅವನನ್ನು ಬಹಳ ವಿಶ್ವಾಸದಿಂದ ಆದರಿಸಿ ತಮ್ಮ ಬಳಿಯಲ್ಲಿ ಇರಿಸಿಕೊಂಡರು. ಆದರೆ ಹಾಜರನಿಗೇಕೋ ಸಂಕಟ. ಅವನು ಬಂದು ಶ್ರೀರಾಮಕೃಷ್ಣರಿಗೆ, "ಆ ಗೋಸ್ವಾಮಿಯನ್ನು ದೇವಸ್ಥಾನದ ಮ್ಯಾನೇಜರ್ ಬಳಿಗೆ ಕಳಿಸಿಬಿಡಿ" ಎಂದ. ಅವನೇಕೆ ಹಾಗೆ ಹೇಳುತ್ತಾನೆಂಬುದು ಅವರಿಗೆ ಕೂಡಲೇ ಹೊಳೆಯಿತು. 'ಇವನ್ಯಾರೋ ಬಂದ ಇಲ್ಲಿಗೆ, ಗೋಸ್ವಾಮಿಯಂತೆ ಗೋಸ್ವಾಮಿ! ಅನಾಮಧೇಯ! ಇವನಿಲ್ಲಿದ್ದರೆ ನನ್ನ ಪಾಲಿನ ಆಹಾರಕ್ಕೆ ಕಡಿತ ಬೀಳುವುದೇ ಖಂಡಿತ. ಇಂಥವರೊಂದಿಗೆಲ್ಲ ಊಟ ಹಂಚಿಕೊಳ್ಳುವ ದುರ್ಗತಿ ಬಂತೆ ನನ್ನಂಥ ಜ್ಞಾನಿಗೆ? ಈ ರಾಮಕೃಷ್ಣರನ್ನು ನೋಡಿದರೆ ಇವನನ್ನು ಉಪಚಾರ ಮಾಡಿ ಇಲ್ಲಿಯೇ ಇರಿಸಿಕೊಳ್ಳುತ್ತಿದ್ದಾರೆ. ಮೊದಲು ಇವನನ್ನು ಇಲ್ಲಿಂದ ಸಾಗಹಾಕಬೇಕು'—ಇದು ಹಾಜರಾನ ಮನಸ್ಸಿನಲ್ಲಿ ಸುಳಿದ ದುರಾಲೋಚನೆ. ಶ್ರೀರಾಮ

ಕೃಷ್ಣರಿಗಿದು ಗೋಚರವಾಗದಿದ್ದೀತೆ? ತಕ್ಷಣ ಅವರು ಛೀಮಾರಿ ಹಾಕಿದರು:

"ಎಲಾ ದುರುಳ! ಅವನು ಗೋಸ್ವಾಮಿ ಎಂಬ ಕಾರಣಕ್ಕೆ ನಾನು ಕೂಡ ಸಾಷ್ಟಾಂಗ ನಮಸ್ಕಾರ ಮಾಡುತ್ತೇನೆ. ಅಂಥದರಲ್ಲಿ, ಇಷ್ಟೊಂದು ಪ್ರಾಪಂಚಿಕ ಜೀವನವನ್ನು ನಡೆಸಿ, ಕಾಮ-ಕಾಂಚನವನ್ನು ಅನುಭವಿಸಿರುವ ನೀನು ಅವನನ್ನು ಹೀಗೆ ಕಡೆಗಣಿಸುವೆಯಾ? ನಾಚಿಕೆಯಾಗುವುದಿಲ್ಲವೆ ನಿನಗೆ?"

ಹಾಜರಾನಿಗೆ ಆಗಾಗ ಊರಿಂದ ಕರೆ ಬರುತ್ತಲೇ ಇತ್ತು. ಅವನ ಮುದಿತಾಯಿಗೆ ಅನಾರೋಗ್ಯವಾಗಿದ್ದುದೂ ಅದಕ್ಕೊಂದು ಕಾರಣ. ಕಡೆಗೊಂದು ದಿನ ಅವಳೇ ತನ್ನ ಮೊಮ್ಮಗನೊಂದಿಗೆ ದಕ್ಷಿಣೇಶ್ವರಕ್ಕೆ ಬಂದು, ಮಗನನ್ನು ಒಮ್ಮೆ ಊರಿಗೆ ಬಂದುಹೋಗುವಂತೆ ಇನ್ನಿಲ್ಲದಹಾಗೆ ಕೇಳಿಕೊಂಡಳು. 'ಆಕೆ ಕಣ್ಣು ಕುರುಡಾಗುವಂತೆ ಅತ್ತಳು' ಎನ್ನುತ್ತಾರೆ ಶ್ರೀರಾಮಕೃಷ್ಣರು. ಆದರೂ ಇವನು ಕಲ್ಲಿನಂತೆ ಕುಳಿತುಬಿಟ್ಟ. ಆಕೆಯನ್ನು ನೋಡಿ ಶ್ರೀರಾಮಕೃಷ್ಣರಿಗೆ ಕಣ್ಣಲ್ಲಿ ನೀರೇ ಬಂತು. ಅವರೂ ಅವನಿಗೆ ಎಷ್ಟೆಷ್ಟೋ ಹೇಳಿದರು. ಆದರೇನೂ ಪ್ರಯೋಜನವಾಗಲಿಲ್ಲ.

ಅವನ ತಾಯಿ ಊರಿಗೆ ಹೊರಟುಹೋದ ಮೇಲೆ ಶ್ರೀರಾಮಕೃಷ್ಣರು ಅವನಿಗೆ ಮತ್ತೆ ಹೇಳಿದರು: "ನೋಡು, ತಾಯಿಯನ್ನು ಸಂತೋಷವಾಗಿರಿಸಬೇಕಾದ್ದು ನಿನ್ನ ಧರ್ಮ. ಎಲ್ಲಿಯವರೆಗೆ ನಿನಗೆ, ನಿನ್ನ ಶರೀರದ ಕಡೆಗೆ ಗಮನ ಕೊಡಬೇಕಾಗಿದೆ ಅಂತ ಅನ್ನಿಸುತ್ತದೆಯೋ ಅಲ್ಲಿಯವರೆಗೂ ನೀನು ತಾಯಿಯನ್ನು ನೋಡಿಕೊಳ್ಳಲೇ ಬೇಕು."

ಕೊನೆಗೆ ಹಾಜರಾ ಗೊಣಗಿಕೊಂಡೇ ಹೊರಟ. ಆದರೆ ಹೋದದ್ದು ಮಾತ್ರ ತನ್ನ ಊರಿಗಲ್ಲ, ಬೇರೆ ಎಲ್ಲೆಲ್ಲಿಗೋ! ಮಾತ್ರವಲ್ಲ, ಅವನು ಹೋದ ಕಡೆಯಲ್ಲೆಲ್ಲ ತನ್ನ ಪ್ರತಿಷ್ಠೆ ತೋರಿಸಿ, ಯಾರಯಾರೊಂದಿಗೊ ಜಗಳವಾಡಿಕೊಂಡು ವಾಪಸು ಬಂದ. ಈ ವಿಷಯವೆಲ್ಲ ಶ್ರೀರಾಮಕೃಷ್ಣರಿಗೆ ಆಮೇಲೆ ಭಕ್ತರ ಮೂಲಕ ತಿಳಿಯಿತು. ಅತ್ತ ಅವನ ತಾಯಿ, ಕಡೆಗೂ ಮಗ ಮನೆಗೆ ಬಾರದ ದುಃಖದಲ್ಲೇ ಸತ್ತಳು. ಇದನ್ನೆಲ್ಲ ಕೇಳಿ ಶ್ರೀರಾಮಕೃಷ್ಣರಿಗೆ ತೀರಾ ರೋಸಿಹೋಗಿ, ಭಾವಾವಸ್ಥೆಯಲ್ಲಿ ಜಗನ್ಮಾತೆಯೊಂದಿಗೆ ಜಗಳವಾಡಿದರು: "ಅಮ್ಮಾ, ಇಂಥಾ ಅಯೋಗ್ಯರನ್ನು, ಸ್ವೇಚ್ಛಾಚಾರಿಗಳನ್ನು ಇಲ್ಲಿಗೇಕೆ ತಂದುಹಾಕುತ್ತೀಯ? ನನಗೆ ಅಷ್ಟೊಂದು ಮಾಡಲು ಸಾಧ್ಯವಿಲ್ಲ. ಒಂದು ಸೇರು ಹಾಲಿಗೆ ಒಂದು ಪಾವು ನೀರು ಸೇರಿದ್ದರೂ ಹೇಗೋ ಮಾಡಿಯೇನು. ಸೌದೆಯನ್ನು ಉರಿಗೆ ತಳ್ಳಿತಳ್ಳಿ, ಊದಿಊದಿ ಹೊಗೆಯಿಂದ ನನ್ನ ಕಣ್ಣೆಲ್ಲ ಉರಿಯುತ್ತಿದೆ. ನಿನಗೆ ಬೇಕಿದ್ದರೆ ನೀನೇ ಬಂದು ಏನಾದರೂ ಮಾಡು. ನನಗಿನ್ನು ಈ ಊದುವ ಕೆಲಸ ಆಗುವುದೇ ಇಲ್ಲ. ಇಂಥವರನ್ನು ಇನ್ನು ಮುಂದೆ ಇಲ್ಲಿಗೆ ಕಳಿಸಬೇಡ!"

ಶ್ರೀರಾಮಕೃಷ್ಣರ ದೃಷ್ಟಿಯಲ್ಲಿ ಹಾಜರಾನಂಥವರು ನೀರು ಬೆರೆತ ಹಾಲು. ಕೋವಾ ತಯಾರಿಸಬೇಕಾದರೆ ಹಾಲನ್ನು ಚೆನ್ನಾಗಿ ಕುದಿಸಿ ಬತ್ತಿಸಬೇಕು. ಗಟ್ಟಿ ಹಾಲನ್ನು ಬತ್ತಿಸಬೇಕಾದರೇ ಬಹಳ ಶ್ರಮ. ಇನ್ನು ನೀರು ಬೆರೆತಿದ್ದರೆ! ಅದೂ ಹಾಜರಾನಂಥವರು ಬರೀ ನೀರುಹಾಲು! ಶ್ರೀರಾಮಕೃಷ್ಣರು ಈ ನೀರುಹಾಲನ್ನು ಬತ್ತಿಸಿ ಕೋವಾ ತಯಾರಿಸುವ ಕೆಲಸವನ್ನು ಜಗನ್ಮಾತೆಗೇ ಬಿಟ್ಟುಕೊಡುತ್ತಿದ್ದಾರೆ!

ಇನ್ನೊಮ್ಮೆ ಈ ಹಾಜರಾ ಯಾವುದೋ ತಾತ್ತ್ವಿಕ ವಿಚಾರದಲ್ಲಿ ತನ್ನದೇ ಆದ ವಾದವನ್ನು ಮಂಡಿಸಿ ಶ್ರೀರಾಮಕೃಷ್ಣರನ್ನು ತರ್ಕಕ್ಕೆಳೆದ. ಶ್ರೀರಾಮಕೃಷ್ಣರು "ಅದು ಹಾಗಲ್ಲ" ಎಂದು ಒಂದೆರಡು ಬಾರಿ ಹೇಳಿ ನೋಡಿದರು. ಆದರೆ ಅವನು ತನ್ನ

ಹಟಕ್ಕೇ ಅಂಟಿಕೊಂಡ. ಕಡೆಗವರು ಬೇಸತ್ತು, ಮತ್ತೆ ಮಾತನಾಡದೆ ಸುಮ್ಮನಾದರು. ಆಮೇಲೆ ಮಾತೆಯ ಬಳಿ ಮೊರೆಯಿಟ್ಟರು:

"ಅಮ್ಮಾ, ನೋಡು, ಅವನು ನನ್ನ ಬುದ್ಧಿಯನ್ನೇ ಕೆಡಿಸಲು ನೋಡುತ್ತಿದ್ದಾನೆ. ಅವನಿಗೆ ನೀನು ಒಂದೋ, ಸರಿಯಾದ ತಿಳಿವಳಿಕೆ ಕೊಡು; ಇಲ್ಲದಿದ್ದರೆ ಅವನನ್ನು ಇಲ್ಲಿಂದ ಕಳಿಸಿಬಿಡು. ಎರಡರಲ್ಲೊಂದು ಮಾಡಲೇಬೇಕು ನೀನು." ಮರುದಿನ ಅವನು ಬಂದು, "ಹೌದು, ನೀವು ಹೇಳಿದ್ದೇ ಸರಿ" ಎಂದು ತಪ್ಪೊಪ್ಪಿಕೊಂಡ.

ಈ ವಿಷಯವನ್ನು ಅವರು ತಮ್ಮ ಭಕ್ತರ ಮುಂದೆ ಹೇಳಿಕೊಂಡಾಗ ಅವರಲ್ಲೊಬ್ಬ ನಗುತ್ತ ಕೇಳುತ್ತಾನೆ: "ಅವನು ಹಾಗೆ ವಾದಿಸಿದ್ದರಿಂದ ನಿಮಗೆ ನಿಜಕ್ಕೂ ಅಷ್ಟು ಕಷ್ಟವಾಯಿತೆ ?" ಆಗ ಶ್ರೀರಾಮಕೃಷ್ಣರೆನ್ನುತ್ತಾರೆ: "ನೋಡು, ನಾನೀಗ ಬೇರೊಂದು ಭಾವದಲ್ಲಿದ್ದೇನೆ. ಕೂಗಾಡುತ್ತ ಜನರೊಂದಿಗೆ ವಾದ ಮಾಡುವ ಸ್ಥಿತಿಯಲ್ಲಿಲ್ಲ."

ಒಮ್ಮೆ ಶ್ರೀರಾಮಕೃಷ್ಣರು ಒಬ್ಬ ಭಕ್ತನಿಗೆ ಸ್ವಲ್ಪ ತಮಾಷೆಯಾಗಿ ಹೇಳುತ್ತಾರೆ:

"ಆಗೊಮ್ಮೆ ಈಗೊಮ್ಮೆ ಅವನು ನನಗೆ ಪಾಠ ಕಲಿಸುತ್ತಿರುತ್ತಾನೆ. ಅವನು ಅತಿಯಾಗಿ ಹೇಳಲು ಬಂದಾಗ ನಾನು ಬೈದುಬಿಡುತ್ತೇನೆ. ಆದರೆ ಆಮೇಲೆ ನಾನು ಸೊಳ್ಳೆಪರದೆಯೊಳಗೆ ಮಲಗಿಕೊಂಡಾಗ, ನನ್ನ ಮನಸ್ಸಿನಲ್ಲಿ ಅದೇ ಕೊರೆಯುತ್ತಿರುತ್ತದೆ, ಅವನನ್ನು ಬೈದುಬಿಟ್ಟೆನಲ್ಲಾ ಅಂತ. ಕಡೆಗೆ ಎದ್ದುಹೋಗಿ ಅವನಿಗೆ ಕೈಮುಗಿದು ಬರುತ್ತೇನೆ. ಆಗಲೇ ಮನಸ್ಸಿಗೆ ನೆಮ್ಮದಿ!"

ಇಷ್ಟೆಲ್ಲ ಆದರೂ ಶ್ರೀರಾಮಕೃಷ್ಣರು ಅವನಂಥವನನ್ನೂ ತಮ್ಮ ಅಹೈತುಕ ಕರುಣೆಯಿಂದ ವಂಚಿತನನ್ನಾಗಿಸಲಿಲ್ಲ. ಒಂದು ದಿನ ಅವರು ಆತನಿಗೆ ಹೇಳುತ್ತಾರೆ: "ಮೊನ್ನೆ ದಿನ ನಾನು ಆ ಕಡೆಯಿಂದ ಬರುವಾಗ, ನೀನು ಜಪ ಮಾಡುತ್ತ ಕುಳಿತಿರುವುದನ್ನು ಕಂಡೆ. ಜಗನ್ಮಾತೆಗೆ ಹೇಳಿದೆ—'ಅಮ್ಮಾ, ಇವನೆಂಥ ಸಣ್ಣ ಬುದ್ಧಿಯವನು! ಯಾರ್‍ಯಾರು ಇಲ್ಲಿಗೆ ಬರುತ್ತಾರೋ ಅವರಿಗೆಲ್ಲ ಆಧ್ಯಾತ್ಮಿಕ ಜಾಗೃತಿ ತಾನಾಗಿಯೇ ಆಗುತ್ತದೆ. ಅಂಥದರಲ್ಲಿ ಇವನು ಇಲ್ಲಿಯೇ ಇದ್ದುಕೊಂಡೂ ಜಪಮಾಲೆ ಹಿಡಿದು ಕುಳಿತುಕೊಳ್ಳುತ್ತಾನಲ್ಲ!' ಅಂತ."

ಮತ್ತೊಮ್ಮೆ ಹೇಳುತ್ತಾರೆ:

"ನೀನು ಮಾಡುತ್ತಿರುವುದೇನೋ (ಜಪ, ಧ್ಯಾನ ಇತ್ಯಾದಿ) ತತ್ತ್ವಶಃ ಸರಿಯಾಗಿದೆ. ಆದರೆ ಅದರೊಂದಿಗೆ ಬೇರೆಯವರ ಟೀಕೆ-ನಿಂದೆ ಮಾಡುತ್ತಿರುತ್ತೀಯಲ್ಲ, ಅದು ಮಾತ್ರ ಸರಿಯಲ್ಲ. ಅದನ್ನೆಲ್ಲ ನಿಲ್ಲಿಸಿಬಿಡು. ಯಾರಲ್ಲಿಯೂ ದೋಷ ಕಂಡುಹಿಡಿಯಲು ಹೋಗಬೇಡ—ಒಂದು ಹುಳದಲ್ಲಿಯೂ ಕೂಡ. ಭಗವಂತನಲ್ಲಿ ಭಕ್ತಿಗಾಗಿ ಯಾಚಿಸುವಂತೆಯೇ, 'ಇನ್ನೊಬ್ಬರಲ್ಲಿ ತಪ್ಪು ಹುಡುಕುವ ಬುದ್ಧಿ ನನಗೆ ಬಾರದಿರಲಿ' ಎಂದೂ ಪ್ರಾರ್ಥಿಸಿಕೊ."

ಹೀಗೆಂದಾಗ ಆ ಘಳಿಗೆಯಲ್ಲಿ ಹಾಜರಾನೊಳಗೆ ಯಾವುದೋ ಸದ್ಬುದ್ಧಿ ಉದಿಸಿತು; ಕೇಳಿದ: "ಆತ ನಿಜಕ್ಕೂ ನನ್ನ ಪ್ರಾರ್ಥನೆಯನ್ನು ಆಲಿಸುತ್ತಾನೆಯೆ ?"

"ಹೌದು! ನೂರು ಸಲ ಹೇಳುತ್ತೇನೆ, ಹೌದು! ನಿನ್ನ ಪ್ರಾರ್ಥನೆ ಪ್ರಾಮಾಣಿಕವಾದದ್ದಾದರೆ ಅವನು ಅದನ್ನು ಕೇಳದಿರಲು ಸಾಧ್ಯವೇ ಇಲ್ಲ. ಜನರು ತಮ್ಮ ಹೆಂಡತಿ ಮಕ್ಕಳಿಗಾಗಿ ಅಳುವಂತೆ ದೇವರಿಗಾಗಿ ಅಳುವುದುಂಟೆ? ನಮ್ಮೂರಿನಲ್ಲಿ ಒಬ್ಬನ ಹೆಂಡತಿ ಕಾಯಿಲೆ ಬಿದ್ದಳು. ಆಗ ಅವನು, ಎಲ್ಲಿ ಈಕೆ ಸತ್ತೇ ಹೋಗಿಬಿಡುತ್ತಾಳೋ

ಎಂದು ಹೆದರಿ ನಡುಗಲಾರಂಭಿಸಿದ. ಇನ್ನೇನು ಮೂರ್ಛೆ ಬೀಳುವಂತಾದ. ಆ ರೀತಿ ಯಾರಾದರೂ ದೇವರಿಗಾಗಿ ವ್ಯಾಕುಲ ಪಡುತ್ತಾರೆಯೆ ?''

ಹಾಜರಾನಿಗೆ ಬಹಳ ಸಂತೋಷವಾಯಿತೆಂದು ಕಾಣುತ್ತದೆ. ಕೃತಜ್ಞತೆಯಿಂದ ಶ್ರೀರಾಮಕೃಷ್ಣರ ಪಾದಧೂಳಿಯನ್ನು ತೆಗೆದುಕೊಳ್ಳಲು ಬಾಗಿದ. ಇದನ್ನು ನಿರೀಕ್ಷಿಸಿರದಿದ್ದ ಅವರು ಸರಕ್ಕನೆ ತಮ್ಮ ಕಾಲನ್ನು ಹಿಂದಕ್ಕೆಳೆದುಕೊಂಡು, "ನನಗಿದೆಲ್ಲ ಇಷ್ಟವಾಗುವುದಿಲ್ಲ'' ಎಂದರು.

ಹಾಜರಾ (ದೈನ್ಯದಿಂದ): "ಯಾರು ನನ್ನನ್ನು ಕರುಣೆಯಿಂದ ತಮ್ಮ ಆಶ್ರಯದಲ್ಲಿಟ್ಟುಕೊಂಡಿದ್ದಾರೋ ಅವರ ಪಾದವನ್ನು ಸ್ಪರ್ಶಿಸಬಾರದೆ ?''

ಶ್ರೀರಾಮಕೃಷ್ಣರು: "ನೀನು ದೇವರನ್ನು ಸಂತೋಷಗೊಳಿಸು, ಸಾಕು. ಆಗ ಎಲ್ಲರೂ ತಾವಾಗಿಯೇ ಸಂತುಷ್ಟರಾಗುತ್ತಾರೆ. 'ತಸ್ಮಿಂಸ್ತುಷ್ಟೇ ಜಗತ್ತುಷ್ಟಂ'—ಅವನನ್ನು ತುಷ್ಟಿಗೊಳಿಸಿದರೆ ಜಗತ್ತೇ ತುಷ್ಟಿಗೊಳ್ಳುತ್ತದೆ! ಶ್ರೀಕೃಷ್ಣಪರಮಾತ್ಮನು ದ್ರೌಪದಿಯ ಪಾತ್ರೆಯಲ್ಲಿದ್ದ ಒಂದು ಅಗುಳು ಅನ್ನವನ್ನು ತಿಂದು 'ನಾನು ತೃಪ್ತನಾದೆ' ಎಂದುಬಿಟ್ಟ. ತಕ್ಷಣವೇ ಸಕಲ ಜೀವಕೋಟಿಗಳೂ ಹೊಟ್ಟೆ ತುಂಬಿದಂತೆ ಸಂತೃಪ್ತವಾದುವು.''

ಶ್ರೀರಾಮಕೃಷ್ಣರ ಆದೇಶವನ್ನು ಹಾಜರಾ ಶ್ರದ್ಧೆಯಿಂದಲೇ ಸ್ವೀಕರಿಸಿದ. ಆದರೆ ಅವನ ವರ್ತನೆಯಲ್ಲೇನೂ ಅಂಥಾ ವ್ಯತ್ಯಾಸವಾದಂತೆ ಯಾರಿಗೂ ಕಾಣಲಿಲ್ಲ. ಮಾತ್ರವಲ್ಲ, ಶ್ರೀರಾಮಕೃಷ್ಣರಿಗೆ ಅವನಿಂದ ಕಿರಿಕಿರಿ ಬಹಳ ಹೆಚ್ಚಾಯಿತು. ಅವರು ಬಹಳ ಎಚ್ಚರಿಕೆಯಿಂದ ತಮ್ಮ ಒಬ್ಬೊಬ್ಬ ಶಿಷ್ಯನಿಗೂ ವೈಯಕ್ತಿಕ ಶಿಕ್ಷಣ ನೀಡಿ ಸಿದ್ಧಗೊಳಿಸುತ್ತಿದ್ದರೆ, ಇವನು ಮಧ್ಯೆಮಧ್ಯೆ ಇಲ್ಲಸಲ್ಲದ ವಿಚಾರಗಳನ್ನೆಲ್ಲ ಆ ಶಿಷ್ಯರ ತಲೆಗೆ ತುಂಬುವುದು! ಇದನ್ನು ಮಾತ್ರ ಶ್ರೀರಾಮಕೃಷ್ಣರು ಸಹಿಸದಾದರು. ಎಷ್ಟು ಹೇಳಿದರೂ ಅವನು ತನ್ನ ಈ ಚಟವನ್ನು ಬಿಡದಿದ್ದಾಗ ಅವರಿಗೆ ಬೇಜಾರಾಗಿಹೋಯಿತು. ಜಗನ್ಮಾತೆಯನ್ನು ಕೇಳಿಕೊಂಡರು: "ಅಮ್ಮಾ, ಹಾಜರಾ ಒಬ್ಬ ಧೂರ್ತನಾಗಿದ್ದರೆ, ಕಪಟಿಯಾಗಿದ್ದರೆ, ಅವನನ್ನು ಇಲ್ಲಿಂದ ಓಡಿಸಿಬಿಡಮ್ಮ!''

ಇದೊಂದು ಅತ್ಯಂತ ಸ್ವಾರಸ್ಯದ ಪ್ರಸಂಗ. ಶ್ರೀರಾಮಕೃಷ್ಣರು ಇಷ್ಟಪಟ್ಟಿದ್ದರೆ, ಹಾಜರನನ್ನು ತಾವೇ ಗದರಿಸಿ ಓಡಿಸಿಬಿಡಬಹುದಾಗಿತ್ತು. ಅಥವಾ, ಮಥುರನ ಮಗ ತ್ರೈಲೋಕ್ಯನಿಗೆ ಒಂದು ಮಾತು ಹೇಳಿದ್ದಹೂ ಸಾಕಾಗುತ್ತಿತ್ತು. ಆದರೆ ಅವರು ಅದೊಂದನ್ನೂ ಮಾಡದೆ ಜಗನ್ಮಾತೆಯ ಮುಂದೆಯೇ ತಮ್ಮ ಮೊರೆಯನ್ನು ಸಲ್ಲಿಸುತ್ತಿದ್ದಾರೆ! ಅದೂ ಹೇಗೆ ? 'ಅವನು ಧೂರ್ತನಾಗಿದ್ದರೆ', 'ಅವನು ಕಪಟಿಯಾಗಿದ್ದರೆ' ಎಂಬ ಕೊಸರು ಸೇರಿಸಿ! ಅವನೆಂಥವನೆಂಬುದು ಅವರಿಗೇನು ತಿಳಿಯದೆ ? ತಿಳಿಯದೆ ಏನು! ಆದರೆ ಅವರು ಸ್ವಪ್ನದಲ್ಲಿಯೂ ಯಾರಿಗೂ ಕೇಡನ್ನು ಬಯಸಲಾರರು. ಪ್ರತೀಕಾರದ ಆಲೋಚನೆ ಮಾಡಲಾರರು. ಆದ್ದರಿಂದಲೇ ಅವರು ಆ ಬಗೆಯ ಪ್ರಾರ್ಥನೆಯನ್ನು ಸಲ್ಲಿಸಿದುದು.

ಇದಾದ ಮೇಲೆ ಮತ್ತೊಂದು ತಮಾಷೆ ನಡೆಯಿತು. ತಾವು ದೇವಿಯನ್ನು ಬೇಡಿಕೊಂಡ ವಿಷಯವನ್ನು ಅವರು ಹಾಜರನ ಬಳಿಯಲ್ಲೂ ಮುಚ್ಚಿಡಲಿಲ್ಲ. ಹಾಜರನಿಗೆ ಅದನ್ನು ಕೇಳಿ ಒಳಗೊಳಗೇ ಭಯವಾಗಿರಬೇಕು! ಆದರೆ ಕೆಲವು ದಿನ ಏನೂ ಸಂಭವಿಸಲಿಲ್ಲ. ಆಗ ಅವನು ಬಂದು ಹೇಳಿದ: "ನೋಡಿದಿರಾ, ನಾನಿನ್ನೂ ಇಲ್ಲೇ ಇದ್ದೇನೆ!'' ಎಂದರೆ, ತಾನು ಕಪಟಿಯಲ್ಲವೆಂದು ಸಾಬೀತಾಯಿತು ಎಂಬುದು ಆ

ಮಾತಿನ ತಾತ್ಪರ್ಯ. ಈ ವಿಷಯವನ್ನು ಶ್ರೀರಾಮಕೃಷ್ಣರು ಭಕ್ತರ ಮುಂದೆ ಹೇಳಿದಾಗ ಎಲ್ಲರೂ ಬಿದ್ದುಬಿದ್ದು ನಕ್ಕರು.

ಹಾಜರಾ ಹಾಗೆಂದರೂ ಕೆಲದಿನಗಳಲ್ಲೇ ಅವನು ಇದ್ದಕ್ಕಿದ್ದಂತೆ ಯಾವುದೋ ಕಾರಣಕ್ಕಾಗಿ ದಕ್ಷಿಣೇಶ್ವರವನ್ನು ಬಿಟ್ಟುಹೋಗಬೇಕಾಗಿ ಬಂದಿತು. ಶ್ರೀರಾಮಕೃಷ್ಣರೀಗ ನಿಶ್ಚಿಂತೆಯಿಂದ ತಮ್ಮ ಶಿಷ್ಯರಿಗೆ ಶಿಕ್ಷಣ ಕೊಡಲು ಸಾಧ್ಯವಾಯಿತು.

ಆದರೆ ಅಲ್ಲಿಗೇ ಮುಗಿಯಲಿಲ್ಲ ಕತೆ. ಸುಮಾರು ಏಳೆಂಟು ತಿಂಗಳ ಕಾಲ ಕಣ್ಮರೆಯಾಗಿದ್ದ ಅವನು ೧೮೮೫ರ ಡಿಸೆಂಬರ್ ವೇಳೆಗೆ ಮತ್ತೆ ಬಂದುಬಿಟ್ಟ. ಬಹುಶಃ ಅವನನ್ನು ನೆಪವಾಗಿಟ್ಟುಕೊಂಡು ಶ್ರೀರಾಮಕೃಷ್ಣರು ಇನ್ನೆಷ್ಟೋ ಜನರಿಗೆ ಬುದ್ಧಿಹೇಳಿ ದಾರಿ ತೋರಬೇಕಾಗಿತ್ತು. ಅವನು ಬಂದ ಕೆಲವೇ ದಿನಗಳಲ್ಲಿ, ಎಂದರೆ ೧೮೮೬ರ ಜನವರಿ ಒಂದರಂದು, ಮಹತ್ತರ ಘಟನೆಯೊಂದು ಸಂಭವಿಸಿತು. ಶ್ರೀರಾಮಕೃಷ್ಣರು ಕಲ್ಪತರುವಿನಂತೆ, ಬಳಿಗೆ ಬಂದ ಭಕ್ತರೆಲ್ಲರ ಮೇಲೂ ಕೃಪಾವೃಷ್ಟಿಯನ್ನು ಕರೆದು ಅವರ ಇಷ್ಟಾರ್ಥಗಳು ಈಡೇರುವಂತೆ ಹರಸಿದರು. ಎಲ್ಲರಿಗೂ ಅಪೂರ್ವ ಅನುಭವಗಳಾದುವು. ಆದರೆ ಇದು ನಡೆದಾಗ ಹಾಜರಾ ಅಲ್ಲಿರಲಿಲ್ಲ. ಆಮೇಲೆ ಈ ವಿಷಯ ತಿಳಿದಾಗ ಅವನು ಸಂಕಟಪಟ್ಟು ಗೋಳಾಡಿದ. ತನ್ನ ಮೇಲೂ ಅಂತಹ ಕೃಪೆದೋರುವಂತೆ ಶ್ರೀರಾಮಕೃಷ್ಣರನ್ನು ಒಪ್ಪಿಸಲು ನರೇಂದ್ರನ ಮರೆಹೊಕ್ಕ. ಹಾಜರನ ಮೇಲಿನ ವಿಶೇಷ ಗೆಳೆತನದಿಂದ ನರೇಂದ್ರ ಅದಕ್ಕೊಪ್ಪಿ ಶ್ರೀರಾಮಕೃಷ್ಣರನ್ನು ಯಾಚಿಸಿದ. ಅವರೇನೋ ನರೇಂದ್ರನ ಪ್ರಾರ್ಥನೆಯನ್ನು ಮನ್ನಿಸಿದರು. ಆದರೆ ಅಂಥ ಕೃಪೆಯನ್ನು ಸ್ವೀಕರಿಸಲು ಹಾಜರನಿನ್ನೂ ಯೋಗ್ಯನಾಗಿಲ್ಲವೆಂಬುವನ್ನು ಅರಿತಿದ್ದ ಅವರು, ಅವನಿಗೆ ಬೇರೊಂದು ಬಗೆಯ ಆಶ್ವಾಸನೆಯನ್ನು ನೀಡಿದರು:

"ನೀನು ನಿನ್ನ ಕೊನೆಗಾಲದಲ್ಲಿ ಜ್ಞಾನವನ್ನು ಪಡೆಯುತ್ತೀಯೆ, ಹೋಗು!"

ಶ್ರೀರಾಮಕೃಷ್ಣರ ಈ ಮಾತು ಬಹಳ ಅದ್ಭುತವಾದ ರೀತಿಯಲ್ಲಿ ಸತ್ಯವಾಗಿ ಪರಿಣಮಿಸಿತು.

## ಹೃದಯನ ನಿರ್ಗಮನ ೬೧

ವರುಷಗಳು ಉರುಳುತ್ತ, ಶ್ರೀರಾಮಕೃಷ್ಣರ ಬಳಿಗೆ ಭಕ್ತರು-ಶಿಷ್ಯರು ಧಾವಿಸ ಲಾರಂಭಿಸಿದಂತೆ ದಕ್ಷಿಣೇಶ್ವರದಲ್ಲಿ ಮತ್ತೊಂದು ದೃಶ್ಯ ಮೂಡಲಾರಂಭಿಸಿತು. ಶ್ರೀರಾಮಕೃಷ್ಣರ ಬಂಟನಾದ ಹೃದಯರಾಮನಲ್ಲೊಂದು ಪರಿವರ್ತನೆ ಕಾಣತೊಡ ಗಿತು. ಎಂದರೆ, ಪರಮಹಂಸರ ಸಾನ್ನಿಧ್ಯದಲ್ಲೇ ಇದ್ದು ಇದ್ದು ಅವನೂ ಒಬ್ಬ ಮಹಾ ಭಕ್ತನೋ ಜ್ಞಾನಿಯೋ ಆದನೆಂದೆ? ಅಲ್ಲ ಅಲ್ಲ! ಕಮಲದ ಬದಿಯಲ್ಲೇ ಹುಟ್ಟಿದ ಕಪ್ಪೆಯು ಮರಿ, ಬೆಳೆದು ಗೂಳಿಕಪ್ಪೆಯಾದಂತೆಯೇ ಇವನ ಪರಿವರ್ತನೆ! ಮೊದಲಿಗೆ ಶ್ರೀರಾಮಕೃಷ್ಣರ ವಿನಮ್ರ ಸೇವಕನೂ ಅಂಗರಕ್ಷಕನೂ ಆಗಿದ್ದವನು ಕ್ರಮೇಣ ಅವರ 'ಹಿತಚಿಂತಕ'ನಾದ; ಆಮೇಲೆ ಅವರ ಖಾಸಗಿ 'ಮ್ಯಾನೇಜರ್' ಆಗಿ ತನ್ನನ್ನು ತಾನೇ ನೇಮಿಸಿಕೊಂಡ! ಅವರ ಶಿಶುಸಹಜ ಸರಳತೆಯನ್ನು, ಅಸಹಾಯಕತೆಯನ್ನು ದುರುಪ ಯೋಗಪಡಿಸಿಕೊಳ್ಳತೊಡಗಿದ.

ಆಸೆ, ದರ್ಪ—ಇವೆರಡೂ ಹೃದಯನಲ್ಲಿ ಎಂದಿನಿಂದಲೂ ಇದ್ದವುಗಳೇ. ಆದರೆ ಮೆರೆಯಲು ಅವಕಾಶವಿಲ್ಲದಾಗ ಎರಡೂ ಸುಪ್ತವಾಗಿದ್ದುವು. ಶ್ರೀರಾಮಕೃಷ್ಣರು ಸಾಧ ನಾದಿಗಳನ್ನು ಮುಗಿಸಿದ ಮೇಲೆ ಜನರು ಅವರನ್ನು ಮುತ್ತತೊಡಗಿದಾಗ, ಮತ್ತು ಅವರ ಮಹಿಮೆಯನ್ನು ಗುರುತಿಸಿ ಗುಣಗಾನ ಮಾಡಲಾರಂಭಿಸಿದಾಗ ಹೃದಯನೂ ಕಣ್ತೆರೆದ. ಅಲ್ಲದೆ ಈ ಜನಗಳು ತಮ್ಮೊಂದಿಗೆ ಕಾಣಿಕೆ-ಉಡುಗೊರೆಗಳನ್ನೂ ತಂದಾಗ ಅವನ ಕಣ್ಣುಗಳು ಇನ್ನೂ ಅಗಲವಾಗಿ ತೆರೆದುಕೊಂಡವು. ಅವನು ಆಲೋಚಿಸಿದ:

'ನನ್ನಿಂದಲೇ ಅಲ್ಲವೆ ಇವೆಲ್ಲ ಈಗ ನಡೆಯುತ್ತಿರುವುದು? ಆಗ ನಾನು ಮಾವ ನನ್ನು ಅಷ್ಟೊಂದು ಚೆನ್ನಾಗಿ ನೋಡಿಕೊಂಡದ್ದರಿಂದಲೇ ಅಲ್ಲವೆ—ಅವನಿಗೆ ಅಂತಹ ಸಾಧನೆಗಳನ್ನೆಲ್ಲ ಮಾಡಲು ಸಾಧ್ಯವಾದದ್ದು? ನಾನಿಲ್ಲದೆಯಿದ್ದಿದ್ದರೆ? ಅಸಲು ಅವನು ಬದುಕುತ್ತಿದ್ದನೋ ಇಲ್ಲವೋ ಯಾರಿಗೆ ಗೊತ್ತು! ಅದ್ದರಿಂದ ಅವನ ಸಾಧನೆ ಗಳಲ್ಲಿ ಹಾಗೂ ಸಿದ್ಧಿಗಳಲ್ಲಿ ನನ್ನದೂ ಒಂದು ಪಾಲು ಇದ್ದೇ ಇದೆ. ಕಷ್ಟಪಟ್ಟದ್ದಕ್ಕೆ ಫಲ ಈಗ ಬರುತ್ತಿದೆ. ಭೇಷ್, ಬರಲಿ ಬರಲಿ!'

ಈಗ ಹೃದಯ ಶ್ರೀರಾಮಕೃಷ್ಣರ ಕೋಣೆಯ ಮುಂದೆ ದ್ವಾರಪಾಲಕನಾಗಿ ನಿಂತ; ಜೊತೆಗೇ ಸುಂಕದವನಾಗಿಯೂ ಕೂಡ! ಶ್ರೀರಾಮಕೃಷ್ಣರನ್ನು ನೋಡಬೇಕೆನ್ನುವವರು ಇವನಿಗೆ ಸಲಾಮು ಹೊಡೆಯಬೇಕು, ಇವನ ಮರ್ಜಿ ಕಾಯಬೇಕು, ಯೋಗ್ಯತಾನು ಸಾರ ಕಪ್ಪಕಾಣಿಕೆ ಒಪ್ಪಿಸಬೇಕು. ಇದಕ್ಕೆ ತಪ್ಪಿದರೆ? ಪರಮಹಂಸರ ದರ್ಶನವಿಲ್ಲ. ವಾಪಸ್ಸು ಹೋಗುವುದೊಂದೇ ದಾರಿ. ಶ್ರೀರಾಮಕೃಷ್ಣರಿಗೆ ದಿಗಿಲಾಯಿತು.

"ಇದೇನೊ ಹೃದೂ! ಜನ ಏನೆಂದುಕೊಂಡಾರೋ? ನಾವೇನು ವ್ಯಾಪಾರಕ್ಕೆ ಕುಳಿತಿದ್ದೇವೆಯೆ?" ಎಂದರು. "ನೋಡು, ಇದೆಲ್ಲ ಒಳ್ಳೆಯದಲ್ಲ... ನಿನಗೆ ನೀನೇ ಕೇಡು ತಂದುಕೊಳ್ಳುತ್ತಿದ್ದೀಯೆ" ಎಂದು ಎಚ್ಚರಿಸಿದರು. ಆದರೆ ಇವನು, "ನೀನು ಸುಮ್ಮನಿರು ಮಾವ. ಬರುವವರು ಬರಿಗೈಲೇಕೆ ಬರಬೇಕು? ಆ ವ್ಯವಹಾರವನ್ನೆಲ್ಲ ನನಗೆ ಬಿಟ್ಟು ನಿನ್ನ ಕೆಲಸ ನೀನು ಮಾಡಿಕೊ" ಎಂದು ದಬಾಯಿಸಿಬಿಟ್ಟ.

ಈಗ ಶ್ರೀರಾಮಕೃಷ್ಣರು ತಮ್ಮ ದರ್ಶನಾರ್ಥಿಗಳಿಗೆ, "ನೀವು ಯಾರೂ ಕಾಣಿಕೆಯನ್ನು ತರಬೇಕಾಗಿಲ್ಲ, ತರಕೂಡದು" ಎಂದು ಹೇಳಿಕೊಟ್ಟರು. ಇದಲ್ಲದೆ ಈ ನಡುವೆ ಅವರು ಲಕ್ಷ್ಮೀನಾರಾಯಣ ಮಾರ್ವಾಡಿಯು ಅರ್ಪಿಸಿದ ಹತ್ತುಸಾವಿರ ರೂಪಾಯಿಗಳ ಕಾಣಿಕೆಯನ್ನು ತಿರಸ್ಕರಿಸಿದ್ದು ಹೃದಯನ ಕೋಪಾಗ್ನಿಯನ್ನು ಕೆರಳಿಸಿತು. ದುರಾಸೆಯಿಂದ, ಹೊಟ್ಟೆಯುರಿಯಿಂದ ಅವನಿಗೆ ಬುದ್ಧಿಯೇ ಕೆಟ್ಟುಹೋಯಿತು. ಕಾಣಿಕೆ ತರದಿದ್ದವರನ್ನು ನಿರ್ದಾಕ್ಷಿಣ್ಯವಾಗಿ ತಡೆದು ನಿಲ್ಲಿಸಿದ. ಅಷ್ಟೇ ಅಲ್ಲ, ಶ್ರೀರಾಮಕೃಷ್ಣರಿಗಾಗಿ ಯಾರು ಏನನ್ನೇ ತರಲಿ, ಅದನ್ನು ಅವರ ಕೈಗೆ ನೇರವಾಗಿ ಕೊಡುವಂತಿಲ್ಲ; ಇವನು ಒಪ್ಪಿಗೆ ಕೊಟ್ಟಮೇಲೆಯೇ, ಅಥವಾ ಇವನ ಮೂಲಕವೇ ಹೋಗಬೇಕು ಎಂಬಂತಾಯಿತು. ಶ್ರೀರಾಮಕೃಷ್ಣರ ಮೇಲಿನ ಅವನ ಹಿಂದಿನ ಪ್ರೀತಿ-ಭಕ್ತಿಯೆಲ್ಲ ಮಾಯವಾಯಿತು. ಆಗಾಗ ಅವರನ್ನು ಎಲ್ಲರೆದುರಿಗೂ ಹಂಗಿಸಿ ಮಾತನಾಡತೊಡಗಿದ. ಅವರು ಹಿಂದಿನಂತೆ ಈಗಲೂ ತನ್ನನ್ನೇ ಆಶ್ರಯಿಸಿಕೊಂಡಿರುವುದು ಎಂಬುದನ್ನು ಜಾಹೀರುಮಾಡುವ ಒಂದು ಅವಕಾಶವನ್ನೂ ಬಿಡುತ್ತಿರಲಿಲ್ಲ. ಅವನ ಭರ್ತ್ಸನೆಯನ್ನು ಕೇಳಿದಾಗ ಅವರದೆ ಹಿಂಡಿದಂತಾಗುತ್ತಿತ್ತು, ಕಣ್ಣಲ್ಲಿ ನೀರು ತುಳುಕುತ್ತಿತ್ತು. ಆದರೂ ಅವನ ಹಿಂದಿನ ಸೇವೆಯನ್ನೆಲ್ಲ ಸ್ಮರಿಸಿಕೊಂಡು ಅವಮಾನವನ್ನು ನುಂಗಿಕೊಂಡರು.

ದಿನದಿನಕ್ಕೂ ಹೃದಯನ ಉದ್ಧಟತನ ಹೆಚ್ಚಾಗುತ್ತಲೇ ಬಂತು. ಸಾಲದ್ದಕ್ಕೆ ಅವನೀಗ ಹೊಸ ನಾಟಕವನ್ನು ಪ್ರಾರಂಭಿಸಿದ. ಶ್ರೀರಾಮಕೃಷ್ಣರ ವರ್ತನೆಯನ್ನೆಲ್ಲ ಅನುಕರಿಸತೊಡಗಿದ. ಭಕ್ತರ ಮುಂದೆ ಅವನ 'ಭಾವಾವೇಶ'ವೇನು! ಹಾಡು-ನರ್ತನಗಳೇನು! ನೋಡಿದವರೆಲ್ಲ ಮುಸಿಮುಸಿ ನಕ್ಕರು. ಆದರೆ ಅವನೆದುರಿಗೆ ನಕ್ಕು ಬದುಕುಳಿಯುವ ಧೈರ್ಯ ಯಾರಿಗಿದೆ?

ಒಮ್ಮೆ ಶ್ರೀರಾಮಕೃಷ್ಣರು ಜ್ವರ ಬಂದು ಮಲಗಿದ್ದರು. ಹೃದಯರಾಮ ಸ್ವಲ್ಪ ಹೊತ್ತು ಎಲ್ಲಿಗೋ ಹೊರಗೆ ಹೋಗಿದ್ದ. ಆಗ ಕೆಲವು ಭಕ್ತರು ಅವರ ದರ್ಶನಕ್ಕಾಗಿ ಬಂದಿದ್ದರು. ಅವರಿಗಾಗಿ ಒಂದು ಹೂಕೋಸನ್ನು ತಂದಿದ್ದರು. ಶ್ರೀರಾಮಕೃಷ್ಣರು ಅದನ್ನು ಕಂಡು ಬಹಳ ಸಂತಸಗೊಂಡರು. ಆದರೆ ಮರುಕ್ಷಣವೇ ಹೇಳಿದರು: "ಅದನ್ನೀಗ ಎಲ್ಲಾದರೂ ಬಚ್ಚಿಟ್ಟುಬಿಡಿ! ಹೃದಯನಿಗೆ ಗೊತ್ತಾದರೆ ನನಗೆ ಹಿಂಸೆ ಕೊಡುತ್ತಾನೆ!" ಹೀಗೆಂದರೂ, ಮತ್ತೆ ಅವನ ಬಗ್ಗೆ ಒಳ್ಳೆಯ ಮಾತನ್ನೇ ಆಡಿದರು. ಅವನು ಹಿಂದೆ ಮಾಡಿದ ಸೇವೆಯನ್ನು ಬಣ್ಣಿಸಿದರು. ಬಳಿಕ ಹೇಳಿದರು:

"ಆತನ ನಿಷ್ಠಾವಂತ ಸೇವೆಗೆ ಜಗನ್ಮಾತೆ ಆಗಲೇ ಪ್ರತಿಫಲ ನೀಡಿದ್ದಾಳೆ. ನೋಡಿ! ಒಳ್ಳೆ ಆಸ್ತಿ-ಪಾಸ್ತಿ ಮಾಡಿಕೊಂಡಿದ್ದಾನೆ. ಬೇಕೆಂದವರಿಗೆ ಸಾಲ ಕೊಡುತ್ತಾನೆ. ಈ ದೇವಸ್ಥಾನದಲ್ಲಿ ಅವನೀಗ ದೊಡ್ಡಮನುಷ್ಯ ಎನಿಸಿಕೊಂಡಿದ್ದಾನೆ. ಎಲ್ಲ ಕಡೆ ಅವನ ಮಾತು ನಡೆಯುತ್ತದೆ."

ಶ್ರೀರಾಮಕೃಷ್ಣರು ಹೀಗೆ ಹೇಳಿ ಮುಗಿಸಿಲ್ಲ, ಅಷ್ಟರಲ್ಲೇ ಬಂದೇಬಿಟ್ಟ ಹೃದಯರಾಮ, ಯಮಧರ್ಮರಾಯನಂತೆ. ಅಲ್ಲಿದ್ದ ಹೂಕೋಸು ಅವನ ಕಣ್ಣಿಗೆ ಬಿದ್ದೇಬಿಟ್ಟಿತು. ಸಿಟ್ಟಿಗೆದ್ದು ಗರ್ಜಿಸಿದ: "ಹೇಯ್, ಯಾರಿದನ್ನು ತಂದದ್ದು?"

ಶ್ರೀರಾಮಕೃಷ್ಣರು (ದೈನ್ಯದಿಂದ): "ಹೃದೂ, ಅದನ್ನು ಇವರೇ ತಂದದ್ದಪ್ಪ. ನಾನೇನೂ ಅವರಿಗೆ ಹೇಳಲಿಲ್ಲ—ನಿಜವಾಗಿಯೂ!"

ಈಗ ಹೃದಯ, ಬಂದವರನ್ನು ದುರುಗುಟ್ಟಿ ನೋಡಿ, ಮತ್ತೆ ಆರ್ಭಟಿಸಿದ:

"ಯಾವನನ್ನು ಕೇಳಿ ತಂದಿರಿ? ಮೊದಲೇ ನಿನಗೆ ಆರೋಗ್ಯ ಸರಿಯಿಲ್ಲ, ಅವನ್ನೆಲ್ಲ ತಿನ್ನಬಾರದು ಅಂತ ಡಾಕ್ಟರು ಹೇಳಿದ್ದಾರೆ . . . ! ಅವರು ತಂದರು, ನೀನು ತಿಂದೆ! ನಿನ್ನನ್ನು ನೋಡಿಕೊಳ್ಳಲು ನಾನಿದ್ದೇನಲ್ಲ ಇಲ್ಲೇ!"

ತನ್ನನ್ನು ಕೇಳದೆ ಜನರು ಏನನ್ನಾದರೂ ತರುವುದು, ಶ್ರೀರಾಮಕೃಷ್ಣರು ಅದನ್ನು ತೆಗೆದುಕೊಳ್ಳುವುದು—ಇದು ತನ್ನ ಅಧಿಕಾರಕ್ಕೆ ಒಂದು ಸವಾಲು ಎಂದು ಭಾವಿಸಿದ ಹೃದಯ. ಡಾಕ್ಟರ ಮಾತಿನ ಸುಳ್ಳುನೆಪವನ್ನು ಮುಂದಿಟ್ಟು ತನ್ನ ಸಿಟ್ಟನ್ನು ಕಾರಿ ಹೊರಟುಹೋದ.

ಇವನ ಮಾತಿನ ಇರಿತವನ್ನು ಸಹಿಸಲಾರದೆ ಶ್ರೀರಾಮಕೃಷ್ಣರು ಅಳುತ್ತ ಮಾತೆಯಲ್ಲಿ ಮೊರೆಯಿಟ್ಟರು:

"ಅಮ್ಮಾ, ನೀನು ನನ್ನನ್ನು ಎಲ್ಲ ಪ್ರಾಪಂಚಿಕ ಬಂಧನಗಳಿಂದಲೂ ಬಿಡಿಸಿದೆ. ಆದರೆ ಈ ಹೃದಯನಿಂದ ನನಗೆ ಇಂಥ ಅವಮಾನವಾಗುವ ಪರಿಸ್ಥಿತಿಯಿಂದ ಮಾತ್ರ ಬಿಡಿಸದೆ ಹೋದೆಯಲ್ಲ! ಇದೆಂಥ ಲೀಲೆ ನಿನ್ನದು!" ಆದರೆ ಇದ್ದಕ್ಕಿದ್ದಂತೆ ಅವರ ಈ ಭಾವ ದೂರವಾಯಿತು. ಮೊಗದಲ್ಲಿ ಮುಗುಳ್ನಗುವನ್ನು ತಂದುಕೊಂಡು ನುಡಿದರು: "ಇರಲಿ, ಅವನು ನನ್ನನ್ನು ಅಷ್ಟೊಂದು ಪ್ರೀತಿಸುತ್ತಾನೆ, ಆದ್ದರಿಂದಲೇ ಬೈಯುತ್ತಾನೆ; ಬೈಯಲಿ. ಅವನದು ಹುಡುಗುಬುದ್ಧಿ. ಅಮ್ಮಾ, ನೀನು ಅವನ ಮೇಲೆ ಸಿಟ್ಟಾಗಬಾರದಮ್ಮಾ. . ." ಹೀಗೆನ್ನುತ್ತ ಅವರು ಸಮಾಧಿಸ್ಥರಾದರು.

ಇದೆಲ್ಲಕ್ಕೂ ಸಾಕ್ಷಿಯಾಗಿದ್ದ ಭಕ್ತರು ಸ್ತಂಭೀಭೂತರಾಗಿ ಕುಳಿತೇ ಇದ್ದರು!

ಹೃದಯನ ಅಟಾಟೋಪ ಅಷ್ಟಕ್ಕೇ ನಿಲ್ಲಲಿಲ್ಲ. ತನ್ನನ್ನು ಹಿಡಿಯುವವರೇ ಇಲ್ಲ ಎಂಬ ಅಹಂಕಾರದಿಂದ ಕಂಡಕಂಡವರನ್ನೆಲ್ಲ ಹೀಯಾಳಿಸತೊಡಗಿದ. ಕೊಬ್ಬಿದ ಗೂಳಿಯಂತೆ ಮೆರೆದ. ದೇವಸ್ಥಾನದಲ್ಲಿ ಎಲ್ಲರಿಗೂ ಇವನ ಹೆಸರು ಕೇಳಿದರೆ ರೋಷವುಕ್ಕುವಂತಾಯಿತು. ಶ್ರೀರಾಮಕೃಷ್ಣರು ಬಾರಿಬಾರಿಗೂ ಹೇಳಿದರು, "ಬೇಡ ಹೃದೂ, ದುರಹಂಕಾರ ಪಡಬೇಡ; ಎಲ್ಲರನ್ನೂ ವಿರೋಧಿಮಾಡಿಕೊಳ್ಳುತ್ತಿದ್ದೀಯ ನೀನು" ಎಂದು. ಆದರೆ ಅವನು ಕೇಳಲಿಲ್ಲ, ಅಷ್ಟೇ ಅಲ್ಲ, ಶಾರದಾದೇವಿಯವರ ಮೇಲೂ ತನ್ನ ದರ್ಪ ತೋರಿದ. ಶ್ರೀರಾಮಕೃಷ್ಣರನ್ನೇ ಕಡೆಗಣಿಸಿದವನು ಅವರ ಶಕ್ತಿಯನ್ನು ಲೆಕ್ಕಿಸುತ್ತಾನೆಯೆ? ಆಗ ಶ್ರೀರಾಮಕೃಷ್ಣರು ಗಂಭೀರವಾಗಿ ಎಚ್ಚರಿಸಿದರು:

"ನೋಡು ಹೃದೆ, ನೀನು ನನ್ನನ್ನು ಬೇಕಾದರೆ ತಿರಸ್ಕರಿಸಿ ಮಾತನಾಡಬಹುದು. ಇದರೊಳಗಿನ (ತಮ್ಮೊಳಗಿನ) ಶಕ್ತಿಯನ್ನು ರೇಗಿಸಿಯೂ ನೀನು ಬದುಕಬಲ್ಲೆಯೇನೋ. ಆದರೆ ಅವಳಿಗೆ ಮಾತ್ರ ಹಾಗೇನಾದರೂ ಮಾಡಿದೆಯೊ! ಅವಳೊಳಗಿನ ಶಕ್ತಿ ಹೆಡೆಯಾಡಿತೆಂದರೆ ಆಮೇಲೆ ನಿನ್ನನ್ನು ಉಳಿಸಲು ಹರಿಹರಬ್ರಹ್ಮಾದಿಗಳಿಗೂ ಸಾಧ್ಯವಿಲ್ಲ. ತಿಳಿದುಕೊ!" ಆದರೆ ವಿನಾಶಕಾಲಕ್ಕೆ ವಿಪರೀತಬುದ್ಧಿಯಲ್ಲವೆ? ಅವನಿಗೆ ಈ ಬುದ್ಧಿಮಾತೂ ನಾಟಲಿಲ್ಲ.

ಒಮ್ಮೆ ಶಾರದಾದೇವಿಯವರು ಕೆಲದಿನಗಳ ಮಟ್ಟಿಗೆ ತವರೂರಿಗೆ ಹೋಗಿದ್ದು ವಾಪಸು ಬಂದರು. ಆಗ ಅವರೊಡನೆ ಅವರ ತಾಯಿ ಶ್ಯಾಮಸುಂದರಿ, ತಮ್ಮ ಪ್ರಸನ್ನ, ಲಕ್ಷ್ಮಿ ಮತ್ತು ಇನ್ನೂ ಕೆಲವರು ಬಂದಿದ್ದರು. ಅವರು ದಕ್ಷಿಣೇಶ್ವರಕ್ಕೆ ಬರುತ್ತಿದ್ದಂತೆ ಹೃದಯ ಎದುರಾದ. ಇಷ್ಟೊಂದು ಜನ ಏಕೆ ಬರಬೇಕು ಎನ್ನಿಸಿತೋ, ಅಥವಾ ಅವನಿಗೆ ಇನ್ನೇಕೆ ತಲೆ ತಿರುಗಿತೋ, ಅವರೆಲ್ಲರ ಮೇಲೆ ಹರಿಹಾಯ್ದ: "ಯಾಕೆ ಬಂದಿರಿ!

ಇಲ್ಲೇನು ಕೆಲಸ ನಿಮಗೆಲ್ಲ?'' ಎಂದು. ಈ ಅನಾಗರಿಕ ವರ್ತನೆಯನ್ನು ಕಂಡು ಎಲ್ಲರೂ ಬೆಚ್ಚಿಬಿದ್ದರು. ಶ್ಯಾಮಸುಂದರಿಗಂತೂ ದಿಗ್ಭ್ರಮೆ. ''ಸರಿ ಸರಿ, ನಡೆಯಿರಿ ಹೋಗೋಣ. ಇಲ್ಲಿ ಯಾರ ಹತ್ತಿರ ಅಂತ ನನ್ನ ಮಗಳನ್ನು ಬಿಟ್ಟುಹೋಗಲಿ? ಬನ್ನಿ'' ಎನ್ನುತ್ತ ಆಕೆ ಎಲ್ಲರನ್ನೂ ಹೊರಡಿಸಿಕೊಂಡು ನಡೆದೇಬಿಟ್ಟಳು. ಅರವತ್ತು ಮೈಲಿ ನಡೆದು ಬಂದಿದ್ದವರು ಅವರು; ಈಗ ಸ್ವಲ್ಪವೂ ವಿಶ್ರಾಂತಿಯಿಲ್ಲದೆ ಮತ್ತೆ ಅಷ್ಟೇ ದೂರ ನಡೆಯಲು ಸಿದ್ಧರಾಗಿ ಹೊರಟರು. ಶ್ರೀರಾಮಕೃಷ್ಣರು? ಕಂಬನಿ ತುಂಬಿದ ಕಂಗಳಿಂದ ಸುಮ್ಮನೆ ನೋಡಿದರು—ಅಸಹಾಯಕರಾಗಿ.

ಶಾರದಾದೇವಿಯವರಿಗೆ ಸಹಜವಾಗಿಯೇ ತುಂಬ ದುಃಖವಾಯಿತು. ಇಷ್ಟಾದರೂ ಅವರು ಪತಿಯ ಮೇಲೆ ಬೇಸರಿಸಿಕೊಳ್ಳಲಿಲ್ಲ. 'ಅವನಿಗೆ ಒಂದು ಮಾತೂ ಹೇಳಲಿಲ್ಲವಲ್ಲ' ಎಂದು ಆಲೋಚಿಸಲಿಲ್ಲ. ಅಷ್ಟೇ ಅಲ್ಲ, ಹೃದಯನ ಮೇಲೂ ಅವರು ಕೋಪ ಮಾಡಿಕೊಳ್ಳಲಿಲ್ಲ, ಶಪಿಸಲಿಲ್ಲ. ತಮ್ಮ ನಿರಾಶೆ-ದುಃಖವನ್ನೆಲ್ಲ, ''ಇದೆಲ್ಲವೂ ನಿನ್ನಿಚ್ಛೆ'' ಎಂದು ಜಗನ್ಮಾತೆಯ ಪಾದಗಳಲ್ಲಿ ಸಮರ್ಪಿಸಿಬಿಟ್ಟರು. ''ಆಗಲಮ್ಮಾ, ನೀನು ಕರೆಸಿಕೊಂಡಾಗ ವಾಪಸು ಬರುತ್ತೇನೆ'' ಎಂದು ಮನದಲ್ಲೇ ಹೇಳಿಕೊಂಡರು.

ಅಂತೂ ಇದರಿಂದ ಹೃದಯನ ಪಾಪದ ಬಟ್ಟಲು ತುಂಬಿತು. ಶ್ರೀರಾಮಕೃಷ್ಣರು ತಮ್ಮ ಸತಿಯ ವಿಚಾರದಲ್ಲಿ ಅವನಿಗಿತ್ತಿದ್ದ ಎಚ್ಚರಿಕೆಯ ಮಾತು ನಿಜವಾಗುವ ಸಮಯ ಸನ್ನಿಹಿತವಾಯಿತು. ಈಗ ಅವನು ಮತ್ತೆಂದೂ ತಿರುಗಿ ನೋಡದ ರೀತಿಯಲ್ಲಿ ದಕ್ಷಿಣೇಶ್ವರವನ್ನು ಬಿಟ್ಟು ಹೋಗಬೇಕಾದ ಪರಿಸ್ಥಿತಿಯೊಂದು ತಾನಾಗಿಯೇ ಉದ್ಭವಿಸಿತು. ಆದರೆ ಅದು ಉಂಟಾದದ್ದು ಮಾತ್ರ ಯಾರೂ ನಿರೀಕ್ಷಿಸಿರದಿದ್ದ ರೀತಿಯಲ್ಲಿ:

೧೮೮೧ರ ಮೇ ತಿಂಗಳು. ದಕ್ಷಿಣೇಶ್ವರದಲ್ಲಿ ಭವತಾರಿಣೀದೇಗುಲದ ಪ್ರತಿಷ್ಠಾಪನೆಯ ವಾರ್ಷಿಕೋತ್ಸವ. ಪ್ರತಿವರ್ಷದಂತೆ ವಿಶೇಷ ಪೂಜಾದಿಗಳು ನಡೆಯಲಿದ್ದುವು. ಮಥುರನ ಮಗನಾದ ತ್ರೈಲೋಕ್ಯನಾಥ ಅದಕ್ಕಾಗಿ ಹೆಂಡತಿ ಮಕ್ಕಳೊಂದಿಗೆ ಕಲ್ಕತ್ತದಿಂದ ಬಂದಿದ್ದ. ಉತ್ಸವವೆಲ್ಲ ಜರುಗಿತು. ಆಮೇಲೊಂದು ದಿನ ಕಾಳೀ ದೇವಾಲಯದಲ್ಲಿ ಎಂದಿನಂತೆ ಹೃದಯ ಪೂಜಾನಿರತನಾಗಿದ್ದಾನೆ; ಆಗ ತ್ರೈಲೋಕ್ಯನ ಎಂಟು ವರ್ಷದ ಮುದ್ದು ಮಗಳು ನಿಂತಿರುವುದನ್ನು ಗಮನಿಸಿದ. ಆಕೆಯ ತಂದೆ-ತಾಯಿ ಜೊತೆಯಲ್ಲಿರಲಿಲ್ಲ. ಅವಳನ್ನು ನೋಡಿದೊಡನೆ ಹೃದಯನಿಗೆ, ಅವಳಲ್ಲಿ ದೇವಿಯನ್ನು ಆವಾಹನೆ ಮಾಡಿ ಪೂಜಿಸಬೇಕೆಂಬ ಇಚ್ಛೆಯಾಯಿತು. ಇಂತಹ ಪೂಜೆ ಬಂಗಾಳದಲ್ಲಿ ರೂಢಿಯಲ್ಲಿರುವಂಥದೇ. ಇದಕ್ಕೆ 'ಕುಮಾರೀ ಪೂಜೆ' ಎನ್ನುತ್ತಾರೆ. ಹೃದಯನ ಕೋರಿಕೆಗೆ ಬಾಲಕಿ ಸಂತೋಷದಿಂದ ಒಡಂಬಟ್ಟಳು. ಸರಿ, ಹೃದಯ ಆಕೆಯನ್ನು ಗರ್ಭಗುಡಿಯಲ್ಲಿ ಕುಳ್ಳಿರಿಸಿ ವಿಧಿಪ್ರಕಾರವಾಗಿ ಪೂಜೆ ಸಲ್ಲಿಸಿ ನಮಸ್ಕಾರ ಮಾಡಿದ. ಬಳಿಕ ಆಕೆ ಹೂಗಳನ್ನು ಕೊಡವಿಕೊಂಡು ಮನೆಗೆ ಓಡಿಹೋದಳು.

ಹೃದಯ ಮಾಡಿದ ಪೂಜೆಯೇನೋ ವಿಧಿಬದ್ಧವಾದುದೇ. ಆದರವನು ಒಂದು ಅತಿ ಮುಖ್ಯ ಅಂಶವನ್ನು ಕಡೆಗಣಿಸಿಬಿಟ್ಟಿದ್ದ. ಏನದು? ಆ ಬಾಲಕಿ ಕೆಳಜಾತಿಗೆ ಸೇರಿದವಳು; ಅವನೋ ಬ್ರಾಹ್ಮಣ, ದೇವಾಲಯದ ಅರ್ಚಕ. ಮೇಲ್ಜಾತಿಯವರು ಕೆಳಜಾತಿಯ ಬಾಲಕಿಯನ್ನು ಹಾಗೆ ಪೂಜಿಸುವುದು ಸಂಪ್ರದಾಯ ಸಮ್ಮತವಲ್ಲ. ಅದಕ್ಕೆ ಬ್ರಾಹ್ಮಣರ ಆಕ್ಷೇಪವಿರುವ ವಿಷಯ ಹಾಗಿರಲಿ, ಕೆಳಜಾತಿಯವರೂ ಕೂಡ ಅದಕ್ಕೆ ವಿರುದ್ಧ. ಹಾಗೆ ಪೂಜೆ ಮಾಡಿದರೆ, ಬಾಲಕಿಗೆ ಮುಂದೆ ಬೇಗ ವೈಧವ್ಯ ಪ್ರಾಪ್ತಿ

ಯಾಗುತ್ತದೆ ಎಂಬ ನಂಬಿಕೆ ಆ ಜನರಲ್ಲಿ ಬೇರೂರಿತ್ತು! ಇದೆಲ್ಲ ಹೃದಯುನಿಗೆ ತಿಳಿದಿರಲಿಲ್ಲವೆ? ಹಾಗೇನಿಲ್ಲ; ಅಹಂಕಾರದಿಂದ ಅವನ ಬುದ್ಧಿಗೆ ಮಂಕು ಕವಿದಿತ್ತು, ಅಷ್ಟೆ.

ಇತ್ತ ಬಾಲಕಿ ಮನೆಗೆ ಹೋದಳು. ತಾಯಿ ನೋಡುತ್ತಾಳೆ, ಮಗಳ ಪಾದಗಳ ಮೇಲೆ ಚಂದನದ ಗುರುತು! ಅಚ್ಚರಿ-ಗಾಬರಿಗಳಿಂದ ಕೇಳಿದಳು, "ಇದೇನಿದು?" ಮಗಳು ಹೆಮ್ಮೆಯಿಂದ ಹೇಳಿಕೊಂಡಳು, ತನಗೆ ಸಂದ ಪೂಜೆಯ ಸಂಭ್ರಮವನ್ನು. ತಾಯಿ ಗಡಗಡ ನಡುಗಿದಳು. ತ್ರೈಲೋಕ್ಯನಿಗೂ ಸುದ್ದಿ ತಿಳಿಯಿತು. ಪತ್ನಿಯ ಉದ್ವೇಗವನ್ನು ಕಂಡಾಗ ಅವನಿಗೂ ಗಾಬರಿಯಾಯಿತು. ಜೊತೆಗೆ ಹೃದಯುನ ಮೇಲೆ ರೇಗಿಹೋಯಿತು. ಕೂಡಲೇ ಅವನನ್ನು ಕರೆಸಿ, ಚೆನ್ನಾಗಿ ಛೀಮಾರಿ ಹಾಕಿ, "ಇನ್ನೊಂದು ಘಳಿಗೆಯೂ ಇಲ್ಲಿರಬೇಡ. ಅಷ್ಟೇ ಅಲ್ಲ, ಮತ್ತೆ ಈ ಕಡೆ ಬಂದುಗಿಂದೀಯ, ಹುಷಾರ್!" ಎಂದು ಎಚ್ಚರಿಕೆ ಕೊಟ್ಟು ಓಡಿಸಿಬಿಟ್ಟ. ಹೃದಯು ಇದ್ದಕ್ಕಿದ್ದಂತೆ ಭೂಮಿಗಿಳಿದುಹೋದ. ಈಗೇನು ಮಾಡುವುದು? ಹೊರಡದೆ ವಿಧಿಯಿಲ್ಲ. ಬೇಗಬೇಗ ಆಲೋಚಿಸಿದ. ಶ್ರೀರಾಮಕೃಷ್ಣರ ಬಳಿ ಬಂದು ನಡೆದದ್ದನ್ನು ಹೇಳಿಕೊಂಡ. ಶ್ರೀರಾಮಕೃಷ್ಣರು ಕೇಳಿದರು:

"ಹಾಗೇಕೆ ಮಾಡಹೋದೆಯೋ ಹೃದೂ . . . ಈಗೇನು ಮಾಡುತ್ತೀ?"

"ಅದೆಲ್ಲ ಇರಲಿ; ಈಗ ನೀನೂ ನನ್ನ ಜೊತೆ ಬಂದುಬಿಡು, ಹೋಗೋಣ."

"ನಾನೆ! ನಾನೇಕೆ ಬರಲಿ?"

"ಇಲ್ಲಿದ್ದರೆ ನಿನಗೇ ಕಷ್ಟ. ಇವತ್ತು ನನಗೆ ಅವಮಾನ ಮಾಡಿದ್ದಾರೆ, ನಾಳೆ ನಿನಗೂ ಮಾಡುತ್ತಾರೆ. ಆದ್ದರಿಂದ ಈಗಲೇ ಬಂದುಬಿಡು. ಇವರ ಸಹವಾಸ ಸಾಕು."

"ಅದನ್ನೆಲ್ಲ ನಾನು ಒಪ್ಪುವುದಿಲ್ಲ ಬಿಡು! ಇಲ್ಲ, ನಾನು ಬರಲಾರೆ."

ಬೇರೆ ದಾರಿಗಾಣದೆ ಹೃದಯು ಅಲ್ಲಿಂದ ಹೊರಟ—ಭಾರವಾದ ಹೃದಯದಿಂದ.

ಆ ಸಮಯದಲ್ಲಿ ಶ್ರೀರಾಮಕೃಷ್ಣರು ಭಕ್ತರೊಡನೆ ಮಾತನಾಡುತ್ತ ಕುಳಿತಿದ್ದರು; ಆಗ ದೇವಾಲಯದ ಅಧಿಕಾರಿಯೊಬ್ಬ ಅಲ್ಲಿಗೆ ಬಂದು ಹೇಳಿದ: "ಸ್ವಾಮೀ, ನೀವೂ ದೇವಸ್ಥಾನ ಬಿಟ್ಟುಹೋಗಬೇಕಂತೆ; ಬಾಬುಗಳು ಹೇಳಿದರು."

ಶ್ರೀರಾಮಕೃಷ್ಣರು: "ಹೌದೆ! ಹಾಗೆ ಹೇಳಿದ್ದು ಹೃದಯುನಿಗೆ ಎಂದು ಕೇಳಿದೆ!"

ಅಧಿಕಾರಿ: "ಅದು ಸರಿ, ಆದರೆ ನೀವೂ ಹೋಗಬೇಕಂತೆ."

ಶ್ರೀರಾಮಕೃಷ್ಣರು ಇನ್ನೊಂದೇ ಒಂದು ಪ್ರತಿಮಾತನ್ನೂ ಆಡದೆ, "ಆಯಿತಪ್ಪ, ಇದೊ ಹೊರಟೆ" ಎಂದವರೇ ಚಪ್ಪಲಿ ಮೆಟ್ಟಿಕೊಂಡು, ಚೌಕವನ್ನು ಹೆಗಲಿಗೇರಿಸಿ, ಇಪ್ಪತ್ತಾರು ವರ್ಷಗಳ ಕಾಲ ತಮಗೆ ಆಶ್ರಯವಾಗಿದ್ದ ಕೋಣೆಯನ್ನು ಬಿಟ್ಟು ಹೊರ ನಡೆದರು, ಮುಖದ ಒಂದು ಗೆರೆಯನ್ನೂ ಕೊಂಕಿಸದೆ! 'ನೀನು ಹೀಗೆಂದದ್ದು ನಿಜವೇ?' ಎಂದು ತ್ರೈಲೋಕ್ಯನನ್ನು ವಿಚಾರಿಸುವ ಗೋಜಿಗೂ ಹೋಗದೆ ಅವರು ನೇರವಾಗಿ ಹೆಬ್ಬಾಗಿಲಿನತ್ತ ಹೆಜ್ಜೆಹಾಕಿದರು. ತ್ರೈಲೋಕ್ಯ ಇದನ್ನು ದೂರದಿಂದ ನೋಡಿದ. ಉದ್ವೇಗದ ಭರದಲ್ಲಿ ಅವನು ಏನೆಂದಿದ್ದನೋ ಏನೋ, ಪಾಪ; ಅವರು ಹೊರಟುಹೋಗಬಹುದು ಎಂದಂತೂ ಅವನು ನಿರೀಕ್ಷಿಸಿರಲಿಲ್ಲ. ಒಂದೇ ಓಟಕ್ಕೆ ಓಡಿ ಬಂದು ಅವರ ಕಾಲಿಗೆ ಬಿದ್ದು ಕೇಳಿದ: "ತಂದೆ, ನಿಲ್ಲಿ! ನೀವೆಲ್ಲಿಗೆ ಹೊರಟಿರಿ?"

"ನೀನೇ ಹೇಳಿದೆಯಂತಲ್ಲಪ್ಪ, ದೇವಾಲಯವನ್ನು ಬಿಟ್ಟುಹೋಗಬೇಕು ಅಂತ! ಅದಕ್ಕೇ ಹೊರಟೆ."

"ನಾನು ಹೇಳಿದೆನೆ? ಇಲ್ಲ ಇಲ್ಲ! ಯಾರೋ ಅಧಿಕಾರಿಗಳು ನನ್ನ ಮಾತನ್ನು

ತಪ್ಪಾಗಿ ತಿಳಿದುಕೊಂಡು ಪ್ರಮಾದ ಮಾಡಿದ್ದಾರೆ. ದಯವಿಟ್ಟು ಕ್ಷಮಿಸಿಬಿಡಿ. ನೀವು ನಮ್ಮನ್ನು ಬಿಟ್ಟು ಎಲ್ಲಿಗೂ ಹೋಗಬಾರದು."

ಶ್ರೀರಾಮಕೃಷ್ಣರು ನಸುನಕ್ಕು, "ಹಾಗೋ ? ಸರಿಯಪ್ಪ" ಎನ್ನುತ್ತ ಹೆಜ್ಜೆ ತಿರುಗಿಸಿದರು. ತ್ರೈಲೋಕ್ಯ ಮತ್ತೆ ಅವರನ್ನು ಪ್ರಾರ್ಥಿಸಿದ: "ತಂದೆ ! ನನ್ನ ಮಗುವಿಗೇನಾದರೂ ಅಪಾಯ ಸಂಭವಿಸೀತೆ ? ಹಾಗೇನೂ ಆಗದಂತೆ ಮಾತೆಯನ್ನು ಕೇಳಿಕೊಳ್ಳಿ !"

"ಜಗನ್ಮಾತೆಯ ಕೃಪೆಯಿಂದ, ಅಂಥದೇನೂ ಸಂಭವಿಸುವುದಿಲ್ಲ, ಚಿಂತಿಸದಿರು" ಎಂದು ಹೇಳಿ ಶ್ರೀರಾಮಕೃಷ್ಣರು ಕೋಣೆಗೆ ಹಿಂದಿರುಗಿದರು. ಈವರೆಗೂ ಏನೂ ನಡೆಯಲೇ ಇಲ್ಲವೋ ಎಂಬಂತೆ ಅಲ್ಲಿದ್ದ ಭಕ್ತರೊಂದಿಗೆ ಹಿಂದಿನ ಮಾತುಕತೆಯನ್ನೇ ಮುಂದುವರಿಸಿದರು !

ಇತ್ತ ದೇವಾಲಯದಿಂದ ಹೊರಟ ಹೃದಯ, ಬದಿಯಲ್ಲೇ ಇದ್ದ ಯದುಮಲ್ಲಿಕನ ತೋಟದ ಮನೆಯಲ್ಲಿ ಆಶ್ರಯ ಪಡೆದ. ಶ್ರೀರಾಮಕೃಷ್ಣರು ಅವನಿಗಾಗಿ ಅಲ್ಲಿಗೇ ಊಟ ಕಳಿಸುತ್ತಿದ್ದರು. ಮತ್ತು ತಾವೂ ಒಂದೆರಡು ಬಾರಿ ಅಲ್ಲಿಗೆ ಹೋಗಿ ಅವನನ್ನು ನೋಡಿದರು. ಹೃದಯ ಮತ್ತೆ ಅವರನ್ನು ತನ್ನೊಂದಿಗೆ ಬರುವಂತೆ ಕರೆದ. ಏನೇನೋ ಉಪಾಯ ಮಾಡಿದ. ಅವರಿಲ್ಲದಿದ್ದರೆ ತನಗೇನೂ ಬೆಲೆಯಿಲ್ಲವೆಂದು ಗೊತ್ತು! ಬಳಿಕ ಹೇಳಿದ: "ಒಂದು ಕೆಲಸ ಮಾಡೋಣ. ಬೇರೆ ಎಲ್ಲಾದರೂ ಒಂದು ಕಾಳೀ ದೇವಾಲಯವನ್ನು ಹುಡುಕಿಕೊಂಡು ಅಲ್ಲಿ ಇಬ್ಬರೂ ಸಂತೋಷದಿಂದ ಇರೋಣ, ಬಾ." ಇವನ ಉದ್ದೇಶ ಶ್ರೀರಾಮಕೃಷ್ಣರಿಗೆ ತಿಳಿಯದಿದ್ದೀತೆ ? ಸ್ವಲ್ಪ ಖಾರವಾಗಿಯೇ ಅವರೆಂದರು: "ಏಕೆ, ನನ್ನನ್ನು ಒಂದು ವಿಚಿತ್ರ ಪ್ರಾಣಿಯಂತೆ ಮನೆಮನೆಗೂ ಒಯ್ದು ಪ್ರದರ್ಶನ ಮಾಡೋಣ ಅಂತಿದ್ದೀಯಾ ?"

ಬೇರೇನೂ ಉಪಾಯ ತೋಚದಾದಾಗ ಹೃದಯ ಊರಿಗೆ ತೆರಳಿದ. ಅಲ್ಲಿ ಹೇಗಿದ್ದರೂ ಅವನಿಗೆ ಹೊಲ-ಗದ್ದೆ ಇದ್ದೇ ಇತ್ತು. ಆದ್ದರಿಂದ ಜೀವನಕ್ಕೇನೂ ತೊಂದರೆಯಿರಲಿಲ್ಲ. ಆದರೆ ಅಹಂಕಾರದ ಅಮಲು ಇಳಿಯುತ್ತಲೇ ತನ್ನ ಅಕೃತ್ಯಗಳನ್ನು ನೆನಸಿಕೊಂಡು ಪಶ್ಚಾತ್ತಾಪಪಟ್ಟ. ಎಂತಹ ದಿವ್ಯ ಸನ್ನಿಧಿಯಲ್ಲಿದ್ದವನು ಅಯೋಗ್ಯನಂತೆ ವರ್ತಿಸಿ ಅದನ್ನು ಬಿಟ್ಟುಬಂದೆನಲ್ಲ ಎಂದು ಮರುಗಿದ.

ಅವನು ದಕ್ಷಿಣೇಶ್ವರದಿಂದ ದೂರ ಸರಿದ ಮೂರು ವರ್ಷಗಳ ಬಳಿಕ ಒಮ್ಮೆ (೧೮೮೪ರ ಅಕ್ಟೋಬರ್ ೨೬ ರಂದು) ಶ್ರೀರಾಮಕೃಷ್ಣರನ್ನು ನೋಡಲು ಬಂದಿದ್ದ. ಆ ಸಂದರ್ಭದಲ್ಲಿ ಅಲ್ಲಿದ್ದ ಮಾಸ್ಟರ್ ಮಹಾಶಯ ತನ್ನ 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ಅದನ್ನು ಉಲ್ಲೇಖಿಸುತ್ತಾನೆ: ಶ್ರೀರಾಮಕೃಷ್ಣರು ತಮ್ಮ ಕೊಠಡಿಯಲ್ಲಿ ಭಕ್ತರೊಂದಿಗೆ ಮಾತನಾಡುತ್ತ ಕುಳಿತಿದ್ದಾಗ, ಹೃದಯನು ಯದುಮಲ್ಲಿಕನ ತೋಟದ ಮನೆಗೆ ಬಂದಿರುವ ವಿಷಯವನ್ನು ಯಾರೋ ಬಂದು ತಿಳಿಸಿದರು. ಕೂಡಲೇ ಅವರು, "ನಾನು ಅವನನ್ನು ನೋಡಬೇಕು, ನೀವೆಲ್ಲ ಇಲ್ಲೇ ಇರಿ. ಬೇಗ ಬಂದುಬಿಡುತ್ತೇನೆ" ಎಂದು ಹೇಳಿ ಮಾಸ್ಟರನ್ನು ಜೊತೆ ಮಾಡಿಕೊಂಡು ಹೊರಟರು. ಗೇಟಿನ ಬಳಿಯಲ್ಲೇ ಹೃದಯ ಕೈಜೋಡಿಸಿಕೊಂಡು ನಿಂತಿದ್ದ. ಶ್ರೀರಾಮಕೃಷ್ಣರನ್ನು ನೋಡಿದೊಡನೆ ಸಾಷ್ಟಾಂಗ ಪ್ರಣಾಮ ಮಾಡಿ ಎದ್ದುನಿಂತು, ಮಗುವಿನಂತೆ ಬಿಕ್ಕಿಬಿಕ್ಕಿ ಅಳಲಾರಂಭಿಸಿದ. ಶ್ರೀರಾಮಕೃಷ್ಣರ ಕಣ್ಣಲ್ಲೂ ಹನಿ ಜಿನುಗಿತು; ಅವರು ಅದನ್ನು ತಕ್ಷಣ ಒರಸಿಕೊಂಡರು.

ತಮಗೆ ಅಷ್ಟೊಂದು ಉಪದ್ರವ ಕೊಟ್ಟಂಥವನ ಮೇಲೂ ಅವರ ಕರುಣೆಯನ್ನು

ಕಂಡು ಮಾಸ್ಟರ್ ಆಶ್ಚರ್ಯಗೊಂಡ.

ಶ್ರೀರಾಮಕೃಷ್ಣರು: ಏನಪ್ಪ, ಏನು ಬಂದದ್ದು?

ಹೃದಯ: ನಿನ್ನನ್ನು ನೋಡಲೆಂದೇ ಬಂದೆ. ನನ್ನ ದುಃಖವನ್ನು ಇನ್ನಾರ ಬಳಿ ಹೇಳಿಕೊಳ್ಳಲಿ?

ಶ್ರೀರಾಮಕೃಷ್ಣರು: ಅಂಥ ದುಃಖಗಳನ್ನು ಜಗತ್ತಿನಲ್ಲಿ ಯಾರೂ ತಪ್ಪಿಸಿಕೊಳ್ಳಲಾರರಪ್ಪ! ಪ್ರಾಪಂಚಿಕಜೀವನವೆಂದಮೇಲೆ ಸುಖದುಃಖಗಳೆರಡೂ ಇದ್ದದ್ದೇ. ಆದ್ದರಿಂದಲೇ ಇವರೆಲ್ಲ ಆಗಾಗ ಇಲ್ಲಿಗೆ ಬರುತ್ತಾರೆ. ಭಗವದ್ವಿಚಾರವನ್ನು ಕೇಳುತ್ತ ಸ್ವಲ್ಪ ಶಾಂತಿ ಪಡೆಯುತ್ತಾರೆ. . . ಇರಲಿ, ಈಗ ನಿನಗೆ ಬಂದಿರುವ ದುಃಖವೇನು?

ಹೃದಯ (ಅಳುತ್ತಲೇ): ನಿನ್ನ ಸಂಗ ತಪ್ಪಿತಲ್ಲ ಎಂಬುದೊಂದೇ ನನ್ನ ದುಃಖ.

ಶ್ರೀರಾಮಕೃಷ್ಣರು: ಆದರೆ ಆ ದಿನ, 'ನಿನ್ನ ದಾರಿ ನಿನಗೆ, ನನ್ನ ದಾರಿ ನನಗೆ' ಅಂತ ಹೇಳಿದವನು ನೀನೇ ಅಲ್ಲವೆ!

ಹೃದಯ: ಹೌದು, ಹೇಳಿದೆ. ಆದರೆ ಆಗ ನಾನೊಬ್ಬ ಮೂರ್ಖನಾಗಿದ್ದೆ.

ಶ್ರೀರಾಮಕೃಷ್ಣರು: ಅದೆಲ್ಲ ಆಯಿತಲ್ಲ ಬಿಡು. . . ಈಗ ನಾನು ಹೋಗಬೇಕಾಗಿದೆ; ಇನ್ನೊಂದು ದಿನ ಬಾ, ಮತ್ತೆ ಮಾತನಾಡೋಣ. ಇವತ್ತು ಭಾನುವಾರವಲ್ಲವೆ? ತುಂಬ ಜನ ಬಂದಿದ್ದಾರೆ; ಕೋಣೆಯಲ್ಲಿ ನನಗಾಗಿ ಕಾಯುತ್ತಿರುತ್ತಾರೆ. . . ಸರಿ, ಈ ಸಲ ಊರಿನಲ್ಲಿ ಮಳೆ-ಬೆಳೆ ಹೇಗಿದೆ?

ಹೃದಯ: ಪರವಾಗಿಲ್ಲ. . . ಅಷ್ಟೇನೂ ಕೆಟ್ಟಿಲ್ಲ.

ಶ್ರೀರಾಮಕೃಷ್ಣರು: ಆಯಿತು, ಹಾಗಾದರೆ ನಾನಿನ್ನು ಬರುತ್ತೇನೆ. ಇನ್ನೊಂದು ದಿನ ಬಾ, ಏನು?

ಹೃದಯ ಮತ್ತೆ ಸಾಷ್ಟಾಂಗ ಪ್ರಣಾಮ ಮಾಡಿದ.

ಶ್ರೀರಾಮಕೃಷ್ಣರು ಕೋಣೆಗೆ ಹಿಂದಿರುಗುತ್ತ ದಾರಿಯಲ್ಲಿ ಮಾಸ್ಟರಿಗೆ ಹೇಳಿದರು: "ಅವನು ನನಗೆ ಸೇವೆ ಮಾಡಿದಷ್ಟೇ ಚಿತ್ರಹಿಂಸೆಯನ್ನೂ ಕೊಟ್ಟಿದ್ದಾನೆ. ಒಮ್ಮೆ ನಾನು ಹೊಟ್ಟೆರೋಗದಿಂದ ಮೂಳೆಚಕ್ಕಳವಾಗಿಬಿಟ್ಟಿದ್ದೆ. ಏನು ತಿನ್ನುವುದಕ್ಕೂ ಆಗುತ್ತಿರಲಿಲ್ಲ. ಆಗ ನನಗೆ ಹೇಳಿದ: 'ನನ್ನನ್ನು ನೋಡು ಎಷ್ಟು ಚೆನ್ನಾಗಿ ತಿನ್ನುತ್ತಿದ್ದೇನೆ! ತಿನ್ನುವುದಕ್ಕೆ ಆಗುವುದಿಲ್ಲ ಅಂತ ನೀನು ಸುಮ್ಮನೆ ನಾಟಕ ಆಡುತ್ತಿದ್ದೀಯ ಅಷ್ಟೆ.' ಇನ್ನೊಂದು ದಿನ ಹೇಳಿದ: 'ನೀನೊಬ್ಬ ಮಂಕ! ನಾನಿಲ್ಲಿ ನಿನ್ನ ಜೊತೆಯಲ್ಲಿ ಇರದೆಯಿದ್ದಿದ್ದರೆ, ನಿನ್ನ ಸಾಧುಗಿರಿಯೆಲ್ಲ ಎಲ್ಲಿರುತ್ತಿತ್ತು?' ಒಂದು ದಿನವಂತೂ ನನ್ನನ್ನು ಎಷ್ಟು ಕಾಡಿಬಿಟ್ಟನೆಂದರೆ, ಗಂಗೆಯ ಉಬ್ಬರದ ಪ್ರವಾಹದಲ್ಲಿ ಬಿದ್ದು ದೇಹತ್ಯಾಗ ಮಾಡಿಬಿಡೋಣ ಅಂತ ಅನ್ನಿಸಿ ಗಂಗೆಯ ದಡಕ್ಕೆ ಹೋಗಿಬಿಟ್ಟಿದ್ದೆ!"

'ಇವರು ಸ್ವಲ್ಪ ಹೊತ್ತಿನ ಹಿಂದೆ ಕಣ್ಣೀರು ಹಾಕಿದ್ದು ಇಂಥ ಮನುಷ್ಯನಿಗಾಗಿಯೆ?' ಎಂದು ಆಲೋಚಿಸಿ ಮಾಸ್ಟರ್ ಆಶ್ಚರ್ಯಚಕಿತನಾದ. ಶ್ರೀರಾಮಕೃಷ್ಣರು ಮುಂದುವರಿಸುತ್ತ ಹೇಳಿದರು: "ಅವನು ನನಗೆ ಬಹಳಷ್ಟು ಸೇವೆ ಮಾಡಿದ್ದಾನೆ. ಆದರೂ ಅದೇಕೆ ಹಾಗೆ ದುಷ್ಟನಾದನೋ! ಹೆತ್ತ ತಾಯಿ ಮಗುವನ್ನು ನೋಡಿಕೊಳ್ಳುವ ಹಾಗೆ ಅವನು ನನ್ನನ್ನು ನೋಡಿಕೊಂಡಿದ್ದಾನೆ . . ."

ಹೀಗೆನ್ನುತ್ತ ಶ್ರೀರಾಮಕೃಷ್ಣರು ತಮ್ಮ ಕೊಠಡಿಗೆ ಬಂದು, ಮತ್ತೆ ತಮ್ಮ ಭಕ್ತರೊಡನೆ ಆನಂದದಿಂದ ಮಾತುಕತೆಯಲ್ಲಿ ತೊಡಗಿದರು.

# ಗ್ರಂಥಋಣ


1. *Sri Ramakrishna, The Great Master (Vol. 1 & 2) (Tr.) (1979)*
   — Swami Jagadananda

2. *Life of Sri Ramakrishna (1977)*
   — Advaita Ashrama

3. *The Gospel of Sri Ramakrishna (Tr.)*
   — Swami Nikhilananda

4. *Ramakrishna and His Disciples*
   — Christopher Isherwood

5. *First meetings with Sri Ramakrishna*
   — Swami Prabhananda

6. *The Life of Ramakrishna*
   — Romain Rolland

7. *A Bridge to Eternity (1986)*
   — Advaita Ashrama

8. *Sri Ramakrishna – A Biography in Pictures*
   — Advaita Ashrama

1. *ಶ್ರೀರಾಮಕೃಷ್ಣ ಲೀಲಾಪ್ರಸಂಗ (ಭಾಗಗಳು 1-5) (ಅನು.)*
   —ಸ್ವಾಮಿ ಪ್ರಣವೇಶಾನಂದ

2. *ಶ್ರೀರಾಮಕೃಷ್ಣರು ಮತ್ತು ಅವರ ಶಿಷ್ಯರು (ಅನು.)*
   —ಸ. ವೆಂಕಟಾಚಲಪತಿ

3. *ಶ್ರೀಶಾರದಾದೇವೀ ಜೀವನಗಂಗಾ*
   —ಸ್ವಾಮಿ ಪುರುಷೋತ್ತಮಾನಂದ

4. *ಬ್ರಹ್ಮಾನಂದ ಕೇಶವಚಂದ್ರ ಸೇನ*
   —ಡಿ. ರೇಣುಕಾಚಾರ್ಯ

5. *ಶ್ರೀರಾಮಕೃಷ್ಣ ವಚನವೇದ (ಸಂಪುಟ 1, 2)*
   —ಶ್ರೀರಾಮಕೃಷ್ಣಾಶ್ರಮ, ಮೈಸೂರು.

## ಬೆಂಗಳೂರು ಶ್ರೀರಾಮಕೃಷ್ಣಾಶ್ರಮದ ಕೆಲವು ಪ್ರಕಟಣೆಗಳು

1. ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ
2. ಸ್ವಾಮಿ ವಿವೇಕಾನಂದರ ಸಿಂಹವಾಣಿ
3. ಆದರ್ಶಭಕ್ತ
4. ಯುವಜನ ಶಕ್ತಿಯು ಜಾಗ್ರತವಾಗಲಿ !
5. ಪೌಷ್ಟಿಕ ಚಿಂತನ
6. ಹಿಂದೂಧರ್ಮ—ಪ್ರಶ್ನೋತ್ತರ ರೂಪದಲ್ಲಿ
7. ಬದುಕಲು ಕಲಿಯಿರಿ (2 ಸಂಪುಟಗಳಲ್ಲಿ)
8. ವಚನಭಾಗವತ
9. ಶ್ರೀರಾಮಕೃಷ್ಣಪರಮಹಂಸೋಪನಿಷತ್
10. ನಮ್ಮ ದೇವಾಲಯಗಳು
11. ಗಣಪತಿ
12. .ಜೀವನ್ಮುಕ್ತಿ ವಿವೇಕ
13. ಗೀತಾಸಾರಸರ್ವಸ್ವ
14. ಈಶಾವಾಸ್ಯೋಪನಿಷತ್
15. ಸಸ್ವರ ಯಜುರ್ವೇದ ಸಂಧ್ಯಾವಂದನಮ್
16. ಸಸ್ವರ ವೇದಮಂತ್ರಾಃ
17. ಶ್ರೀರಾಮಕೃಷ್ಣ ಪೂಜಾಪದ್ಧತಿ
18. Meditation and Spiritual Life
19. A Dictionay of Advaita Vedanta
20. Modern Problems and Ancient Solutions
21. Uniqueness of the Ramakrishna Monasticism
22. Srivaishnavism Through the Ages
23. A Bird's Eye View of the Vedas
24. On Dharma
25. Mahabharata – A Study

## ಇದೇ ಲೇಖಕರ ಇತರ ಕೃತಿಗಳು

1. **ಶ್ರೀಶಾರದಾದೇವೀ ಜೀವನಗಂಗಾ**
   ಶ್ರೀಮಾತೆ ಶಾರದಾದೇವಿಯವರ ವಿವರಪೂರ್ಣ ಜೀವನಕಥೆ.
2. **ಸ್ವಾಮಿ ವಿವೇಕಾನಂದರ ಸಮಗ್ರ ಜೀವನ ಚರಿತ್ರೆ**—ಮೂರು ಸಂಪುಟಗಳಲ್ಲಿ
   ಸಂ. 1 : ವೀರಸಂನ್ಯಾಸಿ ವಿವೇಕಾನಂದ
   ಸಂ. 2 : ವಿಶ್ವವಿಜೇತ ವಿವೇಕಾನಂದ
   ಸಂ. 3 : ವಿಶ್ವಮಾನವ ವಿವೇಕಾನಂದ
3. ಬ್ರಹ್ಮಾನುಭವಿ—ಸ್ವಾಮಿ ಬ್ರಹ್ಮಾನಂದರ ಜೀವನ ಚರಿತ್ರೆ
4. ಶ್ರೀಶಾರದಾದೇವೀ ಸಂದೇಶಮಂದಾರ

### ಕಿರುಹೊತ್ತಗೆಗಳು

5. ಬಾಲಕ ಸಂಘ—ಒಂದು ವಿನೂತನ ಪ್ರಯೋಗ
6. ವಿನಯಮೂರುತಿ ಶ್ರೀರಾಮಕೃಷ್ಣ
7. ಪ್ರಿಯದರ್ಶನ ಶ್ರೀರಾಮ
8. ವಿವೇಕವಾಹಿನಿ
9. ಚಿಂತನ-ಮಂಥನ
10. ಮಿಂಚಿನ ಗೊಂಚಲು
11. ವಿದ್ಯೆಯ ವೈಭವ
12. ಧೀರತೆಯ ದುಂದುಭಿ
13. ವಿಶ್ವಮಾನವನಾಗಿ ವಿವೇಕಾನಂದ
14. ಕರ್ನಾಟಕದ ಯುವಜನತೆಗೊಂದು ಕರೆ
15. ಶ್ರೀಗುರುಮಹಿಮೆ
16. ವಿದ್ಯಾರ್ಥಿಗೊಂದು ಪತ್ರ
17. ಅಧ್ಯಯನದಲ್ಲಿ ಏಕಾಗ್ರತೆ
18. ಸಮಯಪ್ರಜ್ಞೆ
19. Secret of Concentration
20. Letter to a Student

“ಪ್ರಿಯ ಸೋದರ, ಶ್ರೀರಾಮಕೃಷ್ಣರು ಭಗವಂತನ ಅವತಾರವೆಂಬುದರಲ್ಲಿ ನನಗೆ ಒಂದಿನಿತೂ ಸಂಶಯವಿಲ್ಲ.... ಮೊದಲು ಅವರ ಜೀವನವನ್ನು ಅಧ್ಯಯನ ಮಾಡದೆ ವೇದವೇದಾಂತಗಳ ನಿಜವಾದ ಮಹತ್ತ್ವವನ್ನು ಯಾರೂ ಅರಿಯಲಾರರು. ಸಮಸ್ತ ಭಾರತೀಯ ಧಾರ್ಮಿಕ ಚಿಂತನಧಾರೆಯ ಮೇಲೆ ಚೆಲ್ಲಿದ ಪ್ರಚಂಡ ಬೆಳಕು - ಅವರ ಈ ಜೀವನ. ವೇದಗಳ ಮೇಲಿನ ಜೀವಂತ ಭಾಷ್ಯವೇ ಅವರು. ತಮ್ಮ ಜೀವನದಲ್ಲಿ ಅವರು ಭಾರತೀಯ ಧಾರ್ಮಿಕ ಇತಿಹಾಸದ ಸಾರಸರ್ವಸ್ವವನ್ನೇ ಆಚರಿಸಿ ತೋರಿಸಿದರು.... ಅವತಾರಗಳಲ್ಲಿ ಇತ್ತೀಚಿನವರೂ ಅತ್ಯಂತ ಪರಿಪೂರ್ಣರೂ ಆದವರು ರಾಮಕೃಷ್ಣರು - ಜ್ಞಾನ, ಭಕ್ತಿ, ತ್ಯಾಗ, ಔದಾರ್ಯ ಇವೆಲ್ಲವೂ ಅವರಲ್ಲಿ ಗಾಢವಾಗಿ ಮೇಳೈಸಿವೆ. ಅವರಿಗೆ ಹೋಲಿಕೆಯಾದರೂ ಎಲ್ಲಿದೆ? ಜನ್ಮಜನ್ಮಗಳಲ್ಲೂ ಅವರ ದಾಸನಾಗುವುದೇ ನನ್ನ ಪರಮ ಸೌಭಾಗ್ಯ. ಓಹ್! ನಾನವರ ದಾಸರ ದಾಸರ ದಾಸ....”

— ಸ್ವಾಮಿ ವಿವೇಕಾನಂದರ ಒಂದು ಪತ್ರದಿಂದ.

ಶ್ರೀರಾಮಕೃಷ್ಣ ಆಶ್ರಮ, ಬೆಂಗಳೂರು